# ಟಾಲ್‌ಸ್ಟಾಯಿಯವರ ಕಥೆಗಳು



ಎಲ್. ಗುಂಡಪ್ಪ



ಭಾರತಿ ಸಾಹಿತ್ಯ ಮಂದಿರ
ಬಸವನಗುಡಿ, ಬೆಂಗಳೂರು ಸಿಟಿ

# ಬಿನ್ನಹ

ಲಿಯೋ ಟಾಲ್‌ಸ್ಟಾಯಿಯವರು ಉತ್ತಮ ಕಲೆಗಾರರು, ಶ್ರೇಷ್ಠ ಸಾಹಿತಿಗಳು, ಲೋಕವಿಖ್ಯಾತರಾದ ಸಾಧು ಪುರುಷರು; ರಷ್ಯಾದೇಶದ ಪುನರುಜ್ಜೀವನಕ್ಕಾಗಿ ವಿಶೇಷ ದುಡಿದವರು, ಪ್ರಪಂಚದ ಶಾಂತಿರಕ್ಷಣೆಗಾಗಿ, ದೀನಾನಾಥರ ದುಃಖನಿವಾರಣೆಗಾಗಿ, ತಮ್ಮ ಆಯುಸ್ಸನ್ನೇ ಧಾರೆಯೆರೆದವರು. ಇವರ ಗ್ರಂಥಗಳು ಅನೇಕ ಭಾಷೆಗಳಿಗೆ ಪರಿವರ್ತನವಾಗಿವೆ. ಲಕ್ಷಾಂತರ ಪುಸ್ತಕಗಳು ಅಚ್ಚಾಗಿ ದೇಶದೇಶದಲ್ಲಿಯೂ ಹರಡಿವೆ; ಇನ್ನೂ ಹರಡುತ್ತಿವೆ.

ಈಗ, ಇವರ ಇಪ್ಪತ್ತು ಕಥೆಗಳ ಭಾಷಾಂತರವನ್ನು ಕನ್ನಡಿಗರ ಮುಂದೆ ಇಟ್ಟಿದ್ದೇನೆ. ಇವುಗಳ ವಸ್ತು ಸರ್ವಜನಸಾಮಾನ್ಯವಾದ ಅನುಭವಗಳು; ವಿಶ್ವವ್ಯಾಪಿಯಾದ ಭಾವಗಳು, ಎಲ್ಲ ಮತಗಳಿಗೂ ತಳಹದಿಯಾಗಿರುವ ತತ್ವಗಳು. ಹೇಳುವ ರೀತಿ ಆಡಂಬರವಿಲ್ಲದೆ ಸರಳವಾಗಿ ತಟ್ಟನೆ ಮನಸ್ಸಿಗೆ ಹಿಡಿಯುವಂತಿದೆ. ಈ ಕಥೆಗಳನ್ನು ಓದುವವರಿಗೆ ಈ ವಿಷಯ ಸ್ಪಷ್ಟವಾಗುವುದೆಂದು ನಂಬಿದೇನೆ.

ಈ ಕಥೆಗಳಲ್ಲಿ ಬರುವ ಜನರ ಮತ್ತು ಸ್ಥಳಗಳ ಹೆಸರುಗಳನ್ನು ನಮ್ಮ ದೇಶಕ್ಕೆ ಹೊಂದುವಂತೆ ಮಾರ್ಪಡಿಸಿಕೊಂಡು ಅಲ್ಲಲ್ಲೇ ಒಂದೆರಡು ಸಣ್ಣ ಬದಲಾವಣೆಗಳನ್ನು ಮಾಡಿದರೆ, ಇವು ನಮ್ಮ ದೇಶದವರೇ ಬರೆದ, ನಮ್ಮ ಆಚಾರ ವ್ಯವಹಾರಗಳಿಗೇ ಸಂಬಂಧಪಟ್ಟ ಕಥೆಗಳಂತೆ ತೋರುವುವು. ಹೀಗೆ ಮಾರ್ಪಡಿಸಿಕೊಂಡ ಉತ್ತಮ ರೂಪಾಂತರಗಳೂ ಕೆಲವಿವೆ. ಶ್ರೀಮಾನ್ ಎ. ಎನ್. ಮೂರ್ತಿರಾವ್, ಎಂ.ಎ, ಅವರ "ಕಾಶೀಯಾತ್ರೆ" ಯನ್ನು ಇದಕ್ಕೆ ಉದಾಹರಣೆಯಾಗಿ ಹೇಳಬಹುದು. ಇಂಥ ರೂಪಾಂತರಗಳನ್ನು ಓದುವವರಿಗೆ ಮೂಲಗ್ರಂಥದ ನಿಜವಾದ ಪರಿಚಯವಾಗುವುದಿಲ್ಲ.

ಅಲ್ಲದೆ ತಮಗಿಂತ ಬೇರೆಯಾದ ಆಚಾರ ವ್ಯವಹಾರಗಳುಳ್ಳ ಜನರ ನಡವಳಿಕೆಗಳು ತಿಳಿಯುವುದಿಲ್ಲ, ನಮ್ಮ ದೇಶದವರೂ ನಮ್ಮ ಮತದವರೂ ಸಾಧಿಸಿರುವ ಆತ್ಮಸಂಸ್ಕಾರವನ್ನೇ ಇತರ ದೇಶದವರೂ, ಇತರ ಮತದವರೂ ಸಾಧಿಸಿರುವರೆಂಬ ತಿಳಿವು ಬಂದು ವಿಶಾಲಭಾವನೆಗಳು ಮನಸ್ಸಿನಲ್ಲಿ ಮೂಡಲು ಅವಕಾಶವಾಗುವುದಿಲ್ಲ. ಆದ್ದರಿಂದ ಈ ಕಥೆಗಳನ್ನು ಯಾವ ರೀತಿಯಲ್ಲಿಯೂ ಮಾರ್ಪಡಿಸದೆ ಇದ್ದಂತೆಯೇ ಭಾಷಾಂತರ ಮಾಡಿದ್ದೇನೆ.

ಈ ಪುಸ್ತಕದಲ್ಲಿರುವ ಕಥೆಗಳಲ್ಲಿ " ಬೆಪ್ಪುತಕಡಿ ಐವಾನ್ ' ಎಂಬುದನ್ನು ಕನ್ನಡಿಸಿದವರು ನನ್ನ ಮಿತ್ರರಾದ ಶ್ರೀಮಾನ್ ಜಿ ಪಿ ರಾಜರತ್ನಂ, ಎಂ.ಏ, ಅವರು. ಅದನ್ನು ಈ ಸಂಗ್ರಹದಲ್ಲಿ ಸೇರಿಸಿಕೊಳ್ಳಲು ಅನುಮತಿ ಕೊಟ್ಟಿರುವುದಕ್ಕಾಗಿ ಅವರಿಗೆ ಋಣಿಯಾಗಿದ್ದೇನೆ.

" ಕಡೆಗಣಿಸಿದ ಕಿಡಿ ಮನೆಯನ್ನು ಸುಡುತ್ತದೆ ", " ಮರಿಪಿಶಾಚಿ ರೊಟ್ಟಿಯ ಚೂರನ್ನು ಸಂಪಾದಿಸಿದ ಬಗೆ ", ಎಂಬ ಎರಡು ಕಥೆಗಳು ದೇಶೀಯ ವಿದ್ಯಾಶಾಲಾ ಪತ್ರಿಕೆಯಲ್ಲಿಯೂ, " ಪಶ್ಚಾತ್ತಾಪಿಯಾದ ಪಾಪಿ " ಎಂಬುದು ಜಯಕರ್ಣಾಟಕದಲ್ಲಿಯೂ " ಬೆಪ್ಪುತಕಡಿ ಐವಾನ್ " ಸುಬೋಧದಲ್ಲಿಯೂ ಈ ಮೊದಲೇ ಅಚ್ಚಾಗಿದ್ದವು. ಅವನ್ನು ತಮ್ಮ ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿದ ಆಯಾ ಸಂಪಾದಕರಿಗೆ ವಂದನೆಗಳು.

ಈ ಕಥೆಗಳನ್ನು ಓದುವುದರಿಂದ ನಮ್ಮ ಜನರಿಗೆ ಟಾಲ್‌ಸ್ಟಾಯಿಯವರಲ್ಲಿ ಅಭಿಮಾನಹುಟ್ಟಿ ಅವರ ಇತರ ಗ್ರಂಥಗಳನ್ನೂ ನೋಡಬೇಕೆಂಬ ಅಪೇಕ್ಷೆಯುಂಟಾದರೆ ನನ್ನ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇನೆ.

ಬೆಂಗಳೂರು,
ತಾ|| ೨೮-೧೧-೧೯೩೪

ಎಲ್. ಗುಂಡಪ್ಪ.

# ವಿಷಯ ಸೂಚಿಕೆ

---

# ಇಬ್ಬರು ಮುದುಕರು



['ಹೆಂಗಸವನನು ಕುರಿತು ನುಡಿಯುವಳು 'ಎಲೆ ಸ್ವಾಮಿ, ನೀವು ಜ್ಞಾನಿಗಳೆಂದು ತೋರುವುದು ನಮ್ಮ ತಂದೆಗಳೆಲ್ಲ ಈ ಬೆಟ್ಟದಲಿ ಬಂದು ಪೂಜಿಸಿದರು. ನೀನೊರೆವೆ, ಜನರೆಲ್ಲ ಜೆರುಸಲೇಮಿಗೆ ಹೋಗಿ ಪೂಜೆಯನು ಸಲಿಸಬೇಕೆಂದು' ಯೇಸುವವಳಿಗೆ ಹೀಗೆ ಹೇಳುವನು 'ಮಡದಿ, ನನ್ನನು ನಂಬು ಈ ಬೆಟ್ಟದೊಳಗಲ್ಲ, ಜೆರುಸಲೇಮಿನಲಲ್ಲ ಪರಮ ಪಿತನನು ನೀವು ಪೂಜಿಪುದು. ನಿಜವಾದ ಭಕ್ತರಾ ಪರಮ ಪಿತನನು ತಮ್ಮ ಹೃದಯದಲಿ ಪೂಜಿಪರು, ಸತ್ಯದಲಿ ಪೂಜಿಪರು, ತನ್ನ ಭಕ್ತರು ಹಾಗೆ ಇರಬೇಕು ಎಂದೆನುತ ಪರಮಪಿತ ಬಯಸುವನು ಭಕ್ತರೆಲ್ಲರು ಹಾಗೆ ಪೂಜಿಸುವ ಕಾಲವದು ಬರುತಿಹುದು, ಈಗಲೇ ಬಂದಿರುವುದು —**ಜಾನ್ ೪.**]

ಒಂದಾನೊಂದು ಕಾಲದಲ್ಲಿ ಇಬ್ಬರು ಮುದುಕರಿದ್ದರು. ಅವರು ಜೆರುಸಲೇಮಿಗೆ ಯಾತ್ರೆ ಹೋಗಿ ಅಲ್ಲಿ ದೇವರನ್ನು ಪೂಜಿಸಬೇಕೆಂದು ಸಂಕಲ್ಪಮಾಡಿದರು. ಅವರಲ್ಲಿ ಒಬ್ಬನು ಅನುಕೂಲವಂತನಾದ ರೈತ; ಅವನ ಹೆಸರು ಏಫಿಮ್ ಟರಸಿಕ್ ಷೆವೆಲೆವ್. ಎಲಿಷ ಬೋಡ್ರೊವ್ ಎಂಬ ಇನ್ನೊಬ್ಬನು ಅಷ್ಟು ಅನುಕೂಲಶಾಲಿಯಲ್ಲ.

ಏಫಿಮ್ ಯಾವುದರಲ್ಲಿಯೂ ಅತಿಯಿಲ್ಲದ ಮಿತಸ್ವಭಾವದ ಮನುಷ್ಯ; ಯಾವುದನ್ನೂ ಅಸಡ್ಡೆಯಾಗಿ ಕಾಣತಕ್ಕವನಲ್ಲ, ಮತ್ತು ಹಿಡಿದದ್ದನ್ನು ಸುಲಭವಾಗಿ ಬಿಟ್ಟುಬಿಡದ ಸ್ಥೈರ್ಯವಂತ. ಅವನು ಕುಡಿಯುತ್ತಲೂ ಇರಲಿಲ್ಲ, ತಂಬಾಕು ಸೇದುತ್ತಲೂ ಇರಲಿಲ್ಲ, ನಶ್ಯವನ್ನೂ ಹಾಕುತ್ತಿರಲಿಲ್ಲ; ಅವನ ಜೀವಮಾನದಲ್ಲಿ ಎಂದೂ ಕೆಟ್ಟಮಾತುಗಳನ್ನು ಆಡಿರಲಿಲ್ಲ. ಅವನು ಎರಡುಸಲ ಗ್ರಾಮದ ಪಟೇಲನಾಗಿ ಕೆಲಸಮಾಡಿದ್ದನು, ಕೆಲಸವನ್ನು ಬಿಟ್ಟಾಗ ಹಣಕಾಸಿನ ಲೆಕ್ಕಗಳೆಲ್ಲ ಸರಿಯಾಗಿಯೇ ಇದ್ದವು. ಅವನದು ದೊಡ್ಡ ಸಂಸಾರ· ಇಬ್ಬರು ಮಕ್ಕಳು, ಮದುವೆಯಾದ ಒಬ್ಬ ಮೊಮ್ಮಗ—

ಎಲ್ಲ ಅವನ ಜೊತೆಯಲ್ಲಿಯೇ ವಾಸಿಸುತ್ತಿದ್ದರು. ಅವನು ಆರೋಗ್ಯಶಾಲಿಯಾಗಿ ಸೊಂಟ ಬಗ್ಗಿಸದೆ ನೆಟ್ಟಗೇ ನಡೆಯುತ್ತಿದ್ದನು. ಅವನಿಗೆ ಉದ್ದವಾದ ಗಡ್ಡವಿದ್ದಿತು. ಅರುವತ್ತು ವರ್ಷ ವಯಸ್ಸು ಕಳೆದಮೇಲೆ ಗಡ್ಡದಲ್ಲಿ ಒಂದೆರಡು ನೆರೆಕೂದಲು ಕಾಣಿಸತೊಡಗಿತು.

ಎಲಿಷನು ಬಡವನೂ ಅಲ್ಲ ಭಾಗ್ಯವಂತನೂ ಅಲ್ಲ. ಹಿಂದೆ ಅವನು ಬಡಗಿಯ ಕೆಲಸಮಾಡುತ್ತ ಹೊರಗೆ ಹೋಗುತ್ತಿದ್ದನು, ಆದರೆ ಈಚೆಗೆ ಮುದುಕನಾಗುತ್ತ ಬಂದದ್ದರಿಂದ ಮನೆಯಲ್ಲೇ ನಿಂತು ಜೇನು ಸಾಕುತ್ತಿದ್ದನು. ಅವನ ಮಕ್ಕಳಲ್ಲಿ ಒಬ್ಬನು ಕೆಲಸವನ್ನು ಹುಡುಕಿಕೊಂಡು ಹೋಗಿದ್ದನು, ಮತ್ತೊಬ್ಬನು ಮನೆಯಲ್ಲೇ ಇದ್ದನು ಎಲಿಷ ದಯಾಶಾಲಿಯಾದ ಮತ್ತು ಸಂತೋಷ ಸ್ವಭಾವದ ಮುದುಕ. ಅವನು ಒಂದೊಂದುಸಲ ಕುಡಿಯುತ್ತಿದ್ದನು, ನಶ್ಯವನ್ನು ಹಾಕುತ್ತಿದ್ದನು, ಮತ್ತು ಸಂಗೀತದಲ್ಲಿ ಆಸಕ್ತನಾಗಿದ್ದನು—ಇದೆಲ್ಲ ನಿಜ, ಆದರೆ ಅವನು ಶಾಂತಸ್ವಭಾವದ ಮನುಷ್ಯ. ತನ್ನ ಮನೆಯವರೊಡನೆಯೂ ನೆರೆಹೊರೆಯವರೊಡನೆಯೂ ಸಮಾಧಾನದಿಂದ ಜೀವಿಸುತ್ತಿದ್ದನು. ಅವನು ಕುಳ್ಳ, ಬಣ್ಣ ಕಪ್ಪು, ಗಡ್ಡದ ಕೂದಲು ಗುಂಗುರು ಗುಂಗುರಾಗಿದ್ದಿತು, ಅವನ ಇಷ್ಟ ಸಂತನಾದ ಎಲಿಷನಂತೆಯೇ ಅವನಿಗೂ ತಲೆಯಲ್ಲಿ ಕೂದಲಿಲ್ಲದೆ ಬೋಳಾಗಿದ್ದಿತು.

ಆ ಇಬ್ಬರು ಮುದುಕರೂ ಬಹಳ ಕಾಲದ ಹಿಂದೆಯೇ ಜೆರುಸಲೇಮಿಗೆ ಯಾತ್ರೆಹೋಗುವುದಾಗಿ ಹರಕೆಮಾಡಿಕೊಂಡು, ಇಬ್ಬರೂ ಒಟ್ಟಿಗೆ ಹೋಗುವುದಕ್ಕೆ ಏರ್ಪಾಡುಮಾಡಿದ್ದರು. ಆದರೆ ಏಫಿಮ್‌ಗೆ ಬಿಡುವು ಸಿಕ್ಕುತ್ತಿರಲಿಲ್ಲ; ಯಾವಾಗಲೂ ಅವನಿಗೆ ಕೈತುಂಬ ಕೆಲಸ ಇದ್ದೇ ಇರುತ್ತಿದ್ದಿತು, ಒಂದು ಕೆಲಸ ಮುಗಿದ ಕೂಡಲೆ ಮತ್ತೊಂದನ್ನು ಪ್ರಾರಂಭಿಸುತ್ತಿದ್ದನು. ಮೊದಲು ಮೊಮ್ಮಗನ ಮದುವೆಗೆ ಅಣಿಮಾಡಬೇಕಾಗಿದ್ದಿತು. ಆಮೇಲೆ ಕಿರಿಯ ಮಗನು ಸೈನ್ಯದಿಂದ ಹಿಂದಿರುಗಿ ಬರುವವರೆಗೆ ಕಾದಿರಬೇಕಾಗಿದ್ದಿತು. ಮಗನು ಬಂದ ಬಳಿಕ ಹೊಸ ಮನೆಯನ್ನು ಕಟ್ಟಲು ಪ್ರಾರಂಭಿಸಿದನು.

ಒಂದು ರಜದ ದಿನ ಇಬ್ಬರು ಮುದುಕರೂ ಗುಡಿಸಲಿನ ಹೊರಗೆ ಸಂಧಿಸಿದರು. ಅಲ್ಲಿಯೇ ಒಂದು ಮರದ ದಿಮ್ಮಿಯಮೇಲೆ ಕುಳಿತು ಮಾತಾಡುವುದಕ್ಕೆ ಮೊದಲುಮಾಡಿದರು.

'ಒಳ್ಳೇದು, ನಾವು ಸಂಕಲ್ಪಿಸಿದ ವ್ರತವನ್ನು ನೆರವೇರಿಸುವುದು ಯಾವಾಗ?' ಎಂದು ಎಲಿಷ ಕೇಳಿದನು.

ಏಫಿಮ್ ಮುಖವನ್ನು ಸೊಟ್ಟನೆ ತಿರುಗಿಸಿದನು.

'ನಾವು ಸ್ವಲ್ಪ ನಿಧಾನಮಾಡಬೇಕು. ಈ ವರ್ಷ ನನಗೆ ಬಹಳ ಬಿಕ್ಕಟ್ಟಿನಕಾಲವಾಗಿಬಿಟ್ಟಿದೆ ಇದಕ್ಕೆ ನೂರು ರೂಬಲ್‌ಗಳಿಗಿಂತ ಸ್ವಲ್ಪ ಹೆಚ್ಚು ತಗಲಬಹುದೆಂದು ಯೋಚಿಸಿ ಈ ಮನೆಯನ್ನು ಕಟ್ಟುವುದಕ್ಕೆ ಪ್ರಾರಂಭಿಸಿದೆನು, ಆದರೆ ಈಗ ಮುನ್ನೂರರ ವರೆಗೆ ಬರುತ್ತಿದೆ; ಇಷ್ಟಾದರೂ ಇನ್ನೂ ಅದು ಮುಗಿದಿಲ್ಲ. ಬೇಸಿಗೆಯ ವರೆಗೂ ನಾವು ಕಾಯಬೇಕಾಗುತ್ತದೆ. ದೇವರ ದಯವಿದ್ದರೆ ಬೇಸಿಗೆಯಲ್ಲಿ ತಪ್ಪದೆ ಹೋಗೋಣ' ಎಂದನು.

, ಎಲಿಷ 'ಅದನ್ನು ಮುಂದಕ್ಕೆ ತಳ್ಳಬಾರದು. ಈ ಕೂಡಲೇ ಹೊರಟುಬಿಡಬೇಕೆಂದು ನನಗೆ ತೋರುತ್ತದೆ. ವಸಂತವೇ ಉತ್ತಮ ಸಮಯ' ಎಂದನು.

'ಕಾಲವೇನೋ ಸರಿಯಾಗಿಯೇ ಇದೆ. ಆದರೆ ನನ್ನ ಮನೆಯ ಗತಿಯೇನು? ಅದನ್ನು ಹೇಗೆ ಬಿಟ್ಟು ಹೋಗಲಿ?'

'ಆ ಕೆಲಸವನ್ನು ಒಪ್ಪಿಸಿಹೋಗುವುದಕ್ಕೆ ಯಾರೂ ಇಲ್ಲದ ಹಾಗೇ ಆಡುತ್ತೀಯಪ್ಪಾ! ನಿನ್ನ ಮಗನು ಅದನ್ನು ನೋಡಿಕೊಳ್ಳಬಹುದು.'

'ಅದು ಹೇಗೆ? ನನ್ನ ಹಿರಿಯ ಮಗನು ನಂಬಿಕೆಗೆ ಅರ್ಹನಲ್ಲ. ಒಂದೊಂದು ಸಲ ಅವನು ಒಂದು ಬಟ್ಟಲು ಹೆಚ್ಚಾಗಿ ಕುಡಿದು ಬಿಡುತ್ತಾನೆ.'

'ಇಲ್ಲಿ ಕೇಳಣ್ಣ. ನಾವು ಸತ್ತಮೇಲೆ ನಾವಿಲ್ಲದಿದ್ದರೂ ನಮ್ಮನ್ನು ಕುರಿಯದೆ, ಅವರು ತಮ್ಮ ಕೆಲಸವನ್ನು ತಾವು ಮಾಡಿಕೊಳ್ಳುತ್ತಾರೆ. ನಿನ್ನ

ಮಗನು ಸ್ವಲ್ಪ ಅನುಭವವನ್ನು ಸಂಪಾದಿಸುವುದಕ್ಕೆ ಈಗಲೇ ಪ್ರಾರಂಭ ಮಾಡಲಿ.'

'ಅದೇನೋ ಸರಿಯೇ, ಆದರೆ ಏನೋ ಅಪ್ಪಾ, ಏನಾದರೂ ಒಂದು ಕೆಲಸವನ್ನು ಪ್ರಾರಂಭಿಸಿಬಿಟ್ಟರೆ ಅದನ್ನು ಕೊನೆಯವರೆಗೂ ಮಾಡಿ ಮುಗಿಸ ಬೇಕೆಂದು ಇಷ್ಟವಾಗುತ್ತದೆ.

'ಅಯ್ಯೋ ಗೆಳೆಯಾ, ನಾವು ಮಾಡಬೇಕಾಗಿರುವುದನ್ನೆಲ್ಲ ಮಾಡಿ ಮುಗಿಸುವುದಕ್ಕೆ ಸಾಧ್ಯವೇ ಇಲ್ಲ. ಅವತ್ತು ಮನೆಯಲ್ಲಿ ಹೆಂಗಸರು ಈಸ್ಟರ್ ಹಬ್ಬಕ್ಕೆ ಮನೆಯನ್ನೆಲ್ಲ ಗುಡಿಸಿ ಸಾರಿಸಿ ಶುದ್ಧಿಮಾಡುತ್ತಿದ್ದರು. ಇಲ್ಲಿ ಸ್ವಲ್ಪ ಕೆಲಸಮಾಡಬೇಕಾಗಿದ್ದಿತು, ಅಲ್ಲಿ ಇನ್ನೇನೋ ಸ್ವಲ್ಪ ಇದ್ದಿತು, ಅವರು ಎಲ್ಲ ವನ್ನೂ ಮಾಡುವುದಕ್ಕಾಗಲೇ ಇಲ್ಲ. ಆಗ ನನ್ನ ಹಿರಿಯ ಸೊಸೆ, ಅವಳು ಬುದ್ಧಿವಂತೆ, ಹೀಗೆ ಹೇಳುತ್ತಾಳೆ. 'ಹಬ್ಬ ನಮಗೆ ಕಾದುಕೊಂಡಿರದೆ ಬಂದು ಬಿಡುತ್ತದೆಯಲ್ಲಾ ಅದೇ ಒಂದು ಅದೃಷ್ಟ. ಇಲ್ಲದೆ ಹೋಗಿದ್ದರೆ ಎಷ್ಟು ಕಷ್ಟಪಟ್ಟು ಕೆಲಸಮಾಡಿದರೂ ನಾವು ಹಬ್ಬಕ್ಕೆ ಸಿದ್ಧವಾಗುತ್ತಲೇ ಇರಲಿಲ್ಲ'.

ಏಫಿಮ್ ಆಲೋಚಿಸತೊಡಗಿದನು.

'ಈ ಮನೆಯಮೇಲೆ ಅಪಾರ ಹಣ ವೆಚ್ಚಮಾಡಿದ್ದೇನೆ. ಬರಿಯ ಜೇಬಿನಲ್ಲಿ ಪ್ರಯಾಣಕ್ಕೆ ಹೊರಡುವುದು ಸಾಧ್ಯವಲ್ಲ. ಒಬ್ಬೊಬ್ಬರಿಗೆ ನೂರು ರೂಬಲ್ ಬೇಕಾಗುತ್ತದೆ. ಅದೇನು ಸ್ವಲ್ಪ ಗಂಟಲ್ಲ'.

ಎಲಿಷ ನಕ್ಕನು.

'ಹೀಗೆ ಬಾರಣ್ಣಾ, ಬಾ. ನೋಡು, ನಿನಗೆ ನನಗಿರುವುದರ ಹತ್ತ ರಷ್ಟಿದೆ. ಹಾಗಾದರೂ ನೀನು ದುಡ್ಡಿನ ವಿಷಯವನ್ನು ಹೇಳುತ್ತೀಯ. ನಾವು ಯಾವಾಗ ಹೊರಡಬೇಕೋ ಅದನ್ನು ಮಾತ್ರ ಹೇಳಿಬಿಡು. ಈಗ ನನ್ನ ಕೈಯಲ್ಲಿ ಏನೂ ಇಲ್ಲವಾದರೂ ಅಷ್ಟುಹೊತ್ತಿಗೆ ತಕ್ಕಷ್ಟು ಹೊಂದಿಸಿ ಕೊಂಡಿರುತ್ತೇನೆ'.

ಏಫಿಮ್ ಕೂಡ ಮುಗುಳುನಗೆ ನಕ್ಕನು.

'ಹಾಗೊ? ನೀನು ಅಷ್ಟು ಐಶ್ವರ್ಯವಂತನೆಂದು ನನಗೆ ಗೊತ್ತಿರಲಿಲ್ಲ. ಎಲ್ಲಿಂದ ತರುತ್ತೀಯಪ್ಪಾ ಅಷ್ಟನ್ನೂ?' ಎಂದು ಕೇಳಿದನು.

'ಮನೆಯಲ್ಲಿ ಸ್ವಲ್ಪ ಜೊತೆಮಾಡಬಲ್ಲೆ. ಅದು ಸಾಲದೆಹೋದರೆ ನೆರೆಮನೆಯ ಗೃಹಸ್ಥನಿಗೆ ಒಂದು ಹತ್ತು ಜೇನು ಗೂಡುಗಳನ್ನು ಮಾರುತ್ತೇನೆ. ಅವನ್ನು ಕೊಳ್ಳಬೇಕೆಂದು ಬಹಳ ಕಾಲದಿಂದಲೂ ಅವನು ಕೇಳುತ್ತಿದಾನೆ'.

'ಅವು ಈ ವರ್ಷ ಚೆನ್ನಾಗಿ ಬೆಳೆದರೆ ಆಗ ಹೀಗೆ ಮಾಡಬಾರದಾಗಿದ್ದಿತು ಎಂದುಕೊಳ್ಳುತ್ತೀಯ'.

'ಮಾಡಬಾರದಾಗಿದ್ದಿತೆನ್ನುವುದೆ! ನಾನು ಹಾಗೆ ಮಾಡುವವನಲ್ಲ ಕಣಯ್ಯ! ನನ್ನ ಪಾಪಗಳನ್ನು ಹೊರತಾಗಿ ಮತ್ತೆ ಯಾವುದನ್ನೂ ಮಾಡಬಾರದಾಗಿದ್ದಿತೆಂದು ನನ್ನ ಜೀವಮಾನದಲ್ಲೇ ನಾನು ಪಶ್ಚಾತ್ತಾಪಪಟ್ಟುಕೊಂಡಿಲ್ಲ. ಆತ್ಮಕ್ಕಿಂತ ಹೆಚ್ಚು ಬೆಲೆಯುಳ್ಳದ್ದು ಮತ್ತೆ ಯಾವುದೂ ಇಲ್ಲವೇ ಇಲ್ಲ'.

'ಅದು ಹಾಗೆಯೇ ಸರಿ. ಆದರೂ ಮನೆಯ ಕೆಲಸಗಳನ್ನು ಉದಾಸೀನ ಮಾಡುವುದು ಸರಿಯಲ್ಲ'.

'ಆದರೆ ನಮ್ಮ ಆತ್ಮಗಳನ್ನು ಉದಾಸೀನಮಾಡಿದರೋ? ಅದು ಇನ್ನೂ ಕೇಡು. ನಾವು ಹೋಗಬೇಕೆಂದು ಸಂಕಲ್ಪ ಮಾಡಿಬಿಟ್ಟೆವು, ಹೋಗಿಬಿಡೋಣ. ನಿಜವಾಗಿಯೂ ಹೋಗಿಯೇಬಿಡೋಣ.'

೨

ಎಲಿಷ ತನ್ನ ಜೊತೆಗಾರನ ಮನಸ್ಸಿಗೆ ಹಿಡಿಯುವಂತೆ ಹೇಳಿದ್ದನು. ಬೆಳಿಗ್ಗೆ ಮತ್ತೆ ಮತ್ತೆ ಅದನ್ನೆಲ್ಲ ಚೆನ್ನಾಗಿ ಯೋಚಿಸಿ ಏಫಿಮ್ ಎಲಿಷನ ಹತ್ತಿರಕ್ಕೆ ಬಂದನು.

'ನೀನು ಹೇಳುವುದು ಸರಿ, ನಾವು ಹೊರಟುಬಿಡೋಣ. ಬಾಳೂ ಸಾವೂ ದೇವರ ಕೈಯಲ್ಲಿವೆ. ನಮ್ಮ ಕೈಕಾಲು ಗಟ್ಟಿಯಾಗಿರುವಾಗ, ನಾವು ಸ್ವಸ್ಥವಾಗಿರುವಾಗ, ಈಗಲೇ ಹೋಗಬೇಕು' ಎಂದನು.

ಒಂದು ವಾರದ ಹೊತ್ತಿಗೆ ಮುದುಕರು ಹೊರಡಲು ಸಿದ್ಧರಾದರು. ಏಫಿಮ್‌ಗೆ ತಕ್ಕಷ್ಟು ಹಣ ಕೈಯಲ್ಲೇ ಇದ್ದಿತು. ತಾನು ಒಂದು ನೂರು ರೂಬಲ್ ತೆಗೆದುಕೊಂಡು, ಹೆಂಡತಿಯ ಹತ್ತಿರ ಇನ್ನೂರು ರೂಬಲ್ ಕೊಟ್ಟನು.

ಎಲಿಷನೂ ಸಿದ್ಧಮಾಡಿಕೊಂಡನು. ಅವನು ತನ್ನ ನೆರೆಯವನಿಗೆ ಹತ್ತು ಗೂಡುಗಳನ್ನು ಬೇಸಿಗೆಯೊಳಗಾಗಿ ಅವುಗಳಲ್ಲಿ ಬೆಳೆದು ಬರಬಹುದಾದ ಹೊಸ ಗೂಡುಗಳ ಸಮೇತವಾಗಿ ಮಾರಿದನು. ಇವೆಲ್ಲಕ್ಕೂ ಒಟ್ಟು ಎಪ್ಪತ್ತು ರೂಬಲ್ ತೆಗೆದುಕೊಂಡನು. ನೂರು ರೂಬಲ್‌ಗಳಿಗೆ ಸಾಲದೆ ಒಂದ ಉಳಿದ ಹಣವನ್ನು ತನ್ನ ಮನೆಯ ಜನಗಳಿಂದ ಒಟ್ಟುಗೂಡಿಸಿದನು, ಅವರ ಕೈಯನ್ನೆಲ್ಲ ಬರಿದು ಮಾಡಿದನು. ಅವನ ಹೆಂಡತಿ ತನ್ನ ಉತ್ತರಕ್ರಿಯೆಗೆಂದು ಮಿಗಿಸಿಡುತ್ತಿದ್ದದ್ದನ್ನೆಲ್ಲ ಕೊಟ್ಟಳು. ಅವನ ಸೊಸೆಯೂ ತನ್ನ ಹತ್ತಿರ ಇದ್ದಷ್ಟನ್ನು ಕೊಟ್ಟುಬಿಟ್ಟಳು.

ಏಫಿಮ್ ತನ್ನ ಮಗನಿಗೆ ಪ್ರತಿಯೊಂದು ವಿಷಯದಲ್ಲಿಯೂ ಹೀಗೆ ಹೀಗೆಯೇ ಮಾಡಬೇಕೆಂದು ಸ್ಪಷ್ಟವಾಗಿ ಹೇಳಿ ಕಟ್ಟುಮಾಡಿದ್ದನು. ಯಾವಾಗ ಎಷ್ಟು ಹುಲ್ಲು ಕುಯ್ಯಬೇಕು, ಗೊಬ್ಬರವನ್ನು ಎಲ್ಲಿಗೆ ಹೊಡೆದು ಸಾಗಿಸ ಬೇಕು, ಮನೆಯನ್ನು ಮುಗಿಸಿ ಹೇಗೆ ಛಾವಣಿಯನ್ನು ಹಾಕಬೇಕು— ಎಂದು ಮುಂತಾಗಿ ಎಲ್ಲವನ್ನೂ ಹೇಳಿದನು. ಅವನು ಎಲ್ಲವನ್ನೂ ಚೆನ್ನಾಗಿ ಯೋಚಿಸಿ ಅದರಂತೆ ಮಗನಿಗೆ ಅಪ್ಪಣೆ ಮಾಡಿದನು. ಎಲಿಷನಾದರೋ ತಾನು ಮಾರಿದ್ದ ಗೂಡುಗಳಿಂದ ಹುಟ್ಟುವ ಹೊಸ ಗೂಡುಗಳನ್ನು ಪ್ರತ್ಯೇಕ ವಾಗಿಟ್ಟಿದ್ದು, ಯಾವ ಬಗೆಯ ಕೈಚಳಕವನ್ನೂ ಉಪಯೋಗಿಸಿ ಮೋಸ ಮಾಡದೆ ಎಲ್ಲವನ್ನೂ ನೆರೆಯವನಿಗೆ ಕೊಟ್ಟುಬಿಡಬೇಕೆಂಬುದನ್ನು ಮಾತ್ರ

ಹೆಂಡತಿಗೆ ತಿಳಿಯ ಹೇಳಿದನು. ಗೃಹಕೃತ್ಯದ ವಿಷಯಗಳನ್ನು ಕುರಿತು ಉಸಿರೆತ್ತಲೂ ಇಲ್ಲ.

'ಏನು ಮಾಡಬೇಕು, ಹೇಗೆ ಮಾಡಬೇಕು, ಎಂಬುದೆಲ್ಲ ಆದರದರ ಅಗತ್ಯ ಒಂದಾಗ ತಾನಾಗಿಯೇ ಗೊತ್ತಾಗುತ್ತದೆ. ನೀವೇ ಯಜಮಾನರು; ನಿಮಗೆ ಯಾವುದು ಒಳ್ಳೆಯದೋ ಅದನ್ನು ಹೇಗೆ ಮಾಡುವುದೆಂಬುದು ನಿಮಗೇ ಗೊತ್ತಾಗುತ್ತದ' ಎಂದನು.

ಹೀಗೆ ಮುದುಕರು ಸಿದ್ಧಮಾಡಿಕೊಂಡರು. ಅವರ ಮನೆಯವರು ಅವರಿಗೆ ರೊಟ್ಟಿಗಳನ್ನು ಸುಟ್ಟುಕೊಟ್ಟರು. ಅವಕ್ಕೆ ಚೀಲಗಳನ್ನು ಹೊಲಿದು ಕೊಟ್ಟರು. ಬಟ್ಟೆಯನ್ನು ಹರಿದು ಕಾಲಿನ ಪಟ್ಟಿಗಳನ್ನು ಮಾಡಿಕೊಟ್ಟರು. ಅವರು ಹೊಸ ಚಕ್ಕಳದ ಮೋಜಗಳನ್ನು ಹಾಕಿಕೊಂಡು ತೊಗಟೆಯನ್ನು ಹೆಣೆದ ಕೆಲವು ಮೋಜಗಳನ್ನು ಹೆಚ್ಚಾಗಿ ತೆಗೆದುಕೊಂಡರು. ಮನೆಯವರೆಲ್ಲ ಹಳ್ಳಿಯ ಗಡಿಯ ವರೆಗೂ ಅವರ ಜೊತೆಯಲ್ಲಿ ಹೋಗಿ ಅಲ್ಲಿಂದ ಅವರನ್ನು ಸಾಗಕಳುಹಿಸಿ ಹಿಂದಿರುಗಿದರು, ಮುದುಕರು ಯಾತ್ರೆ ಹೊರಟರು.

ಎಲಿಷನು ಮನೆಯನ್ನು ಬಿಟ್ಟು ಹೊರಟಾಗ ಉಲ್ಲಾಸವಾಗಿದ್ದನು, ಹಳ್ಳಿಯ ಗಡಿಯನ್ನು ದಾಟಿದಕೂಡಲೆ ಗೃಹಕೃತ್ಯದ ಯೋಚನೆಯನ್ನೆಲ್ಲ ಮರೆತುಬಿಟ್ಟನು. ತನ್ನ ಜೊತೆಗಾರನನ್ನು ಸಂತೋಷಪಡಿಸುವುದು ಹೇಗೆ, ಕಠಿನವಾದ ಮಾತುಗಳನ್ನು ಯಾರಿಗೂ ಆಡದಂತಿರುವುದು ಹೇಗೆ, ಶಾಂತಿಯಿಂದಲೂ ಪ್ರೇಮದಿಂದಲೂ, ತಾನು ಹೋಗಬೇಕಾದಕಡೆಗೆ ಹೋಗಿ ಹಿಂದಿರುಗಿ ಮನೆಗೆ ಬಂದು ಸೇರುವುದು ಹೇಗೆ—ಎಂಬ ವಿಷಯಗಳನ್ನು ಮಾತ್ರವೇ ಅವನು ತುಂಬ ಯೋಚಿಸುತ್ತಿದ್ದನು. ದಾರಿಯಲ್ಲಿ ನಡೆಯುವಾಗ ಎಲಿಷನು ತನ್ನಲ್ಲಿ ತಾನೇ ಯಾವುದಾದರೊಂದು ಪ್ರಾರ್ಥನೆಯನ್ನು ಮೆಲ್ಲಗೆ ಹೇಳಿಕೊಳ್ಳುತ್ತಿದ್ದನು, ಇಲ್ಲದಿದ್ದರೆ ತನಗೆ ನೆನಪಿದ್ದ ಸಂತರ ಕಥೆಗಳನ್ನು ಮನಸ್ಸಿನಲ್ಲೇ ಮೊದಲಿನಿಂದ ಕೊನೆಯವರೆಗೂ ಯೋಚಿಸಿಕೊಳ್ಳುತ್ತಿದ್ದನು. ದಾರಿಯಲ್ಲಿ ಯಾರಾದರೂ ಸಿಕ್ಕಿದರೆ ಅವರೊಡನೆಯೂ ರಾತ್ರಿ ಎಲ್ಲಿಯಾ

ದರೂ ತಂಗಿದರೆ ಅಲ್ಲಿಯೂ ಸಾಧ್ಯವಾದಮಟ್ಟಿಗೆ ಮೃದುವಾಗಿ ವರ್ತಿಸು ವುದಕ್ಕೂ ದೇವರ ವಿಷಯವಾಗಿ ಮಾತನ್ನು ಆಡುವುದಕ್ಕೂ ಪ್ರಯತ್ನಿಸು ತ್ತಿದ್ದನು. ಹೀಗೆ ಅವನು ಆನಂದಿಸುತ್ತ ಮುಂದಕ್ಕೆ ಪ್ರಯಾಣಮಾಡಿದನು. ಒಂದು ಕೆಲಸವನ್ನು ಮಾತ್ರ ಅವನಿಗೆ ಮಾಡುವುದಕ್ಕಾಗಲಿಲ್ಲ; ನಶ್ಯ ಹಾಕುವುದನ್ನು ಬಿಡುವುದು ಅವನಿಗೆ ಸಾಧ್ಯವಾಗಲಿಲ್ಲ. ನಶ್ಯದ ಡಬ್ಬಿ ಯನ್ನು ಹಿಂದೆಯೇ ಬಿಟ್ಟುಬಂದಿದ್ದನು. ಆದರೂ ಅದನ್ನೇ ಬಯಸಿ ತೊಳಲು ತ್ತಿದ್ದನು. ಆಮೇಲೆ ದಾರಿಯಲ್ಲಿ ಸಿಕ್ಕಿದ ಒಬ್ಬ ಮನುಷ್ಯನು ಅವನಿಗೆ ಸ್ವಲ್ಪ ನಶ್ಯವನ್ನು ಕೊಟ್ಟನು, ಅವನು ಆಗಾಗ ಸ್ವಲ್ಪ ಹಿಂದೆ ಬಿದ್ದು (ಇದು ತನ್ನ ಜೊತೆಗಾರನನ್ನು ಆಶೆಯ ಬಲೆಗೆ ಸೆಳೆಯದೆ ಇರುವುದಕ್ಕಾಗಿ) ಒಂದು ಚುಟಿಕೆ ನಶ್ಯವನ್ನು ಹಾಕಿಕೊಳ್ಳುತ್ತಿದ್ದನು.

ಎಫಿಮ್ ಕೂಡ ಒಂದು ತಪ್ಪನ್ನೂ ಮಾಡದೆ, ವ್ಯರ್ಥವಾದ ಒಂದು ಮಾತನ್ನೂ ಆಡದೆ ದೃಢವಾಗಿ ಹೆಜ್ಜೆಯಿಡುತ್ತ ಸರಿಯಾಗಿ ನಡೆಯುತ್ತಿದ್ದನು, ಆದರೆ ಅವನ ಹೃದಯ ಅಷ್ಟು ಹಗುರವಾಗಿರಲಿಲ್ಲ. ಗೃಹಕೃತ್ಯದ ಯೋಚನೆಗಳು ಅವನ ಮನಸ್ಸನ್ನು ಜಗ್ಗಿಸುತ್ತಿದ್ದುವು. ಮನೆ ಯಲ್ಲಿ ಏನೇನಾಗುತ್ತಿದೆಯೋ ಎಂದು ಯಾವಾಗಲೂ ಚಿಂತಿಸುತ್ತ ಕೋಟಲೆ ಪಟ್ಟುಕೊಳ್ಳುತಿದ್ದನು. ಮಗನಿಗೆ ಇದನ್ನಾಗಲಿ ಅದನ್ನಾಗಲಿ ಹೇಳುವುದಕ್ಕೆ ತಾನು ಮರೆಯಲಿಲ್ಲವೇ? ತನ್ನ ಮಗನು ಕೆಲಸಗಳನ್ನು ಸರಿಯಾಗಿ ಮಾಡಿ ಯಾನೇ? ಎಂದು ಮುಂತಾಗಿ ಯೋಚನೆ. ದಾರಿಯಲ್ಲಿ ಹೋಗುತ್ತಿರು ವಾಗ ಆಲೂಗೆಡ್ಡೆಯನ್ನು ನೆಡುತ್ತಿರುವುದಾಗಲಿ ಗೊಬ್ಬರ ಹೊಡೆಯುತ್ತಿರು ವುದಾಗಲಿ ಕಣ್ಣಿಗೆ ಬಿದ್ದರೆ ತನ್ನ ಮಗನು ತಾನು ಹೇಳಿಬಂದಿದ್ದಂತೆ ಮಾಡುತ್ತಿರುವನೋ ಇಲ್ಲವೋ ಎಂದು ಸಂದೇಹಪಟ್ಟುಕೊಳ್ಳುತ್ತಿದ್ದನು. ಕೂಡಲೇ ಹಿಂದಿರುಗಿ ಹೋಗಿ ಕೆಲಸಗಳನ್ನು ಹೇಗೆ ಹೇಗೆ ಮಾಡಬೇಕೆಂದು ತೋರಿಸಿಕೊಡುವ ಅಥವ ಅವನ್ನು ತಾನೇ ಮಾಡಿಬಿಡಬೇಕೆನ್ನುವ ಮಟ್ಟಿಗೂ ಮನಸ್ಸಾಗುತ್ತಿದ್ದಿತು.

೩

ಮುದುಕರು ಐದು ವಾರಗಳು ನಡೆದಿದ್ದರು. ಮನೆಯಲ್ಲಿ ತಯಾರಿಸಿಕೊಂಡ ತೊಗಟೆಯ ಮೋಜಗಳು ಹರಿದುಹೋಗಿದ್ದವು. ಚಿಕ್ಕರಷ್ಯಕ್ಕೆ ತಲಪುವ ಹೊತ್ತಿಗೆ ಅವರು ಹೊಸ ಮೋಜಗಳನ್ನು ಕೊಳ್ಳಲು ಪ್ರಾರಿಂಭಿಸಬೇಕಾಗಿದ್ದಿತು. ಅವರು ಮನೆಯನ್ನು ಬಿಟ್ಟು ಹೊರಟಾಗಿನಿಂದಲೂ ತಮ್ಮ ಆಹಾರಕ್ಕೂ ರಾತ್ರಿಹೊತ್ತು ತಂಗುವುದಕ್ಕೂ ದುಡ್ಡು ಕೊಡಬೇಕಾಗಿದ್ದಿತು; ಆದರೆ ಚಿಕ್ಕರಷ್ಯಕ್ಕೆ ಒಂದು ಸೇರಿದ ಮೇಲೆ ಜನರು ಒಬ್ಬರ ಮೇಲೊಬ್ಬರು ಹುರುಡುಮಾಡಿಕೊಂಡು ಅವರನ್ನು ತಮ್ಮ ತಮ್ಮ ಗುಡಿಸಲಿಗೆ ಬರಬೇಕೆಂದು ಕರೆಯುತ್ತಿದ್ದರು. ಅವರನ್ನು ಒಳಗೆ ಬರಮಾಡಿಕೊಂಡು ಊಟಕ್ಕೆ ಇಕ್ಕಿ ಉಪಚರಿಸುತ್ತಿದ್ದರು, ಹಣವನ್ನು ತೆಗೆದುಕೊಳ್ಳಲು ಒಪ್ಪುತ್ತಿರಲಿಲ್ಲ; ಇದೂ ಅಲ್ಲದೆ ದಾರಿಯಲ್ಲಿ ತಿನ್ನುವುದಕ್ಕೆಂದು ರೊಟ್ಟಿಗಳನ್ನೋ ರುಚಿ ರುಚಿಯಾದ ಕಡುಬುಗಳನ್ನೋ ಅವರ ಚೀಲಕ್ಕೆ ತುಂಬುತ್ತಿದ್ದರು.

ಹೀಗೆ ಯಾವ ಖರ್ಚೂ ಇಲ್ಲದಂತೆ ಮುದುಕರು ಸುಮಾರು ಐನೂರು ಮೈಲಿ ಪ್ರಯಾಣಮಾಡಿದರು. ಆದರೆ ಆ ಪ್ರಾಂತ್ಯವನ್ನು ದಾಟಿ ಮುಂದೆ ಹೋಗಲು ಪೈರು ಕೆಟ್ಟು ಹಾಳಾಗಿಹೋಗಿದ್ದ ಒಂದು ಡಿಸ್ಟ್ರಿಕ್ಟಿಗೆ ಬಂದು ಸೇರಿದರು. ಆದರೂ ಅಲ್ಲಿನ ರೈತರು ರಾತ್ರೆ ಹೊತ್ತು ತಂಗುವುದಕ್ಕೆ ಸ್ಥಳವನ್ನು ಬಿಟ್ಟಿಯಾಗಿಯೇ ಕೊಡುತ್ತಿದ್ದರು; ಆದರೆ ಏನನ್ನೂ ತೆಗೆದುಕೊಳ್ಳದೆ ಅನ್ನ ಹಾಕುತ್ತಿರಲಿಲ್ಲ. ಕೆಲವು ವೇಳೆ ರೈತರಿಗೇ ರೊಟ್ಟಿ ಸಿಕ್ಕುತ್ತಿರಲಿಲ್ಲ. ಅದಕ್ಕೆ ದುಡ್ಡು ಕೊಡಲು ಸಿದ್ಧರಾಗಿದ್ದರು. ಆದರೂ ಏನೂ ಸಿಕ್ಕುತ್ತಿರಲಿಲ್ಲ. ಹಿಂದಿನ ವರ್ಷ ಪೈರು ಪೂರ್ತಿಯಾಗಿ ಹಾಳಾಗಿ ಹೋಯಿತೆಂದು ಜನಗಳು ಹೇಳುತ್ತಿದ್ದರು. ಭಾಗ್ಯವಂತರಾಗಿದ್ದವರ ಸಂಪತ್ತು ನಾಶವಾಗಿ ಇದ್ದ ಬದ್ದದ್ದನ್ನೆಲ್ಲ ಮಾರಬೇಕಾಗಿ ಬಂದಿತು. ಸಾಧಾರಣ ಸ್ಥಿತಿಯವರು ಗತಿಯಿಲ್ಲದವರಾದರು. ಆ ಪ್ರಾಂತವನ್ನು ಬಿಟ್ಟುಹೋಗದೆ ಅಲ್ಲಿಯೇ ಇದ್ದ ಬಡವರು ಭಿಕ್ಷೆಬೇಡುತ್ತ ಅಲೆಯುತ್ತಿದ್ದರು. ಇಲ್ಲದಿದ್ದ

ಮನೆಯಲ್ಲಿ ತಿನ್ನುವುದಕ್ಕೆ ಏನೂ ಇಲ್ಲದೆ ಉಪವಾಸ ಬಿದ್ದಿರುತ್ತಿದ್ದರು. ಚಳಿಗಾಲದಲ್ಲಿ ಅವರು ಹೊಟ್ಟು, ಸಿಪ್ಪೆ, ಮತ್ತು ಗೂಸ್-ಫುಟ್ ಗಿಡಗಳನ್ನು ತಿನ್ನಬೇಕಾಗಿದ್ದಿತು.

ಒಂದುದಿನ ಮುದುಕರು ಒಂದು ಸಣ್ಣ ಹಳ್ಳಿಯಲ್ಲಿ ಇಳಿದುಕೊಂಡರು, ಅಲ್ಲಿ ಹದಿನೈದು ಪೌಂಡು ಬ್ರೆಡ್ಡು ಕೊಂಡುಕೊಂಡು ಅಲ್ಲಿಯೇ ಮಲಗಿದ್ದು ಬಿಸಿಲೇರುವುದಕ್ಕೆ ಮುಂಚಿತವಾಗಿ ಹೆಚ್ಚು ದಾರಿ ಸಾಗಿಸಿರಬೇಕೆಂದು ಸೂರ್ಯ ಹುಟ್ಟುವ ಮೊದಲೇ ಎದ್ದು ಹೊರಟರು. ಎಂಟು ಮೈಲಿ ನಡೆದಮೇಲೆ ಒಂದು ಹಳ್ಳ ಸಿಕ್ಕಿತು. ಅಲ್ಲಿ ಕುಳಿತು ಒಂದು ಪಾತ್ರೆಗೆ ನೀರು ತುಂಬಿಕೊಂಡು ಅದರಲ್ಲಿ ಸ್ವಲ್ಪ ಬ್ರೆಡ್ಡನ್ನು ಅದ್ದಿ ತಿಂದರು. ಆಮೇಲೆ ಕಾಲಿನ ಪಟ್ಟಿಗಳನ್ನು ಬದಲಾಯಿಸಿ ಸ್ವಲ್ಪ ಹೊತ್ತು ಕುಳಿತು ದಣಿವಾರಿಸಿಕೊಂಡರು. ಎಲಿಷನು ನಶ್ಯದ ಡಬ್ಬಿಯನ್ನು ಹೊರಕ್ಕೆ ತೆಗೆದನು. ಏಫಿಮ್ ಅದನ್ನು ಕಂಡು ತಲೆಯನ್ನು ಅಲ್ಲಾಡಿಸಿದನು.

'ಇದೇಕೆ, ಈ ಹಾಳು ಕೊಳಕು ಅಭ್ಯಾಸವನ್ನು ನೀನಿನ್ನೂ ಬಿಡಲೊಲ್ಲೆ?' ಎಂದನು.

ಎಲಿಷ ಕೈಯಾಡಿಸುತ್ತ 'ಈ ದುರಭ್ಯಾಸ ನನಗಿಂತಲೂ ಹೆಚ್ಚು ಬಲವಾಗಿದೆಯಪ್ಪಾ' ಎಂದನು.

ತಕ್ಷಣವೇ ಅವರು ಮೇಲೆಕ್ಕೆದ್ದು ಮುಂದೆ ನಡೆದರು. ಹೆಚ್ಚು ಕಡಮೆ ಮತ್ತೆ ಎಂಟು ಮೈಲಿ ನಡೆದಮೇಲೆ ಒಂದು ದೊಡ್ಡ ಹಳ್ಳಿಗೆ ಬಂದು ಅದರ ನಟ್ಟನಡುವೆ ಹಾದುಹೋದರು. ಅಷ್ಟುಹೊತ್ತಿಗೆ ಬಿಸಿಲು ಏರಿದ್ದಿತು. ಎಲಿಷನು ಸ್ವಲ್ಪ ಹೊತ್ತು ಸುದಾರಿಸಿಕೊಂಡು ಸ್ವಲ್ಪ ನೀರು ಕುಡಿಯಬೇಕೆಂದು ಇಷ್ಟಪಟ್ಟನು. ಆದರೆ ಏಫಿಮ್ ನಿಲ್ಲಲಿಲ್ಲ. ಅವರಿಬ್ಬರಲ್ಲಿ ಏಫಿಮ್ ಹೆಚ್ಚು ವೇಗವಾಗಿ ನಡೆಯುತ್ತಿದ್ದನು; ಅವನ ಜೊತೆಗೆ ಸರಿಯಾಗಿ ನಡೆಯಲು ಎಲಿಷನಿಗೆ ಕಷ್ಟವಾಯಿತು.

ಎಲಿಷನು 'ಕುಡಿಯುವುದಕ್ಕೆ ಸ್ವಲ್ಪ ನೀರು ಸಿಕ್ಕಿದ್ದರೆ' ಎಂದನು.

'ಆಗಲಿ, ಕುಡಿದು ಬಾ ನನಗೇನೂ ಬೇಡ' ಎಂದನು ಎಫಿಮ್.

ಎಲಿಷ ನಿಂತನು.

'ನೀನು ಹೋಗುತ್ತಿರು. ಅಲ್ಲಿ ಕಾಣುವ ಚಿಕ್ಕ ಗುಡಿಸಲಿಗೆ ಓಡಿ ಹೋಗಿ ಬರುತ್ತೇನೆ. ಒಂದು ನಿಮಿಷದಲ್ಲಿ ನಿನ್ನ ಜೊತೆಗೆ ಬಂದು ಕೂಡಿ ಕೊಳ್ಳುತ್ತೇನೆ' ಎಂದನು.

'ಹಾಗೇ ಆಗಲೇಳು' ಎಂದು ಎಫಿಮ್ ರಾಜಮಾರ್ಗದಲ್ಲಿ ಒಬ್ಬನೇ ಮುಂದೆ ನಡೆದನು. ಎಲಿಷನು ಹಿಂದಿರುಗಿ ಗುಡಿಸಲ ಕಡೆಗೆ ಹೋದನು.

ಅದು ಒಂದು ಸಣ್ಣ ಗುಡಿಸಲು. ಗೋಡೆಗಳಿಗೆ ಜೇಡಿಯನ್ನು ಬಳಿ ದಿದ್ದರು, ಗೋಡೆಯ ಕೆಳಭಾಗ ಮಾಸಲು ಕಪ್ಪುಬಣ್ಣವಾಗಿದ್ದಿತು, ಮೇಲುಗಡೆಯಲ್ಲಿ ಸುಣ್ಣ ಹೊಡೆದಿದ್ದರು; ಮೆತ್ತಿದ್ದ ಜೇಡಿಯೆಲ್ಲ ಪುಡಿಪುಡಿ ಯಾಗಿ ಉದುರಿದ್ದಿತು. ಅದನ್ನು ನೋಡಿದರೆ ಗೋಡೆಗೆ ಜೇಡಿಯನ್ನು ಬಳಿದು ಬಹಳ ಕಾಲ ಕಳೆದಿದ್ದಿತೆಂದು ಸ್ಪಷ್ಟವಾಗುತ್ತಿದ್ದಿತು. ಒಂದುಕಡೆಯ ಭಾಗದಲ್ಲಿ ಛಾವಣಿಯಮೇಲೆ ಹೊದ್ದಿಸಿದ್ದ ಹುಲ್ಲು ಜಾರಿ ಬಿದ್ದಿದ್ದಿತು. ಅಂಗಳದಲ್ಲಿ ಹಾದು ಗುಡಿಸಿಲಿನೊಳಕ್ಕೆ ಹೋಗಬೇಕಾಗಿದ್ದಿತು. ಎಲಿಷನು ಅಂಗಳದೊಳಕ್ಕೆ ಹೋದನು. ಅಲ್ಲಿ ಗುಡಿಸಲ ಸುತ್ತಲೂ ಇದ್ದ ಒಂದು ಮಣ್ಣು ದಿಬ್ಬದ ಬಳಿಯಲ್ಲಿ ಕೃಶನಾಗಿ ಜೋಲುಮುಖ ಹಾಕಿಕೊಂಡಿದ್ದ ಗಡ್ಡವಿಲ್ಲದ ಒಬ್ಬ ಮನುಷ್ಯನು ಚಿಕ್ಕರಷ್ಯದ ಪದ್ಧತಿಯಂತೆ ಷರಟಿನ ತುದಿಯನ್ನು ಷರಾಯಿನೊಳಕ್ಕೆ ಸೇರಿಸಿ ಕಟ್ಟಿ ಮಲಗಿದ್ದನು. ಅವನು ನೆರಳಿ ನಲ್ಲಿ ಮಲಗಿದ್ದನೆಂದು ತೋರುತ್ತದೆ. ಆದರೆ ಬಿಸಿಲು ತಿರುಗಿ ಬಂದು ಈಗ ಅವನ ಮೇಲೆ ಪೂರ್ತಿಯಾಗಿ ಬೀಳುತ್ತಿದ್ದಿತು. ಅವನಿಗೆ ನಿದ್ದೆ ಹತ್ತದೆ ಇದ್ದರೂ ಇನ್ನೂ ಅಲ್ಲಿಯೇ ಮಲಗಿದ್ದನು. ಎಲಿಷನು ಅವನನ್ನು ಕೂಗಿ

ಕುಡಿಯುವುದಕ್ಕೆ ನೀರು ಬೇಕೆಂದು ಕೇಳಿದನು. ಆದರೆ ಆ ಮನುಷ್ಯನು ಉತ್ತರ ಕೊಡಲಿಲ್ಲ.

ಎಲಿಷನು 'ಅವನಿಗೆ ಸ್ವಸ್ಥವಿಲ್ಲದಿರಬೇಕು ; ಅಥವ ಅವನು ಸ್ನೇಹಪರನಲ್ಲ.' ಎಂದುಕೊಂಡು ಬಾಗಿಲಿನ ಹತ್ತಿರಕ್ಕೆ ಹೋದನು. ಗುಡಿಸಲಿನಲ್ಲಿ ಒಂದು ಮಗು ಅಳುತ್ತಿದ್ದದ್ದು ಕೇಳಿಸಿತು. ಬಾಗಿಲಿನ ಹಿಡಿಯಾಗಿ ಉಪಯೋಗಿಸಿದ್ದ ಒಂದು ಬಳೆಯನ್ನು ಹಿಡಿದುಕೊಂಡು ಅದನ್ನು ಕುಟ್ಟಿ ಸದ್ದು ಮಾಡಿದನು.

'ಯಜಮಾನರೇ' ಎಂದು ಕೂಗಿದನು. ಉತ್ತರವಿಲ್ಲ. ಮತ್ತೊಂದು ಸಲ ತನ್ನ ದೊಣ್ಣೆಯಿಂದ ಕುಟ್ಟಿದನು

'ಏಯ್, ಕ್ರಿಶ್ಚಿಯನ್ನರೇ!' ಏನೂ ಅಲ್ಲಾಡಲಿಲ್ಲ.

'ಏಯ್, ದೇವಸೇವಕರೇ!' ಆಗಲೂ ಉತ್ತರವಿಲ್ಲ.

ಎಲಿಷನು ಹಿಂದಿರುಗುವುದರಲ್ಲಿದ್ದನು. ಅಷ್ಟರಲ್ಲಿ ಬಾಗಿಲಿನ ಆಚೆ ಕಡೆಯಲ್ಲಿ ನರಳಿದ ದನಿ ಕೇಳಿದಂತಾಯಿತು.

'ಅಯ್ಯೋ, ಭಗವಂತಾ! ಈ ಮನೆಯ ಜನರಿಗೆ ಏನಾದರೂ ಕೇಡುಗೇಡಾಗಿರಬಹುದೇ? ಒಂದು ಸಲ ನೋಡುವುದೊಳ್ಳೆಯದು' ಎಂದುಕೊಂಡನು.

ಎಲಿಷನು ಗುಡಿಸಿಲಿನೊಳಕ್ಕೆ ಹೋದನು.

ೞ

ಎಲಿಷನು ಬಳೆಯನ್ನು ತಿರುಗಿಸಿದನು. ಬಾಗಿಲಿಗೆ ಚಿಲಕ ಹಾಕಿರಲಿಲ್ಲ. ಅವನು ಬಾಗಿಲನ್ನು ತೆಗೆದು ಇಕ್ಕಟ್ಟಾದ ದಾರಿಯಲ್ಲಿ ಮುಂದೆ ಹೋದನು. ವಾಸದ ಕೊಟಡಿಯ ಬಾಗಿಲು ತೆಗೆದಿದ್ದಿತು. ಎಡಗಡೆಗೆ ಒಂದು ಇಟ್ಟಿಗೆಯ ಒಲೆಯಿದ್ದಿತು ; ಎದುರುಗಡೆಯಲ್ಲಿ ಒಂದು ದೇವರ ವಿಗ್ರಹವನ್ನು

ಗೋಡೆಗೆ ಒರಗಿಸಿ ಇಟ್ಟಿದ್ದರು; ಅದರ ಮುಂದೆ ಒಂದು ಮೇಜವನ್ನು ಇಟ್ಟಿದ್ದರು, ಮೇಜದ ಪಕ್ಕದಲ್ಲಿ ಒಂದು ಬೆಂಚಿದ್ದಿತು; ಅದರ ಮೇಲೆ ಬರಿ ತಲೆಯ ಒಬ್ಬ ಮುದುಕಿ ಒಂದೇ ಒಂದು ಬಟ್ಟೆಯನ್ನು ಹೊದೆದು ತಲೆಯನ್ನು ಮೇಜಿನಮೇಲಿಟ್ಟುಕೊಂಡು ಕುಳಿತಿದ್ದಳು. ಅವಳ ಹತ್ತಿರ ಮುಂದಕ್ಕೆ ಚಾಚಿದ ಹೊಟ್ಟೆಯುಳ್ಳ ಒಬ್ಬ ಹುಡುಗನಿದ್ದನು. ಅವನ ಮೈಯೆಲ್ಲ ಬಿಳಿಚಿಕೊಂಡು ಕೃಶವಾಗಿದ್ದಿತು. ಅವನು ಏನಾದರೂ ಕೊಡೆಂದು ಅವಳ ಅಂಗಿಯ ತೋಳನ್ನು ಹಿಡಿದೆಳೆಯುತ್ತ ಬಹಳ ಸಂಕಟದಿಂದ ಅಳುತ್ತಿದ್ದನು. ಎಲಿಷನು ಒಳಕ್ಕೆ ಹೋದನು. ಗುಡಿಸಲಿನ ಒಳಗೆ ಗಾಳಿ ಕೆಟ್ಟು ನಾರುತ್ತಿದ್ದಿತು. ಅವನು ಸುತ್ತಲೂ ನೋಡಿದನು. ಒಲೆಯ ಹಿಂದುಗಡೆ ನೆಲದಮೇಲೆ ಒಬ್ಬ ಹೆಂಗಸು ಮಲಗಿರುವುದು ಕಾಣಿಸಿತು. ಅವಳು ಕಣ್ಣುಗಳನ್ನು ಮುಚ್ಚಿಕೊಂಡು ನೆಲದಮೇಲೆ ಬಿದ್ದುಕೊಂಡಿದ್ದಳು, ಗಂಟಲು ಘೇರುಗುಡುತ್ತಿದ್ದಿತು, ಆಗಾಗ ಒಂದೊಂದು ಕಾಲನ್ನು ಹೊರಕ್ಕೆ ನೀಡುತ್ತಲೂ ಮತ್ತೆ ಅದನ್ನು ಒಳಕ್ಕೆ ಎಳೆದುಕೊಳ್ಳುತ್ತಲೂ ಪಕ್ಕದಿಂದ ಪಕ್ಕಕ್ಕೆ ಎತ್ತಿಹಾಕುತ್ತಲೂ ಇದ್ದಳು, ಕೆಟ್ಟ ನಾತ ಅವಳ ಕಡೆಯಿಂದಲೇ ಬರುತ್ತಿದ್ದಿತು. ತಾನಾಗಿಯೇ ಏನು ಮಾಡುವುದಕ್ಕೂ ಅವಳಿಗೆ ಶಕ್ತಿಯಿರಲಿಲ್ಲ; ಅವಳಿಗೆ ಬೇಕಾದದ್ದನ್ನು ಹೊಂದಿಸಿಕೊಟ್ಟು ಯಾರೂ ಉಪಚರಿಸುತ್ತಿರಲಿಲ್ಲ. ಮುದುಕಿ ಕತ್ತೆತ್ತಿ ನೋಡಿ ಅಪರಿಚಿತನನ್ನು ಕಂಡಳು.

'ಏನು ಬೇಕು, ನಿನಗೆ? ಏನು ಬೇಕಯ್ಯ ನಿನಗೆ? ನಮ್ಮ ಹತ್ತಿರ ಏನೂ ಇಲ್ಲ' ಎಂದಳು.

ಅವಳು ಚಿಕ್ಕರಷ್ಯದ ಭಾಷೆಯಲ್ಲಿ ಮಾತಾಡಿದಳಾದರೂ ಅವಳು ಹೇಳಿದ್ದು ಎಲಿಷನಿಗೆ ಗೊತ್ತಾಯಿತು.

'ಸ್ವಲ್ಪ ನೀರು ಕುಡಿಯೋಣವೆಂದು ಬಂದೆನಮ್ಮ' ಎಂದನು.

'ಇಲ್ಲಿ ಯಾರೂ ಇಲ್ಲ—ಯಾರೂ ಇಲ್ಲ. ಅದನ್ನು ತರುವುದಕ್ಕೆ ಏನೂ ಇಲ್ಲ ನಿನ್ನ ದಾರಿಹಿಡಿದು ನೀನು ಹೊರಡು'.

ಆಗ ಎಲಿಷ ಕೇಳಿದನು.

'ಹಾಗಾದರೆ ಆ ಹೆಂಗಸನ್ನು ಉಪಚರಿಸುವುದಕ್ಕೆ ತಕ್ಕಷ್ಟು ಸ್ವಸ್ಥ ವಾಗಿರುವವರು ನಿಮ್ಮಲ್ಲಿ ಒಬ್ಬರೂ ಇಲ್ಲವೇ ?'

'ಇಲ್ಲ, ನಮಗೆ ಯಾರೂ ಇಲ್ಲ. ನನ್ನ ಮಗ ಹೊರಗೆ ಸಾಯುತ್ತಿದಾನೆ. ನಾವು ಇಲ್ಲಿ ಒಳಗೆ ಸಾಯುತ್ತಿದೇವೆ'.

ಹೊಸಬನನ್ನು ಕಂಡಕೂಡಲೆ ಆ ಚಿಕ್ಕ ಹುಡುಗ ಅಳುವನ್ನು ನಿಲ್ಲಿಸಿದ್ದನು ; ಆದರೆ ಮುದುಕಿ ಮಾತಾಡುವುದಕ್ಕ ಮೊದಲುಮಾಡಿದಾಗ ಮತ್ತೆ ಪ್ರಾರಂಭಿಸಿದನು ಅವಳ ಅಂಗಿಯ ತೋಳನ್ನು ಭದ್ರವಾಗಿ ಹಿಡಿದುಕೊಂಡು 'ರೊಟ್ಟಿ, ಅಜ್ಜಿ, ರೊಟ್ಟಿ' ಎಂದು ಅಳುತ್ತಿದ್ದನು.

ಎಲಿಷನು ಆ ಮುದುಕಿಯನ್ನು ಏನೋ ಪ್ರಶ್ನೆಮಾಡುವುದರಲ್ಲಿದ್ದನು ಅಷ್ಟು ಹೊತ್ತಿಗೆ ಗಂಡನು ಕಷ್ಟದಿಂದ ತತ್ತರಿಸುತ್ತ ಗುಡಿಸಲಿನೊಳಕ್ಕೆ ಬಂದನು. ಉದ್ದಕ್ಕೂ ಗೋಡೆಯನ್ನು ಹಿಡಿದು ತಪ್ಪಿಕೊಂಡು ಬಂದನು, ಆದರೆ ವಾಸದ ಕೊಟಡಿಯೊಳಕ್ಕೆ ಕಾಲಿಡುವಾಗ ಬಾಗಿಲ ಬಳಿ ಮೂಲೆಯಲ್ಲಿ ಬಿದ್ದುಬಿಟ್ಟನು. ಬೆಂಚಿನ ಹತ್ತಿರ ಹೋಗುವುದಕ್ಕ ಮತ್ತೆ ಮೇಲೇಳುವ ಪ್ರಯತ್ನವನ್ನೇ ಮಾಡದೆ ಅರ್ಧರ್ಧ ಮಾತಿನಲ್ಲಿ ಹೇಳತೊಡಗಿದನು ಒಂದು ಸಲಕ್ಕೆ ಒಂದು ಶಬ್ದ ಹೊರಕ್ಕೆ ಬರುತ್ತಿದ್ದಿತು. ಅದು ಮುಗಿದ ಕೂಡಲೆ ಉಸಿರೆಳೆದುಕೊಳ್ಳುವುದಕ್ಕೆ ಮಾತು ನಿಲ್ಲಿಸಿ ಬಾಯಿ ಬಾಯಿ ಬಿಡುತ್ತಿದ್ದನು.

'ರೋಗ ...ಕ್ಷಾಮ ಇವಕ್ಕೆ ಸಿಕ್ಕಿಬಿದ್ದೆವು. ಹಸಿವಿನಿಂದ.... ಅವನು ಸಾಯುತ್ತಿದಾನೆ' ಎಂದನು.

ಹಾಗೆಂದು ಹೇಳಿ ಹುಡುಗನ ಕಡೆಗೆ ಕೈತೋರಿಸಿ ಅಳುವುದಕ್ಕೆ ಪ್ರಾರಂಭಿಸಿದನು.

ಎಲಿಷನು ಹೆಗಲಮೇಲಿನ ಚೀಲವನ್ನು ಜರುಗಿಸಿ ಪಟ್ಟಿಗಳನ್ನು ತೋಳು ಗಳಿಂದ ಬಿಚ್ಚಿಕೊಂಡು ಚೀಲವನ್ನು ನೆಲದಮೇಲಿಟ್ಟನು. ಆಮೇಲೆ ಅದನ್ನು ಬೆಂಚಿನ ಮೇಲಕ್ಕೆ ಎತ್ತಿ ಇಟ್ಟು ದಾರಗಳನ್ನು ಬಿಚ್ಚಿದನು. ಚೀಲವನ್ನು ಬಿಚ್ಚಿ ಒಂದು ರೊಟ್ಟಿಯನ್ನು ಹೊರಕ್ಕೆ ತೆಗೆದು ತನ್ನ ಚಾಕುವಿನಿಂದ ಅದರಲ್ಲಿ ಒಂದು ಚೂರನ್ನು ಕತ್ತರಿಸಿ ಅದನ್ನು ಆತನ ಕೈಗೆ ಕೊಟ್ಟನು. ಆತನು ಅದನ್ನು ತೆಗೆದುಕೊಳ್ಳಲೊಲ್ಲದೆ 'ಅದನ್ನು ಅವರಿಗೆ ಕೊಡು' ಎಂದು ಹೇಳುವಂತೆ ಆ ಚಿಕ್ಕ ಹುಡುಗನ ಕಡೆಗೂ ಒಲೆಯ ಹಿಂದೆ ಮುದುರಿ ಕೊಂಡು ಮಲಗಿದ್ದ ಚಿಕ್ಕ ಹುಡುಗಿಯ ಕಡೆಗೂ ತೋರಿಸುತ್ತಿದ್ದನು.

ಎಲಿಷನು ಅದನ್ನು ಹುಡುಗನ ಕಡೆಗೆ ನೀಡಿ ಹಿಡಿದನು. ಹುಡುಗ ನಿಗೆ ರೊಟ್ಟಿಯ ವಾಸನೆ ಬಂದಕೂಡಲೆ ತೋಳುಗಳನ್ನು ಹೊರಕ್ಕ ಚಾಚಿ ತನ್ನ ಪುಟ್ಟ ಕೈಗಳೆರಡರಿಂದಲೂ ಅದನ್ನು ಭದ್ರವಾಗಿ ಹಿಡಿದೆಳೆದು ಕೊಂಡು ತನ್ನ ಮೂಗು ಅದರೊಳಕ್ಕೆ ನುಗ್ಗಿ ಮುಚ್ಚಿಹೋಗುವಹಾಗೆ ಅದನ್ನು ಕಚ್ಚಿದನು. ಚಿಕ್ಕ ಹುಡುಗಿ ಒಲೆಯ ಹಿಂದಿನಿಂದ ಎದ್ದು ಬಂದು ರೊಟ್ಟಿಯ ಮೇಲೆ ನೋಟವನ್ನು ನೆಟ್ಟಳು. ಎಲಿಷ ಅವಳಿಗೂ ಒಂದು ಚೂರನ್ನು ಕೊಟ್ಟನು. ಆಮೇಲೆ ಮತ್ತೊಂದು ಚೂರನ್ನು ಕತ್ತರಿಸಿ ಮುದುಕಿಗೆ ಕೊಟ್ಟನು. ಅವಳೂ ಅದನ್ನು ಬಾಯಿಗೆ ಹಾಕಿಕೊಂಡು ಅಗಿ ಯಲು ಮೊದಲು ಮಾಡಿದಳು.

'ಸ್ವಲ್ಪ ನೀರು ಮಾತ್ರ ತಂದುಕೊಟ್ಟಿದ್ದರಾಗಿತ್ತಲ್ಲಾ! ಅವರ ಬಾಯೆಲ್ಲ ಒಣಗಿಹೋಗಿದೆ. ನಿನ್ನೆ—ಅಥವ ಇವತ್ತೇಯೋ ಏನೋ ನನಗೆ ಜ್ಞಾಪಕ ವಿಲ್ಲ—ಸ್ವಲ್ಪ ನೀರು ತರಬೇಕೆಂದು ನಾನೇ ಪ್ರಯತ್ನಮಾಡಿದೆ. ಆದರೆ ಕೆಳಗೆ ಬಿದ್ದುಬಿಟ್ಟೆ. ಮುಂದೆ ಹೋಗುವುದಕ್ಕಾಗಲಿಲ್ಲ. ಯಾರೂ ತೆಗೆದುಕೊಂಡು ಹೋಗದೆ ಇದ್ದರೆ, ಬಕೆಟ್ಟೂ ಅಲ್ಲೇ ಬಿದ್ದಿರಬೇಕು' ಎಂದಳು.

ಬಾವಿ ಎಲ್ಲಿದೆಯೆಂದು ಎಲಿಷ ಕೇಳಿದನು. ಮುದುಕಿ ಅವನಿಗೆ ಹೇಳಿ ದಳು. ಎಲಿಷನು ಹೊರಕ್ಕೆ ಹೋಗಿ ಬಕೆಟ್ಟನ್ನು ಹುಡುಕಿ ತೆಗೆದುಕೊಂಡು

ಸ್ವಲ್ಪ ನೀರು ತಂದು ಅವರಿಗೆ ಕುಡಿಯುವುದಕ್ಕೆ ಕೊಟ್ಟನು. ಹುಡುಗರೂ ಮುದುಕಿಯೂ ನೀರಿನ ಜೊತೆಯಲ್ಲಿ ಮತ್ತೆ ಸ್ವಲ್ಪ ರೊಟ್ಟಿಯನ್ನು ತಿಂದರು. ಆದರೆ ಆ ಗಂಡಸು ಮಾತ್ರ ತಿನ್ನಲಿಲ್ಲ.

'ನಾನು ತಿನ್ನಲಾರೆ' ಎಂದನು.

ಈ ಸಮಯದಲ್ಲಿ ಹೆಂಗಸು ಎಚ್ಚರವಾಗಿದ್ದ ಸೂಚನೆಯನ್ನೇನೂ ತೋರಿಸಲಿಲ್ಲ, ಪಕ್ಕದಿಂದ ಪಕ್ಕಕ್ಕೆ ಉರುಳಾಡುತ್ತಲೇ ಇದ್ದಳು. ತಕ್ಷಣ ಎಲಿಷನು ಹಳ್ಳಿಯ ಅಂಗಡಿಗೆ ಹೋಗಿ ಸ್ವಲ್ಪ ಕಾಳು, ಉಪ್ಪು, ಹಿಟ್ಟು, ಎಣ್ಣೆ—ಇಷ್ಟನ್ನೂ ಕೊಂಡು ತಂದನು. ಒಂದು ಕೊಡಲಿ ಸಿಕ್ಕಲು ಸ್ವಲ್ಪ ಸೌದೆಯನ್ನು ಒಡೆದು ಬೆಂಕಿ ಹತ್ತಿಸಿದನು. ಚಿಕ್ಕ ಹುಡುಗಿ ಬಂದು ಅವನಿಗೆ ಸಹಾಯಮಾಡಿದಳು. ಆಮೇಲೆ ಅವನು ಸ್ವಲ್ಪ ಅಂಬಲಿ ಕಾಯಿಸಿ ಉಪವಾಸ ಬಿದ್ದಿದ್ದ ಆ ಜನರಿಗೆ ಊಟಕ್ಕೆ ಬಡಿಸಿದನು.

೫

ಗಂಡಸು ಸ್ವಲ್ಪ ತಿಂದನು, ಮುದುಕಿಯೂ ಸ್ವಲ್ಪ ತೆಗೆದುಕೊಂಡಳು. ಚಿಕ್ಕ ಹುಡುಗಿಯೂ ಹುಡುಗನೂ ಗಂಗಳದಲ್ಲಿ ಸ್ವಲ್ಪವೂ ಉಳಿಯದಂತೆ ಚೆನ್ನಾಗಿ ನೆಕ್ಕಿಬಿಟ್ಟರು, ಆಮೇಲೆ ಮುದುರಿಕೊಂಡು, ಒಬ್ಬರನ್ನೊಬ್ಬರು ತಬ್ಬಿಕೊಂಡು ಮಲಗಿ ನಿದ್ದೆಮಾಡಿದರು.

ಆ ಒಳಿಕ ಆ ಗಂಡಸೂ ಮುದುಕಿಯೂ ತಾವು ಆಗಿನ ಕೀಳು ಗತಿಗೆ ಇಳಿದದ್ದು ಹೇಗೆಂಬುದನ್ನು ಎಲಿಷನಿಗೆ ಹೇಳತೊಡಗಿದರು.

ಅವರು, 'ನಾವು ಮೊದಲೇ ತಕ್ಕಷ್ಟು ಬಡವರಾಗಿದ್ದೆವು. ಆದರೆ ಪೈರು ಹೋದಮೇಲೆ, ನಾವು ಕೂಡಿಸಿಟ್ಟದ್ದು ಬಿಸಿಲುಕಾಲ ಮುಗಿಯುವವರೆಗೂ ಸಾಕಾಗುವಂತಿರಲಿಲ್ಲ. ಚಳಿಗಾಲ ಬರುವ ಹೊತ್ತಿಗೆ ನಮ್ಮ ಹತ್ತಿರ ಏನೂ ಉಳಿಯಲಿಲ್ಲ, ನೆರೆಹೊರೆಯವರಲ್ಲಿಯೂ, ಯಾರು ಸಿಕ್ಕಿದರೆ ಅವರಲ್ಲಿಯೂ ಭಿಕ್ಷೆಬೇಡಬೇಕಾಯಿತು. ಮೊದಲು ಅವರು ಕೊಡುತ್ತಿದ್ದರು. ಆಮೇಲೆ

ಇಲ್ಲವೆನ್ನಲು ಮೊದಲು ಮಾಡಿದರು. ಕೆಲವರು ನಮಗೆ ಸಹಾಯ ಮಾಡ ಬೇಕೆಂದು ಇಷ್ಟಪಡುತ್ತಿದ್ದರು, ಆದರೆ ಕೊಡುವುದಕ್ಕೆ ಅವರ ಹತ್ತಿರ ಏನೂ ಇರಲಿಲ್ಲ. ಕೇಳುವುದಕ್ಕೆ ನಮಗೆ ನಾಚಿಕೆಯಾಗುತ್ತಿದ್ದಿತು; ಸುತ್ತಲೂ ಸಾಲದಲ್ಲಿ ಸಿಕ್ಕಿದ್ದೆವು; ದುಡ್ಡು, ಹಿಟ್ಟು, ರೊಟ್ಟಿ—ಎಲ್ಲ ಸಾಲ ತಂದಿದ್ದೆವು' ಎಂದರು.

ಆ ಗಂಡಸು ಹೇಳತೊಡಗಿದನು. 'ನಾನು ಕೆಲಸವನ್ನು ಹುಡುಕಿ ಕೊಂಡು ಹೊರಟೆ ಆದರೆ ಏನೂ ಸಿಕ್ಕಲಿಲ್ಲ. ಎಲ್ಲ ಕಡೆಯಲ್ಲಿಯೂ ಜನರು ಹೊಟ್ಟೆಗೆ ಮಾತ್ರ ಹಾಕಿಬಿಟ್ಟರೆ ಅಷ್ಟಕ್ಕೇ ಕೆಲಸ ಮಾಡುವೆವೆಂದು ಬರುತ್ತಿದ್ದರು ಒಂದೊಂದು ದಿನ ಸ್ವಲ್ಪ ಕೆಲಸ ಸಿಕ್ಕುತ್ತಿದ್ದಿತು, ಆಮೇಲೆ ಕೆಲಸವನ್ನು ಹುಡುಕಿಕೊಂಡು ಎರಡು ದಿನಗಳನ್ನು ಕಳೆಯಬೇಕಾಗುತ್ತಿದ್ದಿತು ಆಮೇಲೆ ಮುದುಕಿಯೂ ಹುಡುಗಿಯೂ ಇನ್ನೂ ದೂರದೂರಕ್ಕೆ ಭಿಕ್ಷೆ ಬೇಡುವುದಕ್ಕೆ ಹೋದರು. ಆದರೆ ಅವರಿಗೆ ಎಲ್ಲೋ ಸ್ವಲ್ಪ ಸಿಕ್ಕುತ್ತಿದ್ದಿತು. ಆಹಾರಕ್ಕೆ ಅಷ್ಟು ದರಿದ್ರ ಬಂದಿದ್ದಿತು. ಆದರೂ ಹಾಗೂ ಹೀಗೂ ಮಾಡಿ ಆಹಾರ ವನ್ನು ಒದಗಿಸಿಕೊಂಡು ಮುಂದಿನ ಸುಗ್ಗಿಯವರೆಗೂ ಹೇಗಾದರೂ ಕಳೆಯಬಹುದೆಂದು ಮಾಡಿದ್ದೆವು. ಆದರೆ ವಸಂತ ಋತುವಿನ ಹೊತ್ತಿಗೆ ಜನರು ಏನನ್ನೂ ಕೊಡದೆ ನಿಲ್ಲಿಸಿಬಿಟ್ಟರು. ಆಮೇಲೆ ಈ ರೋಗ ಬಂದು ನಮ್ಮನ್ನು ಅಂಟಿಕೊಂಡಿತು. ದಿನದಿನಕ್ಕೆ ಹೆಚ್ಚು ಹೆಚ್ಚು ಚಿಕ್ಕಟ್ಟಾಗುತ್ತಲೇ ಬಂದಿತು. ಒಂದು ದಿನ ತಿನ್ನುವುದಕ್ಕೆ ಏನಾದರೂ ಸಿಕ್ಕಿದರೆ ಎರಡುದಿನ ಏನೂ ಸಿಕ್ಕು ತ್ತಿರಲಿಲ್ಲ. ಆಮೇಲೆ ಹುಲ್ಲು ತಿನ್ನಲು ಮೊದಲು ಮಾಡಿದೆವು. ಹುಲ್ಲು ತಿಂದದ್ದರಿಂದಲೇ ನನ್ನ ಹೆಂಡತಿಗೆ ರೋಗ ಬಂದಿತೋ ಏನೋ ನನಗೆ ಗೊತ್ತಿಲ್ಲ ಅವಳಿಗೆ ನಡೆಯುವುದಕ್ಕೆ ಆಗುತ್ತಿರಲಿಲ್ಲ; ಮೈಯಲ್ಲಿ ಶಕ್ತಿ ಉಳಿದಿರಲಿಲ್ಲ, ಸುದಾರಿಸಿಕೊಳ್ಳಲು ಸಹಾಯವಾಗುವಂಥದೇನೂ ನಮ್ಮ ಹತ್ತಿರ ಇರಲಿಲ್ಲ, ಎಂದನು.

ಮುದುಕಿಯು 'ನಾನೊಬ್ಬಳೇ ಸ್ವಲ್ಪಕಾಲ ಹೆಣಗಿದೆ. ಆದರೆ ಕಡೆಗೆ ನಾನೂ ಹೊಟ್ಟೆಗಿಲ್ಲದೆ ತೀರ ಅಶಕ್ತಳಾದೆ. ಹುಡುಗಿಯೂ ಅಶಕ್ತಳಾಗಿ

ಹೊರಗೆ ಹೋಗುವುದಕ್ಕೆ ಹೆದರತೊಡಗಿದಳು. ನೆರೆಯವರ ಬಳಿಗೆ ಹೋಗೆಂದು ಹೇಳಿದರೆ—ಗುಡಿಸಲು ಬಿಟ್ಟು ಹೊರಡಲಿಲ್ಲ. ಒಂದು ಮೂಲೆಗೆ ತೆವಳಿ ಕೊಂಡು ಹೋಗಿ ಅಲ್ಲಿ ಕುಳಿತುಬಿಟ್ಟಳು. ಮೊನ್ನೆಯ ದಿನ ನೆರೆಮನೆಯ ಒಬ್ಬಾಕ ಬಂದಿದ್ದಳು. ಆದರೆ ನಾವು ರೋಗಕ್ಕೆ ಸಿಕ್ಕಿ ಹೊಟ್ಟೆಗಿಲ್ಲದೆ ಹಸಿದಿರುವುದನ್ನು ಕಂಡು ಹಿಂದಿರುಗಿ ನಮ್ಮನ್ನು ಬಿಟ್ಟುಹೋದಳು. ಅವಳ ಗಂಡನು ಎಲ್ಲಿಯಾದರೂ ಹೊರಟುಹೋಗಬೇಕಾಗಿ ಬಂದಿದ್ದಿತು, ಅವಳಿಗೆ ತನ್ನ ಮಕ್ಕಳಿಗೇ ತಿನ್ನಲು ಕೂಡುವುದಕ್ಕೆ ಇರಲಿಲ್ಲ. ಹೀಗಾಗಿ ಸಾವನ್ನು ಎದುರು ನೋಡುತ್ತ ನಾವಿಲ್ಲಿ ಬಿದ್ದಿದೇವೆ' ಎಂದು ಹೇಳಿದಳು.

ಅವರ ಕಥೆಯನ್ನು ಕೇಳಿ, ಎಲಿಷನು ಆ ದಿನ ತನ್ನ ಜೊತೆಗಾರನನ್ನು ಹಿಂಬಾಲಿಸಿ ಹೋಗಿ ಹಿಡಿಯಬೇಕೆಂಬ ಯೋಚನೆಯನ್ನೇ ಬಿಟ್ಟುಬಿಟ್ಟನು. ರಾತ್ರಿಯೆಲ್ಲ ಅವರ ಜೊತೆಯಲ್ಲೇ ಉಳಿದುಕೊಂಡನು. ಬೆಳಿಗ್ಗೆ ಎದ್ದು ಅದು ತನ್ನ ಮನೆಯಾಗಿದ್ದರೆ ಹೇಗೋ ಹಾಗೆ ಮನೆಗೆಲಸಗಳನ್ನು ಮಾಡ ತೊಡಗಿದನು. ಅವನು ಮುದುಕಿಯ ಸಹಾಯದಿಂದ ರೊಟ್ಟಿಯ ಹಿಟ್ಟನ್ನು ನಾದಿ, ಬೆಂಕಿ ಹೊತ್ತಿಸಿದನು. ಆಮೇಲೆ ಜೊತೆಯಲ್ಲಿ ಚಿಕ್ಕ ಹುಡುಗಿ ಯನ್ನು ಕರೆದುಕೊಂಡು ಅತ್ಯಗತ್ಯವಾದ ಪದಾರ್ಥಗಳನ್ನು ತರುವುದಕ್ಕಾಗಿ ನೆರೆಯವರ ಮನೆಗೆ ಹೋದನು. ಗುಡಿಸಲಿನಲ್ಲಿ ಏನೂ ಇರಲಿಲ್ಲ, ಎಲ್ಲವನ್ನೂ ರೊಟ್ಟಿಗಾಗಿ ಮಾರಿಬಿಟ್ಟಿದ್ದರು—ಅಡಿಗೆಯ ಪಾತ್ರೆಗಳು, ಬಟ್ಟೆಬರೆಗಳು, ಎಲ್ಲವನ್ನೂ ಮಾರಿಬಿಟ್ಟಿದ್ದರು. ಆದ್ದರಿಂದ ಎಲಿಷನು ಅವಶ್ಯಕವಾದ ಪದಾರ್ಥಗಳನ್ನೆಲ್ಲ ಮತ್ತೆ ತಂದಿರಿಸಲು ಪ್ರಾರಂಭಿಸಿದನು. ಕೆಲವನ್ನು ತಾನೇ ಮಾಡಿದನು; ಕೆಲವನ್ನು ಕೊಂಡು ತಂದನು. ಅವನು ಒಂದುದಿನ, ಆಮೇಲೆ ಇನ್ನೊಂದು ದಿನ, ಆಮೇಲೆ ಮತ್ತೊಂದು ದಿನ, ಹೀಗೆ ಅಲ್ಲೇ ನಿಂತನು. ಚಿಕ್ಕ ಹುಡುಗನಿಗೆ ಸ್ವಲ್ಪ ಶಕ್ತಿ ಕೂಡಿತು, ಎಲಿಷನು ಕೂತುಕೊಂಡಾಗಲೆಲ್ಲ ಹುಡುಗ ಬೆಂಚಿನ ಪಕ್ಕದಲ್ಲಿಯೇ ತೆವಳಿಕೊಂಡು ಬಂದು ಅವನನ್ನು ಒರಗಿ ಕೊಂಡು ಕುಳಿತುಕೊಳ್ಳುತ್ತಿದ್ದನು. ಚಿಕ್ಕಹುಡುಗಿ ಕಳೆಗೂಡಿಕೊಂಡು ಎಲ್ಲ

ಕೆಲಸದಲ್ಲಿಯೂ ನೆರವಾಗುತ್ತಿದ್ದಳು. 'ಅಜ್ಜಯ್ಯಾ, ಅಜ್ಜಯ್ಯಾ' ಎಂದು ಕರೆಯುತ್ತ ಯಾವಾಗಲೂ ಎಲಿಷನ ಹಿಂದೆ ಮುಂದೆ ಓಡಾಡುತ್ತಿದ್ದಳು.

ಮುದುಕಿ ಸ್ವಲ್ಪ ಗಟ್ಟಿಯಾದಳು ; ನೆರೆಯವರನ್ನು ನೋಡಿಕೊಂಡು ಬರುವುದಕ್ಕೆ ಹೊರಗೆ ಹೋಗಿ ಬರುವಂತಾದಳು. ಗಂಡಸಿನ ಸ್ಥಿತಿಯೂ ಉತ್ತಮವಾಯಿತು, ಗೋಡೆಯನ್ನು ಹಿಡಿದುಕೊಂಡು ಅತ್ತಿತ್ತ ಸುತ್ತು ವಷ್ಟು ಶಕ್ತನಾದನು. ಹೆಂಡತಿ ಮಾತ್ರ ಏಳಲಾರದೆ ಬಿದ್ದಿದ್ದಳು, ಆದರೆ ಅವಳಿಗೂ ಕೂಡ ಮೂರನೆಯ ದಿನ ಜ್ಞಾನವಾಯಿತು ; ಆಹಾರಬೇಕೆಂದು ಕೇಳಿದಳು.

'ಇದು ಸರಿ, ದಾರಿಯಲ್ಲಿ ಇಷ್ಟುಕಾಲ ವ್ಯರ್ಥವಾಗಿ ಕಳೆಯುವೆ ನೆಂದು ಕಂಡಿರಲಿಲ್ಲ. ಈಗ ನಾನು ಹೊರಟುಬಿಡಬೇಕು' ಎಂದು ಎಲಿಷನು ಯೋಚಿಸಿಕೊಂಡನು.

೬

ನಾಲ್ಕನೆಯ ದಿನ ಬೇಸಿಗೆಯ ಉಪವಾಸ ಮುಗಿದ ಮೇಲಿನ ಹಬ್ಬದ ದಿನ. ಆಗ ಎಲಿಷನು,

'ನಾನು ಇಲ್ಲೇ ಉಳಿದುಕೊಂಡು ಇವರ ಜೊತೆಯಲ್ಲಿಯೇ ಪಾರಣೆ ಮಾಡುತ್ತೇನೆ. ಹೋಗಿ ಅವರಿಗೆ ಏನನ್ನಾದರೂ ಕೊಂಡು ತಂದು, ಅವರ ಜೊತೆಯಲ್ಲಿ ಹಬ್ಬದೂಟ ಉಂಡು ನಾಳೆ ಸಂಜೆ ಇಲ್ಲಿಂದ ಹೊರಡುತ್ತೇನೆ' ಎಂದು ಯೋಚಿಸಿದನು.

ಆದ್ದರಿಂದ ಎಲಿಷನು ಹಳ್ಳಿಯೊಳಕ್ಕೆ ಹೋಗಿ, ಮರುದಿನದ ಉಪ ಯೋಗಕ್ಕಾಗಿ ಹಾಲು, ಗೋಧಿಯಹಿಟ್ಟು, ಕರಗಿದ ಕೊಬ್ಬು-ಇವನ್ನು ಕೊಂಡು ತಂದು ಕುದಿಸಿ ರೊಟ್ಟಿ ಸುಡುವ ಕೆಲಸದಲ್ಲಿ ಮುದುಕಿಗೆ ಸಹಾಯ ಮಾಡಿದನು. ಹಬ್ಬದ ದಿನ ಎಲಿಷನು ಚರ್ಚಿಗೆ ಹೋಗಿ ಬಂದು, ಗುಡಿಸಲಿನಲ್ಲಿ ಆ ಸ್ನೇಹಿತರ ಸಂಗಡ ಪಾರಣೆ ಮಾಡಿದನು. ಅವತ್ತು ಹೆಂಡತಿ ಮೇಲಕ್ಕೆದ್ದು ಸ್ವಲ್ಪ ತಿರುಗಾಡತೊಡಗಿದಳು. ಗಂಡ ಕ್ಷೌರಮಾಡಿಕೊಂಡು ಮುದುಕಿ ಒಗೆ

ದಿಟ್ಟಿದ್ದ ಶುಭ್ರವಾದ ಒಂದು ಷರಟನ್ನು ಹಾಕಿಕೊಂಡನು ; ಆಮೇಲೆ ಆ ಹಳ್ಳಿಯಲ್ಲಿದ್ದ ತಾನು ಸಾಲಗಾರನಾಗಿದ್ದ ಒಬ್ಬ ಭಾಗ್ಯವಂತ ರೈತನ ಬಳಿಗೆ ಹೋಗಿ ದಯತೋರಿಸೆಂದು ಕೇಳಿಕೊಂಡನು ; ಆ ರೈತನಿಗೆ ಇವನು ತನ್ನ ಉಳುಮೆಯ ಹೊಲವನ್ನೂ ಹುಲ್ಲಿನ ಮೈದಾನವನ್ನೂ ಭೋಗ್ಯಮಾಡಿದ್ದನು ಆ ರೈತನ ಬಳಿಗೆ ಹೋಗಿ ಸುಗ್ಗಿ ಕಳೆಯುವವರೆಗೂ ಹೊಲವನ್ನೂ ಕಾವಲನ್ನೂ ಉಪಯೋಗಿಸಿಕೊಳ್ಳಲು ಅವಕಾಶ ಕೊಡಬೇಕೆಂದು ಕೇಳಿಕೊಂಡನು. ಆದರೆ ಸಂಜೆ ಬಹಳ ದುಃಖಪಡುತ್ತ ಹಿಂದಿರುಗಿ ಬಂದು ಅಳುವುದಕ್ಕೆ ಮೊದಲು ಮಾಡಿದನು. ಧನಿಕ ರೈತನು ಸ್ವಲ್ಪವೂ ದಯೆತೋರಿಸಿರಲಿಲ್ಲ. ಅದಕ್ಕೆ ಬದಲಾಗಿ 'ನನ್ನ ಹಣವನ್ನು ತಂದು ಕೊಡು' ಎಂದು ಬಿಟ್ಟನು.

ಎಲಿಷ ಮತ್ತೆ ಆಲೋಚಿಸತೊಡಗಿದನು. 'ಈಗ ಅವರು ಹೇಗೆ ಹೊಟ್ಟೆ ಹೊರೆಯ ಬೇಕು? ಉಳಿದ ಜನರು ಹುಲ್ಲೊಣಗಿಸಿಕೊಳ್ಳುತ್ತಾರೆ, ಇವರಿಗೆ ಕುಯ್ಯುವುದು ಏನೂ ಇಲ್ಲ, ಹುಲ್ಲುಗಾವಲು ಭೋಗ್ಯವಾಗಿಟ್ಟಿದೆ. ಉಳಿದವರು ಪೈರು ಕುಯ್ಯುತ್ತಾರೆ, (ಈ ವರ್ಷ ಭೂಮಿತಾಯಿ ಎಂಥ ಸೊಗಸಾಗಿ ಪೈರು ಕೊಡುತ್ತಿದಾಳೆ!) ಆದರೆ ಇವರಿಗೆ ಮುಂದೆ ಆಧಾರವಾಗುವಂಥದೇನೂ ಇಲ್ಲ, ಇವರ ಮೂರು ಎಕರೆ ಹೊಲ ಧನಿಕ ರೈತನಿಗೆ ಭೋಗ್ಯವಾಗಿದೆ. ನಾನು ಹೊರಟು ಹೋದ ಬಳಿಕ ನಾನು ಇವರನ್ನು ಕಂಡಾಗ ಯಾವ ಸ್ಥಿತಿಯಲ್ಲಿದ್ದರೋ ಅದೇ ಗತಿಗೆ ಇಳಿದುಬಿಡುತ್ತಾರೆ!' ಎಂದು ತನ್ನಲ್ಲಿ ತಾನೇ ಯೋಚಿಸಿದನು.

ಎಲಷನಿಗೆ ಎರಡು ಮನಸ್ಸಾಯಿತು. ಆದರೆ ಕಡೆಗೆ ಆ ದಿನ ಸಂಜೆ ಹೊರಡಬಾರದೆಂದೂ ಮರುದಿನದವರೆಗೂ ತಡೆಯಬೇಕೆಂದೂ ನಿರ್ಧರಿಸಿದನು. ಅವನು ಮಲಗುವುದಕ್ಕೆ ಹೊರಗೆ ಅಂಗಳಕ್ಕೆ ಹೋದನು. ಪ್ರಾರ್ಥನೆಗಳನ್ನು ಹೇಳಿ, ಮಲಗಿಕೊಂಡನು, ಆದರೆ ನಿದ್ರೆ ಬರಲಿಲ್ಲ. ಒಂದು ವಿಧದಲ್ಲಿ ನೋಡಿದರೆ ಆಗಲೇ ಅತಿಯಾಗಿ ಕಾಲಹರಣಮಾಡಿ ಹೆಚ್ಚು ಹಣವನ್ನೂ ಖರ್ಚು ಮಾಡಿದ್ದದ್ದರಿಂದ ಹೋಗುವುದೇ ಸರಿಯೆಂದು ಅನ್ನಿಸುತ್ತಿದ್ದಿತು, ಇನ್ನೊಂದು ವಿಧದಲ್ಲಿ ನೋಡಿದರೆ ಆ ಜನರ ವಿಷಯದಲ್ಲಿ ಕನಿಕರ ಹುಟ್ಟುತ್ತಿದ್ದಿತು.

'ಇದಕ್ಕೆ ಕೊನೆಯೇ ಇಲ್ಲವೆಂದು ಕಾಣುತ್ತದೆ. ಮೊದಲು ಒಂದು ಸ್ವಲ್ಪ ನೀರು ತಂದು ಪ್ರತಿಯೊಬ್ಬರಿಗೂ ಒಂದೊಂದು ಚೂರು ರೊಟ್ಟಿ ಕೊಡಬೇಕೆಂದು ಮಾತ್ರ ಇಷ್ಟಪಟ್ಟೆ. ಈಗ ನೋಡು, ಇದು ನನ್ನನ್ನು ಎಲ್ಲಿಗೆ ತಂದಿಟ್ಟಿದೆ. ಹೊಲವನ್ನೂ ಹುಲ್ಲುಗಾವಲನ್ನೂ ಬಿಡಿಸಿಕೊಡಬೇಕಾಗಿದೆ. ಅದನ್ನು ಮಾಡಿದಮೇಲೆ ಅವರಿಗೊಂದು ಹಸುವನ್ನೂ ಹುಲ್ಲಿನ ಕಂತೆಗಳನ್ನು ಹೇರಿ ತರುವುದಕ್ಕೆ ಒಂದು ಕುದುರೆಯನ್ನೂ ಕೊಂಡುಕೊಡಬೇಕಾಗುತ್ತದೆ. ಅಣ್ಣಯ್ಯ, ಎಲಿಷ, ನೀನು ಒಳ್ಳೆಯ ತೊಡಕಿಗೆ ಸಿಕ್ಕಿಕೊಂಡೆಯಪ್ಪಾ ! ನಿನ್ನ ಎಣಿಕೆಯೆಲ್ಲ ತಲೆಕೆಳಕಾಯಿತು'

ಎಲಿಷ ಎದ್ದನು. ತಲೆದಿಂಬಿಗೆ ಇಟ್ಟುಕೊಂಡಿದ್ದ ಅಂಗಿಯನ್ನು ಎತ್ತಿ ತೆಗೆದುಕೊಂಡು ಮಡಿಕೆಯನ್ನು ಬಿಚ್ಚಿ, ನಶ್ಯವನ್ನು ಹೊರಕ್ಕೆ ತೆಗೆದು, ಅದರಿಂದೇನಾದರೂ ಆಲೋಚನೆ ಸ್ಪಷ್ಟವಾದರೂ ಆಗಬಹುದೆಂದು ಯೋಚಿಸಿ ಒಂದು ಚುಟಿಕೆಯನ್ನು ಹಾಕಿಕೊಂಡನು.

ಆದರೇನು ! ಏನೂ ಆಗಲಿಲ್ಲ. ಯೋಚಿಸಿ ಯೋಚಿಸಿ ಸಾಕಾದನು. ಆದರೂ ಯಾವ ತೀರ್ಮಾನಕ್ಕೂ ಬರಲಿಲ್ಲ. ಹೋಗಬೇಕು, ಆದರೆ ಕರುಣೆ ಅವನನ್ನು ಹಿಂದಕ್ಕೆ ಎಳೆಯುತ್ತಿದ್ದಿತು. ಏನು ಮಾಡಬೇಕೋ ಅವನಿಗೆ ತೋರಲಿಲ್ಲ. ಅಂಗಿಯನ್ನು ಮಡಿಸಿ ಮತ್ತೆ ತಲೆಯ ಕೆಳಗೆ ಇಟ್ಟನು. ಹೀಗೆ ಬಹಳ ಹೊತ್ತಿನವರೆಗೂ—ಕೋಳಿಗಳಾಗಲೇ ಒಂದುಸಲ ಕೂಗುವವರೆಗೂ, ಮಲಗಿದ್ದನು. ಆಗ ಅವನಿಗೆ ಬಹಳ ತೂಕಡಿಕ ಹತ್ತಿತು. ತಟ್ಟನೆ ತನ್ನನ್ನು ಯಾರೋ ಎಬ್ಬಿಸಿದಂತೆ ತೋರಿತು. ಅವನು ಪ್ರಯಾಣಕ್ಕೆ ಸಿದ್ಧನಾಗಿ ಬಟ್ಟೆ ಹಾಕಿಕೊಂಡಿದ್ದನು. ಹೆಗಲಮೇಲೆ ಚೀಲವಿದ್ದಿತು; ಕೈಯಲ್ಲಿ ಕೋಲಿದ್ದಿತು, ಬಾಗಿಲು ಸ್ವಲ್ಪ ಓರೆಯಾಗಿದ್ದಿತು, ಅದರಲ್ಲಿ ಮೈ ಇರುಕಿಸಿಕೊಂಡು ತೂರಿ ಹೋಗಬಹುದಾಗಿದ್ದಿತು. ಅವನು ಹೊರಕ್ಕೆ ಹೋಗುತ್ತಿರುವಷ್ಟರಲ್ಲಿ ಚೀಲ ಒಂದು ಕಡೆಯ ಬೇಲಿಗೆ ಸಿಕ್ಕಿಕೊಂಡಿತು. ಅದನ್ನು ಬಿಡಿಸಿಕೊಳ್ಳುವುದಕ್ಕೆ ಪ್ರಯತ್ನಪಟ್ಟನು. ಆದರೆ ಆಗ ಕಾಲಿನ ಪಟ್ಟಿ ಇನ್ನೊಂದು

ಕಡೆಯ ಬೇಲಿಯಲ್ಲಿ ಸಿಕ್ಕಿಕೊಂಡು ಹರಿದ-ಹೋಯಿತು. ಅವನು ಚೀಲ ವನ್ನು ಎಳೆದುಕೊಂಡನು, ಎಳೆದು ನೋಡಿದರೆ, ಅದು ಬೇಲಿಗೆ ಸಿಕ್ಕಿ ಕೊಂಡಿರಲಿಲ್ಲ, ಆ ಚಿಕ್ಕ ಹುಡುಗಿ ಅದನ್ನು ಹಿಡಿದುಕೊಂಡು,

'ರೊಟ್ಟಿ, ಅಜ್ಜಯ್ಯ, ರೊಟ್ಟಿ' ಎಂದು ಅಳುತ್ತಿದ್ದಳು.

ಅವನು ತನ್ನ ಕಾಲಿನ ಕಡೆಗೆ ನೋಡಿದನು. ಅಲ್ಲಿ ಪುಟ್ಟ ಹುಡುಗನು ಕಾಲಿನ ಪಟ್ಟಿಯನ್ನು ಹಿಡಿದು ಕೂತಿದ್ದನು. ಮನೆಯ ಯಜಮಾನನೂ ಮುದು ಕಿಯೂ ಕಿಟಕಿಯಿಂದ ತನ್ನ ಕಡೆಗೇ ನೋಡುತ್ತಿದ್ದರು.

ಎಲಿಷನಿಗೆ ಎಚ್ಚರವಾಯಿತು. ಎದ್ದು ತನ್ನಲ್ಲಿ ತಾನೇ ಗಟ್ಟಿಯಾಗಿ ಹೀಗೆ ಹೇಳಿಕೊಂಡನು.

'ನಾಳೆ ಅವರ ಹೊಲವನ್ನು ಬಿಡಿಸಿಕೊಡುತ್ತೇನೆ. ಒಂದು ಕುದುರೆ, ಸುಗ್ಗಿಯವರೆಗೂ ಸಾಕಾಗುವಷ್ಟು ಹಿಟ್ಟು, ಮತ್ತು ಮಕ್ಕಳಿಗೆ ಒಂದು ಹಸು—ಇಷ್ಟನ್ನೂ ಕೊಂಡುಕೊಡುತ್ತೇನೆ, ಇಲ್ಲದಿದ್ದರೆ ನಾನು ದೇವರನ್ನು ಹುಡುಕಿಕೊಂಡು ಸಮುದ್ರದ ಆಚೆಗೆ ಹೋಗುತ್ತ, ನನ್ನೊಳಗೇ ಅವನನ್ನು ಕಾಣದೆ ಕಳೆದುಕೊಂಡುಬಿಡಬಹುದು.'

ಆಮೇಲೆ ಎಲಿಷನಿಗೆ ನಿದ್ದೆ ಹತ್ತಿತು. ಬೆಳಗಿನವರೆಗೂ ನಿದ್ದೆಮಾಡಿ ದನು. ಹೊತ್ತಿಗೆ ಮುಂಚೆ ಎದ್ದು ಧನಿಕ ರೈತನ ಬಳಿಗೆ ಹೋಗಿ ಜೋಳದ ಹೊಲವನ್ನೂ ಹುಲ್ಲುಗಾವಲನ್ನೂ, ಎರಡನ್ನೂ ಬಿಡಿಸಿದನು. ಅವನು ಒಂದು ಕುಡುಗೋಲನ್ನೂ ಕೊಂಡು ಕೊಂಡು, ಹಿಂದಿರುಗಿ ಬರುವಾಗ ಸಂಗಡಲೇ ತಂದನು. ಮನೆಯವರು ಅದನ್ನೂ ಮಾರಿಬಿಟ್ಟಿದ್ದರು. ಆಮೇಲೆ ಗಂಡಸನ್ನು ಹೊಲ ಕುಯ್ಯುವುದಕ್ಕೆ ಕಳುಹಿಸಿ ತಾನು ಹಳ್ಳಿಯೊಳಕ್ಕೆ ಹೋದನು. ಪಡಖಾನೆ (Lublic house) ಯಲ್ಲಿ ಒಂದು ಕುದುರೆಯನ್ನೂ ಒಂದು ಗಾಡಿಯನ್ನೂ ಮಾರಾಟಕ್ಕಿಟ್ಟಿರುವರೆಂದು ಕೇಳಿ ಅಲ್ಲಿಗೆ ಹೋಗಿ ಮಾಲೀ ಕನ ಸಂಗಡ ಚೌಕಾಸಿ ಮಾಡಿ ಅವನ್ನು ಕೊಂಡು ಕೊಂಡನು. ಆ ಮೇಲೆ ಒಂದು ಚೀಲ ಹಿಟ್ಟನ್ನು ಕೊಂಡು ಗಾಡಿಯಲ್ಲಿ ತಂದಿಟ್ಟು ಹಸುವನ್ನು

ಹುಡುಕಿಕೊಂಡು ಹೊರಟನು. ಅವನು ಹಾಗೆ ಹೋಗುತ್ತಿರುವಾಗ ಅವನ ಮುಂದೆ ಇಬ್ಬರು ಹೆಂಗಸರು ಒಬ್ಬರೊಡನೊಬ್ಬರು ಮಾತಾಡಿಕೊಂಡು ಹೋಗುತ್ತಿದ್ದರು. ಅವರು ಚಿಕ್ಕರಷ್ಯದ ಭಾಷೆಯಲ್ಲಿ ಮಾತಾಡುತ್ತಿದ್ದರಾದರೂ ಅವರು ಹೇಳುತ್ತಿದ್ದದ್ದನ್ನು ಅವನು ತಿಳಿದುಕೊಂಡನು.

'ಮೊದಲು ಅವನು ಯಾರು ಎಂದು ಅವರಿಗೆ ಗೊತ್ತಾಗಲಿಲ್ಲವೆಂದು ತೋರುತ್ತದೆ, ಎಲ್ಲರಂತೆ ಅವನೂ ಒಬ್ಬ ಸಾಧಾರಣ ಮನುಷ್ಯ ಎಂದುಕೊಂಡರು. ಅವನು ಕುಡಿಯುವುದಕ್ಕೆ ಸ್ವಲ್ಪ ನೀರು ಕೇಳುವುದಕ್ಕೆ ಬಂದನು, ಆ ಮೇಲೆ ಅಲ್ಲಿಯೇ ನಿಂತನು. ಅವರಿಗೋಸ್ಕರ ಅವನು ಕೊಂಡು ತಂದಿರುವುದನ್ನಾದರೂ ಸ್ವಲ್ಪ ಯೋಚಿಸಿ ನೋಡು. ಏಕೆ, ಇವತ್ತು ಬೆಳಿಗ್ಗೆ ಇನ್ನೂ ಪಡಕಾನೆಯಲ್ಲಿ ಒಂದು ಕುದುರೆಯನ್ನೂ ಗಾಡಿಯನ್ನೂ ಕೊಂಡು ತಂದನಂತೆ! ಅಂಥ ಮನುಷ್ಯರು ಈ ಪ್ರಪಂಚದಲ್ಲಿ ಬಹಳ ಜನ ಇಲ್ಲವಮ್ಮಾ ಅವನನ್ನು ಒಂದು ಸಲ ನೋಡಿ ಬರುವುದು ಒಳ್ಳೆಯದು.'

ಎಲಿಷನಿಗೆ ಅದು ಕೇಳಿತು, ತನ್ನನ್ನು ಹೊಗಳುತ್ತಿದಾರೆಂದು ತಿಳಿದುಕೊಂಡನು. ಹಸುವನ್ನು ಕೊಳ್ಳುವುದಕ್ಕೆ ಹೋಗಲಿಲ್ಲ. ಆದರೆ ಚತ್ರಕ್ಕೆ (Inn) ಹಿಂದಿರುಗಿ ಕುದುರೆಗೆ ಹಣಕೊಟ್ಟು ಹಲ್ಲಣಹಾಕಿ, ಹೂಡಿ ಗುಡಿಸಲವರೆಗೆ ಹೊಡೆದುಕೊಂಡು ಹೋಗಿ, ಕೆಳಕ್ಕಿಳಿದನು. ಗುಡಿಸಲಿನಲ್ಲಿದ್ದ ಜನರು ಕುದುರೆಯನ್ನು ಕಂಡು ಆಶ್ಚರ್ಯಭರಿತರಾದರು. ಅದು ತಮಗೇ ಇರಬೇಕೆಂದುಕೊಂಡರು. ಆದರೆ ಕೇಳುವುದಕ್ಕೆ ಧೈರ್ಯವಿಲ್ಲ. ಬಾಗಿಲನ್ನು ತೆಗೆಯುವುದಕ್ಕೆ ಗಂಡಸು ಹೊರಗೆ ಬಂದನು.

'ಅಜ್ಜ, ಕುದುರೆಯನ್ನು ಎಲ್ಲಿಂದ ತಂದೆ?' ಎಂದು ಕೇಳಿದನು.

'ಏಕೆ, ನಾನದನ್ನು ಕೊಂಡುಕೊಂಡೆ. ಬಹಳ ಅಗ್ಗವಾಗಿ ಸಿಕ್ಕಿತು. ಹೋಗಿ ಸ್ವಲ್ಪ ಹುಲ್ಲು ಕುಯ್ದು ತಂದು ರಾತ್ರಿ ಅದು ತಿನ್ನುವುದಕ್ಕೆ ಗೋದನಿಕೆಯಲ್ಲಿ ಹಾಕು. ಚೀಲವನ್ನು ಒಳಕ್ಕೆ ತೆಗೆದುಕೋ' ಎಂದು ಎಲಿಷನು ಹೇಳಿದನು.

ಗಂಡಸು ಕುದುರೆಯನ್ನು ಬಿಚ್ಚಿ, ಚೀಲವನ್ನು ಉಗ್ರಾಣಕ್ಕೆ ತೆಗೆದುಕೊಂಡು ಹೋದನು. ಆಮೇಲೆ ಅವನು ಸ್ವಲ್ಪ ಹುಲ್ಲು ಕುಯ್ದು ಗೋದನಿಕೆಯಲ್ಲಿ ತಂದು ಹಾಕಿದನು. ಎಲ್ಲರೂ ಮಲಗಿಕೊಂಡರು. ಎಲಿಷನು ಹೊರಕ್ಕೆ ಎದ್ದು ಹೋಗಿ ರಸ್ತೆಯ ಪಕ್ಕದಲ್ಲಿ ಮಲಗಿಕೊಂಡನು. ಆ ದಿನ ಸಂಜೆ ತನ್ನ ಚೀಲವನ್ನು ಜೊತೆಯಲ್ಲಿಯೇ ಹೊರಕ್ಕೆ ತೆಗದುಕೊಂಡು ಹೋದನು. ಎಲ್ಲರಿಗೂ ಚೆನ್ನಾಗಿ ನಿದ್ದೆ ಹತ್ತಿದ್ದಾಗ ಅವನು ಎದ್ದು, ಸಾಮಾನನ್ನು ಚೀಲಕ್ಕೆ ತುಂಬಿ ಬಿಗಿಯಾಗಿ ಕಟ್ಟಿ, ಕಾಲುಗಳಿಗೆ ಬಟ್ಟೆಯ ಪಟ್ಟಿಗಳನ್ನು ಸುತ್ತಿಕಟ್ಟಿ, ಮೋಜವನ್ನು ಹಾಕಿಕೊಂಡು ಅಂಗಿಯನ್ನು ತೊಟ್ಟುಕೊಂಡು ಎಫಿಮ್‌ನನ್ನು ಹಿಂಬಾಲಿಸುವುದಕ್ಕಾಗಿ ಹೊರಟುಹೋದನು.

೭

ಎಲಿಷನು ಸುಮಾರು ಮೂರು ಮೈಲಿಗಿಂತ ಹೆಚ್ಚು ದೂರ ನಡೆದ ಮೇಲೆ ಬೆಳಕು ಹರಿಯಲು ಮೊದಲಾಯಿತು. ಅವನು ಒಂದು ಮರದ ಕೆಳಗೆ ಕುಳಿತುಕೊಂಡು, ಚೀಲವನ್ನು ಬಿಚ್ಚಿ ದುಡ್ಡನ್ನು ಎಣಿಸಿದನು. ಹದಿನೇಳು ರೂಬಲ್ ಮೇಲೆ ಇಪ್ಪತ್ತು ಕೋಪೆಕ್ ಮಾತ್ರ ಉಳಿದಿದ್ದಿತು.

'ಸರಿ, ಇದಿಷ್ಟರಿಂದ ಸಮುದ್ರವನ್ನು ದಾಟುವುದಕ್ಕೆ ಪ್ರಯತ್ನಪಡುವುದು ಉಪಯೋಗವಿಲ್ಲ. ದಾರಿಯ ಖರ್ಚಿಗೆ ಭಿಕ್ಷಬೇಡುವುದಾದರೆ ಅದು ಯಾತ್ರೆ ಹೋಗದೆ ಉಳಿಯುವುದಕ್ಕಿಂತಲೂ ಹೆಚ್ಚು ಕೀಳು. ಗೆಳೆಯ ಎಫಿಮ್, ನಾನು ಹೋಗದಿದ್ದರೂ, ಜೆರುಸಲೇಮಿಗೆ ತಲಪುತ್ತಾನೆ, ಹೋಗಿ ಅಲ್ಲಿನ ಗುಡಿಗಳಲ್ಲಿ ನನ್ನ ಹೆಸರಿನಲ್ಲಿ ಕೆಲವು ದೀಪಗಳನ್ನು ಇರಿಸುತ್ತಾನೆ. ನಾನು ಮಟ್ಟಿಗೆ, ನನ್ನ ಜೀವಮಾನದಲ್ಲಿ ಈ ಸಂಕಲ್ಪವನ್ನು ನೆರವೇರಿಸಲಾರೆನೆಂದು ತೋರುತ್ತದೆ. ಪಾಪಿಗಳನ್ನು ಮನ್ನಿಸುವಂಥ ಕರುಣಾಶಾಲಿಯಾದ ದೇವನಿಗೆ ಈ ಹರಕೆಯನ್ನು ಮಾಡಿಕೊಂಡೆನಲ್ಲಾ, ಅದೇ ನನ್ನ ಒಳ್ಳೆಯ ಅದೃಷ್ಟ' ಎಂದು ಯೋಚಿಸಿದನು.

ಎಲಿಷನು ಎದ್ದು ನಿಂತು, ಚೀಲವನ್ನು ಎತ್ತಿ ಹೆಗಲಮೇಲೆ ಹಾಕಿಕೊಂಡು ಅತ್ತಿತ್ತ ಮೆಲ್ಲನೆ ಅಲುಗಿಸಿ ಸರಿಮಾಡಿಕೊಂಡು ಹಿಂದಿರುಗಿದನು. ಯಾರೊಬ್ಬರೂ ತನ್ನನ್ನು ಗುರುತಿಸಬಾರದೆಂದು ಆ ಹಳ್ಳಿಗೆ ಹೋಗದೆ ತಪ್ಪಿಸಿಕೊಳ್ಳುವುದಕ್ಕಾಗಿ ಅದನ್ನು ಸುತ್ತಿಕೊಂಡು ದಾಟಿ ಮನೆಯ ಕಡೆಗೆ ವೇಗವಾಗಿ ನಡೆದನು. ಮನೆಯಿಂದ ಬರುವಾಗ ಅವನಿಗೆ ದಾರಿ ಕಷ್ಟವಾಗಿ ಕಂಡಿದ್ದಿತು. ಏಫಿಮ್‌ನ ಜೊತೆಗೆ ನಡೆಯುವುದೂ ಬಹು ಕಷ್ಟವಾಗಿ ಕಂಡಿದ್ದಿತು; ಆದರೆ ಈಗ ಹಿಂದಿರುಗಿ ಪ್ರಯಾಣಮಾಡುವಾಗ ಆಯಾಸವೇ ತೋರದಂತೆ ದಾರಿ ನಡೆಯುವ ಹಾಗೆ ಅವನಿಗೆ ದೇವರು ಸಹಾಯಮಾಡಿದನು. ಅವನಿಗೆ ನಡೆಯುವುದೆಂದರೆ ಮಕ್ಕಳಾಟವಾಗಿ ಕಂಡಿತು. ಕೈಯ ಕೋಲನ್ನು ತೂಗಿಸಿಕೊಂಡು ನಡೆಯುತ್ತಾ ದಿನಕ್ಕೆ ನಲವತ್ತರಿಂದ ಐವತ್ತು ಮೈಲಿಯವರೆಗೂ ಹೋಗುತ್ತಿದ್ದನು.

ಎಲಿಷನು ಮನೆಗೆ ತಲಪಿದಾಗ ಕುಯ್ಲು ಮುಗಿದಿದ್ದಿತು. ಮನೆಯವರೆಲ್ಲ ಅವನನ್ನು ಕಂಡು ಆನಂದಗೊಂಡರು, ಏನಾಯಿತೆಂಬುದನ್ನು,—ಏಕೆ ಮತ್ತು ಹೇಗೆ ಅವನು ಹಿಂದೆ ಬಿದ್ದ? ಜೆರುಸಲೇಮನ್ನು ತಲಪದೆ ಅವನು ಏತಕ್ಕೆ ಹಿಂದಿರುಗಿ ಬಂದ? ಎಂಬುದನ್ನು—ತಿಳಿಯಬೇಕೆಂದು ಎಲ್ಲರೂ ಇಷ್ಟಪಟ್ಟರು. ಆದರೆ ಎಲಿಷನು ಅವರಿಗೆ ಹೇಳಲಿಲ್ಲ.

'ನಾನು ಅಲ್ಲಿಗೆ ಹೋಗಿ ಸೇರಬೇಕೆಂದು ದೇವರ ಇಚ್ಛೆಯಿರಲಿಲ್ಲ. ದಾರಿಯಲ್ಲಿ ಹಣವನ್ನು ಕಳೆದುಕೊಂಡೆ, ನನ್ನ ಜೊತಗಾರನಿಗಿಂತ ಹಿಂದೆ ಬಿದ್ದೆ. ದೇವರ ಹೆಸರಿನಲ್ಲಿ ನನ್ನನ್ನು ಮನ್ನಿಸಿ ಬಿಡಿ' ಎಂದನು.

ತನ್ನ ಹತ್ತಿರ ಉಳಿದಿದ್ದ ದುಡ್ಡನ್ನೆಲ್ಲ ಹೆಂಡತಿಯ ಕೈಗೆ ಕೊಟ್ಟನು. ಆಮೇಲೆ ಗೃಹಕೃತ್ಯದ ವಿಚಾರವಾಗಿ ಅವರನ್ನು ಕೇಳಿದನು ಎಲ್ಲ ಸರಿಯಾಗಿ ನಡೆಯುತ್ತಿದ್ದಿತು, ಎಲ್ಲ ಕೆಲಸವನ್ನೂ ಮಾಡಿದ್ದರು, ಯಾವುದನ್ನೂ ಅಸಡ್ಡೆ ಮಾಡಿರಲಿಲ್ಲ, ಎಲ್ಲರೂ ವಿಶ್ವಾಸದಿಂದ ಶಾಂತವಾಗಿ ಜೀವಿಸುತ್ತಿದ್ದರು.

ಅವನು ಹಿಂದಿರುಗಿ ಬಂದದ್ದು ಏಫಿಮ್‌ನ ಮನೆಯವರಿಗೆ ಅವತ್ತೇ ತಿಳಿಯಿತು. ತಮ್ಮ ಮುದುಕನ ವಿಚಾರವನ್ನು ಕೇಳಬೇಕೆಂದು ಬಂದರು; ಅವರಿಗೂ ಎಲಿಷನು ಅದೇ ಉತ್ತರವನ್ನು ಕೊಟ್ಟನು.

'ಏಫಿಮ್ ಒಹು ಜೋರಾಗಿ ನಡೆಯುತ್ತಾನೆ. 'ಸೇಂಟ್ ಪೀಟರ್ಸ್ ಡೇ'ಗೆ ಮೂರು ದಿನ ಹಿಂದೆ ಒಬ್ಬರನ್ನೊಬ್ಬರು ಅಗಲಿದೆವು. ಮತ್ತೆ ಅವನನ್ನು ಹಿಡಿಯಬೇಕೆಂದಿದ್ದೆ. ಆದರೆ ಏನೇನೋ ಆಗಿಹೋಯಿತು. ನನ್ನ ಹಣವನ್ನು ಕಳೆದುಕೊಂಡೆ. ಮುಂದೆ ಹೋಗುವುದಕ್ಕೆ ಸಾಧನವೇ ಇರಲಿಲ್ಲ, ಆದ್ದರಿಂದ ಹಿಂದಿರುಗಿಬಿಟ್ಟೆ.'

ಅಂಥ ವಿವೇಕಿಯಾದ ಮನುಷ್ಯ ಅಷ್ಟು ಬೆಪ್ಪುಕೆಲಸಮಾಡಿದನೆಂದು— ಯಾತ್ರೆ ಹೊರಟು, ಹೋಗಬೇಕಾದ ಸ್ಥಳಕ್ಕೆ ಹೋಗಿ ಸೇರದೆ, ತನ್ನ ಹಣವನ್ನೆಲ್ಲ ಹಾಳುಮಾಡಿಕೊಂಡನೆಂದು—ಜನರಿಗೆಲ್ಲ ಬಹಳ ವಿಸ್ಮಯವಾಯಿತು. ಸ್ವಲ್ಪಕಾಲ ಅದಕ್ಕೆ ಆಶ್ಚರ್ಯಪಡುತ್ತಿದ್ದು ಆಮೇಲೆ ಅದರ ವಿಚಾರವನ್ನೆಲ್ಲ ಮರೆತರು, ಎಲಿಷನೂ ಅದನ್ನು ಮರೆತುಬಿಟ್ಟನು. ಅವನು ಮತ್ತೆ ತನ್ನ ಮನೆಗೆಲಸಗಳಲ್ಲಿ ತೊಡಗಿದನು. ಮಗನನ್ನೂ ಸಹಾಯಕ್ಕೆ ಕರೆದುಕೊಂಡು ಚಳಿಗಾಲಕ್ಕೆ ಸೌದೆಯನ್ನು ಕಡಿದಿಟ್ಟನು. ಅವನೂ ಹೆಂಗಸರೂ ಸೇರಿ ಜೋಳವನ್ನು ಒಕ್ಕಿದರು. ಆಮೇಲೆ ಹೊರಮನೆಗಳ ಮೇಲು ಹೊದಿಕೆಯನ್ನು ಸರಿಪಡಿಸಿದನು, ಜೇನು ಹುಳುಗಳಿಗೆ ಮರೆಮಾಡಿದನು, ತನ್ನ ನೆರೆಯವನಿಗೆ ಬೇಸಿಗೆಯಲ್ಲಿ ಮಾರಿದ್ದ ಹತ್ತು ಗೂಡುಗಳನ್ನೂ ಅದರಿಂದ ಹುಟ್ಟಿದ್ದ ಹೊಸ ಗೂಡುಗಳ ಸಮೇತವಾಗಿ ಕೊಟ್ಟು ಬಿಟ್ಟನು. ಅವನ ಹೆಂಡತಿ ಈ ಗೂಡುಗಳಿಂದ ಎಷ್ಟು ಹೊಸ ಗೂಡುಗಳು ಹುಟ್ಟಿದವೆಂದು ಹೇಳಬಾರದೆಂದು ಪ್ರಯತ್ನಪಟ್ಟಳು, ಆದರೆ ಯಾವ ಗೂಡಿನಿಂದ ಹೊಸ ಗೂಡು ಹುಟ್ಟಿದ್ದಿತು, ಯಾವುದರಿಂದ ಹುಟ್ಟಿರಲಿಲ್ಲ ಎಂಬುದು ಎಲಿಷನಿಗೆ ಚೆನ್ನಾಗಿ ಗೊತ್ತಿದ್ದಿತು. ಅವನು ಹತ್ತಕ್ಕೆ ಬದಲಾಗಿ ಹದಿನೇಳು ಗೂಡುಗಳನ್ನು ನೆರೆಯವನಿಗೆ ಕೊಟ್ಟನು. ಚಳಿಗಾಲಕ್ಕೆ ಎಲ್ಲವನ್ನೂ ಅಣಿಮಾಡಿ

ಕೊಂಡು ಎಲಿಷನು ತನ್ನ ಮಗನನ್ನು ಕೆಲಸ ಹುಡುಕುವುದಕ್ಕಾಗಿ ಕಳುಹಿಸಿ ಕೊಟ್ಟು ತಾನು ತೊಗಟೆಯ ಮೋಜಗಳನ್ನು ಹೆಣೆಯುವುದಕ್ಕೂ, ಜೇನು ಗೂಡುಗಳಿಗಾಗಿ ಮರದ ದಿಮ್ಮಿಗಳನ್ನು ತೋಡಿ ಟೊಳ್ಳುಮಾಡುವುದಕ್ಕೂ ತೊಡಗಿದನು.

೮

ಎಲಿಷನು ರೋಗಿಗಳ ಸಂಗಡ ಗುಡಿಸಿಲಿನಲ್ಲಿ ಹಿಂದೆ ನಿಲ್ಲಲು ಏಫಿಮ್ ಅವನು ಬರುವನೆಂದು ನಿರೀಕ್ಷಿಸುತ್ತ ಆ ದಿನವೆಲ್ಲ ಕಾಯುತ್ತಿದ್ದನು. ಅವನು ಸ್ವಲ್ಪ ದೂರ ಮಾತ್ರ ಮುಂದೆ ಹೋಗಿ ಅಲ್ಲಿ ಕುಳಿತುಕೊಂಡನು. ಕಾದು ಕಾದು, ಸ್ವಲ್ಪಹೊತ್ತು ನಿದ್ದೆಮಾಡಿ, ಮತ್ತೆ ಎಚ್ಚತ್ತು, ಮತ್ತೆ ಕಾದುಕೊಂಡು ಕುಳಿತನು , ಆದರೂ ಅವನ ಜೊತೆಗಾರ ಬರಲಿಲ್ಲ. ಕಣ್ಣುನೋವು ಹತ್ತುವವರೆಗೂ ದೃಷ್ಟಿಸಿ ನೋಡಿದನು. ಸೂರ್ಯನಾಗಲೇ ಒಂದು ಮರದ ಹಿಂದೆ ಮುಳುಗುತ್ತಿದ್ದನು ಆದರೂ ಎಲಿಷನು ಕಣ್ಣಿಗೆ ಬೀಳಲಿಲ್ಲ.

'ಅವನು ನನ್ನನ್ನು ನೋಡದೆ ಮುಂದೆ ಹೋಗಿದ್ದರೂ ಹೋಗಿರ ಬಹುದು. ಇಲ್ಲದಿದ್ದರೆ ಯಾರಾದರೂ ಅವನನ್ನು ತಮ್ಮ ಬಂಡಿಯಲ್ಲಿ ಕೂರಿಸಿಕೊಂಡು ಹೋಗಿರಬಹುದು. ನಾನು ಮಲಗಿದ್ದಾಗ ಬಂಡಿ ಮುಂದೆ ಹರಿದು ಅವನು ನನ್ನನ್ನು ಕಾಣದೆ ಹೋಗಿರಬಹುದು. ಆದರೆ ಅದು ಹೇಗೆ ಅವನು ನನ್ನನ್ನು ಕಾಣದಿದ್ದಾನು ? ಈ ಬಯಲಿನಲ್ಲಿ ಎಷ್ಟು ದೂರದವರೆಗೆ ಬೇಕಾದರೂ ಕಾಣುತ್ತದೆ. ನಾನು ಹಿಂದಿರುಗಿ ಹೋಗಲೇ ? ಒಂದುವೇಳೆ ಅವನು ಮುಂದೆ ಹೋಗಿದಾನೆಂದು ಇಟ್ಟುಕೊಳ್ಳೋಣ , ಆಗ ಇಬ್ಬರೂ ಒಬ್ಬರನ್ನೊಬ್ಬರು ಪೂರ್ತಿಯಾಗಿ ತಪ್ಪಿಸಿಕೊಂಡು ಬಿಡುತ್ತೇವೆ. ನಾನು ಮುಂದಕ್ಕೆ ಹೋಗುವುದೇ ಒಳ್ಳೆಯದು. ರಾತ್ರೆ ತಂಗುವ ಕಡೆಯಲ್ಲಿ ಇಬ್ಬರೂ ಸೇರುವುದಂತೂ ಖಂಡಿತ' ಎಂದು ಯೋಚಿಸಿದನು.

ಏಫಿಮ್ ಒಂದು ಹಳ್ಳಿಗೆ ಬಂದನು. ಕಾವಲುಗಾರನಿಗೆ ಎಲಿಷನ ಗುರುತನ್ನು ವಿವರಿಸಿ ಹೇಳಿ ಅಂಥ ಮುದುಕನು ಬಂದರೆ ತಾನು ಇಳಿದು

ಕೊಂಡಿರುವ ಗುಡಿಸಲಿಗೆ ಕರೆದುಕೊಂಡು ಬರುವಂತೆ ತಿಳಿಸಿದನು. ಆದರೆ ಅವತ್ತು ರಾತ್ರಿ ಎಲಿಷನು ಬರಲೇ ಇಲ್ಲ. ಏಫಿಮ್ ಮುಂದಕ್ಕೆ ಹೊರಟನು; ಹೋಗುವಾಗ ಎದುರಿಗೆ ಸಿಕ್ಕಿದವರನ್ನೆಲ್ಲ ಬುರುಡು ತಲೆಯ ಒಬ್ಬ ಚಿಕ್ಕ ಮುದುಕನನ್ನು ಕಾಣಲಿಲ್ಲವೇ ? ಎಂದು ಕೇಳುತ್ತಿದ್ದನು. ಅಂಥ ಪ್ರಯಾಣಿಕನನ್ನು ಒಬ್ಬರೂ ಕಂಡಿರಲಿಲ್ಲ. ಏಫಿಮ್‌ಗೆ ಆಶ್ಚರ್ಯವಾಯಿತು. ಆದರೆ,

'ಒಡಿಸ್ಸಾದಲ್ಲಾಗಲಿ, ಇಲ್ಲದಿದ್ದರೆ ಹಡಗಿನ ಮೇಲಾಗಲಿ ಖಂಡಿತವಾಗಿಯೂ ಸಿಕ್ಕೇ ಸಿಕ್ಕುತ್ತಾನೆ' ಎಂದುಕೊಂಡು ಒಬ್ಬನೇ ಮುಂದೆ ನಡೆದನು. ಅದರ ವಿಚಾರದಲ್ಲಿ ಹೆಚ್ಚು ತೊಂದರೆಪಟ್ಟುಕೊಳ್ಳಲಿಲ್ಲ.

ದಾರಿಯಲ್ಲಿ ಅವನಿಗೆ **ಕೊಸಾಕ್** ತೊಟ್ಟುಕೊಂಡು ಪಾದರಿಗಳು ಹಾಕಿಕೊಳ್ಳುವಂಥ ತಲೆಟೋಪಿಯನ್ನು ಹಾಕಿಕೊಂಡಿದ್ದ ಉದ್ದನೆಯ ಕೂದಲಿನ ಒಬ್ಬ ಯಾತ್ರಿಕನು ಸಿಕ್ಕಿದನು. ಈ ಯಾತ್ರಿಕನು ಅಥೋಸ್ ಪರ್ವತಕ್ಕೆ ಹೋಗಿದ್ದು ಅಲ್ಲಿಂದ ಹಿಂದಿರುಗಿ ಈಗ ಎರಡನೆಯಸಲ ಜೆರುಸಲೇಮಿಗೆ ಹೋಗುತ್ತಿದ್ದನು. ಒಂದು ದಿನ ರಾತ್ರಿ ಅವರಿಬ್ಬರೂ ಒಂದೇ ಕಡ ನಿಂತರು, ಅಲ್ಲಿಂದ ಮುಂದೆ ಇಬ್ಬರೂ ಒಟ್ಟಿಗೆ ಪ್ರಯಾಣ ಮಾಡಿದರು.

ಅವರು ಒಡಿಸ್ಸವನ್ನು ಸುಖವಾಗಿ ತಲಪಿದರು. ಅಲ್ಲಿ ಹಡಗನ್ನು ಕಾದುಕೊಂಡು ಮೂರು ದಿನ ಇರಬೇಕಾಯಿತು. ಬೇರೆ ಬೇರೆಯ ಅನೇಕ ಪ್ರಾಂತಗಳಿಂದ ಬಂದಿದ್ದ ಅನೇಕ ಯಾತ್ರಿಕರಿಗೂ ಅದೇ ಗತಿಯಾಯಿತು. ಏಫಿಮ್ ಮತ್ತೆ ಎಲಿಷನ ವಿಚಾರವಾಗಿ ಕೇಳತೊಡಗಿದನು, ಆದರೆ ಒಬ್ಬರೂ ಅವನನ್ನು ಕಂಡಿರಲಿಲ್ಲ

ಏಫಿಮ್ ಪರದೇಶಕ್ಕೆ ಹೋಗುವುದಕ್ಕೆ ಆವಶ್ಯಕವಾದ ಅಪ್ಪಣೆ ಚೀಟಿಯನ್ನು ಪಡೆದುಕೊಂಡನು, ಅದಕ್ಕೆ ಐದು ರೂಬಲ್ ವೆಚ್ಚವಾಯಿತು. ಜೆರುಸಲೇಮಿಗೆ ಹೋಗಿ ಬರುವುದಕ್ಕ ಹೋಗ ಬರ ಎರಡೂ ಸೇರಿ, ಒಂದು ಟಿಕೀಟಿಗೆ ನಲವತ್ತು ರೂಬಲ್ ಕೊಟ್ಟನು. ಸಮುದ್ರ ಪ್ರಯಾಣಕ್ಕೆ ಬೇಕಾಗುವಷ್ಟು ರೊಟ್ಟಿಯನ್ನೂ **ಹೆರಿಂಗನ್ನೂ** ಕೊಂಡುಕೊಂಡನು

ಯಾತ್ರಿಕನು ಏಫಿಮ್‌ಗೆ ದುಡ್ಡು ಕೊಡದೆಯೇ ಹಡಗಿಗೆ ಹತ್ತುವುದು ಹೇಗೆ ಎಂಬ ಉಪಾಯುವನ್ನು ವಿವರಿಸತೊಡಗಿದನು. ಆದರೆ ಏಫಿಮ್ ಅದಕ್ಕೆ ಕಿವಿಗೊಡಲಿಲ್ಲ. 'ಇಲ್ಲ. ನಾನು ದುಡ್ಡು ಕೊಡುವುದಕ್ಕೆ ಸಿದ್ಧನಾಗಿಯೇ ಬಂದೆ, ಕೊಟ್ಟುಬಿಡುತ್ತೇನೆ' ಎಂದನು.

ಹಡಗಿಗೆ ಸಾಮಾನು ತುಂಬಿದರು, ಯಾತ್ರಿಕರು ಮೇಲಕ್ಕೆ ಹತ್ತಿದರು; ಅವರ ಸಂಗಡ ಏಫಿಮ್ ಮತ್ತು ಅವನ ಹೊಸ ಸ್ನೇಹಿತನೂ ಹತ್ತಿದರು. ಲಂಗರು ಎತ್ತಿದರು, ಹಡಗು ಸಮುದ್ರದಲ್ಲಿ ಹೊರಟಿತು

ಹಗಲೆಲ್ಲ ಹಡಗು ಸುಖವಾಗಿ ಹರಿಯುತ್ತಿದ್ದಿತು. ಆದರೆ ರಾತ್ರಿಯ ಹೊತ್ತಿಗೆ ಗಾಳಿ ಎದ್ದು, ಮಳೆ ಬಂದು ಹಡಗು ಅತ್ತಲಿತ್ತ ಎದ್ದು ಬಿದ್ದು ಅಲ್ಲಾಡತೊಡಗಿತು, ನೀರು ಒಳಕ್ಕ ಸಿಡಿಯುತೊಡಗಿತು, ಜನರೆಲ್ಲ ಹೆದರಿದರು. ಹೆಂಗಸರು ಕಿಟ್ಟನೆ ಕಿರಚಿಕೊಂಡು ಗೋಳಾಡಿದರು, ಗಂಡಸರಲ್ಲಿ ಅಂಜುಕುಳಿಗಳಾದ ಕೆಲವರು ಅಡಗಿಕೊಳ್ಳುವುದಕ್ಕ ತಕ್ಕ ಆಶ್ರಯುವನ್ನು ಹುಡುಕಿಕೊಂಡು ಹಡಗಿನಮೇಲೆ ಓಡಾಡಿದರು. ಏಫಿಮ್ ಕೂಡ ಹೆದರಿದನು. ಆದರೆ ಅದನ್ನು ಅವನು ತೋರಿಸಿಕೊಳ್ಳಲಿಲ್ಲ, ತಾನು ಹಡುಗು ಹತ್ತಿದಾಗ ಹಡಗಿನ ಮೇಲುಭಾವಣಿಯ ಮೇಲೆ 'ಟಾಂಬೋ' ಎಂಬಲ್ಲಿಂದ ಬಂದಿದ್ದ ಕೆಲವರು ಮುದುಕರ ಸಂಗಡ ಕುಳಿತಿದ್ದವನು ಆ ಸ್ಥಳವನ್ನು ಬಿಡದೆ ಅಲ್ಲಿಯೇ ಕುಳಿತಿದ್ದನು. ಅವರೆಲ್ಲ ತಮ್ಮ ತಮ್ಮ ಚೀಲಗಳನ್ನು ಭದ್ರವಾಗಿ ಹಿಡಿದುಕೊಂಡು ಆ ರಾತ್ರಿ ಮತ್ತು ಮರುದಿನವೆಲ್ಲ ಪೂರ್ತಿಯಾಗಿ ಅಲ್ಲಿಯೇ ಕುಳಿತಿದ್ದರು. ಮೂರನೆಯ ದಿನ ಸಮುದ್ರ ಶಾಂತವಾಯಿತು. ಐದನೆಯ ದಿನ ಕಾನ್‌ಸ್ಟ್ಯಾಂಟಿನೋಪಲಿನಲ್ಲಿ ಹಡಗು ನಿಂತಿತು. ಯಾತ್ರಿಕರಲ್ಲಿ ಕೆಲವರು ಈಗ ಮುಸಲ್ಮಾನರ ಸ್ವಾಧೀನದಲ್ಲಿರುವ ಸೇಂಟ್ ಸೋಫಿಯನ ಚರ್ಚಿಗೆ ಹೋಗಿ ಬರುವುದಕ್ಕಾಗಿ ಹಡಗಿನಿಂದ ಇಳಿದು ದಡಕ್ಕೆ ಹೋದರು. ಏಫಿಮ್ ಹಡಗಿನಲ್ಲಿಯೇ ನಿಂತನು, ಸ್ವಲ್ಪ ಬಿಳಿಯ ರೊಟ್ಟಿಗಳನ್ನು ಕೊಂಡುಕೊಂಡನು. ಅವರು ಇಪ್ಪತ್ತನಾಲ್ಕು ಗಂಟೆಗಳ ಕಾಲ ಅಲ್ಲಿ ನಿಂತಿದ್ದು

ಆ ಮೇಲೆ ಮತ್ತೆ ಸಮುದ್ರದಲ್ಲಿ ಹೊರಟರು. ಸ್ಮಿರ್ನಾದಲ್ಲಿ ಮತ್ತೆ ನಿಂತರು; ಅಲೆಗ್ಸಾಂಡ್ರೆಟ್ಟಾದಲ್ಲಿಯೂ ಸ್ವಲ್ಪ ಹೊತ್ತು ನಿಂತರು. ಆದರೆ ಕಟ್ಟಕಡೆಗೆ ಎಲ್ಲರೂ ಸುರಕ್ಷಿತವಾಗಿ ಜಫಾಕ್ಕೆ ಬಂದು ತಲಪಿದರು. ಅಲ್ಲಿ ಯಾತ್ರಿಕರೆಲ್ಲರೂ ಇಳಿಯಬೇಕಾಗಿದ್ದಿತು. ಅಲ್ಲಿಂದ ರಸ್ತೆಯಲ್ಲಿ ಹೋದರೆ ಜೆರುಸಲೇಮಿಗೆ ಇನ್ನೂ ನಲವತ್ತು ಮೈಲಿಗಿಂತಲೂ ಹೆಚ್ಚು ದೂರ ವಿದ್ದಿತು. ಹಡಗಿನಿಂದ ಇಳಿಯುವಾಗ ಜನರೆಲ್ಲ ಮತ್ತೆ ಹೆದರಿದರು. ಹಡಗು ಬಹಳ ಎತ್ತರವಾಗಿದ್ದಿತು, ಅದರಿಂದ ಜನರನ್ನು ಎತ್ತಿ ಕೆಳಗಡೆ ಇದ್ದ ದೋಣಿಗಳಿಗೆ ಎಸೆಯುತ್ತಿದ್ದರು. ದೋಣಿಗಳು ಅತ್ತಿತ್ತ ಬಹಳ ಅಲುಗಾ ಡುತ್ತಿದ್ದದ್ದರಿಂದ ಮೇಲಿನಿಂದ ಎತ್ತಿ ಹಾಕುವಾಗ ಜನರು ಅಪ್ಪಿ ತಪ್ಪಿ ನೀರಿಗೆ ಬೀಳುವುದು ಸುಲಭವಾಗಿದ್ದಿತು. ಒಬ್ಬಿಬ್ಬರಿಗೆ ಮೈ ನೆನೆಯಿತು; ಆದರೆ ಕಡೆಯಲ್ಲಿ ಎಲ್ಲರೂ ಸುಖವಾಗಿ ದಡ ಸೇರಿದರು.

ಅಲ್ಲಿಂದ ಅವರು ಕಾಲು ನಡಗೆಯಲ್ಲಿಯೇ ಪ್ರಯಾಣ ಮಾಡಿದರು. ಮೂರನೆಯ ದಿನ ಜೆರುಸಲೇಮನ್ನು ತಲಪಿದರು. ಅವರು ಅಲ್ಲಿ ಪಟ್ಟಣದ ಹೊರಗಡೆ ರಷ್ಯನ್ ಹಾಸ್ಟೆಲಿನಲ್ಲಿ ನಿಂತರು. ಅಲ್ಲಿ ಅವರ ಅಪ್ಪಣೆ ಚೀಟಿ ಗಳನ್ನು ನೋಡಿ ಪರೀಕ್ಷಿಸಲಾಯಿತು. ಆಮೇಲೆ, ಊಟವಾದ ಒಳಿಕ, ಎಫಿಮ್ ತನ್ನ ಜೊತೆಯಲ್ಲಿ ಬಂದ ಯಾತ್ರಿಕನೊಡನೆ ಅಲ್ಲಿನ ಪುಣ್ಯಸ್ಥಳಗಳಿಗೆ ಹೋಗಿ ಬಂದನು. ಆಗ ಅವರನ್ನು ಪವಿತ್ರ ಗೋರಿಯೊಳಕ್ಕೆ ಬಿಡುವ ಹೊತ್ತಾಗಿರಲಿಲ್ಲ, ಆದ್ದರಿಂದ ಅವರು ಪ್ಯಾಟ್ರಿಯಾರ್ಕ್‌ೀಟಿಗೆ (ಅಲ್ಲಿನ ಬಿಷಪ್ಪಿನ ಮಠಕ್ಕೆ) ಹೋದರು. ಯಾತ್ರಿಕರೆಲ್ಲ ಅಲ್ಲಿ ಸಭೆ ಸೇರಿದರು. ಹೆಂಗಸರನ್ನೂ ಗಂಡಸರನ್ನೂ ಬೇರೆ ಬೇರೆಯಾಗಿ ವಿಂಗಡಿಸಿ, ಎಲ್ಲರನ್ನೂ ಬರಿಯಕಾಲಿನಲ್ಲಿ ದುಂಡಗೆ ಕುಳಿತುಕೊಳ್ಳುವಂತೆ ಹೇಳಿದರು. ಆಮೇಲೆ ಅವರ ಕಾಲುಗಳ್ನು ತೊಳೆಯುವುದಕ್ಕೆ ಕೈಯಲ್ಲಿ ಒಂದು ಟವಲ್ ಹಿಡಿದು ಕೊಂಡು ಒಬ್ಬ ಸನ್ಯಾಸಿ ಒಳಕ್ಕೆ ಬಂದನು. ಅವನು ಅವರ ಕಾಲು ತೊಳೆದು, ಒರೆಸಿ ಬಳಿಕ ಅದಕ್ಕೆ ಮುತ್ತು ಕೊಟ್ಟನು, ಪ್ರತಿಯೊಬ್ಬರಿಗೂ ಅವನು ಹೀಗೆ

ಮಾಡಿದನು. ಎಲ್ಲರ ಜೊತೆಯಲ್ಲಿಯೇ ಏಫಿಮ್‌ನ ಕಾಲುಗಳನ್ನೂ ತೊಳೆದು ಮುತ್ತುಕೊಟ್ಟನು. ಅವನು ವೆಸ್ಪರ್‌ಗಳೂ ಮ್ಯಾಟಿನ್‌ಗಳೂ ನಡೆಯುವಾಗಲೆಲ್ಲ ಅಲ್ಲಿದ್ದನು, ಅಲ್ಲಿ ಪ್ರಾರ್ಥಿಸಿದನು, ಬೇರೆ ಬೇರೆಯ ಗುಡಿಗಳಲ್ಲಿ ದೀವಿಗೆಗಳನ್ನು ಹತ್ತಿಸಿಟ್ಟನು. ಮಠದ ಪ್ರಾರ್ಥನೆಗಳಲ್ಲಿ ಅವರ ಹೆಸರನ್ನು ಹೇಳಲೆಂದು ತನ್ನ ತಂದೆ ತಾಯಿಗಳ ಹೆಸರು ಬರೆದಿದ್ದ ಪುಸ್ತಕಗಳನ್ನು ಅಲ್ಲಿಸವರಿಗೆ ಕೊಟ್ಟನು. ಇಲ್ಲಿ ಬಿಷಪ್ಪಿನ ಮಠದಲ್ಲಿ ಅವರಿಗೆ ಆಹಾರವನ್ನೂ ದ್ರಾಕ್ಷಾರಸವನ್ನೂ ಕೊಟ್ಟರು. ಮರುದಿನ ಅವರು, ಈಜಿಪ್ಟಿನ ಮೇರಿ ವ್ರತಾಚರಣೆಯನ್ನು ನಡೆಸುತ್ತ ತಪಸ್ಸುಮಾಡುತ್ತಿದ್ದ, ಗುಡಿಸಲಿಗೆ ಹೋದರು. ಇಲ್ಲಿಯೂ ಅವರು ದೀವಿಗೆಗಳನ್ನು ಹತ್ತಿಸಿ ಪ್ರಾರ್ಥನೆಗಳನ್ನು ಓದಿಸಿದರು. ಅಲ್ಲಿಂದ ಅವರು ಅಬ್ರಹಾಮನ ವಿಹಾರಕ್ಕೆ ಹೋದರು. ಹೋಗಿ ಅಬ್ರಹಾಮನು ದೇವರಿಗೆ ತನ್ನ ಮಗನನ್ನು ಬಲಿಯಾಗಿ ಅರ್ಪಿಸಬೇಕೆಂದಿದ್ದ ಸ್ಥಳವನ್ನು ನೋಡಿದರು. ಬಳಿಕ ಮೇರಿ ಮ್ಯಾಗ್ಡಲೇನಳಿಗೆ ಕ್ರಿಸ್ತನು ಕಾಣಿಸಿಕೊಂಡ ಸ್ಥಳಕ್ಕೂ, ಆತನ ಸೋದರನಾದ ಜೇಮ್ಸ್ಸನ ಚರ್ಚಿಗೂ ಹೋಗಿ ಬಂದರು. ಯಾತ್ರಿಕನು ಏಫಿಮ್‌ಗೆ ಈ ಎಲ್ಲ ಸ್ಥಳಗಳನ್ನೂ ತೋರಿಸಿದನು, ಪ್ರತಿಯೊಂದು ಕಡೆಯಲ್ಲಿಯೂ ಎಷ್ಟು ದುಡ್ಡು ಕೊಡಬೇಕೆಂಬುದನ್ನೂ ತಿಳಿಸಿದನು. ಮಧ್ಯಾಹ್ನದ ಹೊತ್ತಿಗೆ ಹಾಸ್ಟಲ್ಲಿಗೆ ಹಿಂದಿರುಗಿ ಬಂದು ಊಟಮಾಡಿದರು. ಅವರು ಮಲಗಿ ಸ್ವಲ್ಪ ವಿಶ್ರಾಂತಿ ಹೊಂದಬೇಕೆಂದು ಹವಣಿಸುತ್ತಿರುವಷ್ಟರಲ್ಲಿ ಆ ಯಾತ್ರಿಕನು ಗಟ್ಟಿಯಾಗಿ ಕೂಗಿ ತನ್ನ ಬಟ್ಟೆಗಳನ್ನೆಲ್ಲ ತಡಕುತ್ತ ಹುಡುಕಾಡತೊಡಗಿದನು.

'ನನ್ನ ದುಡ್ಡಿನ ಚೀಲ ಕಳವಾಗಿದೆ; ಅದರಲ್ಲಿ ಇಪ್ಪತ್ತಮೂರು ರೂಬಲ್‌ಗಳಿದ್ದವು, ಎರಡು ಹತ್ತು ರೂಬಲ್ ನೋಟುಗಳು, ಉಳಿದದ್ದು ಚಿಲ್ಲರೆ' ಎಂದನು.

ಅವನು ನಿಟ್ಟುಸಿರು ಬಿಡುತ್ತ ಬಹಳ ಗೋಳಾಡಿದನು. ಆದರೆ ಅದಕ್ಕೆ ಯಾವ ಪರಿಹಾರವೂ ಇಲ್ಲದ್ದರಿಂದ ಎಲ್ಲರೂ ಮಲಗಿಕೊಂಡರು.

೯

ಏಫಿಮ್ ಅಲ್ಲಿ ಮಲಗಿರುವಾಗ ಅವನನ್ನು ಸಂದೇಹಗಳು ಪೀಡಿಸ ತೊಡಗಿದವು.

'ಈ ಯಾತ್ರಿಕನಿಂದ ಯಾರೂ ಯಾವ ಹಣವನ್ನೂ ಕದ್ದುಕೊಂಡಿಲ್ಲ. ಅವನ ಹತ್ತಿರ ಏನಾದರೂ ಇದ್ದಂತೆಯೇ ನಂಬಲಾರೆ. ಎಲ್ಲಿಯೂ ಏನನ್ನೂ ಕೊಡಲಿಲ್ಲ. ನನಗೆ ಕೊಡುವಂತೆ ಹೇಳುತ್ತಿದ್ದನು. ನಾನು ಕೊಡುವಂತೆ ಮಾಡುತ್ತಿದ್ದರೂ ತಾನು ಮಾತ್ರ ಕೊಡುತ್ತಿರಲಿಲ್ಲ. ನನ್ನ ಹತ್ತಿರ ಒಂದು ರೂಬಲ್ ಸಾಲವನ್ನೂ ತೆಗೆದುಕೊಂಡನು' ಎಂದು ಕೊಂಡನು.

ಈ ಯೋಚನೆ ಮನಸ್ಸಿನಲ್ಲಿ ಅಡ್ಡ ಸುಳಿಯಿತೋ ಇಲ್ಲವೋ ಕೂಡಲೆ ಏಫಿಮ್ ತನ್ನನ್ನೇ ತಾನು ಬೈದುಕೊಂಡನು 'ಇನ್ನೊಬ್ಬನ ತಪ್ಪು ನೆಪ್ಪು ಗಳನ್ನು ತೂಗಲು ನನಗೇನಧಿಕಾರವಿದೆ? ಅದು ಪಾಪ, ಅದರ ವಿಚಾರವಾಗಿ ಮತ್ತೆ ಸ್ವಲ್ಪವೂ ಯೋಚಿಸುವುದಿಲ್ಲ' ಎಂದುಕೊಂಡನು ಆದರೆ ಅವನ ಯೋಚನೆ, ಅತ್ತಲಿತ್ತ ಹರಿಯಲು ಮೊದಲುಮಾಡಿದ ಕೂಡಲೆ ಈ ಪ್ರಯಾಣಿಕನ ಕಡೆಗೆ ತಿರುಗುತ್ತಿದ್ದಿತು. ಅವನಿಗೆ ದುಡ್ಡಿನಲ್ಲಿ ಎಷ್ಟು ಮಟ್ಟಿಗೆ ಮನಸ್ಸಿಟ್ಟಿದ್ದಂತೆ ಕಾಣುತ್ತಿದ್ದಿತೆಂಬುದು, ತನ್ನ ದುಡ್ಡಿನ ಚೀಲ ಕಳವಾಯಿತೆಂದು ಹೇಳಿದ ಅವನ ಮಾತು ಎಷ್ಟು ಅಸಂಭವವಾಗಿ ತೋರುತ್ತಿದ್ದಿತೆಂಬುದು, ಈ ಸಂಗತಿಗಳ ಮೇಲೆ ಹರಿಯುತ್ತಿದ್ದಿತು.

'ಅವನ ಹತ್ತಿರ ಸ್ವಲ್ಪವೂ ದುಡ್ಡೇ ಇರಲಿಲ್ಲ ಅದೆಲ್ಲ ಬರಿಯ ನಟನೆ' ಎಂದು ಯೋಚಿಸಿದನು.

ಸಂಜೆಯ ಹೊತ್ತಿಗೆ ಅವರು ಎದ್ದು ಪುನರುತ್ಥಾನ ಮಹಾ ಮಠದಲ್ಲಿ ಅರ್ಧರಾತ್ರಿಯಲ್ಲಿ ನಡೆಯುವ ಪೂಜೆಗೆ ಹೋದರು, ಅಲ್ಲಿಯೇ ಕ್ರಿಸ್ತನ ಸಮಾಧಿಯು ಇರುವುದು. ಯಾತ್ರಿಕನು ಯಾವಾಗಲೂ ಏಫಿಮ್‌ನ ಹತ್ತಿರವೇ ಇರುತ್ತಿದ್ದನು, ಎಲ್ಲಿ ಹೋದರೂ ಅವನ ಜೊತೆಯಲ್ಲಿಯೇ ಹೋಗು

ತ್ತಿದ್ದನು. ಅವರು ಚರ್ಚಿಗೆ ಬಂದರು. ಅಲ್ಲಿ ಲೆಕ್ಕವಿಲ್ಲದಷ್ಟು ಜನ ಯಾತ್ರಿಕ ರಿದ್ದರು. ಕೆಲವರು ರಷ್ಯನರು, ಕೆಲವರು ಗ್ರೀಕರು, ಆರ್ಮೀನಿಯನರು, ತುರುಕರು, ಸಿರಿಯನರು ಮುಂತಾದ ಇತರ ಜನಾಂಗಗಳಿಗೆ ಸೇರಿದವರು. ಎಫಿಮ್ ಗುಂಪಿನ ಜೊತೆಯಲ್ಲಿ ಪವಿತ್ರ ಮಹಾದ್ವಾರದಲ್ಲಿ ಒಳಕ್ಕೆ ಹೋದನು. ಅವರನ್ನು ಒಬ್ಬ ಸನ್ಯಾಸಿ ಕರೆದುಕೊಂಡು ಹೋದನು; ತುರುಕ ಕಾವಲುಗಾರರನ್ನು ದಾಟಿ ಮುಂದಕ್ಕೆ ಹೋಗಿ ಯೇಸುಕ್ರಿಸ್ತ ನನ್ನು ಶಿಲುಬೆಯಿಂದ ಇಳಿಸಿಕೊಂಡು ಎಣ್ಣೆ ಸವರಿದ ಸ್ಥಳಕ್ಕೆ ಕರೆದು ಕೊಂಡು ಹೋದನು ಅಲ್ಲಿ ದೊಡ್ಡ ದೊಡ್ಡ ಒಂಬತ್ತು ದೀಪದ ಕಂಬಗಳಲ್ಲಿ ದೀಪಗಳು ಉರಿಯುತ್ತಿದ್ದವು. ಆ ಸನ್ಯಾಸಿ ಅವರಿಗೆ ಎಲ್ಲವನ್ನೂ ತೋರಿಸಿ ವಿವರಿಸಿ ಹೇಳಿದನು. ಎಫಿಮ್ ಅಲ್ಲಿ ಒಂದು ದೀಪವನ್ನು ಅರ್ಪಿಸಿದನು. ಆಮೇಲೆ ಸನ್ಯಾಸಿ ಬಲಗಡೆಗೆ ತಿರುಗಿ ಮೆಟ್ಟಲು ಹತ್ತಿ, ಶಿಲುಬೆಯನ್ನು ನೆಟ್ಟಿದ್ದ ಗೊಲ್ಗೋಥಾ ಎಂಬ ಸ್ಥಳಕ್ಕೆ ಎಫಿಮ್‌ನನ್ನು ಕರದುಕೊಂಡು ಹೋದನು. ಎಫಿಮ್ ಪ್ರಾರ್ಥನೆಮಾಡಿದನು. ಆಮೇಲೆ ಪಾತಾಳದ ಆಳದವರೆಗೂ ಸಲ ಬಾಯಿಬಿಟ್ಟ ಬಳಿಯಲ್ಲಿದ್ದ ಬಿರುಕನ್ನು ತೋರಿಸಿದರು, ಆಮೇಲೆ ಕ್ರಿಸ್ತನ ಕೈಕಾಲುಗಳನ್ನು ಶಿಲುಬೆಗೆ ಸೇರಿಸಿ ಮೊಳ ಹೊಡೆದ ಜಾಗವನ್ನು ತೋರಿಸಿದರು, ಆ ಬಳಿಕ ಕ್ರಿಸ್ತನ ರಕ್ತ ಹನಿಹನಿಯಾಗಿ ಆಡಮನ ಮೂಳೆ ಗಳಮೇಲೆ ಬಿದ್ದ ಒಳಿಯಲ್ಲಿ ಕಟ್ಟಿದ ಆಡಮನ ಸಮಾಧಿಯನ್ನು ತೋರಿಸಿ ದರು. ಆಮೇಲೆ ಕ್ರಿಸ್ತನ ತಲೆಯಮೇಲೆ ಮುಳ್ಳಿನ ಕಿರೀಟವನ್ನಿಟ್ಟಾಗ ಆತನು ಕುಳಿತಿದ್ದ ಕಲ್ಲನ್ನೂ, ಅದಾದ ಬಳಿಕ ಕ್ರಿಸ್ತನನ್ನು ಬಾರುಕೋಲಿನಿಂದ ಹೊಡೆದಾಗ ಆತನನ್ನು ಬಿಗಿದಿದ್ದ ಕಂಬವನ್ನೂ ತೋರಿಸಿದರು. ಆಮೇಲೆ ಕ್ರಿಸ್ತನ ಕಾಲುಗಳಿಗೆ ಹಾಕುವುದಕ್ಕೆ ಮಾಡಿದ್ದ ಎರಡು ತೂತಿನ ಕಲ್ಲನ್ನು ಎಫಿಮ್ ನೋಡಿದನು. ಅವರಿಗೆ ಇನ್ನೇನನ್ನೋ ತೋರಿಸುತ್ತಿದ್ದರು, ಅಷ್ಟರಲ್ಲಿ ಗುಂಪಿನಲ್ಲಿ ನುಗ್ಗಾಟ ಮೊದಲಾಯಿತು; ಜನರೆಲ್ಲ ಕ್ರಿಸ್ತನ ಸಮಾಧಿ ಪೆಟ್ಟಿಗೆಯಿದ್ದ ಚರ್ಚಿನ ಕಡೆಗೆ ಆತುರ ಆತುರವಾಗಿ ನುಗ್ಗಿದರು.

ಅಲ್ಲಿ ಲ್ಯಾಟಿನ್ ಮಾಸ್ (ಪೂಜೆ) ಆಗಿನ್ನೂ ಮುಗಿದು ರಷ್ಯನ್ ಪ್ರಾರಂಭ ವಾಗುತ್ತಿದ್ದಿತು. ಎಫಿಮ್‌ನೂ ಗುಂಪಿನ ಜೊತೆಯಲ್ಲಿಯೇ ಬಂಡೆಯಲ್ಲಿ ಕೊರೆದ ಆ ಸಮಾಧಿಯ ಒಳಗೆ ಹೋದನು.

ಎಫಿಮ್ ಮನಸ್ಸಿನಲ್ಲೇ ಆ ಯಾತ್ರಿಕನ ವಿಷಯದಲ್ಲಿ ಇನ್ನೂ ಪಾಪಾಲೋಚನೆಮಾಡುತ್ತಿದ್ದನು. ಆದ್ದರಿಂದ ಹೇಗಾದರೂ ಮಾಡಿ ಅವನ ಕೈಯಿಂದ ತಪ್ಪಿಸಿಕೊಳ್ಳಬೇಕಂದು ಪ್ರಯತ್ನಪಟ್ಟನು. ಆದರೂ ಯಾತ್ರಿ ಕನು ಅವನನ್ನು ಬಿಡಲೊಲ್ಲನು, ಪವಿತ್ರಗೋರಿಯಲ್ಲಿನ ಪೂಜೆಗೂ ಅವನ ಜೊತೆಯಲ್ಲಿಯೇ ಹೋದನು. ಅವರು ಮುಂದುಗಡೆಗೆ ಹೋಗಬೇಕಂದು ಪ್ರಯತ್ನಮಾಡಿದರು, ಆದರೆ ಅದು ಸಾಗಲಿಲ್ಲ, ಬಂದದ್ದು ತುಂಬ ಹೊತ್ತು ಮೀರಿದ್ದಿತು. ಹಿಂದಕ್ಕಾಗಲಿ ಮುಂದಕ್ಕಾಗಲಿ ಅಲುಗಲಾರದಷ್ಟು ದಟ್ಟ ವಾಗಿ ಗುಂಪು ಸೇರಿದ್ದಿತು. ಎಫಿಮ್ ಮುಂದುಗಡೆ ನೋಡುತ್ತ ನಿಂತು ಕೊಂಡು ಪ್ರಾರ್ಥಿಸುತ್ತಿದ್ದನು, ಪ್ರಾರ್ಥಿಸುವಾಗ ಗಳಿಗೆ ಗಳಿಗೆಗೂ ದುಡ್ಡಿನ ಚೀಲವನ್ನು ಮುಟ್ಟಿ ನೋಡಿಕೊಳ್ಳುತ್ತಿದ್ದನು. ಅವನಿಗೆ ಆಗ ಎರಡು ಮನಸ್ಸು: ಆ ಯಾತ್ರಿಕನು ತನ್ನನ್ನು ಮೋಸಗೊಳಿಸುತ್ತಿರುವನೆಂದು ಕೆಲವುಸಲ ಯೋಚಿಸುವನು, ಆ ಮೇಲೆ ಒಂದುವೇಳೆ ಅವನು ನಿಜವನ್ನೇ ಹೇಳಿದ್ದು ಅವನ ದುಡ್ಡಿನ ಚೀಲ ನಿಜವಾಗಿಯೂ ಕಳವಾಗಿದ್ದರೆ, ತನಗೂ ಹಾಗೇ ಆಗಬಹುದೆಂದುಕೊಳ್ಳುವನು.

## ೧೦

ಎಫಿಮ್ ಅಲ್ಲಿ ನಿಂತು ಪವಿತ್ರ ಸಮಾಧಿಯಿದ್ದ ಪುಟ್ಟ ಗುಡಿಯೊಳಕ್ಕೆ ನೆಟ್ಟ ದೃಷ್ಟಿಯಿಂದ ನೋಡುತ್ತಿದ್ದನು. ಸಮಾಧಿಯ ಮೇಲ್ಭಾಗದಲ್ಲಿ ಮೂವತ್ತಾರು ದೀಪಗಳು ಉರಿಯುತ್ತಿದ್ದವು. ಅಲ್ಲಿ ಜನರ ತಲೆಗಳ ಮೇಲಿ ನಿಂದ ನೋಡುತ್ತ ನಿಂತಿರಲು ಒಂದು ನೋಟವನ್ನು ಕಂಡು ಅವನಿಗೆ ಬಹಳ ಆಶ್ಚರ್ಯವಾಯಿತು. ಪವಿತ್ರ ಜ್ಯೋತಿಯು ಜ್ವಲಿಸುತ್ತಿರುವ ದೀಪಗಳ ಕೆಳಗಡೆ ಅದಕ್ಕೆ ಬಹು ಹತ್ತಿರವಾಗಿ ಬೂದಿ ಬಣ್ಣದ ಅಂಗಿಯನ್ನು ತೊಟ್ಟು

ಕೊಂಡಿದ್ದ ಒಬ್ಬ ಮುದುಕನನ್ನು ಕಂಡನು. ಹೊಳೆಹೊಳೆಯುತ್ತಿದ್ದ ಅವನ ಬುರುಡು ತಲೆ ಎಲಿಷ ಬೋಡ್ರೋವಿನ ಹಾಗೆಯೇ ಕಾಣುತ್ತಿದ್ದಿತು.

'ಅದು ಅವನ ಹಾಗೆಯೇ ಕಾಣುತ್ತದೆ, ಆದರೆ ಅವನು ಎಲಿಷನಾಗಿರಲಾರ. ಅವನು ನನಗಿಂತ ಮುಂದೆ ಬಂದಿರಲಾರ. ನಮ್ಮದಕ್ಕಿಂತ ಮೊದಲು ಹೊರಟ ಹಡಗು ಒಂದು ವಾರ ಮುಂಚೆಯೇ ಹೊರಟಿದ್ದಿತು. ಅವನಿಗೆ ಅದು ಸಿಕ್ಕಿರಲಾರದು. ನಮ್ಮ ಹಡಗಿನಲ್ಲಂತೂ ಅವನಿರಲೇ ಇಲ್ಲ, ಹಡಗಿನಲ್ಲಿದ್ದ ಪ್ರತಿಯೊಬ್ಬ ಪ್ರಯಾಣಿಕನನ್ನೂ ನಾನು ನೋಡಿದೆ!' ಎಂದು ಏಫಿಮ್ ಯೋಚಿಸಿಕೊಂಡನು.

ಏಫಿಮ್ ಹೀಗೆ ಯೋಚಿಸಿದ್ದೇ ತಡ, ಆ ಪುಟ್ಟ ಮುದುಕನು ಪ್ರಾರ್ಥನೆಗೆ ಪ್ರಾರಂಭಿಸಿ ಮೂರು ಸಲ ತಲೆಬಗ್ಗಿ ನಮಸ್ಕಾರ ಮಾಡಿದನು. ಮುಂಭಾಗಕ್ಕೆ ದೇವರಿಗೊಂದು ಸಲ, ಆ ಮೇಲೆ ಅಲ್ಲಿ ನೆರದಿದ್ದ ಯಾತ್ರಿಕರನ್ನು ಉದ್ದೇಶಿಸಿ ಎರಡು ಪಕ್ಕಗಳಿಗೂ ಒಂದೊಂದು ಸಲ—ಹೀಗೆ ಮೂರು ಸಲ ಅವನು ನಮಸ್ಕರಿಸಿದನು ಅವನು ಬಲಗಡೆಗೆ ತನ್ನ ತಲೆಯನ್ನು ತಿರುಗಿಸಿದಾಗ ಏಫಿಮ್ ಅವನನ್ನು ಗುರುತಿಸಿದನು. ಅವನು ಎಲಿಷನೇ ಹೊರತು ಮತ್ತೆ ಯಾರೂ ಅಲ್ಲ! ಕೆನ್ನೆಗಳ ಬಳಿಯಲ್ಲಿ ಬೆಳ್ಳಗಾಗುತ್ತ ಗುಂಗುರು ಗುಂಗುರಾಗಿ ಸುತ್ತಿದ ಕೂದಲುಳ್ಳ ಅವನ ಗಡ್ಡ, ಅವನ ಹುಬ್ಬು, ಅವನ ಕಣ್ಣು, ಮೂಗು, ಅವನ ಮುಖಲಕ್ಷಣ,—ಎಲ್ಲವೂ ಎಲಿಷನದೇ ಹೌದು, ಅವನು ಎಲಿಷನೇ ಸರಿ!

ತನ್ನ ಜೊತೆಗಾರನು ಮತ್ತೆ ಸಿಕ್ಕಿದನಲ್ಲಾ ಎಂದು ಏಫಿಮ್‌ಗೆ ಬಹಳ ಸಂತೋಷವಾಯಿತು. ತನಗಿಂತ ಮುಂದಾಗಿ ಎಲಿಷ ಅಲ್ಲಿಗೆ ಹೇಗೆ ಬಂದನೆಂದು ಆಶ್ಚರ್ಯಪಡುತ್ತಿದ್ದನು.

'ಭಲಾ, ಎಲಿಷ!' ಎಂದು ಅವನನ್ನು ಮೆಚ್ಚಿದನು. 'ನೋಡು, ಅವನು ಹೇಗೆ ಮುಂದೆ ನುಗ್ಗಿ ಹೋಗಿದಾನೆ. ಅವನಿಗೆ ಯಾರಾದರೂ ದಾರಿ ತೋರಿಸುವವರು ಸಿಕ್ಕಿರಬೇಕು. ಹೊರಕ್ಕೆ ಹೋದಮೇಲೆ ಅವನನ್ನು

ಹುಡುಕಿ ಈ ತಲೆ ಟೊಪ್ಪಿಗೆಯ ಮನುಷ್ಯನ ಸಹವಾಸವನ್ನು ತಪ್ಪಿಸಿ ಕೊಂಡು, ಎಲಿಷನ ಜೊತೆಯಲ್ಲೇ ಇದ್ದುಬಿಡುತ್ತೇನೆ. ಅವನು ನನಗೂ ಮುಂದಕ್ಕೆ ಹೋಗುವುದು ಹೇಗೆಂಬುದನ್ನು ತೋರಿಸಿಕೊಡಬಹುದು.'

ಎಲಿಷನು ಎಲ್ಲಿ ಕಾಣದೆ ಹೋದಾನೋ ಎಂದು ಏಫಿಮ್ ಅವನನ್ನೇ ನೋಡುತ್ತ ನಿಂತನು. ಆದರೆ ಪೂಜೆ ಮುಗಿದ ಕೂಡಲೇ ಗೋರಿಗೆ ಮುತ್ತಿಡಬೇಕೆಂದು ಗುಂಪು ಮುಂದಕ್ಕೆ ನುಗ್ಗಿ ತೂಗಾಡಲು ಪ್ರಾರಂಭ ವಾಯಿತು ಈ ನುಗ್ಗಾಟದಲ್ಲಿ ಏಫಿಮ್‌ನನ್ನು ಒಂದು ಪಕ್ಕಕ್ಕೆ ತಳ್ಳಿದರು. ತನ್ನ ದುಡ್ಡಿನ ಚೀಲವನ್ನೆಲ್ಲಿ ಕದಿಯುತ್ತಾರೋ ಎಂಬ ಭಯ ಅವನನ್ನು ಮತ್ತೆ ಆವರಿಸಿಕೊಂಡಿತು. ಅದನ್ನು ಕೈಯಲ್ಲಿ ಭದ್ರವಾಗಿ ಅದುಮಿ ಹಿಡಿದುಕೊಂಡು, ಮೊಳಕೈಗಳಿಂದ ತಿವಿದು ದಾರಿ ಬಿಡಿಸಿಕೊಳ್ಳುತ್ತ, ಹೊರಕ್ಕೆ ಹೋಗಬೇಕೆಂಬ ಒಂದೇ ಒಂದು ಕಳವಳದಿಂದ ಅವನು ಮುಂದೆ ನುಗ್ಗ ತೊಡಗಿದನು. ಬಯಲು ಪ್ರದೇಶಕ್ಕೆ ಬಂದು ಸೇರಿದ ಒಳಿಕ, ಚರ್ಚಿನ ಒಳಗೂ ಹೊರಗೂ ಎಲಿಷನನ್ನು ಹುಡುಕುತ್ತ ಬಹಳ ಹೊತ್ತು ಸುತ್ತಿದನು. ಚರ್ಚಿನ ಗುಡಿಗಳಲ್ಲಿ ಊಟಮಾಡುತ್ತಲೂ, ವೈನ್ ಕುಡಿಯುತ್ತಲೂ, ಓದುತ್ತಲೂ, ಮಲಗಿಕೊಂಡೂ ಇದ್ದ ನಾನಾ ರೀತಿಯ ಜನರು ಅವನ ಕಣ್ಣಿಗೆ ಬಿದ್ದರು. ಆದರೆ ಎಲಿಷನು ಮಾತ್ರ ಎಲ್ಲಿಯೂ ಕಾಣಲಿಲ್ಲ. ಆದ್ದ ರಿಂದ ಏಫಿಮ್ ತನ್ನ ಜೊತೆಗಾರರನ್ನು ಕಾಣದೆಯೇ ಛತ್ರಕ್ಕೆ ಹಿಂದಿರುಗಿ ದನು. ಅವತ್ತು ಸಂಜೆ ತಲೆ ಟೊಪ್ಪಿಗೆಯ ಯಾತ್ರಿಕನು ಬರಲೇ ಇಲ್ಲ. ಸಾಲ ತೆಗೆದುಕೊಂಡಿದ್ದ ರೂಬಲನ್ನು ಹಿಂದಕ್ಕೆ ಕೊಡದೆ ಹಾಗೆಯೇ ಹೋಗಿ ಬಿಟ್ಟಿದ್ದನು. ಏಫಿಮ್ ಒಂಟಿಯಾಗಿ ಉಳಿದನು.

ಮರುದಿನ ಏಫಿಮ್ ಹಡಗಿನ ಮೇಲೆ ತಾನು ಕಂಡಿದ್ದ ಟ್ಯಾಂಬೋ ದಿಂದ ಬಂದಿದ್ದ ಒಬ್ಬ ಮುದುಕನ ಸಂಗಡ ಪುನಃ ಪವಿತ್ರಗೋರಿಗೆ ಹೋದನು. ಅವನು ಮುಂದುಗಡೆಗೆ ಹೋಗಬೇಕೆಂದು ಪ್ರಯತ್ನಪಟ್ಟನು; ಆದರೆ ಜನರು ಅವನನ್ನು ಮತ್ತೆ ಹಿಂದಕ್ಕೆ ತಳ್ಳಿಬಿಟ್ಟರು, ಆದ್ದರಿಂದ

ಒಂದು ಕಂಬದ ಬಳಿಯಲ್ಲಿ ನಿಂತುಕೊಂಡು ಪ್ರಾರ್ಥನೆಮಾಡಿದನು. ಅವನು ಮುಂದುಗಡೆ ನೋಡಿದನು. ಅಲ್ಲಿ ಎಲ್ಲರಿಗಿಂತಲೂ ಮುಂದೆ ಕ್ರಿಸ್ತನ ಗೋರಿಗೆ ಅತಿ ಸಮೀಪದಲ್ಲಿಯೇ ದೀಪಗಳ ಕೆಳಗಡೆಯಲ್ಲಿ ಎಲಿಷನು ನಿಂತಿದ್ದನು ಅವನು ಬಲಿಪೀಠದ ಬಳಿಯಲ್ಲಿ ನಿಂತ ಪಾದ್ರಿಯಂತೆ ತೋಳುಗಳೆರಡನ್ನೂ ಚಾಚಿ ನೀಡಿದ್ದನು, ಅವನ ಬುರುಡು ತಲೆ ಥಳಥಳನೆ ಹೊಳೆಯುತ್ತಿದ್ದಿತು.

"ಒಳ್ಳೆಯದು, ಈಗ ಇವನನ್ನು ಹಿಡಿಯದೆ ಬಿಡುವುದಿಲ್ಲ" ಎಂದು ಏಫಿಮ್ ಯೋಚಿಸಿದನು.

ಅವನು ನುಗ್ಗಿ ನುಗ್ಗಿ ಮುಂದಕ್ಕೆ ಹೋದನು. ಆದರೆ ಅವನು ಅಲ್ಲಿಗೆ ಹೋದಮೇಲೆ ಅಲ್ಲಿ ಎಲಿಷ ಇರಲಿಲ್ಲ. ಅವನು ಹೊರಟುಹೋಗಿದ್ದನೆಂದು ಕಾಣುತ್ತದೆ

ಪುನಃ ಮೂರನೆಯ ದಿನ ಏಫಿಮ್ ನೋಡಿದನು. ಅಲ್ಲಿ ಗೋರಿಯ ಬಳಿಯಲ್ಲಿ, ಪವಿತ್ರತಮ ಪ್ರದೇಶದಲ್ಲಿ, ಎಲ್ಲರಿಗೂ ಕಾಣುವಂತೆ ತೋಳುಗಳೆರಡನ್ನೂ ಚಾಚಿಕೊಂಡು, ಮೇಲುಗಡೆಯಲ್ಲಿ ಏನೋ ಕಾಣಿಸುತ್ತಿರುವ ಹಾಗೆ ನೆಟ್ಟದೃಷ್ಟಿಯಲ್ಲಿ ನೋಡುತ್ತ ಎಲಿಷನು ನಿಂತಿದ್ದನು. ಅವನ ಬುರುಡು ತಲೆ ಥಳಥಳನೆ ಹೊಳೆಯುತ್ತಿದ್ದಿತು.

'ಒಳ್ಳೆಯದು, ಈ ಸಲ ಅವನು ನನ್ನಿಂದ ತಪ್ಪಿಸಿಕೊಳ್ಳಲಾರ. ನಾನು ಹೋಗಿ ಬಾಗಿಲಲ್ಲಿ ನಿಂತುಕೊಳ್ಳುತ್ತೇನೆ. ಆಗ ಒಬ್ಬರನ್ನೊಬ್ಬರು ನೋಡದೆ ಇರುವುದಕ್ಕೆ ಆಗುವುದಿಲ್ಲ' ಎಂದು ಏಫಿಮ್ ಯೋಚಿಸಿಕೊಂಡನು.

ಏಫಿಮ್ ಹೊರಕ್ಕೆ ಹೋಗಿ ಮಧ್ಯಾಹ್ನ ಕಳೆಯುವವರೆಗೂ ಬಾಗಿಲ ಬಳಿಯಲ್ಲೇ ನಿಂತುಕೊಂಡಿದ್ದನು. ಎಲ್ಲರೂ ಹೊರಕ್ಕೆ ಹೊರಟು ಹೋಗಿದ್ದರು. ಆದರೆ ಎಲಿಷನು ಮಾತ್ರ ಬರಲಿಲ್ಲ.

ಏಫಿಮ್ ಆರು ವಾರಗಳು ಜೆರುಸಲೇಮಿನಲ್ಲಿದ್ದು ಬೆತ್ಲಹೆಮ್, ಬೆಥನಿ, ಮತ್ತು ಜೋರ್ಡಾನ್—ಎಲ್ಲಕಡೆಗೂ ಹೋಗಿ ಬಂದನು. ತನ್ನ ಮರಣಾನಂತರ ತನ್ನನ್ನು ಸಮಾಧಿಮಾಡುವಾಗ ಹೆಣಕ್ಕೆ ಹೊದಿಸುವುದಕ್ಕೆ ಒಂದು ಹೊಸ ಬಟ್ಟೆಯನ್ನು ತೆಗೆದುಕೊಂಡು ಅದಕ್ಕೆ ಪವಿತ್ರಗೋರಿಯಲ್ಲಿ ಮುದ್ರೆ ಒತ್ತಿಸಿಕೊಂಡನು. ಜೋರ್ಡಾನ್ ನದಿಯ ನೀರನ್ನು ಒಂದು ಸೀಸೆಯಲ್ಲಿ ತುಂಬಿಕೊಂಡು, ಪವಿತ್ರ ಮೃತ್ತಿಕೆಯನ್ನೂ ಸ್ವಲ್ಪ ತೆಗೆದುಕೊಂಡನು. ಅಲ್ಲಿನ ಪುಣ್ಯ ದೀಪಗಳ ಪವಿತ್ರ ಜ್ಯೋತಿಯಲ್ಲಿ ಹೊತ್ತಿಸಿದ್ದ ಮೋಂಬತ್ತಿಗಳನ್ನು ಕೊಂಡು ಕೊಂಡನು. ಎಂಟು ಸ್ಥಳಗಳಲ್ಲಿ ಅವರಿಗಾಗಿ ಪ್ರಾರ್ಥಿಸುವಂತೆ ಹೇಳಿ ತನಗೆ ಬೇಕಾದವರ ಹೆಸರುಗಳನ್ನು ಬರೆಸಿದನು. ಮನೆಗೆ ಹೋಗಿಸೇರುವುದಕ್ಕೆ ಸಾಕಾಗುವಷ್ಟರ ಹೊರತು ಉಳಿದ ದುಡ್ಡನ್ನೆಲ್ಲ ಅವನು ವೆಚ್ಚಮಾಡಿದನು. ಆಮೇಲೆ ಮನೆಯಕಡೆ ಹೊರಟನು. ಅವನು ಜಫಾಕ್ಕೆ ನಡೆದುಕೊಂಡು ಹೋದನು. ಅಲ್ಲಿಂದ ಒಡಿಸ್ಸಾಕ್ಕೆ ಹಡಗಿನ ಮೇಲೆ ಪ್ರಯಾಣಮಾಡಿದನು. ಅಲ್ಲಿಂದ ಕಾಲ್ನಡಗೆಯಲ್ಲಿ ಮನೆಗೆ ಹೊರಟನು.

೧೧

ಏಫಿಮ್ ತಾನು ಹಿಂದೆ ಬಂದಿದ್ದ ದಾರಿಯಲ್ಲಿಯೇ ಪ್ರಯಾಣಮಾಡಿದನು. ಮನೆಗೆ ಹತ್ತಿರ ಹತ್ತಿರವಾಗಿ ಬಂದಂತೆಲ್ಲ ತಾನು ಇಲ್ಲದಿದ್ದಾಗ ಮನೆಯಲ್ಲಿ ಯಾವ ಯಾವ ಕೆಲಸ ಏನೇನಾಗಿದೆಯೋ ಎಂಬ ಮೊದಲಿನ ಆತಂಕಗಳು ಮತ್ತೆ ಹಿಂತಿರುಗಿದವು. 'ಒಂದು ವರ್ಷದಲ್ಲಿ ಅಪಾರ ನೀರು ಹರಿದುಹೋಗುತ್ತದೆ' ಎಂದು ಗಾದೆ. 'ಒಂದು ಮನೆಯನ್ನು ಕಟ್ಟಿ ನೆಟ್ಟಗೆಮಾಡುವುದಕ್ಕೆ ಒಂದು ಜೀವಮಾನ ಹಿಡಿಯುತ್ತದೆ, ಆದರೆ ಅದನ್ನು ಹಾಳುಮಾಡುವುದಕ್ಕೆ ಹೆಚ್ಚು ಹೊತ್ತು ಹಿಡಿಯುವುದಿಲ್ಲ' ಎಂದು ಅವನು ಯೋಚಿಸಿದನು. ತಾನು ಇಲ್ಲದಾಗ ತನ್ನ ಮಗನು ಹೇಗೆ ಕೆಲಸಗಳನ್ನು ನಿರ್ವಹಿಸಿದಾನೋ,—ಅಲ್ಲಿನ ವಸಂತಋತು ಯಾವರೀತಿ ಇದೆಯೋ ಚಳಿಗಾಲದಲ್ಲಿ ದನಗಳು ಹೇಗಿವೆಯೋ, ಮನೆಯನ್ನು ಚೆನ್ನಾಗಿ ಪೂರ್ತಿ

ಮಾಡಿದಾರೋ ಇಲ್ಲವೋ—ಎಂದು ಆತಂಕಗೊಂಡನು ಹಿಂದಿನ ಬೇಸಿಗೆಯಲ್ಲಿ ಎಲಿಷನನ್ನು ಬಿಟ್ಟು ಅಗಲಿದ್ದ ಡಿಸ್ಟ್ರಿಕ್ಟಿಗೆ ತಲಪಿದಾಗ ಅಲ್ಲಿನ ಜನರು ಮೊದಲಿನಿಂದ ಅಲ್ಲಿಯೇ ಇದ್ದವರೆಂದು ನಂಬುವುದೇ ಕಷ್ಟವಾಯಿತು. ಹಿಂದಿನ ವರ್ಷ ಅವರು ಹೊಟ್ಟೆಗಿಲ್ಲದೆ ಉಪವಾಸ ನರಳುತ್ತಿದ್ದರು, ಆದರೆ ಈಗ ಸುಖವಾಗಿ ಜೀವಿಸುತ್ತಿದ್ದರು. ಚೆನ್ನಾಗಿ ಫಸಲು ಬಂದಿದ್ದಿತು, ಜನರು ಎಚ್ಚೆತ್ತುಕೊಂಡಿದ್ದರು, ಹಿಂದಿನ ಕಷ್ಟವನ್ನೆಲ್ಲ ಮರೆತುಬಿಟ್ಟಿದ್ದರು.

ಒಂದು ದಿನ ಸಂಜೆ ಏಫಿಮ್ ಎಲಿಷನು ಹಿಂದೆ ನಿಂತಿದ್ದನಲ್ಲಾ, ಅದೇ ಸ್ಥಳಕ್ಕೆ ಬಂದು ಸೇರಿದನು. ಅವನು ಹಳ್ಳಿಯನ್ನು ಪ್ರವೇಶಿಸುತ್ತಿದ್ದಾಗ ಬಿಳಿಯ ಫ್ರಾಕ್ ತೊಟ್ಟುಕೊಂಡಿದ್ದ ಚಿಕ್ಕ ಹುಡುಗಿಯೊಬ್ಬಳು ಒಂದು ಗುಡಿಸಲಿನಿಂದ ಓಡಿಬಂದಳು.

'ಅಜ್ಜಾ, ಅಜ್ಜಾ, ನಮ್ಮ ಮನೆಗೆ ಬಾ'

ಏಫಿಮ್ ಮುಂದಕ್ಕೆ ಹೋಗಬೇಕೆಂದಿದ್ದನು. ಆದರೆ ಆ ಚಿಕ್ಕ ಹುಡುಗಿ ಅವನನ್ನು ಬಿಡಲಿಲ್ಲ. ಅವಳು ಅವನ ಅಂಗಿಯನ್ನು ಹಿಡಿದುಕೊಂಡು ನಗು ನಗುತ್ತ ಗುಡಿಸಲ ಕಡೆಗೆ ಎಳೆಯುತ್ತಿದ್ದಳು. ಆ ಗುಡಿಸಲಿನಲ್ಲಿ ಒಬ್ಬ ಚಿಕ್ಕ ಹುಡುಗನನ್ನು ಎತ್ತಿಕೊಂಡು ಒಬ್ಬ ಹೆಂಗಸು ಹೊರ ಅಂಗಳಕ್ಕೆ ಒಂದು ನಿಂತು ಅಲ್ಲಿಗೆ ಬರುವಂತೆ ಸಂಜ್ಞೆಮಾಡಿ ಕರೆಯುತ್ತಿದ್ದಳು.

'ಒಳಕ್ಕೆ ಬಾರಜ್ಜ. ಊಟಮಾಡಿ, ನಮ್ಮ ಜೊತೆಯಲ್ಲೇ ಇದ್ದು ಇವತ್ತು ರಾತ್ರೆ ಕಳೆಯುವೆಯಂತೆ' ಎಂದಳು.

ಆದ್ದರಿಂದ ಏಫಿಮ್ ಒಳಕ್ಕೆ ಹೋದನು. ಅವನು 'ಎಲಿಷನ ವಿಷಯವನ್ನೂ ವಿಚಾರಿಸಬಹುದು. ಅವನು ನೀರು ಕುಡಿಯುವುದಕ್ಕೆಂದು ಒಳಹೊಕ್ಕ ಗುಡಿಸಲು ಇದೇ ಅನ್ನುವ ಹಾಗೆ ಕಾಣುತ್ತದೆ' ಎಂದುಕೊಂಡನು.

ಅವನು ಹೊತ್ತುಕೊಂಡಿದ್ದ ಗಂಟನ್ನು ಆ ಹೆಂಗಸು ತನ್ನ ಕೈಗೆ ತೆಗೆದುಕೊಂಡು ಮುಖ ತೊಳೆದುಕೊಳ್ಳುವುದಕ್ಕೆ ನೀರು ತಂದುಕೊಟ್ಟಳು. ಆಮೇಲೆ ಬಲವಂತಮಾಡಿ ಅವನನ್ನು ಊಟಕ್ಕೆ ಕೂರಿಸಿ ಹಾಲು, ಮೊಸರು,

ದೋಸೆಗಳು ಇವನ್ನು ತಂದು ಮೇಜಿನ ಮೇಲಿಟ್ಟಳು. ಏಫಿಮ್ ಬಹಳ ಉಪಕಾರವಾಯಿತೆಂದು ಹೇಳಿ, ತನ್ನಂಥ ಯಾತ್ರಿಕನಲ್ಲಿ ತುಂಬ ದಯ ತೋರಿಸುವುದಕ್ಕಾಗಿ ಆಕೆಯನ್ನು ಶ್ಲಾಘಿಸಿದನು. ಆಕೆ ತಲೆಯನ್ನು ಅಲ್ಲಾಡಿಸಿದಳು.

'ಯಾತ್ರಿಕರನ್ನು ಕರೆದು ಉಪಚರಿಸುವುದಕ್ಕೆ ನಮಗೆ ಒಳ್ಳೆಯ ಕಾರಣವಿದೆ. ಜೀವನ ಎಂದರೇನು ? ಎಂಬುದನ್ನು ನಮಗೆ ತೋರಿಸಿಕೊಟ್ಟವನೂ ಒಬ್ಬ ಯಾತ್ರಿಕನೇ. ನಾವು ದೇವರನ್ನು ಮರೆತು ಜೀವಿಸುತ್ತಿದ್ದೆವು, ದೇವರು ನಮಗೆ ಹೆಚ್ಚು ಕಡಮೆ ಮರಣವನ್ನೇ ಕೊಟ್ಟು ಶಿಕ್ಷಿಸುತ್ತಿದ್ದನೆನ್ನಬೇಕು. ಹೋದ ವರ್ಷ ನಮ್ಮ ಗತಿ ತೀರ ಕೆಟ್ಟು, ಎಲ್ಲರೂ ರೋಗದಿಂದ ನರಳುತ್ತ ಮಲಗಿದ್ದೆವು, ತಿನ್ನುವುದಕ್ಕೆ ಏನೇನೂ ಇರಲಿಲ್ಲ. ಇನ್ನೇನು ನಾವು ಸತ್ತೇಹೋಗಬೇಕಾಗಿದ್ದಿತು, ಆದರೆ ದೇವರು ನಮ್ಮ ಸಹಾಯಕ್ಕೆ ಒಬ್ಬ ಮುದುಕನನ್ನು—ನಿನ್ನಂಥವನನ್ನೇ ಒಬ್ಬನನ್ನು—ಕಳುಹಿಸಿಕೊಟ್ಟನು. ಒಂದು ದಿನ ಕುಡಿಯುವುದಕ್ಕೆ ಸ್ವಲ್ಪ ನೀರು ಕೇಳುವುದಕ್ಕೆ ಅವನು ಒಳಗೆ ಬಂದನು. ಬಂದವನು ನಾವಿದ್ದ ಸ್ಥಿತಿಯನ್ನು ಕಂಡು, ನಮ್ಮ ಮೇಲೆ ಮರುಕಗೊಂಡು, ನಮ್ಮ ಜೊತೆಯಲ್ಲೇ ನಿಂತುಬಿಟ್ಟನು. ಅವನು ನಮಗೆ ಅನ್ನ ನೀರು ಕೊಟ್ಟು, ಮತ್ತೆ ನಮ್ಮ ಕಾಲಮೇಲೆ ನಾವು ನಿಲ್ಲುವಂತೆ ಮಾಡಿದನು, ನಮ್ಮ ಹೊಲವನ್ನು ಬಿಡಿಸಿಕೊಟ್ಟನು, ಒಂದು ಗಾಡಿಯನ್ನೂ ಕುದುರೆಯನ್ನೂ ಕೊಂಡು ತಂದು ಅವನ್ನೂ ನಮಗೆ ಕೊಟ್ಟನು.'

ಇಲ್ಲಿ, ಮುದುಕಿಯು ಗುಡಿಸಲಿನೊಳಕ್ಕೆ ಬರುತ್ತ, ನಡುವೆ ಬಾಯಿ ಹಾಕಿ, ತಾನು ಹೇಳತೊಡಗಿದಳು.

'ಅವನೇನು ಮನುಷ್ಯನೋ ದೇವರ ಸನ್ನಿಧಿಯಿಂದ ಬಂದ ದೇವದೂತನೋ ನಮಗೆ ಗೊತ್ತಿಲ್ಲ. ಅವನು ನಮ್ಮೆಲ್ಲರನ್ನೂ ಪ್ರೀತಿಸಿದನು, ನಮ್ಮೆಲ್ಲರಲ್ಲಿಯೂ ಮರುಕಗೊಂಡನು, ತನ್ನ ಹೆಸರನ್ನೂ ತಿಳಿಸದೆ ಹೊರಟು ಹೋದನು; ಯಾರ ಹೆಸರು ಹೇಳಿ ನಾವು ಪ್ರಾರ್ಥನೆ ಮಾಡಬೇಕೋ

ಅದೂ ನಮಗೆ ತಿಳಿಯದು ಅದೆಲ್ಲ ಈಗಲೂ ನನ್ನ ಕಣ್ಣಿಗೆ ಕಟ್ಟಿದ ಹಾಗಿದೆ. ಸಾವನ್ನು ಎದುರುನೋಡುತ್ತ ಅಲ್ಲಿ ನಾನು ಮಲಗಿದ್ದೆ; ಆಗ ಬುರುಡುತಲೆಯ ಒಬ್ಬ ಮುದುಕ ಒಳಗೆ ಬಂದ ಅವನಲ್ಲಿ ನೋಡುವುದಕ್ಕೆ ಅಷ್ಟೇನು ವಿಶೇಷ ಕಾಣಿಸಲಿಲ್ಲ. ಅವನು ಕುಡಿಯುವುದಕ್ಕೆ ಸ್ವಲ್ಪ ನೀರು ಕೇಳಿದನು ನಾನು ಪಾಪಿ, ಮನಸ್ಸಿನಲ್ಲೇ ಏತಕ್ಕಾಗಿ ಇವನು ಹೊಂಚು ಹಾಕಿಕೊಂಡು ಬಂದನೋ ಎಂದುಕೊಂಡೆ. ಆದರೆ ಅವನು ಏನು ಮಾಡಿದ ಬಲ್ಲೆಯೋ! ನಮ್ಮನ್ನು ಕಂಡಕೂಡಲೆ ತನ್ನ ಚೀಲವನ್ನು ಕಳಕ್ಕಿರಿಸಿ, ಈ ಒಳಿಯಲ್ಲೇ, ಇಲ್ಲೇ, ಕೆಳಕ್ಕಿಟ್ಟು ಅದರ ಬಾಯನ್ನು ಬಿಚ್ಚಿದನು'.

ಇಲ್ಲಿ ಚಿಕ್ಕ ಹುಡುಗಿಯೂ ಮಾತಿಗೆ ಸೇರಿದಳು

'ಇಲ್ಲ, ಅಜ್ಜಿ. ಅವನು ಮೊದಲು ಗುಡಿಸಲ ಮಧ್ಯದಲ್ಲಿ, ಇಲ್ಲಿ, ಅದನ್ನು ಕೆಳಗಿಟ್ಟು, ಆ ಮೇಲೆ ಬೆಂಚಿನ ಮೇಲಕ್ಕೆ ಎತ್ತಿ ಇಟ್ಟನು' ಎಂದಳು.

ಅವರು ಒಬ್ಬರೊಡನೊಬ್ಬರು ಚರ್ಚಿಸುತ್ತ, ಅವನು ಹೇಳಿದ್ದು, ಮಾಡಿದ್ದು ಅವನು ಎಲ್ಲಿ ಕುಳಿತನೆಂಬುದು, ಎಲ್ಲಿ ಮಲಗಿದನೆಂಬುದು, ತಮ್ಮಲ್ಲಿ ಪ್ರತಿಯೊಬ್ಬರಿಗೂ ಏನೇನು ಹೇಳಿದನೆಂಬುದು—ಎಲ್ಲವನ್ನೂ ಒಂದೊಂದಾಗಿ ಜ್ಞಾಪಿಸಿಕೊಳ್ಳತೊಡಗಿದರು.

ರಾತ್ರಿ ರೈತನೂ ಕುದುರೆಯ ಮೇಲೆ ಮನೆಗೆ ಬಂದನು ಎಲಿಷನ ವಿಚಾರವಾಗಿ ಅವನೂ ಹೇಳತೊಡಗಿದನು, ಅವನು ತಮ್ಮ ಜೊತೆಯಲ್ಲಿ ಹೇಗೆ ವಾಸಮಾಡುತ್ತಿದ್ದನೆಂಬುದನ್ನೆಲ್ಲ ವಿವರಿಸಿದನು.

'ಅವನು ಬರದೆ ಇದ್ದರೆ ನಾವೆಲ್ಲ ನಮ್ಮ ಪಾಪಗಳಲ್ಲಿಯೇ ಮುಳುಗಿ ಸತ್ತುಹೋಗುತ್ತಿದ್ದೆವು. ದೇವರನ್ನೂ ಮನುಷ್ಯರನ್ನೂ ದೂರಿ ಗೊಣಗುತ್ತ ನಿರಾಶೆಯಿಂದ ಸಾಯುತ್ತ ಬಿದ್ದಿದ್ದೆವು. ಆದರೆ ಅವನು ಮತ್ತೆ ನಮ್ಮನ್ನು ನಮ್ಮ ಕಾಲಮೇಲೆ ನಿಲ್ಲುವಂತೆ ಮಾಡಿದನು. ಅವನ ಮೂಲಕ ನಾವು ದೇವರನ್ನು ತಿಳಿಯುವುದನ್ನು ಕಲಿತುಕೊಂಡೆವು, ಮನುಷ್ಯರಲ್ಲಿ ಒಳ್ಳೆಯ ದಿದೆ ಎಂದು ನಂಬುವುದನ್ನು ತಿಳಿದುಕೊಂಡೆವು. ದೇವರು ಅವನನ್ನು

ಹರಸಲಿ ! ನಾವು ಪಶುಗಳ ಹಾಗೆ ಜೀವಿಸುತ್ತಿದ್ದೆವು, ಅವನು ನಮ್ಮನ್ನು ಮನುಷ್ಯರಾಗಿ ಮಾಡಿದನು.'

ಅವನಿಗೆ ಊಟಕ್ಕೂ ಕುಡಿಯುವುದಕ್ಕೂ ಕೊಟ್ಟು, ಅವನು ಎಲ್ಲಿ ಮಲಗಬೇಕೆಂದು ತೋರಿಸಿದರು; ಆ ಮೇಲೆ ಅವರೂ ಮಲಗಿ ನಿದ್ದೆ ಮಾಡಿದರು.

ಏಫಿಮ್ ಮಲಗಿಕೊಂಡರೂ ಅವನಿಗೆ ನಿದ್ದೆ ಬರಲೇ ಇಲ್ಲ. ಎಲಿಷನನ್ನು ಮರೆಯುವುದು ಅವನಿಗೆ ಅಸಾಧ್ಯವಾಯಿತು, ಜೆರುಸಲೇಮಿನಲ್ಲಿ ಎಲ್ಲರಿಗಿಂತ ಮುಂದೆ ಅವನು ನಿಂತುಕೊಂಡಿರುವಂತೆ ಮೂರುಸಲ ಕಂಡದ್ದನ್ನು ಸ್ಮರಿಸುತ್ತಲೇ ಇದ್ದನು.

'ಅವನು ನನಗಿಂತ ಮುಂದೆ ಹೋದದ್ದು ಹೇಗೆಂದು ಈಗ ಗೊತ್ತಾಯಿತು. ದೇವರು ನನ್ನ ಯಾತ್ರೆಯನ್ನು ಸ್ವೀಕರಿಸಿದನೋ ಬಿಟ್ಟನೋ; ಆದರೆ ಅವನದನ್ನು ಖಂಡಿತವಾಗಿಯೂ ಸ್ವೀಕರಿಸಿದಾನೆ!' ಎಂದು ಯೋಚಿಸಿದನು.

ಮರುದಿನ ಬೆಳಿಗ್ಗೆ ಏಫಿಮ್ ಆ ಜನರಿಗೆ ಹೋಗಿಬರುವೆನೆಂದು ಹೇಳಿ ಹೊರಟನು, ಅವರು ತಮ್ಮ ಕೆಲಸಕ್ಕೆ ಹೋಗುವ ಮೊದಲು ಅವನ ಚೀಲದೊಳಕ್ಕೆ ಕೆಲವು ತಿಂಡಿಗಳನ್ನು ತುಂಬಿದರು. ಆಮೇಲೆ ಅವನು ತನ್ನ ಪ್ರಯಾಣವನ್ನು ಮುಂದುವರಿಸಿದನು.

೧೨

ಏಫಿಮ್ ಮನೆಯನ್ನು ಬಿಟ್ಟು ಒಂದು ವರ್ಷವಾಗಿದ್ದಿತು, ಒಂದು ದಿನ ಸಂಜೆ ಅವನು ಹಿಂದಿರುಗಿ ಮನೆಯನ್ನು ಸೇರಿದಾಗ ಪುನಃ ವಸಂತ ಋತು ಬಂದಿದ್ದಿತು. ಅವನ ಮಗನು ಮನೆಯಲ್ಲಿರಲಿಲ್ಲ; ಪಡಖಾನೆಗೆ ಹೋಗಿದ್ದನು. ಮನೆಗೆ ಬಂದಾಗ ಬಂದು ತೊಟ್ಟು ಹೆಚ್ಚಾಗಿ ಕುಡಿದಿದ್ದನು. ಏಫಿಮ್ ಅವನನ್ನು ಬಗೆ ಬಗೆಯಾಗಿ ಪ್ರಶ್ನಿಸತೊಡಗಿದನು. ಅಪ್ಪ ಮನೆಯಲ್ಲಿಲ್ಲದಾಗ ಆ ಪೋರ ಹದ್ದಿನಲ್ಲಿರಲಿಲ್ಲವೆಂದು ಎಲ್ಲದರಿಂದಲೂ ಸ್ಪಷ್ಟವಾಯಿತು. ದುಡ್ಡೆಲ್ಲ ಅನ್ಯಾಯವಾಗಿ, ಉದ್ದೇಶಿಸಿದ್ದ ಕೆಲಸಗಳಿಗಲ್ಲದೆ ಸಲ್ಲದ

ರೀತಿಯಲ್ಲಿ ಖರ್ಚಾಗಿದ್ದಿತು, ಕೆಲಸಗಳನ್ನು ಅಸಡ್ಡೆಮಾಡಿದ್ದನು. ತಂದೆ ಮಗನನ್ನು ಛೀ ಎನ್ನತೊಡಗಿದನು, ಅದಕ್ಕೆ ಮಗನು ಒರಟೊರಟಾಗಿ ಉತ್ತರಕೊಟ್ಟನು.

'ಇಲ್ಲೇ ನಿಂತು ನೀನೇ ಏಕೆ ಅದನ್ನೆಲ್ಲ ನೋಡಿಕೊಳ್ಳಲಿಲ್ಲ? ಇದ್ದ ದುಡ್ಡನ್ನೆಲ್ಲ ತೆಗೆದುಕೊಂಡು ಹೋಗಿಬಿಟ್ಟು ಈಗ ಒಂದು ನನ್ನ ಕೇಳು ತ್ತೀಯ!' ಎಂದನು.

ಮುದುಕನಿಗೆ ಸಿಟ್ಟು ಹತ್ತಿ ಮಗನನ್ನು ಹೊಡೆದನು.

ಮರುದಿನ ಬೆಳಿಗ್ಗೆ ಏಫಿಮ್ ಮಗನ ಮೇಲೆ ದೂರು ಹೇಳುವುದ ಕ್ಕಾಗಿ ಗ್ರಾಮದ ಪಟೇಲನ ಒಳಿಗೆ ಹೊರಟನು. ಎಲಿಷನ ಮನೆಯ ಮುಂದೆ ಹಾದುಹೋಗುತ್ತಿದ್ದಾಗ ಆ ಗೆಳೆಯನ ಹೆಂಡತಿ ಅಂಗಳದಲ್ಲಿದ್ದವಳು ಅವ ನನ್ನು ಕಂಡು ಮಾತಾಡಿಸಿದಳು

'ಹೇಗಿದೀಯಣ್ಣಾ, ಸ್ವಸ್ಥವಾಗಿದೀಯ? ಜೆರುಸಲೇಮಿಗೆ ಸುಖವಾಗಿ ಹೋಗಿ ತಲಪಿದೆಯಾ?' ಎಂದಳು.

ಏಫಿಮ್ ನಿಂತನು.

'ಹೌದಮ್ಮ, ದೇವರದಯದಿಂದ ನಾನಲ್ಲಿಗೆ ಹೋಗಿದ್ದೆ. ನಿಮ್ಮ ಮುದುಕನ ಜೊತೆ ತಪ್ಪಿಹೋಯಿತು ಅವನು ಸುಖವಾಗಿ ಮನೆಗೆ ಬಂದ ನೆಂದು ಕೇಳಿದೆ' ಎಂದನು.

ಮುದುಕಿಗೆ ಮಾತಾಡುವ ಚಪಲ.

'ಹೌದಣ್ಣ ಅವನು ಹಿಂದಿರುಗಿ ಬಂದಿದಾನೆ. ಅವನು ಬಂದು ಬಹಳ ದಿನವಾಯಿತು, ಅಸಂಪ್ಷನ್ ಮುಗಿದ ಕೂಡಲೇ ಅನ್ನುವ ಹಾಗೆ ಕಾಣುತ್ತದೆ ಅವನು ಬಂದದ್ದು. ದೇವರು ಅವನನ್ನು ಮತ್ತೆ ನಮ್ಮ ಬಳಿಗೆ ಕಳುಹಿಸಿದ್ದಕ್ಕೆ ನಮಗೆ ಎಷ್ಟು ಸಂತೋಷವಾಯಿತೋ! ಅವನು ಇಲ್ಲದಿದ್ದಾಗ ನಮಗೆ ಒಹಳ ಬೇಜಾರಾಗಿದ್ದಿತು ಈಗ ಅವನಿಂದ ಹೆಚ್ಚು ಕೆಲಸವೇನೂ ಆಗಲಾರದು, ಅವನು ದುಡಿಯುವ ಕಾಲಮುಗಿಯಿತು. ಆದರೂ ಅವನು ಮನೆಗೆ ಯಜಮಾನ. ಅವನು ಮನೆಯಲ್ಲಿದ್ದಾಗ

ಎಲ್ಲರಿಗೂ ಹೆಚ್ಚು ಹರ್ಷವಾಗಿರುತ್ತದೆ. ನಮ್ಮ ಹುಡುಗನ ಹಿಗ್ಗು ಎಷ್ಟು ಹೇಳಿದರೂ ತೀರದು! "ಅಪ್ಪ ಹೊರಗೆ ಎಲ್ಲಿಯಾದರೂ ಹೋಗಿದ್ದರೆ, ಸೂರ್ಯನ ಬೆಳಕಿಲ್ಲದಿದ್ದರೆ ಹೇಗೋ ಹಾಗೆ" ಎನ್ನುತ್ತಾನೆ ಅವನು. ಅಣ್ಣಾ ಅವನಿಲ್ಲದಿದ್ದಾಗ ಒಲು ಬೇಜಾರಾಗಿತ್ತಣ್ಣಾ. ಅವನನ್ನು ಕಂಡರೆ ನಮಗೆಲ್ಲ ಬಹಳ ಮೆಚ್ಚು, ಚೆನ್ನಾಗಿ ಅವನಿಗೆ ಉಪಚಾರಮಾಡುತ್ತೇವಪ್ಪಾ.'

'ಈಗ ಅವನು ಮನೆಯಲ್ಲಿದಾನೋ ?

'ಇದಾನಣ್ಣಾ, ಇದಾನೆ. ತನ್ನ ಜೇನು ಹುಳುಗಳ ಹತ್ತಿರ ಇದಾನೆ. ಹೊಸ ಹುಳುಗಳನ್ನು ಬೇರೆ ಬೇರೆ ಗೂಡುಗಳಾಗಿ ವಿಂಗಡಿಸುತ್ತಿದಾನೆ. ಈ ವರ್ಷ ಹೊಸ ಗೂಡುಗಳು ಬಹಳ ಚನ್ನಾಗಿ ಬಂದಿವೆ ಎಂದು ಹೇಳುತ್ತಾನ. ದೇವರು ಜೇನು ಹುಳುಗಳಿಗೆ ಬೇಕಾದಷ್ಟು ಶಕ್ತಿಯನ್ನು ಕೊಟ್ಟು ಬಿಟ್ಟಿದಾನೆ, ನನ್ನ ಗಂಡ ಇಂಥದನ್ನು ಎಂದೂ ಕಂಡೇ ಇರಲಿಲ್ಲವಂತೆ "ದೇವರು ನಮ್ಮ ಪಾಪಗಳಿಗೆ ತಕ್ಕಂತೆ ನಮಗೆ ಫಲಕೊಡುತ್ತಿಲ್ಲ" ಎಂದು ಹೇಳುತ್ತಾನೆ. ಬಾರಣ್ಣಾ ಒಳಕ್ಕೆ, ಪುನಃ ನಿನ್ನನ್ನು ನೋಡಿದರೆ ತುಂಬ ಆನಂದ ಪಡುತ್ತಾನೆ'.

ಏಫಿಮ್ ಎಲಿಷನನ್ನು ನೋಡುವುದಕ್ಕಾಗಿ ಅಂಗಳದೊಳಕ್ಕೆ ಹೋಗಿ ಅಲ್ಲಿಂದ ಜೇನು ಮನೆಗೆ ಹೋದನು. ಅಲ್ಲಿ ಎಲಿಷ ತನ್ನ ಬೂದಿ ಬಣ್ಣದ ಅಂಗಿಯನ್ನು ತೊಟ್ಟುಕೊಂಡು ಮುಖದ ಬಲೆಯನ್ನಾಗಲಿ ಕೈಚೀಲವನ್ನಾಗಲಿ ಉಪಯೋಗಿಸದೆ, ಬರ್ಚ್‌ಮರಗಳ ಕೆಳಗೆ ಮೇಲುಗಡೆಗೆ ನೋಡುತ್ತ, ತೋಳುಗಳನ್ನು ನೀಡಿ ನಿಂತುಕೊಂಡಿದ್ದನು, ಅವನ ಬುರುಡುತಲೆ ಥಳ ಥಳನೆ ಹೊಳೆಯುತ್ತಿದ್ದಿತು; ಏಫಿಮ್ ಜೆರುಸಲೇಮಿನಲ್ಲಿ ಪವಿತ್ರ ಗೋರಿಯ ಬಳಿಯಲ್ಲಿ ಅವನನ್ನು ಕಂಡಾಗ ಹೇಗಿದ್ದನೋ ಹಾಗೆಯೇ ಕಾಣುತ್ತಿದ್ದನು. ಆ ಪುಣ್ಯಕ್ಷೇತ್ರದಲ್ಲಿ ದೀಪದ ಜ್ವಾಲೆಗಳು ಬೆಳಗುತ್ತಿದ್ದ ಹಾಗೆ ಇಲ್ಲಿ ಅವನ ಮೇಲುಗಡೆ ಬರ್ಚ್‌ಮರಗಳ ಮೂಲಕ ಸೂರ್ಯ ಕಿರಣಗಳು ಹೊಳೆಯುತ್ತಿದ್ದವು. ಹೊಂಬಣ್ಣದ ಜೇನು ಹುಳುಗಳು ಅವನನ್ನು ಕಚ್ಚದೆ, ತಲೆಯ ಸುತ್ತಲೂ ಪ್ರಭಾವಳಿಯಂತೆ ಹಾರಾಡುತ್ತಿದ್ದವು.

ಏಫಿಮ್ ನಿಂತನು. ಮುದುಕಿ ಗಂಡನನ್ನು ಕೂಗಿದಳು.

'ಇಗೋ, ಇಲ್ಲಿ ನಿನ್ನ ಗೆಳೆಯ ಬಂದಿದಾನೆ' ಎಂದಳು.

ಎಲಿಷನು ಮು..ದಲ್ಲಿ ತೃಪ್ತಿಯನ್ನು ತುಳುಕಿಸುತ್ತ ಸುತ್ತಲೂ ತಿರುಗಿ ನೋಡಿ, ತನ್ನ ಗಡ್ಡದಲ್ಲಿ ಕುಳಿತಿದ್ದ ಜೇನುಗಳನ್ನು ಮೃದುವಾಗಿ ಬಿಡಿಸಿ ತೆಗೆಯುತ್ತ ಏಫಿಮ್‌ನ ಕಡೆಗೆ ಬಂದನು.

'ಶುಭವಾಗಲಣ್ಣಾ, ಶುಭವಾಗಲಿ, ನಮಸ್ಕಾರವಯ್ಯಾ ನಮಸ್ಕಾರ. ನೀನು ಅಲ್ಲಿಗೆ ಕ್ಷೇಮದಿಂದ ತಲಪಿದೆಯಾ ?'

'ನನ್ನ ಕಾಲುಗಳು ಅಲ್ಲಿಗೆ ನಡೆದವು. ಜೋರ್ಡರ್ನ್ ನದಿಯಿಂದ ನಿನಗೂ ಸ್ವಲ್ಪ ತೀರ್ಥವನ್ನು ತಂದಿದೇನೆ. ನಮ್ಮ ಮನೆಗೆ ಬಂದು ತೆಗೆದು ಕೊಳ್ಳಬೇಕಪ್ಪಾ. ಆದರೆ ನನ್ನ ಶ್ರಮವನ್ನು ದೇವರು ಸ್ವೀಕರಿಸಿದನೋ ಇಲ್ಲವೋ .'

ಎಲಿಷನು 'ಒಳ್ಳೆಯದು, ದೇವರು ದೊಡ್ಡವನು. ಕ್ರಿಸ್ತನು ನಿನ್ನನ್ನು ಆಶೀರ್ವದಿಸಲಿ' ಎಂದನು.

ಏಫಿಮ್ ಸ್ವಲ್ಪ ಹೊತ್ತು ಸುಮ್ಮನಿದ್ದು ಆ ಮೇಲೆ ಮತ್ತೆ ಹೇಳಿದನು.

'ನನ್ನ ಕಾಲಗಳು ಅಲ್ಲಿಗೆ ಹೋಗಿದ್ದವು. ಆದರೆ ನಿಜವಾಗಿ ನೋಡಿದರೆ, ಅಲ್ಲಿಗೆ ನನ್ನ ಆತ್ಮ ಹೋಗಿದ್ದಿತೋ ಮತ್ತೊಬ್ಬನ ಆತ್ಮ........'

ಎಲಿಷ ನಡುವೆ ಬಾಯಿಹಾಕಿ, 'ಅದೆಲ್ಲ ಭಗವಂತನ ಕಾರ್ಯವಣ್ಣಾ, ಭಗವಂತನ ಕಾರ್ಯ' ಎಂದನು.

'ನಾನು ಹಿಂದಿರುಗಿ ಬರುವಾಗ ನೀನು ಹಿಂದೆ ನಿಂತೆಯಲ್ಲಾ ಆ ಗುಡಿಸಲಿನಲ್ಲಿ ಉಳಿದಿದ್ದೆ'.

ಎಲಿಷನು ಬೆಚ್ಚಿದನು. ಆತುರ ಆತುರವಾಗಿ,

'ದೇವರ ಕೆಲಸವಣ್ಣಾ, ದೇವರ ಕೆಲಸ! ಮನೆಯೊಳಕ್ಕೆ ಬಾ, ನಮ್ಮ ಜೇನುತುಪ್ಪವನ್ನು ನಿನಗೆ ಸ್ವಲ್ಪ ಕೊಡುತ್ತೇನೆ,' ಎಂದನು ಹೀಗೆ ಎಲಿಷನು ಮಾತು ತಿರುಗಿಸಿ ಗೃಹಕೃತ್ಯದ ವಿಷಯವಾಗಿ ಪ್ರಸ್ತಾಪಿಸತೊಡಗಿದನು.

ಏಫಿಮ್ ನಿಟ್ಟುಸಿರು ಬಿಟ್ಟನು. ಆ ಗುಡಿಸಲಿನಲ್ಲಿದ್ದ ಜನರ ಸಂಗತಿಯನ್ನಾಗಲಿ, ತಾನು ಜೆರುಸಲೇಮಿನಲ್ಲಿ ಅವನನ್ನು ಕಂಡ ವಿಷಯವನ್ನಾಗಲಿ ಎಲಿಷನ ಸಂಗಡ ಪ್ರಸ್ತಾಪಿಸಲಿಲ್ಲ. ಆದರೆ ಪ್ರತಿಯೊಬ್ಬನೂ ತಾನು ಬದುಕಿರುವವರೆಗೂ ಇತರರನ್ನು ಪ್ರೀತಿಸುತ್ತ ಅವರಿಗೆ ಒಳ್ಳೆಯದು ಮಾಡುತ್ತಿರುವುದೇ ದೇವರ ಸಾಕ್ಷಿಯಾಗಿ ಕೈಕೊಂಡ ವ್ರತಗಳನ್ನು ನಡೆಸುವುದಕ್ಕೂ ಅವನ ಇಷ್ಟವನ್ನು ನೆರವೇರಿಸುವುದಕ್ಕೂ ಸರ್ವೋತ್ತಮವಾದ ಮಾರ್ಗವೆಂದು ಅವನು ಈಗ ತಿಳಿದುಕೊಂಡನು.

# ಕಡೆಗಣಿಸಿದ ಕಿಡಿ ಮನೆಯನ್ನು ಸುಡುತ್ತದೆ

"ಆ ಮೇಲೆ ಪೀಟರನು ಯೇಸುವಿನ ಬಳಿ ಸಾರಿ 'ಒಡೆಯ ಸೋದರನೊಬ್ಬನೆಷ್ಟು ಸಲ ನನ್ನಲ್ಲಿ ಕೇಡೆಣಿಸಬಹುದ್ದು? ಅವನ ನಾನೆಷ್ಟು ಸಲ ಮನ್ನಿಸಲು ಬೇಕು? ಏಳು ಸಲವೇ?' ಎಂದು ಕೇಳಿದನು ಆ ನುಡಿಯನಾಲಿಸುತ ಯೇಸು ತಾ ನುಡಿದುನಿಂತು—

'ಏಳುಸಲವೆನ್ನೆನ್ನೈ, ಎಪ್ಪತ್ತು ಮಡಿ ಏಳುಸಲವೆಂದು ಹೇಳುವೆನು

ಸ್ವರ್ಗರಾಜ್ಯವನೊಬ್ಬ ದೊರೆಗ ಹೋಲಿಸಬಹುದು ಆ ದೊರೆಯು ಸೇವಕರ ಲೆಕ್ಕವನ್ನು ಪರಿಕಿಸುತ ತನಗೆ ಬರಬೇಕಾದ ಹಣವನೆಣಿಸಿದನು ಹತ್ತು ಸಾಸಿರ ವರಹ ಸಾಲವನು ಕೊಂಡವನನೊಬ್ಬನನು ಕರೆತರಿಸಿ, ಕೇಳಿದನು 'ಹಣವನೆಲ್ಲವ ತಿರುಗಿ ಕೊಡಬೇಕು' ಎಂದು ಸೇವಕನ ಕೈ ಬರಿದು, ಸಾಲವನು ತೀರಿಸಲು ಗತಿಯಿಲ್ಲ ದೊರೆಯೊ ನುಡಿದನು 'ನಿನ್ನ ಮಡದಿ ಮಕ್ಕಳ ಮಾರಿ, ಮನ ಮಾರ ವಿಕ್ರಯಿಸಿ, ಕಡೆಗೆ ನಿನ್ನನೆ ಮಾರಿ, ಸಾಲವನು ಕೊಂಬೆ'ನೆಂದು ಇದ ಕೇಳಿ ಸೇವಕನು ದೊರೆಯ ಪಾದದಿ ತನ್ನ ತನುವನೀಡಾಡಿದನು, 'ತಾಳು, ತಾಳೆನ್ನೊಡೆಯ, ಕೊಡುವೆನೆಲ್ಲವ'ನೆಂದು ಕೈಮುಗಿದು ಬೇಡಿದನು ಅವನ ದೈನ್ಯವ ಕಂಡು ದೊರೆಯ ಮನ ಕರಗಿದುದು, ಕರುಣೆಯಾವರಿಸಿದುದು. ಒಡನೆಯಾ ಸೇವಕಗೆ ಬಿಡುಗಡೆಯ ಮಾಡಿದನು, ಸಾಲವನು ಕೇಳದೆಯೆ ಬಿಟ್ಟು ಕಳುಹಿದನು

ಸೇವಕನು ಹೊರಹೊರಟು ತನ್ನಲ್ಲಿ ನೂರಾಣೆ ಸಾಲವನು ಕೊಂಡಿದ್ದ ಮತ್ತೊಬ್ಬ ಸೇವಕನ ಕಂಡು, ಕೈ ಹಿಡಿದೆಳೆದು, ಕುತ್ತಿಗೆಯನದುಮುತ್ತ, 'ತೆರು, ಬೇಗ, ನೀ ಕೊಂಡ ಸಾಲವನು' ಎಂದವನ ಪೀಡಿಸಿದನು. ಆ ಜೊತೆಯ ಸೇವಕನು 'ತಾಳು ತಾಳೆಲೆ ಗೆಳೆಯ, ಕೊಡುವೆನೆಲ್ಲವ'ನೆಂದು ಕಾಲ್ಗೆರಗಿ ಬೇಡಿದನು ಆ ನುಡಿಯನಾಲಿಸದೆ ಸೇವಕನು ಜೊತೆಯವನನೆಳೆತಂದು ಸೆರೆಮನೆಗೆ ದೂಡಿದನು, ಕೊಡುವ ಸಾಲವ ತೆರುವ ವರೆಗವನ ಬಂಧಿಸಿದನು

ಅವನ ಕೀಳ್ಗೈಮೆಯನು ಕಂಡುಳಿದ ಸೇವಕರು ಮನನೊಂದು ಮರುಗಿದರು, ಒಡೆಯನೆಡೆಗೈತಂದು ನಡೆದುದೆಲ್ಲವ ಬಿಡದೆ ಬಿನ್ನಹವ ಮಾಡಿದರು ಆಗ ದೊರೆ ಸೇವಕನ ಕರೆಸಿದನು 'ಎಲವೊ ದುಷ್ಟಗುಲಾಮ, ನೀನೆನ್ನ ಬೇಡಿದರೆ ಸಾಲವೆಲ್ಲವ ಬಿಟ್ಟು ನಾ ನಿನ್ನ ಮನ್ನಿಸಿದೆ, ಒಡನಾಡಿ ಸೇವಕನು ನಿನ್ನ ಬೇಡಲದೇಕೆ ಮರುಕಗೊಳ್ಳದೆ ಹೋದೆ, ನಿನ್ನಲ್ಲಿ

ಸಾಮುರುಕಗೊಂಡಂತೆ'' ಎಂದೆನುತ ಕೋಪದಲಿ ಸೇವಕನ ಬಲು ಬಗೆಯ ಪೀಡೆಗೊಳ ಪಡಿಸಿದನು, ಸಾಲವೆಲ್ಲವ ತೆರುವ ವರೆಗವನ ಪೀಡಿಸಿದನು

ಆಪರಿಯಲೇ, ನಿಮ್ಮ ಸೋದರರನೆಲ್ಲರನು ಮನಮುಟ್ಟಿ ಮನ್ನಿಸದೆ ಮರೆವಿರಾದರೆ, ತಂದೆ—ಸ್ವರ್ಗದೊಡೆಯನು—ನಿಮ್ಮ ಶಿಕ್ಷಿಸದೆ ಬಿಡನು,''

ಮ್ಯಾಥ್ಯೂ ೧೮ ೨೮—೩೫.

ಒಂದಾನೊಂದು ಹಳ್ಳಿಯಲ್ಲಿ ಇವ್ಯಾನ್ ಷೆರ್‌ಬಕೊ ಎಂಬೊಬ್ಬ ರೈತನಿದ್ದನು. ಅವನು ಆರೋಗ್ಯಶಾಲಿಯಾಗಿಯೂ ಅವನ ವಯಸ್ಸಿಗೆ ಒಪ್ಪುವಂತೆ ಗಟ್ಟಿಮುಟ್ಟಾಗಿಯೂ ಇದ್ದನು. ಆ ಹಳ್ಳಿಯಲ್ಲೆಲ್ಲ ಅವನಷ್ಟು ಉತ್ತಮನಾದ ಕೆಲಸಗಾರನು ಮತ್ತೊಬ್ಬನಿರಲಿಲ್ಲ ಅವನಿಗೆ ಪ್ರಾಯಕ್ಕೆ ಬಂದ ಮೂರು ಜನ ಗಂಡುಮಕ್ಕಳಿದ್ದರು. ಒಬ್ಬನಿಗೆ ಮದುವೆಯಾಗಿದ್ದಿತು. ಮತ್ತೊಬ್ಬನು ಮದುವೆಗೆ ಸೆರೆದಿದ್ದನು ಮೂರನೆಯವನು ಇನ್ನೂ ಹುಡುಗ, ಕುದುರೆಗಳನ್ನು ನಡೆಸಬಲ್ಲವನಾಗಿ ಆಗತಾನೆ ಬೇಸಾಯಕ್ಕೆ ಕೈಹಾಕಿದ್ದನು. ಇವ್ಯಾನನ ಹೆಂಡತಿ ಜಾಣ ಹೆಂಗಸು, ಮನೆಯ ಕೆಲಸಗಳಲ್ಲಿ ಬಹಳ ಒಪ್ಪ. ಅವನ ಸೊಸೆ ಶಾಂತಸ್ವಭಾವದವಳು, ಶ್ರದ್ಧೆಯಿಂದ ಕೆಲಸಮಾಡುತ್ತಿದ್ದಳು. ಅವನ ಸಂಸಾರದಲ್ಲಿ ಕಲಸಮಾಡಲಾರದೆ ಪೋಷಣೆಯನ್ನಪೇಕ್ಷಿಸುತ್ತಿದ್ದವನು ಅವರಪ್ಪನೊಬ್ಬನೇ. ಅವನು ಏಳು ವರ್ಷಗಳಿಂದ ಒಂದೇ ರೀತಿಯಾಗಿ ಗೂರ್ಲು ರೋಗದಿಂದ ನರಳುತ್ತ ಯಾವಾಗಲೂ ಒಲೆಯ * ಮೇಲೆಯೇ ಮಲಗಿರುತ್ತಿದ್ದನು. ಇವ್ಯಾನನಿಗೆ ಎಲ್ಲ ಪದಾರ್ಥಗಳೂ ಸಮೃದ್ಧಿಯಾಗಿದ್ದವು, ಮೂರು ಕುದುರೆಗಳು, ಒಂದು ಮರಿ, ಒಂದು ಕರೆಯುವ ಹಸು, ಮತ್ತು ಹದಿನೈದು ಕುರಿಗಳು. ಹೆಂಗಸರು ಗಂಡಸರ ಒಟ್ಟೆಬರೆಗಳನ್ನೂ

---

* ರಷ್ಯ ಚಳಿ ದೇಶ ಮನೆಯೊಳಗೆ ಬೆಚ್ಚಗಿರುವಂತೆ ಮಾಡುವುದಕ್ಕಾಗಿ ಅಂಥ ಚಳಿ ದೇಶಗಳಲ್ಲೆಲ್ಲ ಸಾಮಾನ್ಯವಾಗಿ ಸದಾ ಬೆಂಕಿಯನ್ನು ಉರಿಸುತ್ತಲೇ ಇರುತ್ತಾರೆ ರಷ್ಯ ದೇಶದಲ್ಲಿ ಈ ಒಲೆಗಳನ್ನು ಮೇಲ್ಭಾಗ ಅಗಲವಾಗಿರುವಂತೆ ಕಟ್ಟಿ, ಅಲ್ಲಿ ಬೆಚ್ಚಗಿರುವುದರಿಂದ ಮಲಗುವುದಕ್ಕೂ ಕೂರುವುದಕ್ಕೂ ಆ ಜಾಗವನ್ನು ಉಪಯೋಗಿಸುತ್ತಾರೆ

ತಮ್ಮ ಕಾಲುಚೀಲಗಳನ್ನೂ ತಯಾರಿಸುವುದಲ್ಲದೆ ಹೊಲದಲ್ಲಿಯೂ ಕೆಲಸ ಮಾಡುತ್ತಿದ್ದರು. ಗಂಡಸರು ಗೆಯ್ದು ತಂದುಹಾಕುತ್ತಿದ್ದರು. ಯಾವಾಗಲೂ ಅವನ ಮನೆಯಲ್ಲಿ ಆಹಾರಕ್ಕೆ ಕೊರತೆಯಿರಲಿಲ್ಲ. ಸುಗ್ಗಿ ಬಂದರೂ ಹಿಂದಿನ ವರ್ಷದ ದವಸ ಇನ್ನೂ ಉಳಿದಿರುತ್ತಿದ್ದಿತು. ಹೊಟ್ಟೆಗೋಧಿಯೊಂದರಲ್ಲಿಯೇ ಕಂದಾಯ ಕೌಳಿಗೆಗಳೆಲ್ಲ ಹರಿಯುತ್ತಿದ್ದಿತು. ಇವ್ಯಾನನು ಮಕ್ಕಳು ಮರಿಗಳೊಂದಿಗೆ ತೃಪ್ತನಾಗಿ, ನೆಮ್ಮದಿಯಾಗಿ ಕಾಲ ಕಳೆಯಬಹುದಾಗಿತ್ತು. ಆದರೆ, ಜೇಲಿಯ ಆಚೆಕಡೆಯಲ್ಲಿ ಗಾರ್ಡಿ ಇವ್ಯನೋಫನ ಮಗ ಕುಂಟ ಗೆಬ್ರಿಯಲನು ವಾಸಮಾಡುತ್ತಿದ್ದನು. ಈ ಗೆಬ್ರಿಯಲನಿಗೂ ಇವ್ಯಾನನಿಗೂ ತುಂಬ ದ್ವೇಷ

ಮುದುಕ ಗಾರ್ಡಿ ಬದುಕಿದ್ದು ಇವ್ಯಾನನ ಅಪ್ಪನೇ ಯಜಮಾನನಾಗಿದ್ದಾಗ ಅವರಿಬ್ಬರೂ ಬಹಳ ಸ್ನೇಹದಿಂದಿದ್ದರು. ಹೆಂಗಸರಿಗೆ ಒಂದು ಮರವೋ ಬಿಂದಿಗೆಯೋ ಬೇಕಾದಾಗಲೂ, ಗಂಡಸರಿಗೆ ಒಂದು ಚೀಲವೋ, ಚಕ್ರವೋ ಆವಶ್ಯಕವಾದಾಗಲೂ ಒಬ್ಬರಿಗೊಬ್ಬರು ಕೊಟ್ಟು ಸಹಾಯ ಮಾಡಿ ಒಳ್ಳೆಯ ನೆರೆಯಾಗಿದ್ದರು. ಎಲ್ಲಿಯಾದರೂ ಒಂದು ಕರು ಅಪ್ಪಿತಪ್ಪಿ ಕಣಕ್ಕೆ ನುಗ್ಗಿದರೆ ಅದನ್ನು ಹೊರಕ್ಕೆ ಅಟ್ಟಿಬಿಟ್ಟು, ಮನೆಯವರಿಗೆ, 'ಇನ್ನೂ ಹುಲ್ಲು ಒಡಿದಿಲ್ಲ, ದವಸ ಸರಿಯಾಗಿ ತುಂಬಿಲ್ಲ, ನಿಮ್ಮ ಕರುವನ್ನು ಸ್ವಲ್ಪ ಎಚ್ಚರವಾಗಿ ನೋಡಿಕೊಳ್ಳಿ' ಎಂದು ತಿಳಿಸುತ್ತಿದ್ದರು. ಇಷ್ಟೇ ಹೊರತು ಅವರೆಂದೂ ಆ ಕರುವನ್ನು ಕಣಜದಲ್ಲಿಯೋ ಕೊಟ್ಟಿಗೆಯಲ್ಲಿಯೋ ಕೂಡಿಹಾಕುತ್ತಿರಲಿಲ್ಲ. ಒಬ್ಬರ ಮನೆಯ ಪದಾರ್ಥಗಳನ್ನು ಮತ್ತೊಬ್ಬರು ಮುಚ್ಚಿಟ್ಟುಕೊಳ್ಳುತ್ತಿರಲಿಲ್ಲ. ಒಬ್ಬರಮೇಲೊಬ್ಬರು ಚಾಡಿಯನ್ನೂ ಹೇಳುತ್ತಿರಲಿಲ್ಲ.

ಹೀಗಿದ್ದದ್ದು ಮುದುಕರ ಕಾಲದಲ್ಲಿ. ಅವರ ಮಕ್ಕಳಿಗೆ ಯಜಮಾನಿಕೆ ಬಂದಮೇಲೆ ಎಲ್ಲ ಬದಲಾಯಿಸಿತು.

ಇಷ್ಟಕ್ಕೆಲ್ಲ ಒಂದು ತೀರ ಸಣ್ಣ ವಿಷಯವೇ ಕಾರಣ. ಇವ್ಯಾನನ ಸೊಸೆಯದೊಂದು ಕೋಳಿ ಈಸ್ಟರ್ ಹಬ್ಬದ ಹಿಂದಿನ ಉಪವಾಸದ ವಾರದಲ್ಲಿ

ಮೊಟ್ಟೆಯಿಡುವುದಕ್ಕೆ ಮೊದಲುಮಾಡಿತು. ಪ್ರತಿದಿನವೂ ಕೊಟ್ಟಿಗೆಯ ಹತ್ತಿರದಲ್ಲಿದ್ದ ಬಂಡಿಯ ಪೆಟ್ಟಿಗೆಯಲ್ಲಿ ಒಂದೊಂದು ಮೊಟ್ಟೆ ಸಿಕ್ಕುತ್ತಿದ್ದಿತು. ಒಂದು ದಿನ ಕೆಲವು ಮಕ್ಕಳು ಅದನ್ನು ಬೆದರಿಸಿದರು. ಅದು ಬೇಲಿಯ ಮೇಲೆ ಹಾರಿ ನೆರೆಮನೆಯ ಅಂಗಳಕ್ಕೆ ಹೋಗಿ ಅಲ್ಲಿ ಮೊಟ್ಟೆ ಇಟ್ಟಿತು. ಇವ್ಯಾನನ ಸೊಸೆ ಹಗಲೆಲ್ಲ ಹಬ್ಬದ ಕೆಲಸದಲ್ಲಿದ್ದು ಸಂಜೆಯಲ್ಲಿ ಮೊಟ್ಟೆಯನ್ನು ಹುಡುಕಿದಳು, ಸಿಕ್ಕಲಿಲ್ಲ. ಹುಡುಗರ ಮಾತು ಕೇಳಿ ನೆರೆಮನೆಗೆ ಹೋದಳು.

ಮುದುಕಜ್ಜಿ ಎದುರಿಗೆ ಬಂದು 'ಯಾತಕ್ಕಮ್ಮ ಬಂದೆ?' ಎಂದಳು.

'ಅಜ್ಜಿ, ಇವತ್ತು ಬೆಳಿಗ್ಗೆ ನನ್ನ ಕೋಳಿ ಬೇಲಿಯನ್ನು ಹಾರಿ ನಿಮ್ಮ ಅಂಗಳಕ್ಕ ಬಂದಿತ್ತು. ಇಲ್ಲೆಲ್ಲಿಯಾದರೂ ಮೊಟ್ಟೆ ಇಟ್ಟಿದೆಯೋ ಏನೋ, ನೋಡೋಣ ಎಂದು ಬಂದೆ.'

'ನಾನು ಬೇರೆ ಕಾಣಲಿಲ್ಲ. ಬಲು ದಿನದಿಂದಲೂ ದೇವರು ಕೊಟ್ಟ ಹಾಗೆ ನಮ್ಮ ಕೋಳಿಗಳೇ ಮೊಟ್ಟೆ ಇಡುತ್ತಾ ಇವೆ ನಮ್ಮದೇ ಬೇಕಾದಷ್ಟು ಬಿದ್ದಿದೆ, ನಮ್ಮ ಮನೆಯಲ್ಲಿ. ಹೆರರ ಮನೆಯದೇನೂ ನಮಗೆ ಬೇಕಾಗಿಲ್ಲ. ಮೊಟ್ಟೆ ಕೊಡೀಂತ ನಾವೇನು ಅವರಿವರ ಮನೆಗಳಲ್ಲಿ ಬೇಡಿ ಕೊಳ್ಳಬೇಕಾಗಿಲ್ಲ ಕಾಣಮ್ಮ.'

ಇದನ್ನು ಕೇಳಿ ಆ ಹುಡುಗಿಗೆ ಸಿಟ್ಟುಹತ್ತಿತು, ಜೋರಾಗಿ ಉತ್ತರ ಕೊಟ್ಟುಬಿಟ್ಟಳು. ನೆರಮನೆಯ ಹೆಂಗಸೂ ಪ್ರತಿಯಾಗಿ ಮೂದಲಿಸಿದಳು. ಕೊನೆಗೆ ಇಬ್ಬರೂ ಬೈದಾಡುವುದಕ್ಕ ಪ್ರಾರಂಭಿಸಿದರು. ಇವ್ಯಾನನ ಹೆಂಡತಿ ನೀರು ಹೊತ್ತುಕೊಂಡು ಹೋಗುತ್ತಿದ್ದವಳು ಇದನ್ನು ಕಂಡು ಅಲ್ಲಿಯೇ ನಿಂತಳು. ಅವಳೂ ಸೇರಿದಳು ಈ ಜಗಳಕ್ಕೆ. ಗೆಬ್ರಿಯಲನ ಹೆಂಡತಿಯೂ ಮನೆಯೊಳಗಿನಿಂದ ದುಡುಗುಟ್ಟಿಕೊಂಡು ಓಡಿ ಬಂದು ಇದ್ದದ್ದು ಇಲ್ಲದ್ದು ಎಲ್ಲ ಸೇರಿಸಿಕೊಂಡು, ನೆರೆಮನೆಯವರನ್ನು ಮನಸ್ಸಿಗೆ ಬಂದಹಾಗೆ ಅನ್ನುವುದಕ್ಕೆ ಮೊದಲುಮಾಡಿದಳು. ಹೀಗೆಯೇ ಜಗಳ ದೊಡ್ಡದಾಯಿತು. ಹೆಂಗಸರೆಲ್ಲರೂ ಒಟ್ಟಾಗಿ ಕಿರಿಚುತ್ತಿದ್ದರು, ಪ್ರತಿ

ಯೊಬ್ಬರೂ ಆದಷ್ಟು ಹೆಚ್ಚಾಗಿ ಗದ್ದಲ ಮಾಡುವುದಕ್ಕೇ ಯತ್ನಿಸುತ್ತಿದ್ದರು. ಆ ಮಾತುಗಳೋ, ಎಲ್ಲವೂ ಹೀನ ನುಡಿಗಳೇ—'ಅಂಥೋಳೆ....ಇಂಥೋಳೆ .ಕಳ್ಳೀ, ಸುಳ್ಳೀ, ಸೋಮಾರಿ, ಹೀನಗೈಸೆ, ತೊತ್ತೀ ನಿಮ್ಮ ಮುದಿ ಮಾವನ್ನ ಹೊಟ್ಟೆಗೆ ಹಾಕದೆ ಸಾಯಿಸುತ್ತೀಯಲ್ಲೇ.... .... '

'ನೀನೆಂಥವಳೇ ತಿರುಕೀ, ನಮ್ಮ ಮೊರವನ್ನು ಕದ್ದುಕೊಂಡೆಯಲ್ಲೆ ನೀನು, ನಮ್ಮ ನೊಗ ನಿಮ್ಮ ಮನೆಯಲ್ಲಿಯೇ ಇದೆ, ಈಗಲೇ ಕೊಟ್ಟು ಬಿಡಬೇಕದನ್ನ '

ನೊಗವನ್ನು ಕೈಗೆ ತೆಗೆದುಕೊಂಡು ಎರಡು ಕಡೆಗೂ ಜಗ್ಗಿಸಿ ಎಳೆಯುತ್ತ ನಿಂತರು. ನೀರು ಚೆಲ್ಲಿಹೋಯಿತು. ಒಬ್ಬರ ನೆರಗನ್ನೊಬ್ಬರು ಹರಿದರು. ಕಡೆಗೆ ಕೈಗೆ ಕೈ ಹತ್ತಿತು. ಹೊಲದಿಂದ ಹಿಂದಿರುಗಿ ಬರುತ್ತಿದ್ದ ಗೆಬ್ರಿಯಲನು ತನ್ನ ಹೆಂಡತಿಯ ಸಹಾಯಕ್ಕೆ ಬಂದನು. ಆಗ ಇವ್ಯಾನನೂ ಅವನ ಮಗನೂ ಹಾರಿಬಂದರು ಎಲ್ಲರೂ ಒಟ್ಟುಗೂಡಿ ತೆಕ್ಕೆಬಿದ್ದರು. ಇವ್ಯಾನನು ಬಹಳ ಗಟ್ಟಿಗ, ಅವರನ್ನೆಲ್ಲ ಬಡಿಸಿ ಒಬ್ಬೊಬ್ಬರನ್ನು ಒಂದೊಂದು ಕಡೆಗೆ ನೂಕಿದನು. ಗೆಬ್ರಿಯಲನ ಗಡ್ಡವನ್ನು ಜಗ್ಗಿಸಿ ಸ್ವಲ್ಪ ಕಿತ್ತುಬಿಟ್ಟನು. ಇದನ್ನು ಕಂಡು ಬೇರೆ ಕಲವರು ಓಡಿಬಂದು ಗುದ್ದಾಡುತ್ತಿದ್ದವರಿಬ್ಬರನ್ನೂ ಬಹು ಕಷ್ಟಪಟ್ಟು ಬಿಡಿಸಿದರು.

ಇದಿಷ್ಟೇ ಮೂಲ ಇವರ ಮನಸ್ತಾಪಕ್ಕೆ. ಗೆಬ್ರಿಯಲನು ಕಿತ್ತು ಹೋದ ಗಡ್ಡದ ಭಾಗವನ್ನು ಒಂದು ಕಾಗದದಲ್ಲಿ ಸುತ್ತಿಟ್ಟು ಡಿಸ್ಟ್ರಿಕ್ಟು ಕೋರ್ಟಿನಲ್ಲಿ ಇವ್ಯಾನನ ಮೇಲೆ ಫಿರ್ಯಾದು ಮಾಡಿದನು

"ಈ ಹಾಳು ಇವ್ಯಾನನು ಕಿತ್ತು ಆನಂದಪಡುವುದಕ್ಕೋ ನಾನು ಗಡ್ಡ ಬೆಳೆಸಿದ್ದು !" ಎಂದನು

ಅವನ ಹೆಂಡತಿಯು ಇವ್ಯಾನನನ್ನು ಕೋರ್ಟಿನಲ್ಲಿ ವಿಚಾರಣೆ ಮಾಡಿ, ಸೈಬೀರಿಯಕ್ಕೆ ಗಡೀಪಾರು ಮಾಡಿಸುವುದಾಗಿ ನೆರೆಹೊರೆಯಲ್ಲೆಲ್ಲ ಹೇಳುತ್ತ

ಬಂದಳು. ಇದೇ ರೀತಿಯಲ್ಲಿ ಎರಡು ಪಕ್ಷದಲ್ಲಿಯೂ ದ್ವೇಷವು ಬೆಳೆಯಲು ಮೊದಲಾಯಿತು.

ಮುದುಕನು ಮಾತ್ರ ಒಲೆಯ ಮೇಲೆ ಕುಳಿತು ಮೊದಲಿನಿಂದಲೂ ಅವರಿಗೆ ಬುದ್ಧಿ ಹೇಳುತ್ತಿದ್ದನು. ಆದರೇನು, ಅವನ ಮಾತನ್ನು ಯಾರೂ ಕೇಳಲಿಲ್ಲ.

"ಮಕ್ಕಳಿರಾ, ನೀವು ಮಾಡುತ್ತಿರುವುದೆಲ್ಲ ದಡ್ಡ ಕೆಲಸ, ತೀರ ಅವಿವೇಕ ಅಲ್ಪ ವಿಷಯವನ್ನೇ ಬಹಳ ದೊಡ್ಡದು ಮಾಡಿಕೊಂಡು ವ್ಯರ್ಥವಾಗಿ ಗದ್ದಲಮಾಡುತ್ತೀರಿ ಸ್ವಲ್ಪ ಯೋಚಿಸಿ ನೋಡಿ. ಇಷ್ಟು ರಗಳೆಯೆಲ್ಲ ಒಂದು ಮೊಟ್ಟೆಗಾಗಿ ಹುಟ್ಟಿತು ಮಕ್ಕಳು ಅದನ್ನು ತೆಗೆದುಕೊಂಡವು ಪಾಪ ಮಕ್ಕಳು, ತಣ್ಣಗೆ ಬದುಕಲಿ. ಒಂದು ಮೊಟ್ಟೆ ಹೋದರೆ ಅದೇನು ದೊಡ್ಡ ನಷ್ಟವಲ್ಲ. ದೇವರ ದಯದಿಂದ ಎಲ್ಲರಿಗೂ ಸಾಕಾಗುವಷ್ಟಿದ್ದೇ ಇದೆ ಅವರು ನಿಮ್ಮನ್ನು ಕೆಟ್ಟಕಟ್ಟದಾಗಿ ಬೈದರು. ಬೈದುಕೊಳ್ಳಲಿ. ಅವರ ತಪ್ಪು ತೋರಿಸಿಕೊಟ್ಟು ತಿದ್ದಿಬಿಡಿ, ನೆಟ್ಟಗೆ ಮಾತಾಡುವಂತೆ ಕಲಿಸಿಕೊಡಿ. ನೀವು ಒಬ್ಬರೊಡನೊಬ್ಬರು ಜಗಳಮಾಡಿ ಹೊಡೆದಾಡಿದಿರಿ. ಆಗಲಿ, ಇದೂ ನಡೆಯತಕ್ಕದ್ದೇ. ಮನುಷ್ಯ ಸ್ವಭಾವ ಪಾಪದದಾರಿಯನ್ನೇ ಹಿಡಿಯುತ್ತದೆ. ಆದದ್ದಾಯಿತು. ಈಗಲಾದರೂ ಹೋಗಿ ಸಮಾಧಾನ ಮಾಡಿಕೊಳ್ಳಿ. ಇಲ್ಲಿಗೇ ಮುಗಿದು ಹೋಗುತ್ತದೆ, ಜಗಳವೆಲ್ಲ. ಹಾಗೆ ಮಾಡದೆ ಒಬ್ಬರಿಗೊಬ್ಬರು ಕೇಡೆಣಿಸುತ್ತ ಹೋದರೆ, ನಿಮ್ಮಿಬ್ಬರಿಗೂ ಹೇಳಲಾರದಷ್ಟು ಕೇಡು ಬೇರೆ ತಪ್ಪುವುದಿಲ್ಲ."

ಅವನ ಮಾತುಗಳಿಗೆ ಯಾರೂ ಕಿವಿಗೊಡಲಿಲ್ಲ. 'ಮುದುಕನಿಗೆ ಅರುಳು ಮರುಳು. ಸುಮ್ಮನಿರಲಾರದೆ ಆಡಿಕೊಳ್ಳುತ್ತಾನೆ, ಆಡಿಕೊಳ್ಳಲಿ' ಎಂದುಬಿಟ್ಟರು.

ನೆರೆಮನೆಯ ಗೃಹಸ್ಥನನ್ನು ಕ್ಷಮಾಪಣೆ ಕೇಳಿಕೊಳ್ಳುವುದಕ್ಕೆ ಇವ್ಯಾನನು ಒಡಂಬಡಲಿಲ್ಲ. (ಹಾಗೆ ಮಾಡುವುದಕ್ಕೆ ಅವನಿಗೆ ಸ್ವಲ್ಪವೂ

ಮನಸ್ಸಿರಲಿಲ್ಲ) 'ನಾನೇನು ಅವನ ಗಡ್ಡವನ್ನು ಕೀಳಲಿಲ್ಲ. ಅವನು ತಾನಾಗಿಯೇ ಕಿತ್ತುಕೊಂಡಿದಾನೆ, ಅವನ ಮಗನು ನನ್ನ ಗುಂಡಿಗಳನ್ನೆಲ್ಲ ಕಿತ್ತು ಷರ್ಟನ್ನು ಹರಿದಿದಾನೆ. ಇಗೋ ನೋಡು, ಅದಿಲ್ಲಿಯೇ ಇದೆ' ಎಂದನು. ಹೀಗಾಗಿ ಇವ್ಯಾನನೂ ಗೆಬ್ರಿಯಲನ ಮೇಲೆ ದೂರು ತಂದನು ಈ ವ್ಯಾಜ್ಯವು ತಾಲ್ಲೂಕಿನ ಕೋರ್ಟಿನಲ್ಲಿಯೂ ಡಿಸ್ಟ್ರಿಕ್ಟು ಕೋರ್ಟಿನಲ್ಲಿಯೂ ವಿಚಾರಣೆಯಾಯಿತು. ಇಷ್ಟರಲ್ಲಿ ಒಂದು ದಿನ ಗೆಬ್ರಿಯಲನ ಗಾಡಿಯ ಕಡಾಣಿ ಮಾಯವಾಯಿತು. ಅವನ ಮನೆಯ ಹೆಂಗಸರು ಇವ್ಯಾನನ ಮಗನನ್ನು ದೂರಿಗೆಳೆದರು.

'ನಿನ್ನೆ ರಾತ್ರಿ ಅವನು ನಮ್ಮ ಮನೆಯ ಕಿಟಿಕಿಯ ಒಳಯಿಂದ ಗಾಡಿಯ ಕಡೆಗೆ ಹೋಗುತ್ತಿದ್ದದ್ದನ್ನು ಕಂಡೆವು ಕಡಾಣಿಯನ್ನು ಅವನು ಹೆಂಡದಂಗಡಿಯಲ್ಲಿ ಮಾರುತಿದ್ದನೆಂದು ನೆರೆಯವನೊಬ್ಬನು ಹೇಳಿದನು' ಎಂದರು.

ಮತ್ತೆ ಇಬ್ಬರೂ ಕೋರ್ಟಿಗೆ ಹೋದರು ಮನೆಯಲ್ಲಿ ದಿನದಿನವೂ ಜಗಳ. ಕೆಲವು ವೇಳೆ ಹೊಡೆದಾಟಕ್ಕೂ ಮೊದಲಾಗುತ್ತಿದ್ದಿತು ದೊಡ್ಡವರನ್ನು ನೋಡಿ ಹುಡುಗರೂ ಜಗಳವಾಡುವುದಕ್ಕೆ ಪ್ರಾರಂಭಿಸಿದರು. ಹೆಂಗಸರು ಬಟ್ಟೆಯೊಗೆಯುವುದಕ್ಕೆಂದು ಹೊಳೆಗೆ ಹೋದಾಗಲೆಲ್ಲ ಅವರ ಕೈಗಳಿಗಿಂತ ನಾಲಿಗೆಗೇ ಹೆಚ್ಚು ಕೆಲಸವಾಗುತ್ತಿದ್ದಿತು.

ಮೊದಮೊದಲು ಒಬ್ಬರಮೇಲೊಬ್ಬರು ಸುಳ್ಳು ಸುಳ್ಳು ದೋಷಗಳನ್ನು ಹೊರಿಸುತ್ತಿದ್ದರು ಸ್ವಲ್ಪ ಕಾಲ ಕಳೆಯುವುದರೊಳಗಾಗಿ ಕೈಗೆ ಸಿಕ್ಕಿದಾಗಲೆಲ್ಲ ಒಬ್ಬರ ಪದಾರ್ಥಗಳನ್ನು ಮತ್ತೊಬ್ಬರು ಮುಚ್ಚಿಟ್ಟುಕೊಳ್ಳುವುದನ್ನು ಅಭ್ಯಾಸ ಮಾಡಿದರು, ಆಮೇಲೆ ಮನೆಯ ಹೆಂಗಸರಿಗೂ ಮಕ್ಕಳಿಗೂ ಇದೇ ಚಾಳಿಯನ್ನೇ ಕಲಿಸಿದರು ಹೀಗಾಗಿ ಅವರ ಜೀವನವು ಹೆಚ್ಚು ಹೆಚ್ಚು ಕಶ್ಮಲವಾಗುತ್ತ ಬಂದಿತು. ಹಳ್ಳಿಯ ಪಂಚಾಯುತಿಗಳು, ಬೆಂಚು ಕೋರ್ಟುಗಳು, ಡಿಸ್ಟ್ರಿಕ್ಟು ಕೋರ್ಟುಗಳು—ಇವುಗಳಲ್ಲೆಲ್ಲ ಇವರ ವ್ಯವಹಾರವೇ. ಜಡ್ಜಿಗಳಿಗೆ ಇವರನ್ನು ಕಂಡರೆ ಬೇಸರವಾಗುವಂತಾ

ಯಿತು. ಒಂದು ಸಲ ಗೆಬ್ರಿಯಲನಿಗೆ ಜುಲ್ಮಾನೆ, ಮುಂದಿನ ಸಲ ಇವ್ಯಾನನಿಗೆ ಜುಲ್ಮಾನೆ. ಅವನಿಗೊಂದು ಸಲ ಜೈಲಾದರೆ ಇವನಿಗೂ ಒಂದು ಸಲ ಜೈಲು, ಹೀಗೆ ಒಬ್ಬರಿಗೊಬ್ಬರು ಕೆಡುಕುಮಾಡಿದಷ್ಟೂ ಅವರ ಕ್ರೋಧದ ಉರಿ ಹೆಚ್ಚುತ್ತಲೇಹೋಯಿತು ನಾಯಿಗಳು ಜಗಳಕ್ಕೆ ತೊಡಗಿದಾಗ ಅವುಗಳ ಜಗಳ ಹೆಚ್ಚಿದಂತೆಲ್ಲ ಅವು ರೇಗುವುದೂ ಜೋರಾಗುತ್ತದೆ. ಹಿಂದುಗಡೆಯಿಂದ ಒಂದನ್ನು ಯಾರಾದರೂ ಹೊಡೆದರೆ ಅದು ತನ್ನ ಎದುರಾಳಿಯೇ ತನಗೆ ನೋವುಂಟು ಮಾಡಿತೆಂದು ಭ್ರಮಿಸಿ ಇಮ್ಮಡಿಸಿದ ಕ್ರೋಧದಿಂದ ಕಡಿಯಲು ಹೆಣಗುತ್ತದೆ ಈ ರೈತರ ವ್ಯವಹಾರವೂ ಹೀಗೇ ಆಯಿತು. ಒಬ್ಬೊಬ್ಬನಿಗೂ ದಂಡವೋ, ಸೆರೆಯೋ, ಪ್ರಾಪ್ತವಾದಾಗಲೆಲ್ಲ ಅಡಗಿದ್ದ ಕ್ರೋಧ ಉಕ್ಕಿ ಹರಿದು ಇಮ್ಮಡಿಯಾಗಿ ಅಂತರಂಗವನ್ನು ಬೇಯಿಸುತ್ತಿದ್ದಿತು 'ಇರಲಿ, ಸ್ವಲ್ಪ ತಾಳು; ತಕ್ಕದ್ದಾಗುತ್ತೆ ನಿನಗೆ!' ಎಂದು ಹಲ್ಲು ಮಸೆಯುತ್ತಿದ್ದರು.

ಇದೇ ರೀತಿಯಲ್ಲಿ ಆರು ವರ್ಷ ಕಳೆದುಹೋಯಿತು.

ಒಲೆಯ ಮೇಲಿನ ಮುದುಕ ಮಾತ್ರ ಏನೇನೋ ಸಮಾಧಾನ ಹೇಳಿ ಜಗಳವನ್ನು ನಿಲ್ಲಿಸಬೇಕೆಂದು ಪ್ರಯತ್ನ ಪಟ್ಟನು.

'ಮಕ್ಕಳಿರಾ ಇದೇನು ಮಾಡಿಬಿಟ್ಟಿರಿ? ಜಗಳವನ್ನು ನಿಲ್ಲಿಸಿ ನಿಮ್ಮ ನಿಮ್ಮ ಕೆಲಸವನ್ನು ನೋಡಿಕೊಳ್ಳಬಾರದೇ? ಈ ಅಸೂಯೆಯನ್ನು ಮರೆಯಬಾರದೇ? ಹಾಗೆ ಮಾಡಿದರೆ ನಿಮಗೇ ಒಳ್ಳೆಯದಪ್ಪಾ. ನೀವು ರೇಗಿದಷ್ಟೂ ಹೆಚ್ಚು ಹೆಚ್ಚು ಕೇಡಾಗುತ್ತದೆ' ಎಂದು ಬುದ್ಧಿ ಹೇಳುತ್ತಿದ್ದನು.

ಆದರೆ ಅವನ ಮಾತಿಗೆ ಕಿವಿಗೊಡುವವರು ಯಾರು?

ಏಳನೆಯ ವರ್ಷ ಆ ಊರಿನಲ್ಲಿ ಒಂದು ಮದುವೆ ನಡೆಯಿತು. ಆಗ ಇವ್ಯಾನನ ಸೊಸೆ ಗೆಬ್ರಿಯಲನಿಗೆ ಅವಮಾನ ಮಾಡಬೇಕೆಂದು ಅವನು ಕುದುರೆಯನ್ನು ಕದಿಯುತ್ತಿದ್ದಾಗ ಸಿಕ್ಕಿಬಿದ್ದಿದ್ದನೆಂದು ಎಲ್ಲರೆದುರಿಗೂ ಹೇಳಿಬಿಟ್ಟಳು.

ಗೆಬ್ರಿಯಲನು ಕುಡಿದಿದ್ದನು. ಅವಮಾನವನ್ನು ತಡೆಯಲಾರದೆ ಎಚ್ಚರತಪ್ಪಿ ಇವ್ಯಾನನ ಸೊಸೆಗೆ ಬಲವಾಗಿ ಏಟುಕೊಟ್ಟನು. ಅವಳು ಆ ಪೆಟ್ಟಿಗೆ ತತ್ತರಿಸಿ ಕೆಳಗೆ ಬಿದ್ದಳು, ಒಂದು ವಾರದವರೆಗೆ ಹಾಸಿಗೆ ಬಿಟ್ಟೇಳುವುದಕ್ಕಾಗಲಿಲ್ಲ ಇದನ್ನು ಕಂಡು ಇವ್ಯಾನನಿಗೆ ಪರಮ ಸಂತೋಷವಾಯಿತು. ಅವನ ಸೊಸೆ ಆಗ ತುಂಬು ಗರ್ಭಿಣಿ. ಕೂಡಲೇ ಅವನು ಪೋಲೀಸಿಗೆ ಅರ್ಜಿ ಬರೆದುಕೊಂಡನು. 'ಈಗ ಅವನ ಆಟ ಮುಗಿಯುತ್ತದೆ. ಈ ಸಲ ಸೈಬೀರಿಯ ತಪ್ಪುವುದೇ ಇಲ್ಲ' ಎಂದು ಮನಸ್ಸಿನಲ್ಲಿಯೇ ಹಿಗ್ಗುತ್ತಿದ್ದನು. ಆದರೆ ಇವ್ಯಾನನ ಪ್ರಯತ್ನ ಸಫಲವಾಗಲಿಲ್ಲ. ಪೋಲೀಸಿನವರು ಅರ್ಜಿಯನ್ನು ಅಂಗೀಕರಿಸಲಿಲ್ಲ. ಅವನ ಸೊಸೆಯನ್ನು ಪರೀಕ್ಷೆ ಮಾಡುವುದಕ್ಕೆ ಬಂದರು. ಅಷ್ಟು ಹೊತ್ತಿಗೆ ಅವಳಿಗೆ ಸ್ಪಷ್ಟವಾಗಿ ಏಟಿನ ಗುರುತೇ ಕಾಣುವಂತಿರಲಿಲ್ಲ. ಇವ್ಯಾನನು ಬೆಂಚುಕೋರ್ಟಿನಲ್ಲಿ ವ್ಯವಹಾರ ಹೂಡಿದನು. ಅಲ್ಲಿಂದ ಆ ವ್ಯವಹಾರವನ್ನು ಡಿಸ್ಟ್ರಿಕ್ಟು ಕೋರ್ಟಿಗೆ ಕಳುಹಿಸಿದರು. ಅಲ್ಲಿ ಇವ್ಯಾನನು ತಾನು ಗೆಲ್ಲುವುದಕ್ಕಾಗಿ ಶಕ್ತಿಮೀರಿ ಪ್ರಯತ್ನಮಾಡಿದನು. ಗುಮಾಸ್ತನಿಗೂ ಪಂಚಾಯಿತರಿಗೂ ಒಬ್ಬೊಬ್ಬರಿಗೆ ಒಂದೂವರೆ ಗ್ಯಾಲನ್ ಒಳ್ಳೆಯ ಬ್ರಾಂದಿಯನ್ನು ಲಂಚಕೊಟ್ಟು ಅವರನ್ನು ತನ್ನ ಕಡೆಗೆ ಒಲಿಸಿಕೊಂಡನು. ಕಡೆಗೆ ಗೆಬ್ರಿಯಲನಿಗೆ ಛಡಿ ಶಿಕ್ಷೆಯಾಗಬೇಕೆಂದು ತೀರ್ಮಾನವಾಯಿತು.

' ಗೆಬ್ರಿಯಲ್ ಗಾರ್ಡಿ ಎಂಬ ರೈತನಿಗೆ ಇಪ್ಪತ್ತು ಛಡಿ ಏಟುಗಳನ್ನು ಕೊಟ್ಟು ಶಿಕ್ಷಿಸತಕ್ಕದ್ದೆಂದು ಈ ಕೋರ್ಟಿನವರು ವಿಧಾಯಕಮಾಡುತ್ತಾರೆ. ಛಡಿ ಏಟುಗಳನ್ನು ಡಿಸ್ಟ್ರಿಕ್ಟು ಕೋರ್ಟಿನಲ್ಲಿಯೇ ಕೊಡತಕ್ಕದ್ದು ' ಎಂಬ ತೀರ್ಮಾನವನ್ನು ಗುಮಾಸ್ತನು ಗಟ್ಟಿಯಾಗಿ ಓದಿ ಹೇಳಿದನು.

ಈ ತೀರ್ಪನ್ನು ಕೇಳಿ ಗೆಬ್ರಿಯಲನು ಹೇಗಾಗುತ್ತಾನೋ ನೋಡಬೇಕೆಂಬ ಉದ್ದೇಶದಿಂದ ಇವ್ಯಾನನು ಅವನ ಕಡೆಗೆ ದೃಷ್ಟಿಯನ್ನು ಹೊರಳಿಸಿದನು. ಗೆಬ್ರಿಯಲನು ಮೊದಲಿನಿಂದ ಕಡೆಯವರೆಗೂ ಆಲಿಸುತ್ತಿದ್ದನು.

ಶಿಕ್ಷೆಯನ್ನು ಕೇಳಿ ಮೈ ಬೆಳೆಚಿಕೊಂಡಿತು. ಕೂಡಲೆ ಹಿಮ್ಮುಖವಾಗಿ ತಿರುಗಿ ಹೊರ ಅಂಗಳಕ್ಕೆ ಹೊರಟುಹೋದನು. ಇವ್ಯಾನನೂ ಕೂಡ ತನ್ನ ಕುದುರೆಯನ್ನು ನೋಡಿಕೊಳ್ಳುವುದಕ್ಕಾಗಿ ಹೊರಕ್ಕೆ ಬಂದನು

ಆಗ ಗೆಬ್ರಿಯಲನು 'ಒಳ್ಳೆಯದಿರಲಿ! ನೀನೇನೋ ನನ್ನ ಬೆನ್ನ ಮೇಲೆ ಹೊಡೆಸುತ್ತೀಯೆ, ಅದು ಉರಿಯುತ್ತೆ—ಆಗಲಿ. ಇಷ್ಟರಲ್ಲಿಯೇ ನಿಂದೂ ಏನಾದರೂ ಉರಿಯದೆ ಬಿಟ್ಟೀತೋ! ಎಚ್ಚರವಾಗಿರು!' ಎಂದುಕೊಳ್ಳುತ್ತಿದ್ದದ್ದು ಕೇಳಿಸಿತು

ಇದು ಕಿವಿಗೆ ಬಿದ್ದ ಕೂಡಲೆ ಇವ್ಯಾನನು ಹಿಂತಿರುಗಿ ಬಂದು ಜಡ್ಜಿಗಳನ್ನು ಕುರಿತು 'ಧರ್ಮಪ್ರಭುಗಳೇ, ಅವನು ನನ್ನ ಮನೆಗೆ ಬೆಂಕಿ ಹಾಕುತ್ತಾನಂತೆ ವಿಚಾರಿಸಬೇಕು, ಮಹಾಸ್ವಾಮಿ. ಸಾಕ್ಷಿಗಳೆದುರಿಗೇ ಅವನು ಈ ಮಾತಾಡಿದ್ದಾನೆ' ಎಂದು ದೂರುಮಾಡಿದನು.

ಜಡ್ಜಿಗಳು ಗೆಬ್ರಿಯಲನನ್ನು ಮತ್ತೆ ಕರೆತರಿಸಿದರು.

'ನೀನು ಹಾಗೆ ಅಂದದ್ದುಂಟೆ?'

'ನಾನೇನೂ ಅಂದಿಲ್ಲ ನನ್ನನ್ನು ಬೇಕಾದರೆ ಹೊಡೆಯಬಹುದು. ನಿಮ್ಮ ಕೈಲಿ ಅಧಿಕಾರವಿದೆ ನ್ಯಾಯವೇನೋ ನನ್ನದೇ. ಅದಕ್ಕೇ ನನಗೆ ಶಿಕ್ಷೆ. ಅವನು ಮಾತ್ರ ಏನುಮಾಡಿದರೂ ಅದೇ ಸರಿ'

ಇನ್ನೂ ಏನನ್ನೋ ಹೇಳಬೇಕಂದಿದ್ದನು ಆದರೆ ಅವನ ಮುಖ ಗಂಟುಹಾಕಿಕೊಂಡು ತುಟಿಗಳು ಅದುರುತ್ತಿದ್ದವು. ಗೋಡೆಯ ಕಡೆಗೆ ಮುಖ ತಿರುಗಿಸಿ ನಿಂತುಕೊಂಡನು. ಜಡ್ಜಿಗಳಿಗೂ ಸ್ವಲ್ಪ ಗಾಬರಿಯಾಯಿತು. 'ತನಗೋ, ಇಲ್ಲ ನೆರೆಯವನಿಗೋ ಏನೋ ಕೇಡುಮಾಡುವುದೇ ಸಿದ್ಧ' ಎಂದುಕೊಂಡರು.

ಅವರ ಪೈಕಿ ಒಬ್ಬ ಮುದುಕನು ಅವರಿಬ್ಬರಿಗೂ ಬುದ್ಧಿ ಹೇಳಿದನು

'ಅಪ್ಪಾ ಗೆಳೆಯರಾ, ನನ್ನ ಮಾತು ಸ್ವಲ್ಪ ಕೇಳಿ. ರಾಜಿ ಮಾಡಿಕೊಂಡು ಒಬ್ಬರಿಗೊಬ್ಬರು ಹಿತವಾಗಿರುವುದು ಒಳ್ಳೆಯದು. ಅಯ್ಯಾ

ಗೆಬ್ರಿಯಲ್, ಇಲ್ಲಿ ಕೇಳು ನೀನು ಬಸುರಿ ಹೆಣ್ಣು ಮಗಳನ್ನು ಹಾಗೆ ಹೊಡೆದದ್ದು ಸರಿಯೇ ? ಏನೋ ಭಗವಂತ ದಯತೋರಿಸಿದ ಇಲ್ಲದಿದ್ದರೆ ಎಂಥ ಪಾತಕ ಕೊರಳುಗಟ್ಟುತ್ತಿದ್ದಿತಪ್ಪಾ ! ಇದು ನ್ಯಾಯವೇ, ನೀನೇ ಯೋಚಿಸಿ ನೋಡು ಹಟವನ್ನು ಬಿಟ್ಟು ನಮ್ರನಾಗಿ ಕ್ಷಮಾಪಣೆ ಕೇಳಿಕೊ ನಿನ್ನನ್ನು ಇವನು ಮನ್ನಿಸುತ್ತಾನೆ. ಆಗ ನಾವೂ ತೀರ್ಪನ್ನು ವ್ಯತ್ಯಾಸ ಮಾಡುತ್ತೇವೆ' ಎಂದನು.

ಇದನ್ನು ಕೇಳಿ ಗುಮಾಸ್ತನು 'ಇದು ಸಾಧ್ಯವಿಲ್ಲ, ಸ್ವಾಮಿ ೧೧೭ನೆಯ ಕಟ್ಟಳೆಯ ಪ್ರಕಾರ, ಇವರು ಮೊದಲು ರಾಜಿಮಾಡಿಕೊಳ್ಳಲಿಲ್ಲವಾದ್ದರಿಂದ ಕೋರ್ಟಿನ ತೀರ್ಪು ಆಚರಣೆಗೆ ಬಂದೇ ಬರಬೇಕು' ಎಂದನು

ಆದರೆ ಮುದುಕ ಜಡ್ಜಿ ಈ ಮಾತನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ.

'ಹೀಗೆಲ್ಲ ಹುರುಳಿಲ್ಲದ ಮಾತಾಡಬೇಡ ನಾವು ಭಗವಂತನನ್ನು ಮರೆಯಬಾರದೆಂಬುದು ಈ ಎಲ್ಲ ಕಟ್ಟಳೆಗಳಿಗಿಂತಲೂ ಮೀರಿದ ಹೆಚ್ಚು ಮುಖ್ಯವಾದ ಕಟ್ಟಳೆ. ನಾವು ಒಬ್ಬರಿಗೊಬ್ಬರು ಹಿತವರಾಗಿ ಶಾಂತಿಯಿಂದ ಬಾಳಬೇಕೆಂಬುದು ಆತನ ಆಜ್ಞೆ.

ಹೀಗೆಂದು ಮತ್ತೆ ರೈತರಿಗೆ ಬುದ್ಧಿ ಹೇಳತೊಡಗಿದನು. ಆದರೆ ಅವರು ಸಮಾಧಾನಮಾಡಿಕೊಳ್ಳುವುದಕ್ಕೆ ಒಪ್ಪಲಿಲ್ಲ. ಗೆಬ್ರಿಯಲನು ನಡುವೆ ಬಾಯಿ ಹಾಕಿ,

'ನನಗೆ ಹೆಚ್ಚು ಕಡಮೆ ಐವತ್ತು ವರ್ಷ ವಯಸ್ಸಾಯಿತು. ಮದುವೆಯಾದ ಒಬ್ಬ ಮಗನಿದಾನೆ ನನ್ನ ಜೀವಮಾನದಲ್ಲಿ ಎಂದೂ ಛಡಿ ಏಟು ತಿಂದಿರಲಿಲ್ಲ. ಈ ಹಾಳು ಇವ್ಯಾನಿಂದ ನನ್ನ ಮಾನ ಹೋಗುವ ಗತಿ ಬಂತು ಇವನನ್ನು ಕ್ಷಮಿಸೆಂದು ಬೇಡಿಕೊಳ್ಳಬೇಕಲ್ಲವೇ ! ಆಗಲಿ, ಇಷ್ಟು ಸಾಲದೇ ? ನೆನಪಿನಲ್ಲಿಟ್ಟಿರಲಿ ಇದನ್ನೆಲ್ಲ' ಎಂದನು.

ಗೆಬ್ರಿಯಲನಿಗೆ ಕುತ್ತಿಗೆ ಬಿಗಿಯಿತು, ಮಾತು ಹೊರಡದ ಹಾಗಾಯಿತು, ಹೊರಗೆ ಹೊರಟುಹೋದನು.

ಕೋರ್ಟಿಗೂ ಹಳ್ಳಿಗೂ ಏಳು ಮೈಲಿಗಳು. ಇವ್ಯಾನನು ಮನೆಗೆ ಬಂದಾಗ ಬಹಳ ಹೊತ್ತಾಗಿದ್ದಿತು. ಹೆಂಗಸರು ದನಗಳನ್ನು ಅಟ್ಟಿಕೊಂಡು ಬರುವುದಕ್ಕೆ ಹೋಗಿದ್ದರು. ಮಕ್ಕಳಿನ್ನೂ ಹೊಲ ಗದ್ದೆಗಳಿಂದ ಹಿಂದಿರುಗಿರಲಿಲ್ಲ. ಇವ್ಯಾನನು ಕುದುರೆಯ ತಡಿ ಲಗಾಮುಗಳನ್ನು ಕಳಚಿ ಎಲ್ಲವನ್ನೂ ತೆಗೆದಿರಿಸಿ, ಮನೆಯೊಳಗೆ ಹೋದನು. ಅಲ್ಲಿ ಯಾರೂ ಇರಲಿಲ್ಲ. ಒಂದು ಬೆಂಚಿನಮೇಲೆ ಕುಳಿತು ಯೋಚಿಸತೊಡಗಿದನು. ಕೋರ್ಟಿನಲ್ಲಿ ತೀರ್ಪನ್ನು ಓದಿದ್ದು, ಅದನ್ನು ಕೇಳಿ ಗೆಬ್ರಿಯಲನ ಮುಖ ಬಿಳಿಚಿಕೊಂಡದ್ದು, ಕಡೆಗೆ ಅವನು ಸಹಿಸಲಾರದೆ ಗೋಡೆಯ ಕಡೆಗೆ ಮುಖ ತಿರುಗಿಸಿದ್ದು—ಎಲ್ಲವನ್ನೂ ಸ್ಮರಿಸಿಕೊಂಡನು. ಕೂಡಲೆ ಅವನ ಮನಸ್ಸು ಕರಗಿತು, ಹೃದಯ ಒಡದು ಚೂರುಚೂರಾಯಿತು. ತನಗೇ ಒಂದು ವೇಳೆ ಛಡಿ ಶಿಕ್ಷೆಯಾಗಿದ್ದರೆ, ತನಗೆ ಎಷ್ಟು ನೋವಾಗುತ್ತಿದ್ದಿತೆಂಬುದನ್ನು ಸ್ವಲ್ಪ ಊಹಿಸಿ ನೋಡಿದನು. ಕಡೆಗೆ ಗೆಬ್ರಿಯಲನ ಸ್ಥಿತಿಗೆ ಮರುಗಿ ಪೇಚಾಡಿದನು.

ಅಷ್ಟರಲ್ಲಿ ಅವರಪ್ಪ ಕೆಮ್ಮಿದ ಸದ್ದು ಕೇಳಿಸಿತು. ಮುದುಕನು ಒಲೆಯಮೇಲೆ ಹೊರಳಿ ಹೊರಗಡೆಗೆ ಕಾಲು ಚಾಚಿ, ಮೆಲ್ಲಗೆ ಕೆಳಗಿಳಿದು, ತತ್ತರಿಸಿ ತೆವಳುತ್ತ ಹತ್ತಿರದಲ್ಲಿದ್ದ ಬೆಂಚಿನಮೇಲೆ ಕುಳಿತುಕೊಂಡನು. ಇಷ್ಟಕ್ಕೇ ಅವನಿಗೆ ಸಾಕಾಗಿಹೋಯಿತು. ಮತ್ತೆ ಕೆಮ್ಮಿಗೆ ಪ್ರಾರಂಭವಾಯಿತು, ಬಹಳ ಹೊತ್ತು ನಿಲ್ಲಲೇ ಇಲ್ಲ. ಕಡೆಗೆ ಸಮಾಧಾನಕ್ಕೆ ಬಂದ ಬಳಿಕ ಮೇಜದಮೇಲೆ ಮೊಳಕೈಯೂರಿ 'ಒಳ್ಳೇದು, ಅವನಿಗೆ ಶಿಕ್ಷೆಯಾಯಿತೇ ?' ಎಂದು ಕೇಳಿದನು.

ಇವ್ಯಾನನು 'ಆಯಿತು, ಇಪ್ಪತ್ತು ಛಡಿ ಏಟುಗಳು' ಎಂದನು.

ಮುದುಕನು ತಲೆಯಲ್ಲಾಡಿಸುತ್ತಾ 'ನೀನು ಮಾಡುವುದು ತಪ್ಪು ಇವ್ಯಾನ್, ಬಲು ದೊಡ್ಡ ತಪ್ಪು. ಅವನಿಗಲ್ಲ, ನಿನಗೇ ಬಹಳ ಕೇಡು. ಆಗಲಿ, ಅವನಿಗೇನೋ ಏಟು ಹೊಡೆಯುತ್ತಾರೆ. ಇದರಿಂದ ನಿನಗೇನಪ್ಪ ಸುಖ ?' ಎಂದು ಕೇಳಿದನು.

'ಅವನು ಮತ್ತೆ ಹೀಗೆ ಮಾಡುವುದಿಲ್ಲ.'

'ಹೇಗೆ ಮಾಡುವುದಿಲ್ಲ? ನಿನಗಿಂತ ತಪ್ಪಿನ ಕೆಲಸ ಏನುಮಾಡಿದಾನೆ, ಅವನು?'

ಇವ್ಯಾನನಿಗೆ ಸಿಟ್ಟುಬಂತು. "ಅವನೇನು ಮಾಡಿದನೇ? ಆ ಹುಡುಗಿಯನ್ನು ಸಾಯುವ ಹಾಗೆ ಹೊಡೆದಿದಾನೆ. ಈಗ ಬೇರೆ ನನ್ನ ಮನೆಗೆ ಬೆಂಕಿ ಹಾಕುವುದಾಗಿ ಹೆದರಿಸುತ್ತಾನೆ. ಇದಕ್ಕಾಗಿ ನಾನು ಅವನ ಬಳಿಗೆ ಹೋಗಿ ಕೈಮುಗಿಯಬೇಕು! ಅಲ್ಲವೇ!" ಎಂದು ರೋಷದಿಂದ ನುಡಿದನು.

ಮುದುಕನು ನಿಟ್ಟುಸಿರುಬಿಟ್ಟು ಹೇಳತೊಡಗಿದನು.

'ಇವ್ಯಾನ್ ನೀನು ಸ್ವತಂತ್ರನಪ್ಪ; ಎಲ್ಲೆಂದರಲ್ಲಿ ಸುತ್ತಬಲ್ಲೆ. ನಾನು ಬಹಳ ವರ್ಷಗಳಿಂದಲೂ ಇಲ್ಲಿಯೇ ಒಲೆಯಮೇಲೆ ಬಿದ್ದುಕೊಂಡಿದೇನೆ. ಇದರಿಂದ ನೀನು ಎಲ್ಲವನ್ನೂ ಬಲ್ಲೆಯೆಂದೂ ನನಗೆ ಏನೂ ತಿಳಿಯದೆಂದೂ ನಿನ್ನ ಭಾವನೆ ಇಲ್ಲ, ಮಗನೇ, ನಿನಗೇನೂ ಗೊತ್ತಿಲ್ಲ. ದ್ವೇಷದಿಂದ ಕುರುಡಾಗಿ ನಿನಗೆ ಏನೂ ಕಾಣುವ ಹಾಗಿಲ್ಲ ಅವರಿವರ ಪಾಪಗಳು ನಿನ್ನ ಕಣ್ಣಿಗೆ ಕಾಣುತ್ತವೆ ಆದರೆ ನಿನ್ನ ಪಾಪಗಳನ್ನು ಮಾತ್ರ ಬೆನ್ನ ಹಿಂದೆ ಬಿಟ್ಟುಬಿಡುವೆ. 'ಅವನು ತಪ್ಪು ಮಾಡುತ್ತಾನೆ' ಎಂದು ಏತಕ್ಕೆ ಹೇಳಬೇಕು? ತಪ್ಪುಮಾಡುವವನು ಅವನೊಬ್ಬನೇ ಆಗಿದ್ದರೆ, ಈ ಪ್ರಪಂಚದಲ್ಲಿ ಅನ್ಯಾಯವೆಂಬುದೇ ಇರುತ್ತಿರಲಿಲ್ಲ ಅನ್ಯಾಯ ಒಬ್ಬನಿಂದ ಹುಟ್ಟುವುದಿಲ್ಲ, ಅದು ಹುಟ್ಟಬೇಕಾದರೆ ಇಬ್ಬರಿರಲೇಬೇಕು. ಅವನ ತಪ್ಪುಗಳನ್ನು ಮಾತ್ರ ನೋಡಬಲ್ಲೆ. ನಿನ್ನ ತಪ್ಪುಗಳು ನಿನಗೆ ಕಾಣುವುದೇ ಇಲ್ಲ. ಅವನೊಬ್ಬನೇ ತಪ್ಪಿತಸ್ಥನಾಗಿದ್ದು, ನೀನು ಮಾತ್ರ ಒಳ್ಳೆಯವನಾಗಿದ್ದರೆ, ಆಗೆಂದಿಗೂ ಅನ್ಯಾಯವಿರುತ್ತಿರಲಿಲ್ಲ ಅವನ ಗಡ್ಡವನ್ನು ಕಿತ್ತವರು ಯಾರು? ಅವನ ಹುಲ್ಲು ಕದ್ದವರು ಯಾರು? ಅವನನ್ನು ಕೋರ್ಟಿಗೆಳೆದವರು ಯಾರು? ಈಗ ಇದನ್ನೆಲ್ಲ ಅವನ ಮೇಲೆಯೇ ಹೊರಿಸುತ್ತಿರುವೆ. ನಿನ್ನ ಒದುಕೇ

ಸರಿಯಾಗಿಲ್ಲ. ಇಲ್ಲಿಯೇ ಎಲ್ಲ ಅನ್ಯಾಯವೂ ತಲೆಯೆತ್ತುತ್ತಿರುವುದು. ನಾನು ಬೇರೆ ಹೀಗೆ ಬಾಳ್ವೆ ಮಾಡುತ್ತಿರಲಿಲ್ಲ. ಹೀಗೆ ಮಾಡುವಂತೆ ನಿನಗೆ ಕಲಿಸಿಕೊಡಲೂ ಇಲ್ಲ. ನಾನೂ ಗೆಬ್ರಿಯಲನ ಅಪ್ಪ, ಆ ಮುದುಕನೂ ಹೀಗೆಯೇ ಬಾಳ್ವೆ ಮಾಡುತ್ತಿದ್ದೆವೆಂದು ತಿಳಿದೆಯೋ? ನಾವು ಒಳ್ಳೆಯ ನೆರೆಯುವರು ಹೇಗಿರಬೇಕೋ ಹಾಗಿದ್ದೆವು. ಅವರ ಮನೆಯಲ್ಲಿ ಹಿಟ್ಟು ಮುಗಿದುಹೋದರೆ ಅವನ ಹೆಂಡತಿ ಬಂದು 'ಮಾವಾ, ಮಾವಾ, ನಮಗೆ ಸ್ವಲ್ಪ ಹಿಟ್ಟುಬೇಕು' ಎಂದು ಕೇಳುತ್ತಿದ್ದಳು. ನಾನು, 'ಅದಕ್ಕೇನಂತೆ ಉಗ್ರಾಣಕ್ಕೆ ಹೋಗಿ ಎಷ್ಟು ಬೇಕೋ ಅಷ್ಟು ತೆಗೆದುಕೊ' ಎಂದು ಬಿಡುತ್ತಿದ್ದೆ. ಅಥವಾ ಅವರ ಮನೆಯಲ್ಲಿ ಕುದುರೆ ಕಾಯುವವರು ಯಾರೂ ಇಲ್ಲದಿದ್ದರೆ, 'ಲೋ ವಾನ್ಯಾ, ಹೋಗಿ ಅವರ ಕುದುರೆಗಳನ್ನು ನೋಡಿಕೊಳ್ಳುತ್ತಿರು' ಎಂದು ನಿನಗೆ ಹೇಳುತ್ತಿದ್ದೆ. ನನಗೇನಾದರೂ ಬೇಕಾಗಿದ್ದರೆ ಅವರ ಮನೆಗೆ ಹೋಗಿ 'ಗಾರ್ಡೀ, ಗಾರ್ಡೀ, ನನಗೆ ಇಂಥದು ಬೇಕಾಗಿದೆಯಣ್ಣ' ಎಂದು ಕೇಳುತ್ತಿದ್ದೆ. ಅವನು, 'ಅದಕ್ಕೇನು, ಏನು ಬೇಕೋ ಅದನ್ನು ತಗೊಳಣ್ಣ' ಎಂದು ಬಿಡುತ್ತಿದ್ದನು. ನಮನಮಗೆ ಇಷ್ಟು ಸಲಿಗೆಯಿತ್ತು. ನೀನೂ ಅದೇರೀತಿ ಆನಂದವಾಗಿರಬಹುದಾಗಿತ್ತು. ಈಗ ನೋಡು, ನೀನೇನು ಮಾಡಿದೆ? ಮೊನ್ನೆ ದಿನ ಇಲ್ಲಿ ಬಂದಿದ್ದನಲ್ಲ ಒಬ್ಬ ಸಿಪಾಯಿ, ಅವನು ಪ್ಲೆವ್ನಾ ಯುದ್ಧದ ವಿಚಾರವಾಗಿ ಮಾತಾಡುತ್ತಿದ್ದನಷ್ಟೆ. ನಿಮ್ಮಿಬ್ಬರಿಗೂ ಆ ಪ್ಲೆವ್ನಾ ಕದನಕ್ಕಿಂತ ಬಿರುಸಾದ ಯುದ್ಧ ನಡೆಯುತ್ತಿದೆ. ಇದೇಯೋ ಬಾಳ್ವೆ ಮಾಡುವ ರೀತಿ? ನಿಜವಾದ ಜೀವನದ ಸ್ವರೂಪ? ಅಬ್ಬ! ಎಂಥ ಪಾಪ ಜೀವನವಪ್ಪ ಇದು! ನೀನು ಮನೆಗೆ ಯಜಮಾನ. ಮನೆಯ ಹೆಂಗಸರಿಗೂ ಮಕ್ಕಳಿಗೂ ಏನು ಕಲಿಸಿಕೊಟ್ಟೆಯೆಂದು ಯಾರಾದರೂ ಕೇಳಿದರೆ ಏನು ಹೇಳುತ್ತೀಯ? ಜಗಳವಾಡುವುದು, ಹಗೆ ಸಾಧಿಸುವುದು—ಎಂದಲ್ಲವೇ ಹೇಳಬೇಕು? ಅವತ್ತು, ಟರಸ್ಕ, ಆ ಚಿಕ್ಕ ಹುಡುಗ, ನೆರೆಮನೆಯ ಅರೀನಳ ಸಂಗಡ ಜಗಳಕಾದಿ ಅವಳನ್ನು

ಬೈದು ಆಣೆ ಇಡುತ್ತಿದ್ದಾಗ, ಅವರಮ್ಮ ಅದನ್ನು ಕಂಡು ಆನಂದಪಟ್ಟು ನಗುತ್ತಿದ್ದಳಲ್ಲಾ ! ಅದು ಸರಿಯೋ ? ಇದಕ್ಕೆಲ್ಲ ನೀನೇ ಜವಾಬ್ದಾರ.

ನಿನ್ನ ಆತ್ಮದ ವಿಚಾರವಾಗಿ ಸ್ವಲ್ಪ ಯೋಚಿಸಿ ನೋಡು. ನೀನು ಒಂದು ಆಡಿ ನಾನು ಹಿಂದಿರುಗಿ ಎರಡು ಆಡಿದರೆ ಅದು ಚಂದವೇ ? ನೀನು ನನ್ನನ್ನು ಹೊಡೆದು ನಾನು ಹಿಂದಿರುಗಿ ಹೊಡೆದರೆ ಅದು ಸರಿಯೇ ? ಅಲ್ಲ ಮಗನೇ, ಹೀಗಲ್ಲ ಕ್ರಿಸ್ತನು ಭೂಮಿಯಮೇಲೆ ಒದುಕಿದ್ದಾಗ ನಮ್ಮಂಥ ಮೂಢರಿಗೆ ಹೀಗೆ ಹೇಳಿಕೊಡಲಿಲ್ಲ. ಯಾರಾದರೂ ನಿನ್ನ ವಿಷಯದಲ್ಲಿ ಕಟ್ಟ ಮಾತಾಡಿದರ ಅವರಿಗೆ ಪ್ರತಿಯಾಗಿ ಆಡಲೇ ಬೇಡ. ಆಗ ಅವರ ಅಂತಃಕರಣವೇ ಅವರಿಗೆ ಪೆಟ್ಟು ಕೊಡುತ್ತದೆ. ಇದೇ, ಮಗನೇ, ಆತ ನಮಗೆ ಕಲಿಸಿಕೊಟ್ಟದ್ದು ಯಾರಾದರೂ ನಿನ್ನ ಕನ್ನೆಗೆ ಹೊಡೆದರೆ 'ನಾನು ಇದಕ್ಕ ತಕ್ಕವನಂದು ತಿಳಿದರೆ ಇನ್ನೂ ಹೊಡೆಯಪ್ಪಾ' ಎಂದು ಮತ್ತೊಂದು ಕನ್ನೆಯನ್ನೂ ತೋರಿಸು. ಆಗ ಅವನ ಅಂತಃಕರಣವೇ ನೊಂದು, ತಾನಾಗಿಯೇ ಒಗ್ಗಿ ನಿನ್ನ ಮಾತಿಗೆ ಕಿವಿಗೊಡುತ್ತಾನೆ. ಆತನು ನಮಗೆ ಕಲಿಸಿದ್ದು ಇದೇ ಹೊರತು ಭುಜ ತಟ್ಟಿಕೊಂಡು ಹೊಡೆದಾಡುವುದನ್ನಲ್ಲ. ಅದೇಕ, ಮಾತಾಡುವುದನ್ನೇ ನಿಲ್ಲಿಸಿದೆ ? ನಾನು ಹೇಳುವುದು ಸರಿಯೋ ಅಲ್ಲವೊ ?''

ಇವ್ಯಾನನು ಇದನ್ನೆಲ್ಲ ಆಲಿಸಿದನು. ಆದರೆ ಮೌನವಾಗಿದ್ದನು. ಮುದುಕನಿಗೆ ಮತ್ತೆ ಕೆಮ್ಮು ಹತ್ತಿತು. ಅದು ನಿಂತು ಉಸಿರು ಹತೋಟಿಗೆ ಒಂದಮೇಲೆ ಮತ್ತೆ ಹೇಳತೊಡಗಿದನು.

'ಕ್ರಿಸ್ತನು ನಮಗೆ ಕೆಟ್ಟದ್ದೇನಾದರೂ ಕಲಿಸಿಕೊಟ್ಟನೆಂದು ತಿಳಿದೆಯಾ ? ಆತನು ಹೇಳಿದ್ದೆಲ್ಲ ನಮಗೆ ಒಳ್ಳೆಯದಾಗಲೆಂದೇ ಕಣಪ್ಪಾ. ಕಡೆಗೆ ನಿನ್ನ ಈಗಿನ ಜೀವನವನ್ನೇ ಯೋಚಿಸಿಕೊ. ನಿಮ್ಮಿಬ್ಬರಿಗೂ ಈ ಪ್ಲೇವ್ನಾ ಕದನ ಪ್ರಾರಂಭವಾದ ಮೇಲೆ ನಿನ್ನ ಬಾಳು ಮೇಲಾಯಿತೋ ಕೀಳಾಯಿತೋ ? ಕೋರ್ಟಿನ ವ್ಯವಹಾರಗಳಿಗೆ ನೀನು ಮಾಡಿರುವ ವೆಚ್ಚ

ವೆಷ್ಟು ? ಊಟ ಉಡಿಗೆಗೆಷ್ಟು ? ಪ್ರಯಾಣಕ್ಕೆಷ್ಟು ? ಎಂಬುದನ್ನೆಲ್ಲ ಪ್ರಯತ್ನಪಟ್ಟು ಲೆಕ್ಕಮಾಡಿ ನೋಡು. ನಿನ್ನ ಮಕ್ಕಳು ಗೂಳಿಗಳ ಹಾಗೆ ಕೊಬ್ಬಿ ಬೆಳೆದಿದಾರೆ. ಅವರು ಇಷ್ಟು ಹೊತ್ತಿಗೆ ಸುಖವಾಗಿ ಬಾಳಿಕೊಂಡು ನಿನಗೆ ನೆರವಾಗಬೇಕಾಗಿತ್ತು. ಇದಕ್ಕೆ ಬದಲಾಗಿ ಈಗ ನಿನ್ನ ಸಂಪತ್ತು ಕರಗುತ್ತಿದೆಯಲ್ಲಪ್ಪಾ ! ಅದೇಕೆ ಹೀಗಾಯಿತು ? ಯಾವಾಗಲೂ ಒಂದೇ ಕಾರಣ. ಎಲ್ಲ ನಿನ್ನ ಆ ಹಾಳು ಜಂಭದಿಂದ ಈಗ ನಿನ್ನ ಮಕ್ಕಳ ಸಂಗಡ ಹೊಲಕ್ಕೆ ಹೋಗಿ ಉತ್ತು ಬಿತ್ತಬೇಕಾಗಿತ್ತು. ಇದಕ್ಕೆ ಬದಲಾಗಿ ನೀನು ಆಗದವರಿಗೆ ಕೇಡುಮಾಡಬೇಕೆಂದು ಕೋರ್ಟುಗಳನ್ನೂ ಲಾಯರನ್ನೂ ಹುಡುಕಿಕೊಂಡು ಅಲೆಯುತ್ತಿದೀಯ. ಕಾಲಕ್ಕೆ ಸರಿಯಾಗಿ ಉತ್ತು ಬಿತ್ತಿ ಮಾಡದೆ ಹೋದರೆ ಆ ಭೂಮಿತಾಯಿ ತಾನೇ ಏನು ಫಲ ಕೊಟ್ಟಾಳು ? ಜವೆಗೋಧಿಯ ಬೆಳೆ ಏಕೆ ಹಾಳಾಯಿತು ? ಯಾವಾಗ ಬಿತ್ತಿದೆ ಅದನ್ನ ? ಪಟ್ಟಣದಿಂದ ಬಂದ ಮೇಲಲ್ಲವೇ ? ವ್ಯವಹಾರದಿಂದ ತಾನೇ ನಿನಗೆ ಬಂದ ಲಾಭವೇನು ? ನಿನ್ನ ಕಷ್ಟ ಹೆಚ್ಚಾಗಿ ಬಾಳು ಇನ್ನಷ್ಟು ತೊಡಕಾಯಿತು, ಅಷ್ಟೇ ತಾನೇ ! ಮಕ್ಕಳನ್ನೂ ಕರದುಕೊಂಡು ನಿನ್ನ ಕೆಲಸದಲ್ಲಿ ನೀನು ಮನಸ್ಸಿಟ್ಟು, ಹೊಲಗದ್ದೆ ಉತ್ತುಕೊಂಡು, ಮನೆಯಕಡೆ ಎಚ್ಚರವಾಗಿ ನೋಡಿಕೊಳ್ಳುತ್ತ, ಯಾರಾದರೂ ತಪ್ಪುಗಿಪ್ಪು ಮಾಡಿದರೆ ಭಗವಂತನ ಹೆಸರು ಹೇಳಿ ಅವರನ್ನು ಕ್ಷಮಿಸುತ್ತ ಅದೇಕ ಸುಖವಾಗಿರಬಾರದು ? ಹಾಗೆ ಮಾಡಿದರೆ ನಿನ್ನ ಕೆಲಸಕ್ಕ ಹೆಚ್ಚು ಹೊತ್ತು ಸಿಕ್ಕುತ್ತದೆ, ಮನಸ್ಸೂ ನೆಮ್ಮದಿಯಾಗುತ್ತದೆ.'

ಇವ್ಯಾನನು ಕೇಳುತ್ತಲೇ ಇದ್ದನು.

'ಈ ಮುದುಕನ ಮಾತನ್ನು ಕೇಳು ವ್ಯಾನ್ಯ. ಕೇಳಿದರೆ ಒಳ್ಳೆಯದು. ಆ ಬೂದು ಕುದುರೆಗೆ ತಡಿಹಾಕಿ, ಆದಷ್ಟು ಬೇಗ ಮತ್ತೆ ಕೋರ್ಟಿಗೆ ಹೋಗಿ ಈ ರಂಪವನ್ನೆಲ್ಲ ನಿಲ್ಲಿಸಿಬಿಡು. ನಾಳೆ ಬೆಳಗ್ಗೆ ಗೆಬ್ರಿಯಲನ ಬಳಿಗೆ ಹೋಗಿ ರಾಜಿಮಾಡಿಕೊಂಡು ಬಿಡು. ಆಮೇಲೆ ಅವನನ್ನು

ಇಲ್ಲಿಗೆ ಕರೆದುಕೊಂಡು ಬಾ. ನಾಳೆ ಹೇಗಿದ್ದರೂ ಹಬ್ಬ, ಯೇಸುವಿನ ತಾಯಿಯ ಹುಟ್ಟಿದ ಹಬ್ಬ. ಒಂದು ಸೀಸಿ ಬ್ರಾಂದಿ ಕೊಂಡು ತಂದು ಅವನಿಗೆ ಊಟಕ್ಕೆ ಹೇಳಿ ಜಗಳವನ್ನೆಲ್ಲ ಮುಗಿಸಿಬಿಡು ಇನ್ನು ಮುಂದೆ ಎಂದೂ ಹೀಗೆ ಅನ್ಯಾಯವಾಗಿ ಕಾದುವುದಿಲ್ಲವೆಂದು ಗಟ್ಟಿ ಮನಸ್ಸು ಮಾಡಿಬಿಡು. ಹೆಂಗಸರಿಗೂ ಹಾಗೆಯೇ ಮಾಡುವಂತೆ ಹೇಳು'

ಇವ್ಯಾನನು ದೀರ್ಘವಾಗಿ ಉಸುರ್ಗರೆದು 'ನಿಜ ಮುದುಕ ಹೇಳು ವುದು ನ್ಯಾಯ' ಎಂದು ಕೂಂಡನು. ಮನಸ್ಸು ಹಗುರವಾಯಿತು. ಆದರೆ ಒಂದು ತೊಡಕು ಮಾತ್ರ ಅವನನ್ನು ಬಾಧಿಸುತ್ತಿತ್ತು. 'ಜಗಳವನ್ನು ತಪ್ಪಿಸು ವುದು ಹೇಗೆ? ಗೆಬ್ರಿಯಲನ ಸಂಗಡ ಸಮಾಧಾನ ಮಾಡಿಕೊಳ್ಳುವುದು ಹೇಗೆ?' ಎಂಬುದು ಒಗೆ ಹರೆಯಲಿಲ್ಲ.

ಮುದುಕನು ಅವನ ಮನಸ್ಸನ್ನು ಊಹಿಸಿ ತಿಳಿದುಕೊಂಡು 'ಹೋಗು, ವ್ಯಾನ್ಯಾ, ಈಗಲೇ ಹೋಗು ತಡಮಾಡಬೇಡ. ಹೊಗೆಯಾ ಡುವಾಗಲೇ ಬೆಂಕಿಯನ್ನಾರಿಸಿಬಿಡು ಹಬ್ಬುವುದಕ್ಕೆ ಅವಕಾಶಕೊಟ್ಟರೆ ಆಮೇಲೆ ವಿಪರೀತವಾದೀತು.' ಎಂದನು

ಇನ್ನೂ ಏನೋ ಹೇಳಬೇಕೆಂದವನಿಷ್ಟು, ಆದರೆ ಅವಕಾಶವಾಗಲಿಲ್ಲ, ಹೆಂಗಸರು ಒಂದು ಹರಟುವುದಕ್ಕೆ ಮೊದಲುಮಾಡಿದರು. ಅವರಿಗಾಗಲೇ ಎಲ್ಲ ಗೊತ್ತಾಗಿದ್ದಿತು. ಗೆಬ್ರಿಯಲನಿಗೆ ಛಡಿ ಶಿಕ್ಷೆಯಾದದ್ದು, ಅವನು ತಮ್ಮ ಮನೆಗೆ ಬೆಂಕಿಹಾಕುವುದಾಗಿ ಹೆದರಿಸಿದ್ದು ಎಲ್ಲವನ್ನೂ ಕೇಳಿದ್ದರು. ನಡೆದದ್ದನ್ನೆಲ್ಲ ತಿಳಿದುಕೊಂಡು ಜೊತೆಗೆ ತಾವಷ್ಟು ಸೇರಿಸಿಕೊಂಡು, ಕಾವಲಿ ನಲ್ಲಿಯೇ ಗೆಬ್ರಿಯಲನ ಮನೆಯ ಹೆಂಗಸರ ಸಂಗಡ ಜಗಳವಾಡಿದರು. ಗೆಬ್ರಿಯಲನ ಸೊಸೆ ಪೋಲೀಸಿನವರ ಬೆದರಿಕೆ ತೋರಿಸಿದಳು. ಪೋಲೀಸಧಿ ಕಾರಿ ಗೆಬ್ರಿಯಲನ ಕಡೆಯವನು, ವ್ಯವಹಾರದಲ್ಲಿ ಅವನಿಗೇ ಅನುಕೂಲ ವಾಗುವಂತೆ ಎಲ್ಲವನ್ನೂ ತಿರುಗಿಸಿ ಬಿಡುತ್ತಿದ್ದನು. ಮಠದ ಉಪಾಧ್ಯನಾಗಲೇ ಚಕ್ರವರ್ತಿಗೆ ಒಂದು ಅರ್ಜಿಯನ್ನು ಬರೆದಿಟ್ಟನು. ಆ ಅರ್ಜಿಯಲ್ಲಿ

ಎಲ್ಲವನ್ನೂ ವಿವರವಾಗಿ ವರ್ಣಿಸಿದ್ದನು. ಗಾಡಿಯ ಕಡಾಣಿಗಳನ್ನೂ ಮರೆತಿರತಿಲ್ಲ, ತೋಟದ ಹಣ್ಣುಗಳನ್ನೂ ಬಿಟ್ಟಿರಲಿಲ್ಲ.

ಮೃದುವಾಗುತ್ತ ಬಂದಿದ್ದ ಇವ್ಯಾನನ ಹೃದಯವು ಹೆಂಗಸರ ಮಾತುಗಳನ್ನು ಕೇಳಿದಮೇಲೆ ಕಠಿನವಾಯಿತು. ಗೆಬ್ರಿಯಲನೊಡನೆ ಸಮಾಧಾನ ಬೇಡವಾಯಿತು.

ಯಜಮಾನನಾದವನಿಗೆ ಯಾವಾಗಲೂ ಕೈ ತುಂಬ ಕೆಲಸವಿದ್ದೇ ಇರುತ್ತದೆ. ಇವ್ಯಾನನು ಹೆಂಗಸರ ಸಂಗಡ ಮಾತಿಗೆ ಕೂರಲಿಲ್ಲ, ಎದ್ದು ಕೊಟಡಿಯನ್ನು ಬಿಟ್ಟು ಉಗ್ರಾಣದ ಮನೆಗೆ ಹೋಗಿ ಅಲ್ಲಿಂದ ಕೊಟ್ಟಿಗೆಗೆ ಹೋದನು ಅಲ್ಲಿನ ಕೆಲಸ ಮುಗಿದ ಮೇಲೆ ಅಂಗಳಕ್ಕೆ ಬಂದನು. ಅಷ್ಟರಲ್ಲಿ ಹೊತ್ತು ಮುಳುಗಿತ್ತು. ಹುಡುಗರು ಆಗತಾನೆ ಹೊಲಗದ್ದೆಗಳಿಂದ ಬರುತ್ತಿದ್ದರು. ಅವರು ಮುಂಗಾರು ಜೋಳವನ್ನು ಬಿತ್ತುತ್ತಿದ್ದರು. ಇವ್ಯಾನನು ಅವರು ಹೊಲದಲ್ಲಿ ಮಾಡಿದ್ದನ್ನೆಲ್ಲ ಕೇಳಿ ತಿಳಿದುಕೊಂಡು ನೊಗ, ಕೂರಿಗೆ, ಮುಂತಾದ ಉಪಕರಣಗಳನ್ನು ಅದರದರ ಜಾಗದಲ್ಲಿಡುವುದಕ್ಕೆ ಅವರಿಗೆ ಸ್ವಲ್ಪ ನೆರವಾಗಿ, ಹರಿದುಹೋಗಿದ್ದ ಒಂದು ಕುದುರೆಯ ಜೀನನ್ನು ಸರಿಮಾಡುವುದಕ್ಕಾಗಿ ಬೇರೆ ತೆಗೆದಿರಿಸಿದನು. ಆ ಮೇಲೆ ಕೊಟ್ಟಿಗೆಗೆ ಹೋಗಿ ಒಂದೆರಡು ಕಂಬಗಳನ್ನು ಕತ್ತಬೇಕೆಂದು ನೋಡಿದನು. ಆದರೆ ಅಷ್ಟು ಹೊತ್ತಿಗೆ ತುಂಬ ಕತ್ತಲೆಯಾದದ್ದರಿಂದ ಕಂಬಗಳ ಕೆಲಸ ನಾಳೆಗಿರಲೆಂದು ಅದನ್ನು ಕೈಬಿಟ್ಟು ದನಗಳಿಗೆ ಮೇವು ಹಾಕಿದನು. ಟರಸ್ಕನು ರಾತ್ರಿಯ ಮೇವಿಗಾಗಿ ಕಾವಲಿಗೆ ಹಿಡಿದುಕೊಂಡು ಹೋಗಬೇಕಾದ ಕುದುರೆಗಳನ್ನು ಹೊರಕ್ಕೆ ಅಟ್ಟಿದನು. ಆಮೇಲೆ ಬಾಗಿಲು ಮುಚ್ಚಿ ಅಗುಳಿ ಹಾಕಿಕೊಂಡನು. 'ಇನ್ನು ಉಂಡು ಮಲಗುವುದೇ ಸರಿ' ಎಂದು ಯೋಚಿಸುತ್ತಾ ಜೀನನ್ನು ಹಿಡಿದುಕೊಂಡು ಮನೆಯಕಡೆ ತಿರುಗಿದನು. ಗೆಬ್ರಿಯಲನನ್ನೂ ಅವರಪ್ಪ ಹೇಳುತ್ತಿದ್ದ ಮಾತುಗಳನ್ನೂ ಪೂರ್ತಿಯಾಗಿ ಮರೆತೇಬಿಟ್ಟಿದ್ದನು. ಇನ್ನೇನು ಅವನು ಬಾಗಿಲ ಹಿಡಿಯನ್ನು ಒಳಕ್ಕೆ ತಳ್ಳಬೇಕು, ಅಷ್ಟರಲ್ಲಿ ಬೇಲಿಯ ಆಚೆ

ಗೆಬ್ರಿಯಲನು ಆಣೆಯಿಟ್ಟುಕೊಂಡು ಕರ್ಕಶಸ್ವರದಿಂದ ಮಾತಾಡುತ್ತಿದ್ದದ್ದು ಕೇಳಿಸಿತು. ಅವನು 'ಅಯ್ಯೋ, ಅವನ್ನ ರಾವು ಬಡುಕೊಂಡ ಹೋಗ! ಕೈಗೆ ಸಿಕ್ಕಲಿ, ಕೊಂದು ಹಾಕಿಬಿಡುತ್ತೇನೆ' ಎಂದು ಯಾರಿಗೋ ಕೂಗಿ ಹೇಳುತ್ತಿದ್ದನು. ಈ ಮಾತುಗಳನ್ನು ಕೇಳಿ ಇವ್ಯಾನನ ಹೃದಯದಲ್ಲಿ ಅಡಗಿದ್ದ ಹಿಂದಿನ ದ್ವೇಷವೆಲ್ಲ ಉಕ್ಕಿ ಹರಿಯಿತು. ಸ್ವಲ್ಪ ಹೊತ್ತು ಅಲ್ಲಿಯೇ ನಿಶ್ಚಲನಾಗಿ ನಿಂತು ಗೆಬ್ರಿಯಲನ ಮಾತುಗಳನ್ನೆಲ್ಲ ಕೇಳಿ, ತಲೆಯನ್ನು ತೂಗುತ್ತ ಮನೆಯೊಳಕ್ಕೆ ಹೋದನು. ಒಳಗೆ ಒಂದು ದೀಪ ಉರಿಯುತ್ತಿದ್ದಿತು. ಅವನ ಸೊಸೆ ಒಂದು ಮೂಲೆಯಲ್ಲಿ ನೂಲುತ್ತಾ ಕುಳಿತಿದ್ದಳು. ಹೆಂಡತಿ ಅಡಿಗೆಮಾಡುತ್ತಿದ್ದಳು. ಹಿರಿಯ ಮಗನು ಪಾಪಾಸಿಗೆ ಚರ್ಮದ ಪಟ್ಟಿಗಳನ್ನು ಹೆಣೆಯುತ್ತಿದ್ದನು, ಎರಡನೆಯವನು ಮೇಜದ ಹತ್ತಿರ ಕೂತು ಓದುತ್ತಿದ್ದನು.

ಎಲ್ಲ ಸುಖವಾಗಿ ಆನಂದದಿಂದ ಕಾಲ ಕಳೆಯಬಹುದಾಗಿತ್ತು. ಆದರೆ ಮಾಡುವುದೇನು? ಪಕ್ಕದಲ್ಲಿ ಅದೊಂದು ಮುಳ್ಳು—ಆ ಕೆಟ್ಟ ನೆರೆ!

ಇವ್ಯಾನನು ಕ್ರೋಧದಿಂದ ಬುಸುಗುಟ್ಟುತ್ತ ಒಳಗೆ ಬಂದನು. ಮೇಜದಮೇಲೆ ಕೂತಿದ್ದ ಬೆಕ್ಕನ್ನು ಹಿಡಿದುಕೊಂಡು ರಪ್ಪನೆ ನೆಲಕ್ಕೆ ಬಡಿದನು; ಬಟ್ಟೆ ಒಗೆಯುವ ಡಬ್ಬವನ್ನು ಅದರ ಜಾಗದಲ್ಲಿಟ್ಟಿರಲಿಲ್ಲವೆಂದು ಹೆಂಗಸರಮೇಲೆ ರೇಗಿ ಬೈದುಬಿಟ್ಟನು. ಕೆಳಗೆ ಕುಳಿತು ಜೀನನ್ನು ಸರಿಮಾಡತೊಡಗಿದನು. ಮನಸ್ಸಿನಲ್ಲಿ ಏನೋ ಒಂದು ಬಗೆಯ ಸಂಕಟ. ಏನು ಮಾಡಿದರೂ ಗೆಬ್ರಿಯಲನ ಸುದ್ದಿ ಮರೆಯಲೊಲ್ಲದು, ಕೋರ್ಟಿನಲ್ಲಿ ಅವನು ಹಾಕಿದ ಬೆದರಿಕೆ, ಈಗತಾನೆ ಕೊಂದು ಹಾಕುವೆನೆಂದು ಗಟ್ಟಿಯಾಗಿ ಕೂಗಿದ ಕೂಗು—ಇವು ಅವನ ಮನಸ್ಸನ್ನೆಲ್ಲ ಮುಚ್ಚಿಬಿಟ್ಟಿದ್ದವು.

ಯಜಮಾನಿ ಟರಸ್ಕನಿಗೆ ಬಡಿಸಿದಳು. ಅವನು ಉಂಡು ಒಂದು ನಿಲುವಂಗಿಯನ್ನು ತೊಟ್ಟು, ಅದರಮೇಲೆ ತುಬಟದ ಕವಚವನ್ನು ಹಾಕಿಕೊಂಡು, ನಡುಕಟ್ಟು ಕಟ್ಟಿ, ರೊಟ್ಟಿ ಬುತ್ತಿಯನ್ನು ತೆಗೆದುಕೊಂಡು ಕುದುರೆ

ಗಳನ್ನು ನೋಡಿಕೊಳ್ಳುವುದಕ್ಕೆ ಹೊರಟುಹೋದನು. ಅವನ ಜೊತೆಯಲ್ಲಿ ಸ್ವಲ್ಪದೂರ ಹೋಗಿ ಬರಬೇಕೆಂದು ಹಿರಿಯ ಮಗನು ಹವಣಿಸುತ್ತಿದ್ದನು. ಆಗ ಇವ್ಯಾನನು ತಾನೇ ಹೊರಟನು.

ಹೊರಗೆ ಕಪ್ಪನೆಯ ಕತ್ತಲೆ. ನೆತ್ತಿಯಮೇಲೆ ದೊಡ್ಡದೊಡ್ಡ ಮೋಡ ಗಳು ; ಗಾಳಿ ಬಲವಾಗಿ ಬೀಸುತ್ತಿದ್ದಿತು. ಇವ್ಯಾನನು ಬೀದಿಗೆ ಒಂದು ಮಗನನ್ನು ಕುದುರೆಯ ಮೇಲೆ ಕೂರಿಸಿ ಮರಿಯನ್ನು ಅದರ ಜೊತೆಯಲ್ಲಿಯೇ ಅಟ್ಟಿ ಮಗನ ಕಡೆಗೆ ನೋಡುತ್ತಾ ಅಲ್ಲಿಯೇ ನಿಂತನು. ಟರಸ್ಕನು ಓಣಿ ಯನ್ನು ದಾಟುವಷ್ಟರಲ್ಲಿ ಜೊತೆಯ ಹುಡುಗರು ಒಬ್ಬೊಬ್ಬರಾಗಿ ಬಂದು ಕೂಡಿಕೊಂಡರು. ಎಲ್ಲರೂ ಒಟ್ಟಾಗಿ ಮಾತಾಡಿಕೊಳ್ಳುತ್ತಾ ಹೊರಟು ಹೋದರು. ಅವರ ಮಾತು ಕೇಳದಂತಾದ ಮೇಲೂ ಇವ್ಯಾನನು ಅಲ್ಲಿಯೇ ಕದಲದೆ ನಿಂತುಬಿಟ್ಟನು. 'ನಿಂದೂ ಏನಾದರೂ ಉರಿಯದೆ ಬಿಟ್ಟೀತೋ, ಎಚ್ಚರವಾಗಿರು!' ಎಂದು ಗೆಬ್ರಿಯಲನು ಆಡಿದ್ದ ಮಾತು ಅವನ ಕಿವಿ ಯಲ್ಲಿ ಇನ್ನೂ ಘೋರ್ಗರೆಯುತ್ತಲೇ ಇದ್ದಿತು.

'ತನಗೇನಾದೀತೆಂದು ಅವನು ಲಕ್ಷ್ಯಮಾಡುವುದಿಲ್ಲ. ಈಗ ಬೇಸಿಗೆ ಕಾಲ, ಗಾಳಿಯೂ ಎದ್ದಿದೆ. ಹೇಗಾದರೂ ಹಿತ್ತಲ ಕಡೆಯಿಂದ ನುಸುಳಿಕೊಂಡು ಬಂದು ಯಾವುದಾದರೂ ಒಂದು ಒಣಗಿದ ಪದಾರ್ಥಕ್ಕೆ ಬೆಂಕಿ ತಗುಲಿಸಿ ತೆಪ್ಪನೆ ತಪ್ಪಿಸಿಕೊಂಡು ಹೋದಾನು. ಹೀಗೆ ಅವನು ಎಲ್ಲವನ್ನೂ ಸುಟ್ಟು ಬೂದಿಮಾಡಿದರೂ ಅದನ್ನು ಅವನೇ ಮಾಡಿದನೆಂದು ಸಾಧಿಸುವುದಕ್ಕೆ ಯಾರಿಗೂ ಸಾಧ್ಯವಾಗುವುದಿಲ್ಲ. ನನ್ನ ಕೈಗೆ ಸಿಕ್ಕಿಬಿದ್ದರೆ ಅಷ್ಟು ಸುಲಭವಾಗಿ ತಪ್ಪಿಸಿಕೊಳ್ಳಲಾರ' ಎಂದು ಯೋಚಿಸುತ್ತ ನಿಂತನು. ಕ್ರಮಕ್ರಮವಾಗಿ ಈ ಯೋಚನೆ ಪ್ರಬಲವಾಗಿ ಮನಸ್ಸನ್ನು ಪೂರ್ತಿಯಾಗಿ ಆವರಿಸಿಕೊಂಡಿತು. ಮನೆಯೊಳಕ್ಕೆ ಹೋಗುವುದಕ್ಕೆ ಬದಲಾಗಿ ಬೀದಿಯ ಕಡೆಗೆ ನಡೆದನು. 'ಒಂದು ಸಲ ಮನೆಯ ಸುತ್ತಲೂ ಹೋಗಿ ನೋಡುವು ದೊಳ್ಳೆಯದು. ಯಾರಿಗೆ ಗೊತ್ತು, ಯಾವಾಗ ಏನು ಮಾಡುತ್ತಾನೋ!'

ಹೀಗೆಂದು ಸದ್ದಾಗದಂತೆ ಹೆಜ್ಜೆಯಮೇಲೆ ಹೆಜ್ಜೆಯನ್ನಿಡುತ್ತ ಹೆಬ್ಬಾಗಿಲನ್ನು ದಾಟಿ ಬೇಲಿಯ ಅಂಚಿನಲ್ಲಿಯೇ ಮುಂದಕ್ಕೆ ನಡೆದನು. ಒಂದು ಮೂಲೆಯನ್ನು ಬಳಸಿ ಮುಂದೆ ನೋಡಲು ಬೇಲಿಯ ಮತ್ತೊಂದು ತುದಿಯಲ್ಲಿ ಏನೋ ಒಂದು ಕಂಡಂತಾಗಿ ಫಕ್ಕನೆ ಮರೆಯಾಯಿತು. ಇವ್ಯಾನನು ಅಲ್ಲಿಯೇ ನಿಂತು ಕತ್ತಲೆಯನ್ನು ಭೇದಿಸುತ್ತ ನೋಡಿದನು. ಏನೇನೂ ಸದ್ದಿರಲಿಲ್ಲ; ಎಲೆಗಳು ಪಿಸುಗುಟ್ಟಿದುವು, ಗಾಳಿಯಲ್ಲಿ ಹುಲ್ಲು ಅಲುಗಾಡಿತು. ಮೊದಲು, ಕಗ್ಗತ್ತಲೆಯಲ್ಲಿ ಇವ್ಯಾನನಿಗೆ ಏನೂ ಕಾಣಿಸಲಿಲ್ಲ. ಸ್ವಲ್ಪ ಅಭ್ಯಾಸವಾದ ಬಳಿಕ ದೂರದ ಮೂಲೆ, ಅಲ್ಲಿ ಒಂದು ನೇಗಿಲು, ಅದರ ಹತ್ತಿರ ಬೇಲಿಯಲ್ಲಿ ಒಂದು ಕಂಡಿ—ಇಷ್ಟು ಕಾಣಬಂದವು. ಹಾಗೆಯೇ ಪರೀಕ್ಷಿಸುತ್ತಾ ನಿಂತುಕೊಂಡನು. ಮತ್ತೇನೂ ಕಾಣಿಸಲಿಲ್ಲ.

'ಏನೂ ಇಲ್ಲವೆಂದು ಕಾಣುತ್ತದೆ. ಆಗಲಿ, ಒಂದು ಸಲ ಸುತ್ತಲೂ ಹೋಗಿಬರುವುದು ಮೇಲು' ಎಂದುಕೊಂಡನು. ಬೇಲಿಯ ಪಕ್ಕದಲ್ಲಿಯೇ ಬಹಳ ಎಚ್ಚರಿಕೆಯಿಂದ ಹದುಗಿ ತೆವಳಿಕೊಂಡು ಮುಂದೆ ಹೊರಟನು. ಹೆಜ್ಜೆಯ ಸದ್ದು ತನಗೇ ಕೇಳಿಸದಷ್ಟು ಮೆಲ್ಲಗೆ ತೆವಳುತ್ತಿದ್ದನು. ಹೀಗೆಯೇ ಆ ಮೂಲೆಯವರೆಗೂ ಹೋದನು. ಅಲ್ಲಿ ನೇಗಿಲಿನ ಹತ್ತಿರ ಒಂದು ಕ್ಷಣ ಏನೋ ಮಿಸುಗಿದಂತಾಗಿ ಮರೆಯಾಯಿತು.

ಇವ್ಯಾನನಿಗೆ ಗುಂಡಿಗೆಯ ಹೊಡೆತವು ನಿಲ್ಲುವಂತಾಯಿತು. ಉಸಿರಾಡದೆ ಎದ್ದು ನಿಂತನು. ಅದೇ ಬಳಿಯಲ್ಲಿ ಬೆಳಕು ಇನ್ನೂ ಸ್ವಲ್ಪ ಹೆಚ್ಚಾಗಿ ಕಾಣಿಸಿತು. ಆ ಬೆಳಕಿನಲ್ಲಿ, ತನ್ನ ಕಡೆಗೆ ಬೆನ್ನು ತಿರುಗಿಸಿಕೊಂಡು ಬಗ್ಗಿ ಕುಳಿತು ಕೈಯಲ್ಲಿ ಹಿಡಿದ ಒಂದು ಕಂತೆ ಹುಲ್ಲಿಗೆ ಬೆಂಕಿ ಹಚ್ಚುತ್ತಿದ್ದ ಒಬ್ಬ ಮನುಷ್ಯನನ್ನು ಸ್ಪಷ್ಟವಾಗಿ ಕಂಡನು. ಕಂಡಕೂಡಲೆ ಅವನ ಹೃದಯವು ಹಕ್ಕಿಯಂತೆ ಹಾರತೊಡಗಿತು. ಜಿಂಕೆಯಂತೆ ಹಾರಿ ಓಡಿದನು.

'ಈ ಸಲ ತಪ್ಪಿಸಿಕೊಳ್ಳಲಾರ, ತಪ್ಪು ಮಾಡುತ್ತಿರುವಾಗಲೇ ಹಿಡಿದುಬಿಡುತ್ತೇನೆ .. . .....'

ಅವನು ಬೇಲಿಯ ಕಂಡಿಯ ಹತ್ತಿರಕ್ಕೆ ಹೋಗುವುದರೊಳಗಾಗಿ ದೊಡ್ಡದಾಗಿ ಉರಿಯೆದ್ದು ಉಗ್ರಾಣದ ಮನೆಯ ಹತ್ತಿರಿದ್ದ ಹುಲ್ಲು ಹತ್ತಿಕೊಂಡಿತು. ಉರಿಯ ನಾಲಿಗೆಯು ಸೂರಿನ ಕಡೆಗೆ ರಭಸದಿಂದ ನುಗ್ಗುತ್ತಿದ್ದಿತು. ಪಕ್ಕದಲ್ಲಿಯೇ ಕುಂಟ ಗೆಬ್ರಿಯಲನು ನಿಂತಿದ್ದದ್ದು ಸ್ಪಷ್ಟವಾಗಿ ಕಂಡಿತು.

ಇವ್ಯಾನನು ಗುಬ್ಬಿಗೆರಗುವ ಗಿಡಗನಂತೆ ನುಗ್ಗಿಹೋದನು.

'ಈ ಸಲ ಹಿಡಿದು ಕಟ್ಟಿಬಿಡುತ್ತೇನೆ ನಿನ್ನ' ಎಂದುಕೊಂಡನು.

ಆದರೆ ಆ ಕುಂಟನಿಗೆ ಇವನ ಹೆಜ್ಜೆಯ ಸದ್ದು ಕೇಳಿತು. ಹಿಂದಿರುಗಿ ನೋಡಿ ಮೊಲದ ಹಾಗೆ ವೇಗವಾಗಿ ಗೋಡೆಯ ಪಕ್ಕದಲ್ಲಿಯೇ ದೌಡು ಕಿತ್ತನು.

'ತಪ್ಪಿಸಿಕೊಳ್ಳುವುದು ನಿನ್ನ ಹಣೆಯಲ್ಲಿ ಬರೆಯಲಿಲ್ಲ' ಎಂದು ಒದರುತ್ತಾ ಇವ್ಯಾನನು ಅವನನ್ನು ಬೆನ್ನಟ್ಟಿ ಅವನ ಕುತ್ತಿಗೆಯ ಪಟ್ಟಿಯನ್ನು ಹಿಡಿದುಕೊಂಡನು. ಗೆಬ್ರಿಯಲನು ಒದರಿ ಹಿಡಿತದಿಂದ ಬಿಡಿಸಿಕೊಂಡನು. ಆಗ ಇವ್ಯಾನನು ಅಂಗಿಯ ತುದಿಗೆ ಕೈಹಾಕಿದನು. ಅಂಗಿ ಹರಿದು ಹೋಯಿತು. ಇವ್ಯಾನನು ಧೊಪ್ಪನೆ ಕೆಳಗೆ ಬಿದ್ದನು. ಫಕ್ಕನೆ ಎದ್ದು ನಿಂತು, 'ನಿಲ್ಲೋ ಕಳ್ಳ' ಎನ್ನುತ್ತಾ ಮತ್ತೆ ಓಡತೊಡಗಿದನು.

ಗೆಬ್ರಿಯಲನು ತನ್ನ ಮನೆಯ ಅಂಗಳಕ್ಕೆ ಹೋಗಿಬಿಟ್ಟಿದ್ದನು. ಇವ್ಯಾನನು ಮಾತ್ರ ನಿಲ್ಲದೆ ಮುಂದೆ ಮುಂದೆ ಓಡುತ್ತಲೇ ಇದ್ದನು. ಇನ್ನೇನು ಅವನನ್ನು ಹಿಡಿದುಬಿಡಬೇಕು, ಅಷ್ಟರಲ್ಲಿ ಏನೋ ಒಂದು ಪದಾರ್ಥ ಮೇಲಿನಿಂದ ಬಂದು ರಭಸದಿಂದ ಅವನ ಹಣೆಗೆ ಬಡಿಯಿತು ಗೆಬ್ರಿಯಲನು ಒಂದು ಸಾಲಮರದ ತುಂಡನ್ನು ಕಿತ್ತುಕೊಂಡು ಬಲವನ್ನೆಲ್ಲ ಬಿಟ್ಟು ಇವ್ಯಾನನ ಹಣೆಗೆ ಗುರಿಕಟ್ಟಿ ಹೊಡೆದಿದ್ದನು.

ಇವ್ಯಾನನಿಗೆ ಸಂಕಟವಾಯಿತು, ತಲೆ ಸುತ್ತಿತು. ಕಣ್ಣಿನ ಮುಂದೆ ಕಿಡಿಗಳು ಹಾರಿದಂತಾಯಿತು. ಆಮೇಲೆ ಬರಿಯ ಕತ್ತಲೆ,

ಕಡೆಗೆ ನೆಲಕ್ಕೆ ಮಲಗಿದನು. ಎಚ್ಚತ್ತು ನೋಡಿದಾಗ ಗೆಬ್ರಿಯಲನು ಕಣ್ಣಿಗೆ ಬೀಳಲೇ ಇಲ್ಲ. ಸುತ್ತಲೂ ಹಗಲಿನಂತೆ ಬೆಳಕು. ಹಿಂದುಗಡೆ ನುಗ್ಗಿ ಬರುವಂತೆ, ಮುರಿ ಮುರಿದು ಬೀಳುವಂತೆ ಮಹಾ ಗರ್ಜನೆಯ ಸದ್ದು. ಇವ್ಯಾನನು ಒಂದು ಸಲ ಸುತ್ತಲೂ ತಿರುಗಿ ನೋಡಿದನು. ದೊಡ್ಡ ಉಗ್ರಾಣದ ಮನೆಯು ಧಗಧಗನೆ ಉರಿಯುತ್ತಿದೆ, ಸಣ್ಣ ಉಗ್ರಾಣಕ್ಕೆ ಆಗತಾನೆ ಬೆಂಕಿ ಬಿದ್ದಿದೆ. ಗಾಳಿಯೆದ್ದು ಹೊಗೆಯನ್ನೂ ಉರಿಯನ್ನೂ ಹತ್ತಿ ಬೇಯುತ್ತಿರುವ ಹುಲ್ಲಿನ ಕಂತೆಗಳನ್ನೂ ಮನೆಯ ಕಡೆಗೆ ಹಾರಿಸಿಕೊಂಡು ಹೋಗುತ್ತಿದೆ.

ಇವ್ಯಾನನು ನಿರಾಶೆಯಿಂದ ಕೈಕೈ ಹಿಸಿಕಿಕೊಳ್ಳುತ್ತಾ, 'ಅಣ್ಣಗಳಿರಾ, ಅಣ್ಣಗಳಿರಾ' ಎಂದು ಕೂಗಿಕೊಂಡನು. 'ಹುಲ್ಲನ್ನೆಳೆದು ಆರಿಸಿಬಿಟ್ಟಿದ್ದರೆ ....ಅಯ್ಯೋ ಅಣ್ಣಗಳಿರಾ, ಅದನ್ನೇಕೆ ನಾನು ಮಾಡಲಿಲ್ಲ !' ಎಂದು ಹಲುಬಿದನು. ಗಟ್ಟಿಯಾಗಿ ಚೀರುವುದಕ್ಕೆ ಪ್ರಯತ್ನಪಟ್ಟನು, ಆದರೆ ಸಾಗಲಿಲ್ಲ, ಎದೆಯ ಬಡಿತ ಜೋರಾಯಿತು; ಮಾತು ನಿಂತು ಹೋಯಿತು. ಓಡುವುದಕ್ಕೆ ಯತ್ನಿಸಿದನು, ಕಾಲು ಮೇಲಕ್ಕೇಳಲಿಲ್ಲ; ಗಡಗಡನೆ ನಡುಗತೊಡಗಿತು. ತತ್ತರಿಸಿ ಬೀಳುತ್ತ ಮುಂದೆ ನುಗ್ಗಿದನು. ಗುಂಡಿಗೆಯ ಬಡಿತದಿಂದ ಉಸಿರು ಕಟ್ಟಿದಂತಾಗಿ ನಿಂತು ಸುದಾರಿಸಿಕೊಳ್ಳಬೇಕಾಯಿತು. ಹೀಗೆ ನಿದಾನವಾಗಿ ಬೇಲಿಯನ್ನು ಬಳಸಿಕೊಂಡು ಬೆಂಕಿಯ ಹತ್ತಿರ ಬಂದಾಗ ಉಗ್ರಾಣಗಳೆರಡೂ ಉರಿಯ ಮುದ್ದೆಯಾಗಿದ್ದವು. ಮನೆಯ ಬಾಗಿಲಿಗೂ, ಒಂದು ಮೂಲೆಗೂ ಆಗಿನ್ನೂ ಬೆಂಕಿ ತಗಲುತ್ತಿದ್ದಿತು. ಉರಿಯ ನಾಲಗೆಗಳು ಕಿಟಿಕಿಯಿಂದ ಹೊರಹೊಮ್ಮಿ ಬರುತ್ತಿದ್ದುದರಿಂದ ಒಳಕ್ಕೆ ಹೋಗುವುದು ಅಸಾಧ್ಯವಾಗಿದ್ದಿತು. ಮನೆಯ ಮುಂದೆ ಜಾತ್ರೆಯಂತೆ ಜನ ನೆರೆದಿದ್ದಿತು. ಆದರೂ ಏನೂ ಮಾಡಲಾಗಲಿಲ್ಲ. ನೆರೆಮನೆಗಳಲ್ಲಿದ್ದ ರೈತರು ದನಕರುಗಳನ್ನು ಬಿಚ್ಚಿ ಓಡಿಸುತ್ತಲೂ, ತಮ್ಮ ಸಾಮಾನುಗಳನೆಲ್ಲ ಬೀದಿಗೆ ತಂದಿಟ್ಟುಕೊಳ್ಳುತ್ತಲೂ ಆತುರವಾಗಿ ಒಡಾಡುತ್ತಿದ್ದರು.

ಬೇಗ ಗೆಬ್ರಿಯಲನ ಮನೆಗೂ ಬೆಂಕಿ ತಗುಲಿತು. ಆಗ ಗಾಳಿಯೆದ್ದು ಉರಿಯನ್ನು ಎದುರು ಬೀದಿಗೆ ಎರಚಿತು. ಸ್ವಲ್ಪ ಹೊತ್ತಿನೊಳಗಾಗಿ ಅರ್ಧ ಹಳ್ಳಿಯೆಲ್ಲ ಉರಿಗೆ ಆಹುತಿಯಾಯಿತು.

ಇವ್ಯಾನನ ಮನೆಯಲ್ಲಿ ಮುದುಕನನ್ನು ಬದುಕಿಸಿಕೊಂಡು ಉಟ್ಟ ಬಟ್ಟೆಯಲ್ಲಿ ಹೊರಟು ಬರುವುದಕ್ಕೆ ಮಾತ್ರ ಅವಕಾಶ ಸಿಕ್ಕಿತು, ಮತ್ತೇನನ್ನೂ ರಕ್ಷಿಸಲಾಗಲಿಲ್ಲ. ಕಾವಲಿನಲ್ಲಿದ್ದ ಕುದುರೆಗಳು ಹೊರತು ಉಳಿದ ದನಕರುಗಳೆಲ್ಲ ಸುಟ್ಟು ಬೂದಿಯಾದವು. ಹೇಂಟೆಗಳು, ಗಾಡಿಗಳು, ನೇಗಿಲು ಕುಂಟೆಗಳು, ಹೆಂಗಸರ ಪೆಟ್ಟಿಗೆಗಳು, ಗೂಡೆಗಳಲ್ಲಿ ತುಂಬಿಟ್ಟಿದ್ದ ದವಸ—ಎಲ್ಲ ಬೆಂಕಿಯ ಪಾಲಾಯಿತು.

ಗೆಬ್ರಿಯಲನ ಮನೆಯಲ್ಲಿ ದನಕರುಗಳನ್ನೂ ಮನೆಯ ಸಾಮಾನುಗಳಲ್ಲಿ ಸ್ವಲ್ಪವನ್ನೂ ಉಳಿಸಿಕೊಂಡರು. ಆ ರಾತ್ರಿಯೆಲ್ಲ ಬೆಂಕಿ ಉರಿಯುತ್ತಲೇ ಇದ್ದಿತು. ಇವ್ಯಾನನು ತನ್ನ ಮನೆಯ ಹತ್ತಿರ ನಿಂತು, ಉರಿಯಲ್ಲಿಯೇ ದೃಷ್ಟಿಯನ್ನು ನೆಟ್ಟು, 'ಅಣ್ಣಗಳಿರಾ, ನಾನೇನು ಮಾಡಿಬಿಟ್ಟೆ? ಹುಲ್ಲನ್ನೆಳೆದು ಆರಿಸಿಬಿಟ್ಟಿದ್ದರೆ ಆಗಿತ್ತಲ್ಲ!' ಎಂದು ಎಡೆಬಿಡದೆ ನೊಂದು ನುಡಿದುಕೊಳ್ಳುತ್ತಿದ್ದನು. ಛಾವಣಿ ಉರಿದು ಕೆಳಗೆ ಬಿದ್ದ ಕೂಡಲೆ ಬೆಂಕಿಯೊಳಕ್ಕೆ ನುಗ್ಗಿ, ಉರಿಯುತ್ತಿದ್ದ ಒಂದು ತೊಲೆಯನ್ನು ಹಿಡಿದು, ಜಗ್ಗಿಸಿ ಎಳೆಯುತ್ತ ನಿಂತನು. ಹೆಂಗಸರು ಹಿಂದಕ್ಕೆ ಬರುವಂತೆ ಕೂಗಿಕೊಳ್ಳುತ್ತಿದ್ದರು. ಆದರೆ ಅವನದನ್ನು ಗಮನಿಸಲಿಲ್ಲ. ಆ ತೊಲೆಯನ್ನು ಹೊರಕ್ಕೆಳೆದು ಹಾಕಿ, ಮತ್ತೊಂದನ್ನು ಎಳೆಯುವುದಕ್ಕೆ ಮುಂದೆ ನುಗ್ಗಿದನು. ಆದರೆ ಮುಂದೆ ಹೋಗಲಾರದೆ ತತ್ತರಿಸಿ ಬೆಂಕಿಯಲ್ಲಿ ಬಿದ್ದು ಬಿಟ್ಟನು. ಕೂಡಲೆ ಅವನ ಮಕ್ಕಳು ಓಡಿ ಬಂದು ಉರಿಯೊಳಗಿನಿಂದ ಅವನನ್ನು ಎತ್ತಿಕೊಂಡು ಹೋದರು. ತಲೆಯ ಜೂಟ್ಟೂ, ಗಡ್ಡವೂ ಕೈಗಳೂ ಬೆಂದು ಹೋಗಿದ್ದುವು; ಬಟ್ಟೆ ಕೆಟ್ಟುಹೋಗಿದ್ದಿತು. ಇದೊಂದರ ಅರಿವೂ ಅವನಿಗೆ ಇದ್ದ ಹಾಗೆ ಕಾಣಿಸಲಿಲ್ಲ.

'ಅವನಿಗೆ ದುಃಖದಿಂದ ಹುಚ್ಚು ಹಿಡಿದಿದೆ' ಎಂದು ಜನರು ಆಡಿಕೊಂಡರು. ಉರಿ ಕಡಿಮೆಯಾಗುತ್ತ ಬಂತು. ಆಗಲೂ ಇವ್ಯಾನನು ಅಲ್ಲಿಯೇ ನಿಂತು 'ಅಯ್ಯೋ, ಅದೊಂದನ್ನು ಎಳೆದು ಹಾಕಿದ್ದರೆ.......!' ಎಂದು ಹಲುಬಿಕೊಳ್ಳುತ್ತಿದ್ದನು.

ಬೆಳಗಿನ ಜಾವದಲ್ಲಿ ಹಳ್ಳಿಯ ಪಟೇಲನ ಮಗ ಇವ್ಯಾನನ ಬಳಿಗೆ ಬಂದು, 'ಮಾವಾ, ಮಾವಾ, ನಿಮ್ಮಪ್ಪ ಸಾಯುತ್ತಿದಾನೆ. ನಿನ್ನ ಕರೆದುಕೊಂಡು ಬರುವಂತೆ ಹೇಳಿದ' ಎಂದನು.

ಇವ್ಯಾನನಿಗೆ ಅಪ್ಪನ ಸಂಗತಿಯೇ ಮರೆತು ಹೋಗಿದ್ದಿತು. ಆ ಹುಡುಗನ ಮಾತೇ ಅರ್ಥವಾಗಲಿಲ್ಲ. "ಏನು! ನಮ್ಮಪ್ಪನೇ? ಯಾರಿಗೆ ಹೇಳಿ ಕಳುಹಿಸಿದಾನೆ?" ಎಂದನು.

"ನಿನಗೇ ಹೇಳಿ ಕಳುಹಿಸಿದಾನೆ. ನಮ್ಮ ಮನೆಯಲ್ಲಿ ಸಾಯುತ್ತ ಮಲಗಿದಾನೆ. ನೀನು ಬಂದು ನೋಡಿಕೊಂಡು ಹೋಗಬೇಕಂತೆ, ಬಾ, ಮಾವಾ" ಎನ್ನುತ್ತ ಆ ಹುಡುಗನು ಇವ್ಯಾನನ ಕೈ ಹಿಡಿದುಕೊಂಡು ಮುಂದೆ ಹೊರಟನು. ಇವ್ಯಾನನು ಅವನ ಹಿಂದೆಯೇ ಹೊರಟನು.

ಮುದುಕನನ್ನು ಹೊರಕ್ಕೆ ಎತ್ತಿಕೊಂಡು ಬರುತ್ತಿದ್ದಾಗ ಉರಿಯುವ ಹುಲ್ಲು ಸ್ವಲ್ಪ ಅವನ ಮೇಲೆ ಬಿದ್ದು ಸುಟ್ಟಿದ್ದಿತು. ಪಟೇಲನ ಮನೆ ದೂರದಲ್ಲಿದ್ದುದರಿಂದಲೂ ಆ ಭಾಗಕ್ಕೆ ಬೆಂಕಿ ಹರಡದೆ ಇದ್ದುದರಿಂದಲೂ ಅವನನ್ನು ಅಲ್ಲಿಗೆ ಕರೆದುಕೊಂಡು ಹೋಗಿದ್ದರು.

ಇವ್ಯಾನನು ಹೋದಾಗ ಮುದುಕಿಯರು ಮಕ್ಕಳು ಹೊರತಾಗಿ ಮನೆಯಲ್ಲಿ ಯಾರೂ ಇರಲಿಲ್ಲ. ಉಳಿದವರೆಲ್ಲ ಉರಿಯ ಹತ್ತಿರ ಗುಂಪು ಸೇರಿದ್ದರು. ಮಗನು ಬರಲಾಗಿ ಮುದುಕನು ಸ್ವಲ್ಪ ಹೊರಳಿದನು. ಆ ಮನೆಯ ಮುದುಕಿ ಅವನ ಹತ್ತಿರ ಹೋಗಿ "ಇವ್ಯಾನ ಬಂದ" ಎಂದು ಹೇಳಿದಳು. ಮುದುಕನು ಮಗನನ್ನು ಹತ್ತಿರ ಬರುವಂತೆ ಸಂಜ್ಞೆ ಮಾಡಿದನು. ಅವನು ಬಂದ ಬಳಿಕ ಮಾತಾಡುವುದಕ್ಕೆ ಮೊದಲುಮಾಡಿದನು.

'ವ್ಯಾನ್ಯಾ, ನಾನೇನು ಹೇಳಿದೆ? ಯಾರಪ್ಪ, ಹಳ್ಳಿಯನ್ನು ಸುಟ್ಟವರು?'

'ಅವನೇ ಕಣಪ್ಪ. ಅವನನ್ನು ಹಿಡಿದು ಬಿಟ್ಟೆ. ಸೂರಿನ ಕೆಳಗೆ ಬೆಂಕಿ ಇಟ್ಟದ್ದನ್ನು ಕಣ್ಣಾರ ಕಂಡೆ. ಉರಿಯುತ್ತಿದ್ದ ಆ ಹಿಡಿ ಹುಲ್ಲನ್ನು ಮಾತ್ರ ಎಳೆದುಹಾಕಿ ಆರಿಸಿಬಿಟ್ಟಿದ್ದರೆ ಏನೂ ಆಗುತ್ತಿರಲಿಲ್ಲ.'

'ಇವ್ಯಾನ್, ನನಗೆ ಪ್ರಾಣ ಹತ್ತಿ ಬರುತ್ತಿದೆ. ನೀನೂ ಒಂದು ದಿನ ಸಾಯುತ್ತೀಯೆ. ಅದು ಯಾರ ತಪ್ಪು ಹೇಳು?'

ಇವ್ಯಾನನು ಮುದುಕನನ್ನು ದೃಷ್ಟಿಸಿ ನೋಡಿದನು, ಏನೂ ಹೇಳ ಲಾರದೆ ಸುಮ್ಮನೆ ನಿಂತನು.

'ದೇವರಾಣೆ, ಹೇಳಿಬಿಡು, ಅದು ಯಾರ ತಪ್ಪು? ನಾನೇನು ಹೇಳಿದೆ, ನಿನಗೆ?'

ಇವ್ಯಾನನಿಗೆ ಆಗ ಪ್ರಜ್ಞೆ ಬಂದಿತು, ಎಲ್ಲವೂ ಅರ್ಥವಾಯಿತು, ಗಟ್ಟಿಯಾಗಿ ಬಿಕ್ಕಿ ಬಿಕ್ಕಿ ಅಳುತ್ತ 'ಅಪ್ಪಾ ಅದು ನನ್ನ ತಪ್ಪು' ಎಂದನು. ಮುದುಕನೆದುರಿಗೆ ಮೊಣಕಾಲೂರಿ ಕುಳಿತು ಕಣ್ಣೀರಿಡುತ್ತ 'ಅಪ್ಪಾ ನನ್ನನ್ನು ಕ್ಷಮಿಸು. ನಿನಗೂ ದೇವರಿಗೂ ಮಹಾ ಅಪರಾಧಮಾಡಿ ಪಾಪಿ ಯಾದೆ,' ಎಂದು ಗೋಳಿಟ್ಟನು.

ಮುದುಕನ ಬತ್ತಿದ ಬೆಟ್ಟುಗಳು ಮೆಲ್ಲನೆ ಅಲುಗಿದವು. ಮೇಣದ ಬತ್ತಿಯ ದೀಪವನ್ನು ಎಡಗೈಯಲ್ಲಿ ಹಿಡಿದು ಶಿಲುಬೆಯ ರಕ್ಷೆ ಹಾಕಿಕೊಳ್ಳ ಬೇಕೆಂದು ಬಲಗೈಯನ್ನು ಹಣೆಯ ಬಳಿಗೆ ಎತ್ತಲು ಪ್ರಯತ್ನಪಟ್ಟನು. ಆದರೆ ಕೈಯಲ್ಲಿ ಶಕ್ತಿಯಿಲ್ಲದೆ ಮತ್ತೆ ಕೆಳಗೆ ಬಿದ್ದಿತು.

'ದೇವರೇ, ಎಲ್ಲ ನಿನ್ನ ದಯ. ಭಗವಂತಾ ನಿನ್ನ ಅನುಗ್ರಹ' ಎನ್ನುತ್ತ ಮಗನ ಮೇಲೆಯೇ ನೋಟವನ್ನು ನೆಟ್ಟನು.

'ಕೇಳು, ವ್ಯಾನ್ಯಾ ಕೇಳು'

'ಅಪ್ಪಾ, ಕೇಳುತ್ತಿದ್ದೇನೆ'

'ಈಗೇನು ಮಾಡುತ್ತೀಯು?'

'ನನಗೇನೂ ತಿಳಿಯದು. ಅಪ್ಪಾ, ಇನ್ನು ಹೇಗೆ ಹೊಟ್ಟೆ ಹೊರೆಯಲೋ ಕಾಣೆ.'

ಮುದುಕನು ಕಣ್ಣು ಮುಚ್ಚಿದನು. ತನ್ನಲ್ಲಿ ಉಳಿದಿದ್ದ ಶಕ್ತಿಯನ್ನೆಲ್ಲ ಒಟ್ಟುಗೂಡಿಸುತ್ತಿದ್ದನೋ ಎಂಬಂತೆ ತುಟಿಗಳು ಅಲುಗಿದವು. ಮತ್ತೆ ಕಣ್ಣು ಬಿಟ್ಟು ಹೇಳತೊಡಗಿದನು. 'ಎಲ್ಲ ಒಳ್ಳೆಯದೇ ಆಗುತ್ತದೆ. ನೀನು ದೇವರನ್ನು ಸಂಜಿಕೊಂಡು ಬಾಳಿದರೆ ನಿನಗೆ ಎಲ್ಲ ಒಳ್ಳೆಯದೇ ಆಗುತ್ತದೆ.' ಸ್ವಲ್ಪ ಹೊತ್ತು ಸುಮ್ಮನಿದ್ದು ತಿಳಿನಗೆಯನ್ನು ಸೂಸುತ್ತ 'ಇಲ್ಲಿ ನೋಡು ವ್ಯಾನ್ಯಾ. ಮನೆಗೆ ಬೆಂಕಿ ಹಾಕಿದವರು ಯಾರೆಂಬುದನ್ನು ಹೇಳಬೇಡ. ಇನ್ನೊಬ್ಬನ ಪಾಪವನ್ನು ಬಯಲಿಗೆಳೆಯದಿದ್ದರೆ, ಭಗವಂತನು ನಿನ್ನ ಪಾಪಗಳನ್ನು ಮನ್ನಿಸುತ್ತಾನೆ.' ಹೀಗೆನ್ನುತ್ತ ಮುದುಕನು ಉರಿಯುವ ದೀಪವನ್ನು ಎರಡು ಕೈಗಳಿಂದಲೂ ಎತ್ತಿ ಎದೆಯಮೇಲೆ ಇಟ್ಟು, ಭದ್ರವಾಗಿ ಹಿಡಿದುಕೊಂಡು, ಒಂದುಸಲ ದೊಡ್ಡದಾಗಿ ಉಸಿರೆಳೆದು ಕಾಲು ಚಾಚಿ ಪ್ರಾಣಬಿಟ್ಟನು.

ಇವ್ಯಾನನು ಗೆಬ್ರಿಯಲನನ್ನು ದೂರಿಗೆಳೆಯಲಿಲ್ಲ. ಆದ್ದರಿಂದ ಬೆಂಕಿ ಬಿದ್ದದ್ದು ಹೇಗೆಂಬುದು ಒಬ್ಬರಿಗೂ ಗೊತ್ತಾಗಲಿಲ್ಲ. ಗೆಬ್ರಿಯಲನಮೇಲೆ ತನಗಿದ್ದ ಕ್ರೋಧವನ್ನು ಮರೆತುಬಿಟ್ಟನು. ಇವ್ಯಾನನು ತನ್ನನ್ನೇಕೆ ದೂರಿಗೆಳೆಯಲಿಲ್ಲವೆಂದು ಗೆಬ್ರಿಯಲನಿಗೆ ಆಶ್ಚರ್ಯವಾಯಿತು. ಮೊದಮೊದಲು ಅವನಿಗೆ ಹೆದರುತ್ತಿದ್ದನು. ಆಮೇಲೆ ಅವನೊಡನೆ ಮತ್ತೆ ಹೊಂದಿ ನಡೆದುಕೊಂಡನು. ಅವರಿಬ್ಬರೂ ಜಗಳಮಾಡುವುದನ್ನು ನಿಲ್ಲಿಸಿದರು. ಅವರ ಮೇಲ್ಪಂಕ್ತಿಯನ್ನನುಸರಿಸಿ ಮನೆಯವರೂ ಹಾಗೆಯೇ ಮಾಡಿದರು. ತಮ್ಮ ಮನೆಗಳನ್ನು ಹೊಸದಾಗಿ ಕಟ್ಟುತ್ತಿದ್ದಾಗ ಇಬ್ಬರೂ ಒಂದೇ ಗುಡಿಸಲಿನಲ್ಲಿ ವಾಸಮಾಡುತ್ತಿದ್ದರು. ಮೊದಲಿಗಿಂತಲೂ ದೊಡ್ಡದಾಗಿ ಊರನ್ನು ಹೊಸದಾಗಿ ಕಟ್ಟಿದಮೇಲೂ ಅವರಿಬ್ಬರೂ ಮೊದಲಿನಂತೆಯೇ ಒಳ್ಳೆಯ ನೆರೆಯವರಾಗಿದ್ದರು.

ಅವರ ಹಿರಿಯರ ಕಾಲದಲ್ಲಿದ್ದಂತೆಯೇ ಅವರು ಉತ್ತಮರಾದ ಆಪ್ತರಾದರು. ಬೆಂಕಿಯನ್ನು ಪ್ರಾರಂಭದಲ್ಲಿಯೇ ಆರಿಸಬೇಕೆಂದು ತನ್ನಪ್ಪ ಹೇಳುತ್ತಿದ್ದ ಮಾತನ್ನೂ, ಅದು ಭಗವಂತನ ಆಜ್ಞೆಯೆಂಬುದನ್ನೂ ಮರೆಯದೆ ಇವ್ಯಾನನು ಸರ್ವದಾ ಅದನ್ನು ನೆನೆಯುತ್ತಲೇ ಇದ್ದನು.

ಯಾರಾದರೂ ಕೇಡೆಣಿಸಿದರೆ ಅವನು ಅವರಿಗೆ ಪ್ರತಿಯಾಗಿ ಕೇಡು ಮಾಡಿ ಸೇಡು ತೀರಿಸಲು ಹೊರಡುತ್ತಿರಲಿಲ್ಲ, ಅದಕ್ಕೆ ಬದಲಾಗಿ ತಪ್ಪನ್ನು ತಿದ್ದಿಬಿಡುತ್ತಿದ್ದನು. ಯಾರಾದರೂ ಕೆಟ್ಟ ಮಾತಾಡಿದರೆ ಪ್ರತಿಯಾಗಿ ತಾನೂ ಕೀಳು ನುಡಿ ನುಡಿಯದೆ ಆ ಮನುಷ್ಯನಿಗೆ ಒಳ್ಳೆಯ ಮಾತುಗಳನ್ನು ಕಲಿಸುತ್ತಿದ್ದನು. ಮನೆಯಲ್ಲಿ ಹೆಂಗಸರಿಗೂ ಮಕ್ಕಳಿಗೂ ಅದೇ ಪಾಠವನ್ನು ಕಲಿಸಿದನು. ಅಲ್ಲಿಂದ ಮುಂದೆ ಏಳಿಗೆಯನ್ನು ಹೊಂದಿ ಮೊದಲಿಗಿಂತ ಉತ್ತಮವಾಗಿ ಜೀವಿಸುತ್ತಿದ್ದನು.

# ಮರಿ ಪಿಶಾಚಿ ರೊಟ್ಟಿಯ ಚೂರನ್ನು ಸಂಪಾದಿಸಿದ ಬಗೆ



ಒಬ್ಬ ಬಡರೈತನು ಒಂದು ದಿನ ಬೆಳಿಗ್ಗೆ ಊಟಮಾಡದೆ ಸಂಗಡ ಒಂದು ಚೂರು ರೊಟ್ಟಿಯನ್ನು ತೆಗೆದುಕೊಂಡು ಉಳುವುದಕ್ಕಾಗಿ ಹೊಲಕ್ಕೆ ಹೋದನು. ನೇಗಿಲನ್ನು ಕಟ್ಟಿ ರೊಟ್ಟಿಯ ಚೂರನ್ನು ಒಂದು ಪೊದೆಯ ಹತ್ತಿರ ಇಟ್ಟು, ಅದರ ಮೇಲೆ ಅಂಗಿಯನ್ನು ಹರವಿ ಎಲ್ಲವನ್ನೂ ಮುಚ್ಚಿ ಬಿಟ್ಟನು. ಸ್ವಲ್ಪ ಹೊತ್ತಿನಲ್ಲಿಯೇ ರೈತನಿಗೆ ಬಹಳ ಆಯಾಸವಾಯಿತು, ಕುದುರೆಗೂ ತುಂಬ ದಣಿವಾಯಿತು. ಆಗ ಅವನು ನೇಗಿಲನ್ನು ಮಣ್ಣಿನಲ್ಲಿ ಊರಿ ನಿಲ್ಲಿಸಿ, ಕುದುರೆಯನ್ನು ಬಿಚ್ಚಿ ಮೇಯುವುದಕ್ಕೆ ಬಿಟ್ಟು ಒಂದು ಮುರುಕು ರೊಟ್ಟಿಯನ್ನು ಕಡಿದು ಸ್ವಲ್ಪ ಹೊತ್ತು ಕೂತು ದಣಿವಾರಿಸಿ ಕೊಳ್ಳೋಣವೆಂದು ಪೊದೆಯ ಬಳಿಗೆ ಹೋದನು. ಅಂಗಿಯನ್ನು ಮೇಲಕ್ಕೆ ತ್ತಿದರೆ, ರೊಟ್ಟಿಯೇ ಇಲ್ಲ! ಮಾಯವಾಗಿ ಬಿಟ್ಟಿದ್ದಿತು! ನೋಡಿ ನೋಡಿ ಸಾಕಾಗಿ ಅಂಗಿಯಲ್ಲೆಲ್ಲ ಹುಡುಕಿದನು. ಕಡೆಗೆ ಅದನ್ನು ಬಲವಾಗಿ ಕೊಡವಿದನು. ಏನು ಮಾಡಿದರೂ ರೊಟ್ಟಿ ಮಾತ್ರ ಕಣ್ಣಿಗೆ ಬೀಳದು! ರೈತನು ಬೆರಗಾದನು. 'ಇದೇನೀ ಆಶ್ಚರ್ಯ, ಇಲ್ಲಿ ಯಾರೂ ಕಾಣಿಸಲಿಲ್ಲ ವಲ್ಲ! ಅಂತೂ ಯಾರೋ ಒಬ್ಬರು ತೆಗೆದುಕೊಂಡಿರಬೇಕು' ಎಂದು ಕೊಂಡನು.

ಅದನ್ನು ತೆಗೆದುಕೊಂಡಿದ್ದದ್ದು ಒಂದು ಮರಿ ಪಿಶಾಚಿ. ಅದು ರೈತನು ಉಳುತ್ತಿದ್ದಾಗ ಅವನಿಗೆ ಕಾಣದಂತೆ ರೊಟ್ಟಿಯನ್ನು ಕದ್ದುಕೊಂಡು ಆ ರೈತನು ತನ್ನ (ಪಿಶಾಚಿಯ) ಹೆಸರು ಹಿಡಿದು, ಆಣೆಯಿಡುತ್ತಾ ಬಗೆಬಗೆ ಯಾಗಿ ಬಯ್ಯುವುದನ್ನು ಹೊಂಚಿ ಕೇಳಬೇಕೆಂದು ಪೊದೆಯ ಹಿಂದೆಯೇ ಅವಿತುಕೊಂಡಿದ್ದಿತು.

ರೈತನಿಗೆ ಸಂಕಟವಾಯಿತು. 'ಹೂ, ಆಗಲಿ! ಹಸಿವಾದರೆ ನಾನೇನು ಸಾಯುವುದಿಲ್ಲ! ಯಾರಾದರೂ ತೆಗೆದುಕೊಂಡಿರಲಿ; ಪಾಪ, ಅವರಿಗೆ ಬೇಕಾಗಿತ್ತೆಂದು ಕಾಣುತ್ತದೆ. ಅವರೇ ತಿನ್ನಲಿ, ತಿಂದು ಶಕ್ತಿಹೊಂದಿ ಬಾಳಲಿ' ಎಂದು ಹರಸಿದನು.

ಆಮೇಲೆ ಅವನು ಬಾವಿಗೆ ಹೋಗಿ ನೀರು ಕುಡಿದು ಸ್ವಲ್ಪಹೊತ್ತು ಸುಧಾರಿಸಿಕೊಂಡು, ಕುದುರೆಯನ್ನು ಹಿಡಿದುಕೊಂಡು ಬಂದು ಹಲ್ಲಣವನ್ನು ಬಿಗಿದು ಮತ್ತೆ ತನ್ನ ಕೆಲಸದಲ್ಲಿ ತಾನು ನಿರತನಾದನು.

ರೈತನನ್ನು ಪಾಪಮಾರ್ಗಕ್ಕೆಳೆಯಲು ತನಗೆ ಸಾಗಲಿಲ್ಲವಲ್ಲಾ ಎಂದು ಮರಿ ಪಿಶಾಚಿಗೆ ಬಹಳ ದುಃಖವಾಯಿತು, ಇದ್ದ ಆಸೆಯೆಲ್ಲ ಮುರಿದು ಬಿದ್ದು ಹೋಯಿತು. ಈ ಸಂಗತಿಯನ್ನು ತಿಳಿಸಬೇಕೆಂದು ದೊಡ್ಡ ಪಿಶಾಚಿಯ ಬಳಿಗೆ ಹೋಯಿತು.

ಅದು ದೊಡ್ಡ ಪಿಶಾಚಿಯ ಬಳಿಗೆ ಹೋಗಿ ತಾನು ರೈತನ ರೊಟ್ಟಿಯನ್ನು ಕದ್ದದ್ದು ಅವನು ತನ್ನನ್ನು ಬೈಯ್ಯುವುದಕ್ಕೆ ಬದಲಾಗಿ ಆರೋಗ್ಯವಾಗಿ ಬಾಳಲೆಂದು ಹರಸಿದ್ದು ಇದನ್ನೆಲ್ಲ ಹೇಳಿತು.

ದೊಡ್ಡ ಪಿಶಾಚಿಗೆ ಬಹಳ ಸಿಟ್ಟು ಹತ್ತಿತು. 'ಈ ವಿಚಾರದಲ್ಲಿ ರೈತನ ಕೈಯೇ ಮೇಲಾದರೆ ಅದು ನಿನ್ನ ತಪ್ಪು. ಎಲಾ ಮಂಕೇ, ಇಲ್ಲಿ ಕೇಳು. ಈ ರೈತರೂ, ಇವರನ್ನು ನೋಡಿ ಇವರ ಹೆಂಗಸರೂ ಈ ನಡತೆಯನ್ನೇ ಕಲಿತುಬಿಟ್ಟರೆ ನಮ್ಮ ಗತಿಯೇನು? ಆಮೇಲೆ ನಾವು ಹೊಟ್ಟೆ ಹೊರೆಯುವುದು ಹೇಗೆ? ಇದೇನು ಸಣ್ಣ ವಿಚಾರ! ಎಂದು ಅಸಡ್ಡೆಮಾಡುವುದಕ್ಕಾಗುವುದಿಲ್ಲ. ಮತ್ತೆ ಆ ರೈತನ ಬಳಿಗೆ ಹೋಗಿ, ನಿನ್ನ ರೊಟ್ಟಿಯನ್ನು ನೀನು ಸಂಪಾದಿಸಿಕೊಂಡು ಬಾ. ಇನ್ನು ಮೂರು ವರ್ಷದೊಳಗಾಗಿ ಆ ರೈತನನ್ನು ಸರಿಮಾಡದಿದ್ದರೆ ನಿನ್ನನ್ನು ತೆಗೆದುಕೊಂಡು ಹೋಗಿ *ಪವಿತ್ರ ತೀರ್ಥಕ್ಕೆ (Holy Water) ಒಗೆದು ಬಿಡುತ್ತೇನೆ' ಎಂದು ಅಬ್ಬರಿಸಿತು.

* "ಗಂಗಾನದಿಗೆ" ಎಂದ ಹಾಗೆ

ಮರಿ ಪಿಶಾಚಿಗೆ ಭಯದಿಂದ ದಿಕ್ಕೇ ತೋಚಲಿಲ್ಲ. ಮತ್ತೆ ಭೂಮಿಯ ಮೇಲಕ್ಕೆ ಓಡಿಬಂದು ತನ್ನ ಪೆಚ್ಚುತನವನ್ನು ಸರಿಪಡಿಸಿಕೊಳ್ಳುವ ಉಪಾಯ ವನ್ನು ಹುಡುಕುತ್ತ ಕೂತಿತು. ಯೋಚಿಸಿ ಯೋಚಿಸಿ ಕಟ್ಟಕಡೆಗೆ ಒಂದು ಉಪಾಯವನ್ನು ಕಂಡುಕೊಂಡಿತು.

ಆಮೇಲೆ ಒಬ್ಬ ಕೂಲಿಯ ಆಳಾಗಿ ಆ ಬಡರೈತನ ಹತ್ತಿರ ಕೆಲಸಕ್ಕೆ ನಿಂತಿತು. ಮುಂದಿನ ವರ್ಷ ಮಳೆ ಸರಿಯಾಗಿ ನಡೆಸಲಿಲ್ಲ. ಮರಿ ಪಿಶಾ ಚಿಯು ಜೌಗು ನೆಲದಲ್ಲಿ ಬಿತ್ತುವಂತೆ ಹೇಳಿತು. ಉಳಿದವರ ಬೆಳೆಯೆಲ್ಲ ನೀರಿಲ್ಲದೆ ಒಣಗಿ ಕರಿಕಾಯಿತು. ಈ ಬಡ ರೈತನದು ಮಾತ್ರ ಎತ್ತರ ವಾಗಿಯೂ ದಟ್ಟವಾಗಿಯೂ ಬೆಳೆದು ಚೆನ್ನಾಗಿ ತೆನೆಕಟ್ಟಿತು. ಆ ವರ್ಷ ಬೆಳೆದು ಬಂದ ಜೋಳ ಮುಂದಿನ ಸುಗ್ಗಿಯವರೆಗೆ ಬಳಸಿದರೂ ಮುಗಿಯ ಲಿಲ್ಲ, ಇನ್ನೂ ಉಳಿದಿದ್ದಿತು. ಅದರ ಮುಂದಿನ ವರ್ಷ ರೈತನಿಗೆ ಗುಡ್ಡದ ಮೇಲೆ ಪೈರು ಹಾಕಬೇಕೆಂದು ಹೇಳಿತು. ಆ ವರ್ಷ ಮಳೆ ಹೆಚ್ಚಾಗಿ ಸುರಿದು ಪೈರೆಲ್ಲ ನೆಲಕ್ಕೆ ಬಿದ್ದು ಕೊಳೆತು ಕೆಟ್ಟುಹೋಯಿತು. ಆದರೆ ಗುಡ್ಡದ ತಪ್ಪಲಿನಲ್ಲಿ ಬಿತ್ತಿದ್ದ ರೈತನ ಬೆಳೆ ಮಾತ್ರ ಸೊಂಪಾಗಿ ಬೆಳೆಯಿತು.

ಈ ಬೆಳೆಯಿಂದ ಅವನ ಮನೆಯಲ್ಲಿ ದವಸ ಮತ್ತಷ್ಟು ಹೆಚ್ಚಾಯಿತು ಅದನ್ನು ಏನು ಮಾಡಬೇಕೆಂಬುದೇ ಅವನಿಗೆ ತೋರಲಿಲ್ಲ.

ಆಗ ಮರಿ ಪಿಶಾಚಿಯು ಆ ಕಾಳುಗಳಿಂದ 'ವ್ಹಿಸ್ಕಿ' (ಒಂದು ಬಗೆಯ ಸಾರಾಯಿ) ಮಾಡುವ ವಿಧಾನವನ್ನು ರೈತನಿಗೆ ತೋರಿಸಿಕೊಟ್ಟಿತು. ರೈತನು 'ವ್ಹಿಸ್ಕಿ' ಮಾಡಿ ತಾನೂ ಕುಡಿದು ಇತರರಿಗೂ ಕೊಡುತ್ತ ಬಂದನು.

ಮರಿ ಪಿಶಾಚಿಯು ದೊಡ್ಡ ಪಿಶಾಚಿಯ ಹತ್ತಿರ ಹೋಗಿ ರೊಟ್ಟಿಯ ಚೂರು ತನಗೆ ದಕ್ಕಿತೆಂದು ಜಂಬ ಕೊಚ್ಚಿಕೊಳ್ಳಲು ಮೊದಲುಮಾಡಿತು. ದೊಡ್ಡದು ನೋಡಿಕೊಂಡು ಬರೋಣವೆಂದು ಹೊರಟಿತು.

ದೊಡ್ಡ ಪಿಶಾಚಿಯು ರೈತನ ಮನೆಗೆ ಬಂದಾಗ ಮನೆಯಲ್ಲಿ ಕೆಲವರು ಅತಿಥಿಗಳು ಸೇರಿದ್ದರು. ರೈತನು ಅವರೆಲ್ಲರಿಗೂ ವ್ಹಿಸ್ಕಿಯನ್ನು ಕೊಟ್ಟು

ಉಪಚರಿಸುತ್ತಿದ್ದನು. ಅವನ ಹೆಂಡತಿಯೇ ಅದನ್ನು ಎಲ್ಲರಿಗೂ ಬಗ್ಗಿಸಿ ಕೊಡುತ್ತಿದ್ದಳು. ಅವಳು ಎಲ್ಲರ ಬಳಿಗೂ ತೆಗೆದುಕೊಂಡು ಹೋಗುತ್ತಿರುವಾಗ ಒಂದುಸಲ ಮೇಜಕ್ಕನ್ನು ಎಡವಿದಳು ; ಕೈಯಲ್ಲಿದ್ದ ಬಟ್ಟಲು ಕೆಳಗೆ ಬಿದ್ದಿತು.

ರೈತನು ರೇಗಿ ರೇಗಿ ಬೀಳುತ್ತ 'ಅಯ್ಯೋ ಹಾಳು ಶನಿ! ಮೈಮೇಲೆ ಎಚ್ಚರವಿಲ್ಲವೇನೇ ಮುಡ್ಡಿ ? ಕೆಲಸಕ್ಕೆ ಬಾರದ ಕೊಳಕು ನೀರೂಂತ ತಿಳಿದೆಯೋ ಹಾಗೆ ನೆಲಕ್ಕೆ ಚೆಲ್ಲುವುದಕ್ಕೆ !' ಎಂದು ಗಟ್ಟಿಯಾಗಿ ಗದ್ದರಿಸಿದನು.

ಮರಿ ಪಿಶಾಚಿಯು ಮೊಳಕ್ಕೈ ತುದಿಯಿಂದ ದೊಡ್ಡ ಪಿಶಾಚಿಯನ್ನು ತಿವಿಯುತ್ತ 'ಈಗ ಅವನ ರೊಟ್ಟಿಯ ಚೂರನ್ನು ಯಾರಾದರೂ ಕದ್ದರೆ ಅವನೇನು ಮಾಡಬಹುದು, ಹೇಳು ನೋಡೋಣ,?' ಎಂದಿತು.

ಆಣೆಯಿಟ್ಟುಕೊಂಡು ಬೈಯುವುದೆಲ್ಲ ಮುಗಿದಮೇಲೆ ರೈತನು ತಾನೇ ವ್ಹಿಸ್ಕಿಯನ್ನು ಸುರಿದು ಕೊಡುವುದಕ್ಕೆ ಹೊರಟನು. ಸ್ವಲ್ಪ ಹೊತ್ತಿನೊಳಗಾಗಿ ಒಬ್ಬ ಒಡವನು, ಹಗಲೆಲ್ಲ ದುಡಿದು ದುಡಿದು ದಣಿದಿದ್ದವನು, ಒಳಗೆ ಬಂದು ಒಂದು ಕಡೆ ಕುಳಿತುಕೊಂಡನು. ಅವನನ್ನು ಯಾರೂ ಕರೆದಿರಲಿಲ್ಲ. ಜನರೆಲ್ಲ ಕುಡಿದು ಆನಂದ ಪಡುತ್ತಿದ್ದುದನ್ನು ಕಂಡು, ತಾನೂ ದಣಿದು ಹೋಗಿದ್ದುದರಿಂದ ತನಗೂ ಸ್ವಲ್ಪ ಸಿಕ್ಕೀತೆಂಬ ಆಸೆಯಿಂದ ಒಳಕ್ಕೆ ಬಂದಿದ್ದನು. ಕೂತು ಕೂತು ಸಾಕಾಯಿತು. ಸುಮ್ಮನೆ ಬಾಯಿ ಚಪ್ಪರಿಸುವುದೊಂದೇ ಅವನ ಪಾಲಿಗೆ. ಯಜಮಾನನು ಅವನಿಗೆ ಸ್ವಲ್ಪವೂ ಕೊಡುವುದಕ್ಕೆ ಹೋಗಲಿಲ್ಲ. 'ಬೇಕು ಬೇಕೆನ್ನುವ ದಾರಿಹೋಕರಿಗೆಲ್ಲ ಕೊಡುವುದಕ್ಕಲ್ಲ, ಇಲ್ಲಿ ನಾನು ವ್ಹಿಸ್ಕಿ ಮಾಡುತ್ತಿರುವುದು' ಎಂದು ವಟಗುಟ್ಟಿಕೊಳ್ಳುತ್ತಿದ್ದನು.

ಇದನ್ನೆಲ್ಲ ಕಂಡು ದೊಡ್ಡ ಪಿಶಾಚಿಗೆ ಪರಮಾನಂದವಾಯಿತು. ಮರಿ ಪಿಶಾಚಿಯು ಇಷ್ಟಕ್ಕೇ ಸುಮ್ಮನಾಗಲಿಲ್ಲ ; 'ಸ್ವಲ್ಪ ನಿಧಾನಿಸು, ಇನ್ನೂ ಏನೇನಿದೆಯೋ ನೋಡುವೆಯಂತೆ' ಎಂದು ಜಂಬ ಕೊಚ್ಚಿಕೊಂಡಿತು.

ದುಡ್ಡುಳ್ಳ ರೈತರೆಲ್ಲ ಕುಡಿದರು. ಯಜಮಾನನೂ ಕುಡಿದನು. ಆಮೇಲೆ ಅವರು ಒಬ್ಬರನ್ನೊಬ್ಬರು ಮೆಚ್ಚಿಮೆಚ್ಚಿ ಸ್ತೋತ್ರಮಾಡುವುದಕ್ಕೆ, ಬೆಣ್ಣೆಯಂತೆ ನಯವಾಗಿ ಮಾತಾಡುತ್ತ ಸುಳ್ಳು ಹೇಳುವುದಕ್ಕೆ, ಪ್ರಾರಂಭಿಸಿದರು.

ದೊಡ್ಡ ಪಿಶಾಚಿಯು ಕೇಳುತ್ತ ಕೇಳುತ್ತ ಮರಿ ಪಿಶಾಚಿಯನ್ನು ಬಹುವಾಗಿ ಹೊಗಳಿತು. 'ಈ ಕುಡಿತದಿಂದ ಇವರಲ್ಲಿ ಸುಳ್ಳೂ, ಮೋಸದ ತಂತ್ರವೂ ಇಷ್ಟುಮಟ್ಟಿಗೆ ತುಂಬುವುದಾದರೆ, ಇನ್ನು ಇವರೆಲ್ಲ ನಮ್ಮ ಹಿಡಿಯಲ್ಲಿ ಸಿಕ್ಕಿಬಿದ್ದ ಹಾಗೆಯೇ ಸರಿ' ಎಂದಿತು.

ಮರಿ ಪಿಶಾಚಿಯು 'ಇನ್ನೂ ಸ್ವಲ್ಪ ತಾಳು, ಈಗಿನ್ನೂ ಪ್ರಾರಂಭ. ಇನ್ನೂ ಸ್ವಲ್ಪ ಹೆಚ್ಚಾಗಿ ಕುಡಿಯಲಿ. ನಿದಾನಿಸಿ ನೋಡು, ನಿನಗೇ ತಿಳಿಯುತ್ತದೆ. ಈಗ ನರಿಯ ಹಾಗೆ ಬಾಲ ಕುಣಿಸುತ್ತ ಒಬ್ಬರನ್ನೊಬ್ಬರು ಮೋಸಗೊಳಿಸುವುದಕ್ಕೆ ನೋಡುತ್ತಿದಾರೆ. ಇನ್ನೊಂದು ಗಳಿಗೆ, ತೋಳಗಳ ಹಾಗೆ ಕ್ರೂರರಾಗಿಬಿಡುತ್ತಾರ' ಎಂದಿತು.

ರೈತರು ಪ್ರತಿಯೊಬ್ಬರೂ ಮತ್ತೆ ಒಂದೊಂದು ಒಟ್ಟಲು ಕುಡಿದರು. ಮಾತು ಮೊದಲಿಗಿಂತ ಗಟ್ಟಿಯಾಗಿಯೂ ಬಿರುಸಾಗಿಯೂ ಪರಿಣಮಿಸಿತು. ಬೆಣ್ಣೆಯಂಥ ಮಾತುಗಳಿಗೆ ಬದಲಾಗಿ ದೊಂಬಿಯ ಗದ್ದಲ, ಶಾಪದ ನುಡಿಗಳು. ಸ್ವಲ್ಪ ಹೊತ್ತು ಹೀಗೆ ಕಳೆಯುವುದರೊಳಗಾಗಿ ಒಬ್ಬರನ್ನೊಬ್ಬರು ಕೆಣಕಿ, ಕ್ರೋಧದಿಂದ ಮೈಮೇಲೆ ಬಿದ್ದು ಮೂಗಿನಮೇಲೆ ಗುದ್ದುತ್ತ ಬಂದರು. ಯಜಮಾನನೂ ಹೊಡೆದಾಟಕ್ಕೆ ಸೇರಿ ಪೆಟ್ಟುತಿಂದನು.

ದೊಡ್ಡ ಪಿಶಾಚಿಯು ನೋಡುತ್ತಲೇ ಇದ್ದಿತು. ನೋಡಿ ಬಹಳ ಮೆಚ್ಚಿತು. 'ಭಲೆ, ಇದ್ದರೆ ಹೀಗಿರಬೇಕು' ಎಂದು ತಲೆದೂಗಿತು.

ಮರಿ ಪಿಶಾಚಿಯು ಸುಮ್ಮನಾಗಲಿಲ್ಲ 'ಸ್ವಲ್ಪ ತಾಳು, ಇನ್ನೂ ಬೇಕಾದಷ್ಟು ಬಾಕಿಯಿದೆ. ಇನ್ನೊಂದು ತುಸ ಕುಡಿಯಲಿ. ಈಗ ತೋಳಗಳ

ಹಾಗೆ ರೇಗುತ್ತಿದಾರೆ, ಇನ್ನೊಂದು ಗಳಿಗೆ, ಹಂದಿಗಳ ಹಾಗೆ ಕೊಳಕಿನಲ್ಲಿ ಉರಳಾಡುತ್ತಾರೆ' ಎಂದಿತು.

ರೈತರು ಮತ್ತೆ ಕುಡಿದರು, ಅಮಲೇರಿತು. ಗಟ್ಟಿಯಾಗಿ ಅಬ್ಬರಿಸಿದರು, ವಟಗುಟ್ಟಿದರು, ಗುಸುಗುಟ್ಟಿದರು. ಒಬ್ಬರಾಡಿದ್ದು ಮತ್ತೊಬ್ಬರಿಗೆ ತಿಳಿಯದು.

ಕೂಡಲೆ ಎಲ್ಲರೂ ಎದ್ದು ತಮ್ಮ ತಮ್ಮ ಮನೆಗಳಿಗೆ ಹೊರಟರು

ಒಂಟಿಯಾಗಿಯೋ ಇಬ್ಬರು ಅಥವಾ ಮೂವರು ಜೊತೆ ಜೊತೆಯಾಗಿಯೋ ತೂಗಾಡುತ್ತಾ ಬೀದಿಯಲ್ಲಿ ಹೊರಟರು. ಯಜಮಾನನು ಅತಿಥಿಗಳನ್ನು ಕಳುಹಿಸಿ ಬರುವುದಕ್ಕೆಂದು ಹೊರಗೆ ಬಂದನು. ಒಂದವನು ಜಗ್ಗು ಹಾಕುತ್ತ ಪಕ್ಕದ ಚರಂಡಿಗೆ ಬಿದ್ದುಬಿಟ್ಟನು. ಕೊಳಕು ಮೈಗೆ ಲೇಪಿಸಿದಂತಾಯಿತು ಹಂದಿಯ ಹಾಗೆ ಗುಟುರು ಹಾಕುತ್ತ ಚರಂಡಿಯಲ್ಲಿ ಬಿದ್ದುಕೊಂಡನು.

ಇದನ್ನು ಕಂಡು ದೊಡ್ಡ ಪಿಶಾಚಿಗೆ ಹಿಡಿಸಲಾರದಷ್ಟು ಹರ್ಷವಾಯಿತು. 'ಆಹಾ! ಬಲು ಒಳ್ಳೆಯ ಪಾನಕವನ್ನು ತಯಾರಿಸಿಬಿಟ್ಟೆ! ದಕ್ಕಿತು ನಿನಗೆ ರೊಟ್ಟಿಯ ಚೂರು ಅದನ್ನು ಏತರಿಂದ ತಯಾರಿಸಿದೆ ಸ್ವಲ್ಪ ಹೇಳು. ಮೊಟ್ಟಮೊದಲು ನರಿಯ ರಕ್ತವನ್ನು ಸೇರಿಸಿರಬೇಕು— ಅದಕ್ಕೇ ಅವರು ನರಿಗಳಷ್ಟು ತಂತ್ರಿಗಳಾದರು. ಆಮೇಲೆ ತೋಳದ ರಕ್ತವನ್ನು ಬೆರೆಸಿರಬೇಕು—ಅದರಿಂದಲೇ ಅವರು ತೋಳಗಳಷ್ಟು ಕ್ರೂರಿಗಳಾದರು. ಇದಾದಮೇಲೆ ಹಂದಿಯ ರಕ್ತವನ್ನು ಹಾಕಿರಬೇಕು—ಅದಕ್ಕೇ ಅವರು ಹಂದಿಗಳ ಹಾಗೆ ಕೊಚ್ಚೆಯಲ್ಲಿ ಬಿದ್ದು ಗುಟುರು ಹಾಕುತ್ತಿದ್ದರು, ಅಲ್ಲವೇ?' ಎಂದು ಆಶ್ಚರ್ಯಪಟ್ಟು ಕೇಳಿತು.

ಮರಿ ಪಿಶಾಚಿಯು 'ಇಲ್ಲ, ಇದು ಯಾವುದನ್ನೂ ಮಾಡಲಿಲ್ಲ. ನಾನು ಮಾಡಿದ್ದಿಷ್ಟೇ—ಇವನ ಜೀವನಕ್ಕೆ ಬೇಕಾದಷ್ಟಕ್ಕಿಂತ ಹೆಚ್ಚು ದವಸ ಕೊಟ್ಟೆ. ಕೀಳಾದ ಪಶುವೃತ್ತಿಗಳು ಮನುಷ್ಯ ರಕ್ತದಲ್ಲಿ ಸರ್ವದಾ

ಇದ್ದೇ ಇರುತ್ತವೆ. ಆದರೆ ಅವನು ಕಷ್ಟಪಟ್ಟು ದುಡಿದು ತಿನ್ನಬೇಕಾದಾಗ ಅವಕ್ಕೆ ಸ್ವಾತಂತ್ರ್ಯ ಕಡಿಮೆ. ಮೊದಲು ಈ ಮನುಷ್ಯನು ತನ್ನಲ್ಲಿದ್ದ ಒಂದೇ ಒಂದು ಚೂರು ರೊಟ್ಟಿಯನ್ನು ಕೊಟ್ಟುಬಿಡುವುದಕ್ಕೆ ಸಿದ್ಧನಾಗಿದ್ದನು. ಅವನಿಗೆ ಬೇಕಾದಷ್ಟಕ್ಕಿಂತ ಹೆಚ್ಚಾಗಿ ಯಾವಾಗ ಸಿಕ್ಕುವುದಕ್ಕ ಮೊದಲಾಯಿತೋ ಆಗಿನಿಂದಲೂ ಬಗೆ ಬಗೆಯ ಭೋಗಗಳಿಗೆ ಆಸೆ ಪಟ್ಟು ಅವುಗಳಿಗಾಗಿ ಹೆಣಗತೊಡಗಿದನು. ಅವನಿಗೆ ನಾನೊಂದು ಭೋಗವನ್ನು ಒದಗಿಸಿಕೊಟ್ಟೆ, ವ್ಹಿಸ್ಕಿ ಕುಡಿಯುವುದು. ದೇವರು ದಯಪಾಲಿಸಿದ್ದನ್ನು ಸ್ವಂತ ಭೋಗ ವಿಲಾಸಗಳಿಗಾಗಿ ಎಂದು ಉಪಯೋಗಿಸಿದನೋ ಆ ದಿನವೇ ಅವನಲ್ಲಿ ಅಡಗಿದ್ದ ನರಿ, ತೋಳ, ಹಂದಿಗಳ ರಕ್ತ (ಆ ಪಶುವೃತ್ತಿಗಳು) ಎದ್ದು ಕುಣಿಯಲು ಮೊದಲುಮಾಡಿತು. ಅವನು ಕುಡುಕನಾಗಿರುವವರೆಗೂ ಪಶುವಾಗಿಯೇ ಕೂಳಯಬೇಕು' ಎಂದು ಹೇಳಿತು.

ದೊಡ್ಡ ಪಿಶಾಚಿಯು ಮರಿ ಪಿಶಾಚಿಯನ್ನು ಬೆನ್ನು ತಟ್ಟಿ, ಹಿಂದೆ ರೊಟ್ಟಿಯನ್ನು ಕಳೆದುಕೊಂಡಿದ್ದ ಅಪರಾಧವನ್ನು ಮನ್ನಿಸಿ ತನ್ನ ಕೈಕೆಳಗಿನ ಎಲ್ಲ ಪಿಶಾಚಿಗಳಿಗೂ ಅದನ್ನೇ ಸರ್ವಾಧಿಕಾರಿಯಾಗಿ ನೇಮಕಮಾಡಿತು.

---

# ಎಲ್ಲಿ ಪ್ರೇಮವೋ ಅಲ್ಲಿ ದೇವರು



ಒಂದು ಪಟ್ಟಣದಲ್ಲಿ ಮಾರ್ಟಿನ್ ಅವ್‌ಡೀಚ್ ಎಂಬ ಒಬ್ಬ ಚಮ್ಮಾರನಿದ್ದನು. ಅವನು ವಾಸಮಾಡುತ್ತಿದ್ದದ್ದು ನೆಲದಮಟ್ಟಕ್ಕಿಂತ ತಗ್ಗಿನಲ್ಲಿ ಅರ್ಧ ಹೂತುಹೋಗಿದ್ದ ಒಂದು ಸಣ್ಣ ಕೊಠಡಿಯಲ್ಲಿ. ಆ ಕೊಠಡಿಗೆ ಬೀದಿಯ ಕಡೆಗೆ ಒಂದು ಕಿಟಕಿ. ಮಾರ್ಟಿನ್ನನು ಆ ಕಿಟಕಿಯಿಂದ ಬೀದಿಯಲ್ಲಿ ತಿರುಗಾಡುವವರನ್ನೆಲ್ಲ ನೋಡುತ್ತಿದ್ದನು. ನೋಡಿದರೆ ಬೀದಿಯಲ್ಲಿ ನಡೆಯುವವರ ಹೆಜ್ಜೆಗಳು ಮಾತ್ರ ಕಾಣಿಸುತ್ತಿದ್ದವು. ಆದರೂ ಅವನು ಅವರೆಲ್ಲರನ್ನೂ ಅವರ ಪಾದರಕ್ಷೆಗಳಿಂದಲೇ ಗುರುತಿಸುತ್ತಿದ್ದನು. ಬಹಳ ಕಾಲದಿಂದಲೂ ಅದೇ ಕೊಠಡಿಯಲ್ಲಿ ವಾಸಮಾಡುತ್ತಿದ್ದನು, ಅಲ್ಲದೆ ಅವನಿಗೆ ಬಹು ಜನಗಳ ಪರಿಚಯವಿದ್ದಿತು. ಆ ಸುತ್ತಮುತ್ತಲೆಲ್ಲ ಒಂದೆರಡು ಸಲವಾದರೂ ಅವನ ಕೈಸೋಕದಿದ್ದ ಒಂದು ಜೊತೆ ಪಾದರಕ್ಷೆಯೂ ಇರಲಿಲ್ಲ. ಕೆಲವಕ್ಕೆ ಅವನು ಎರಡನೆಯ ಸಲ ಅಟ್ಟೆ ಕಟ್ಟಿದ್ದನು, ಕೆಲವಕ್ಕೆ ತೇಪೆ ಹಾಕಿಕೊಟ್ಟಿದ್ದನು, ಕೆಲವನ್ನು ಸ್ವಲ್ಪ ರಿಪೇರಿಮಾಡಿದ್ದನು; ಮತ್ತೆ ಕೆಲವಕ್ಕೆ ಮೇಲುಗಡೆಯ ಭಾಗವನ್ನು ಹೊಸದಾಗಿ ಸೇರಿಸಿ ಹೊಲಿದು ಸರಿಮಾಡಿದ್ದನು. ಕಿಟಿಕಿಯಲ್ಲಿ ನೋಡುತ್ತ ಎಷ್ಟೋ ಸಲ ಅವನು ತನ್ನ ಕೈ ಕೆಲಸವನ್ನು ಗುರುತಿಸುತ್ತಿದ್ದನು. ಅವನಿಗೆ ಕೈತುಂಬ ಕೆಲಸ. ಅವನ ಹೊಲಿಗೆ ಅಚ್ಚುಕಟ್ಟಾಗಿರುತ್ತಿದ್ದಿತು. ಒಳ್ಳೆಯ ಚರ್ಮಗಳನ್ನೇ ಅವನು ಉಪಯೋಗಿಸುತ್ತಿದ್ದದ್ದು. ಬೆಲೆ ತೀರ ಅಗ್ಗವೂ ಅಲ್ಲ, ಬಹಳ ತುಟ್ಟಿಯೂ ಅಲ್ಲ, ಬಟ್ಟೆನಲ್ಲಿ ಸುಲಭವಾಗಿದ್ದಿತು. ಇದಕ್ಕೆಲ್ಲ ಹೆಚ್ಚಾಗಿ ಅವನು ಆಡಿದ ಮಾತಿಗೆ ಎಂದೂ ತಪ್ಪುತ್ತಿರಲಿಲ್ಲ. ಗೊತ್ತು ಮಾಡಿದ ದಿನಕ್ಕೆ ಸರಿಯಾಗಿ ಮಾಡಿ ಕೊಡುವುದು ಸಾಧ್ಯವಾಗಿದ್ದರೆ ಮಾತ್ರ ಅವನು ಒಪ್ಪಿಕೊಳ್ಳುತ್ತಿದ್ದನು. ಇಲ್ಲದಿದ್ದರೆ ಆ ಹೊತ್ತಿಗೆ ಆಗುವುದಿಲ್ಲವೆಂದು ನಿಜವನ್ನೇ ಹೇಳಿಬಿಡುತ್ತಿದ್ದನು.

ಸುಳ್ಳು ಸುಳ್ಳು ಮಾತುಕೊಟ್ಟು ಎಂದಿಗೂ ಮೋಸಪಡಿಸುತ್ತಿರಲಿಲ್ಲ ಆದ್ದರಿಂದ ಅವನು ಎಲ್ಲರಲ್ಲಿಯೂ ಹೆಸರುವಾಸಿಯಾಗಿದ್ದನು. ಅವನಿಗೆ ಕೆಲಸ ಸಿಕ್ಕದಿದ್ದ ದಿನವೇ ಇರಲಿಲ್ಲ.

ಮಾರ್ಟಿನ್ನನು ಮೊದಲಿನಿಂದಲೂ ಒಳ್ಳೆಯ ಮನುಷ್ಯ. ವೃದ್ಧಾಪ್ಯ ಬಂದಂತೆಲ್ಲ ಆತ್ಮವಿಚಾರಕ್ಕೆ ಹೆಚ್ಚು ಹೆಚ್ಚಾಗಿ ಗಮನಕೊಟ್ಟು ದೇವರಿಗೆ ಹೆಚ್ಚು ಹೆಚ್ಚು ಹತ್ತಿರದವನಾಗುತ್ತ ಬಂದನು ಅವನಿನ್ನೂ ಕೆಲಸ ಕಲಿಯುತ್ತಿದ್ದಾಗಲೇ ಮೂರು ವರ್ಷದ ಒಂದು ಚಿಕ್ಕ ಹುಡುಗನನ್ನು ಬಿಟ್ಟು ಅವನ ಹೆಂಡತಿ ಸತ್ತುಹೋಗಿದ್ದಳು. ಅವನ ಹಿರಿಯ ಮಕ್ಕಳಲ್ಲಿ ಒಂದೂ ಬದುಕಲಿಲ್ಲ, ಎಲ್ಲವೂ ಬಹಳ ಚಿಕ್ಕವಾಗಿದ್ದಾಗಲೇ ಸತ್ತುಹೋದವು ಮೊದಲು ಆ ಮಗುವನ್ನು ಹಳ್ಳಿಯಲ್ಲಿದ್ದ ತನ್ನ ತಂಗಿಯ ಮನೆಗೆ ಕಳುಹಿಸಬೇಕೆಂದು ಯೋಚಿಸಿದನು. ಆದರೆ ಆಮೇಲೆ ಅವನ ಮನಸ್ಸು ಕರಗಿತು. 'ಹೆರರ ಮನೆಯಲ್ಲಿದ್ದು ಬೆಳೆಯುವುದು ನನ್ನ ಪುಟ್ಟ ಕ್ಯಾಪಿಟನ್ನನಿಗೆ ತುಂಬ ಕಷ್ಟವಾಗುತ್ತದೆ. ಅವನನ್ನು ನನ್ನ ಜೊತೆಯಲ್ಲಿಯೇ ಇಟ್ಟುಕೊಳ್ಳುತ್ತೇನೆ' ಎಂದು ನಿರ್ಧರಿಸಿದನು.

ಆಮೇಲೆ ಮಾರ್ಟಿನ್ನನು ತನ್ನ ದಣಿಯ ಮನೆಯನ್ನು ಬಿಟ್ಟು ಆ ಪುಟ್ಟ ಕೋಣೆಗೆ ಬಂದು ತನ್ನ ಮಗನೊಡನೆ ವಾಸಮಾಡತೊಡಗಿದನು. ಆದರೆ ಮಕ್ಕಳ ಸುಖ ಅವನ ಹಣೆಯಲ್ಲಿ ಬರೆದಿರಲಿಲ್ಲವೆಂದು ಕಾಣುತ್ತದೆ. ಮಗುವೆಂದರೆ ಅವನಿಗೆ ಪ್ರಾಣ, 'ಜೀವನದ ಆನಂದವೇ ಇದು' ಎಂದುಕೊಂಡಿದ್ದನು. ಇನ್ನೇನು ದೊಡ್ಡವನಾಗಿ ತಂದೆಗೆ ಕೆಲಸದಲ್ಲಿ ನೆರವಾಗಬೇಕು, ಅಷ್ಟರಲ್ಲಿ ಆ ಮಗನಿಗೆ ಕಾಹಿಲೆಯಾಯಿತು. ಒಂದು ವಾರದ ವರೆಗೆ ಕುದಿಯುವ ಜ್ವರದಲ್ಲಿ ನರಳುತ್ತಿದ್ದು ಸತ್ತುಹೋದನು. ಮಾರ್ಟಿನ್ನನು ಸತ್ತ ಮಗನನ್ನು ಹೂಳಿ ಬಂದನು. ಅವನ ಹೃದಯದಲ್ಲಿ ಅಳವಿಲ್ಲದಷ್ಟು ನಿರಾಶೆ ತುಂಬಿಕೊಂಡಿತು. ಮಿತಿಮೀರಿದ ದುಃಖಕ್ಕೆ ಸಿಕ್ಕಿ 'ಅಯ್ಯೋ ಭಗವಂತಾ, ನಾನು ಮುದುಕ, ನನ್ನನ್ನು ಬಿಟ್ಟು, ಇದ್ದ ಒಬ್ಬ ಮುದ್ದು ಮಗನನ್ನೂ

ಸೆಳೆದುಕೊಂಡೆಯಾ' ಎಂದು ದೇವರನ್ನು ದೂರುತ್ತಾ ತನಗೆ ಸಾವು ಬಂದರೆ ಲೇಸೆಂದು ಅಡಿಗಡಿಗೂ ಪ್ರಾರ್ಥಿಸುತ್ತಿದ್ದನು. ಆಮೇಲೆ ಚರ್ಚಿಗೆ ಹೋಗುವುದನ್ನೂ ನಿಲ್ಲಿಸಿಬಿಟ್ಟನು.

ಒಂದುದಿನ ಮಾರ್ಟಿನ್ನನ ಸ್ವಂತ ಹಳ್ಳಿಯಿಂದ ಒಬ್ಬ ಮುದುಕನು ಬಂದನು. ಅವನು ಕಳೆದ ಎಂಟು ವರ್ಷಗಳಿಂದಲೂ ಯಾತ್ರಿಕನಾಗಿ ತಿರುಗುತ್ತಿದ್ದನು ಟ್ರೋಯಿಸ್ಟಾ ವಿಹಾರದಿಂದ ಹಿಂದಿರುಗಿ ಬರುತ್ತಿರುವಾಗ ಮಾರ್ಟಿನ್ನನ ಮನೆಗೆ ಬಂದನು. ಮಾರ್ಟಿನ್ನನು ಆ ಮುದುಕನಿಗೆ ತನ್ನ ಅಂತರಂಗದಲ್ಲಿ ತುಂಬಿದ ದುಃಖವನ್ನೆಲ್ಲ ಬಿಚ್ಚಿ ಹೇಳಿ ಬಹಳ ವ್ಯಥೆಪಟ್ಟನು.

'ಬದುಕಿರಬೇಕೆಂಬ ಆಸೆ ಕೂಡ ನನಗಿಲ್ಲವಪ್ಪಾ. ಬೇಗ ಸತ್ತು ಹೋಗಬೇಕೆಂಬುದೊಂದೇ ನನ್ನಾಸೆ. ಅದನ್ನೇ ನಾನು ದೇವರನ್ನು ಕೇಳಿಕೊಳ್ಳುತ್ತಿರುವುದು ಈಗ, ಈ ಪ್ರಪಂಚದಲ್ಲಿ ನಾನು ಗತಿಯಿಲ್ಲದವನಾಗಿಬಿಟ್ಟೆನಪ್ಪಾ.'

'ನೀನು ಹೇಳುವುದು ಸರಿಯಲ್ಲ ಮಾರ್ಟಿನ್, ಹಾಗೆ ಹೇಳುವುದಕ್ಕೆ ನಿನಗೆ ಅಧಿಕಾರವಿಲ್ಲ. ದೇವರ ಕೆಲಸಗಳಲ್ಲಿ ತಪ್ಪು ಹಿಡಿಯುವುದಕ್ಕೆ ನಾವು ಯಾರು? ಯಾವುದು ಹೇಗೆ ನಡೆಯಬೇಕೆಂಬುದನ್ನು ನಿರ್ಧರಿಸುವುದು ನಮ್ಮ ಬುದ್ಧಿಯಲ್ಲ, ದೇವರ ಇಷ್ಟ ನಿನ್ನ ಮಗ ಸಾಯಬೇಕೆಂದೂ ನೀನು ಬದುಕಬೇಕೆಂದೂ ದೇವರು ಇಷ್ಟಪಟ್ಟನು. ಭಗವಂತನ ಇಷ್ಟವಾದ್ದರಿಂದ ಅದೇ ಒಳ್ಳೆಯದಾಗಿರಬೇಕು. ನಿನಗೆ ನಿರಾಸೆ ಕವಿದುಕೊಂಡಿದೆಯಷ್ಟೆ. ನಿನ್ನ ಸ್ವಂತ ಸುಖಕ್ಕೆ ಮಾತ್ರ ಬದುಕಬೇಕೆಂದು ನೀನು ಬಯಸುತ್ತಿರುವುದೇ ಈ ನಿರಾಸೆಗೆ ಕಾರಣ' ಎಂದು ಆ ಮುದುಕನು ಉತ್ತರಕೊಟ್ಟನು.

'ಹಾಗಾದರೆ ಮತ್ತಿನ್ನೇತಕ್ಕೆ ಬದುಕಬೇಕು?' ಎಂದು ಮಾರ್ಟಿನ್ನನು ಕೇಳಿದನು.

ಮುದುಕನು ಉತ್ತರಕೊಟ್ಟನು. 'ದೇವರಿಗಾಗಿ ಬದುಕಬೇಕಪ್ಪಾ, ಮಾರ್ಟಿನ್. ನಿನಗೆ ಪ್ರಾಣವನ್ನು ಕೊಡುವವನವನು; ಅವನ ಸೇವೆಗಾಗಿ

ಬದುಕಬೇಕಪ್ಪಾ, ನೀನು. ದೇವರ ಸೇವೆಗೆ ಬದುಕುವುದನ್ನು ಕಲಿತು ಕೊಂಡರೆ ಆಗ ನೀನು ಸ್ವಲ್ಪವೂ ದುಃಖಪಡುವ ಹಾಗಿಲ್ಲ, ಎಲ್ಲ ನಿನಗೆ ಸುಖವಾಗಿ ಕಾಣುತ್ತದೆಯಪ್ಪಾ'

ಮಾರ್ಟಿನ್ನನು ಸ್ವಲ್ಪ ಹೊತ್ತು ಸುಮ್ಮನೆ ಕುಳಿತಿದ್ದನು. ಆಮೇಲೆ 'ದೇವರಿಗಾಗಿ ಬದುಕುವುದು ಹೇಗೆ?' ಎಂದು ಕೇಳಿದನು.

ಮುದುಕನು ಉತ್ತರಕೊಟ್ಟನು. 'ದೇವರಿಗಾಗಿ ಬದುಕುವುದು ಹೇಗೆಂಬುದನ್ನು ಕ್ರಿಸ್ತನು ನಮಗೆಲ್ಲ ತೋರಿಸಿ ಕೊಟ್ಟಿರುವನು. ನೀನು ಓದಬಲ್ಲೆಯೋ? ಹಾಗಾದರೆ ಸುವಾರ್ತೆಗಳನ್ನು (ಬೈಬಲ್) ಕೊಂಡು ಕೊಂಡು ಓದು. ನಾವು ಹೇಗೆ ಬದುಕಬೇಕೆಂದು ದೇವರು ಇಷ್ಟಪಡು ತ್ತಾನೋ ಅದು ಅಲ್ಲಿ ನಿನಗೆ ಗೊತ್ತಾಗುತ್ತದೆ, ಅದೆಲ್ಲ ಅದರಲ್ಲಿ ಹೇಳಿದೆ.'

ಈ ಮಾತು ಮಾರ್ಟಿನ್ನನ ಮನಸ್ಸಿಗೆ ಚೆನ್ನಾಗಿ ನಾಟಿತು. ಆ ದಿನವೇ ಹೋಗಿ ಬೈಬಲ್ಲಿನ ದಪ್ಪಕ್ಷರದ ಒಂದು ಪ್ರತಿಯನ್ನು ಕೊಂಡು ತಂದು ಓದಲು ಮೊದಲುಮಾಡಿದನು.

ಮೊದಲು ರಜಾ ದಿನಗಳಲ್ಲಿ ಮಾತ್ರ ಓದಬೇಕೆಂದು ಗೊತ್ತುಮಾಡಿ ಕೊಂಡನು ಆದರೆ ಓದುವುದಕ್ಕೆ ಪ್ರಾರಂಭಿಸಿದಮೇಲೆ ಅಲ್ಲಿಯ ಮಾತು ಗಳಿಂದ ತನ್ನ ಹೃದಯ ಬಹಳ ಹಗುರವಾಗುತ್ತ ಬರುವುದೆಂದು ಕಂಡು ಕೊಂಡು ಪ್ರತಿದಿನವೂ ಓದುವ ರೂಢಿಯನ್ನಿಟ್ಟುಕೊಂಡನು. ಒಂದೊಂದು ಸಲ ಹಣತೆಯ ಎಣ್ಣೆಯೆಲ್ಲ ಉರಿದುಹೋದರೂ ಎಚ್ಚರವಿಲ್ಲದೆ ಓದುವುದ ರಲ್ಲಿಯೇ ಮಗ್ನನಾಗಿ ಕುಳಿತಿರುತ್ತಿದ್ದನು, ಎಣ್ಣೆ ಪೂರ್ತಿಯಾಗಿ ಉರಿದು ಹೋದರೂ ಪುಸ್ತಕವನ್ನು ಮುಚ್ಚುವುದು ಕಷ್ಟವಾಗಿ ಕಾಣುತ್ತಿದ್ದಿತು. ಹೀಗೆ ಅವನು ಪ್ರತಿ ರಾತ್ರಿಯೂ ಓದುತ್ತಲೇ ಇದ್ದನು. ಓದಿದಂತೆಲ್ಲ ದೇವರು ತನ್ನಿಂದ ನಿರೀಕ್ಷಿಸುವುದೇನೆಂಬುದೂ ದೇವರಿಗಾಗಿ ಬದುಕುವುದು ಹೇಗೆಂಬುದೂ ಹೆಚ್ಚುಹೆಚ್ಚು ಸ್ಪಷ್ಟವಾಗಿ ತಿಳಿಯುತ್ತ ಬಂದಿತು. ಇದನ್ನು ತಿಳಿದುಕೊಂಡಂತೆಲ್ಲ ಅವನ ಹೃದಯ ಮತ್ತಷ್ಟು ಹಗುರವಾಗುತ್ತ ಬಂದಿತು.

ಹಿಂದೆ, ಮಲಗಿಕೊಂಡಾಗ ತನ್ನ ಪುಟ್ಟ ಕ್ಯಾಪಿಟನ್ನನನ್ನು ನೆನೆದುಕೊಂಡು ನಿಟ್ಟುಸಿರು ಬಿಟ್ಟು ನರಳುತ್ತಿದ್ದನು. ಈಗ 'ಭಗವಂತಾ, ಅಗಾಧಮಹಿಮಾ, ನಿನ್ನ ಇಚ್ಛೆಯಂತಾಗಲಿ' ಎಂದು ಅಡಿಗಡಿಗೆ ಹೇಳುತ್ತಿದ್ದನು.

ಅಂದಿನಿಂದ ಮಾರ್ಟಿನ್ನನ ಜೀವನದ ರೀತಿಯೇ ಬೇರೆಯಾಯಿತು. ಹಿಂದೆ ರಜಾ ದಿನಗಳಲ್ಲಿ ಹೋಟಲಿಗೆ ಹೋಗಿ ಟೀ ಕುಡಿಯುತ್ತಿದ್ದನು. ಒಂದೊಂದು ಸಲ ವೋಡ್ಕವನ್ನು (ಮದಕಾರಿಯಾದ ಪಾನೀಯ) ಕೂಡ ಬೇಡವೆನ್ನುತ್ತಿರಲಿಲ್ಲ ಯಾರಾದರೂ ಸ್ನೇಹಿತರು ಸಿಕ್ಕಿದರೆ ಕುಡಿದು ಬಿಡುತ್ತಿದ್ದನು. ಅವನೆಂದೂ ಮೈಮರೆಯುವಷ್ಟು ಕುಡಿದದ್ದಿಲ್ಲ. ಖುಷಿ ಬರುವಷ್ಟು ಮಾತ್ರ ಕುಡಿಯುತ್ತಿದ್ದನು ಆದರೂ ಕುಡಿತದ ಕೇಡು ಬೇರೆ ತಪ್ಪುತ್ತಿರಲಿಲ್ಲ, ಯಾರನ್ನಾದರೂ ಹುಚ್ಚು ಹುಚ್ಚಾಗಿ ಮಾತಾಡಿ ಮನಸ್ಸಿಗೆ ಬಂದಂತೆ ಕೂಗಿಬಿಡುತ್ತಿದ್ದನು. ಈಗ ಈ ದುರ್ಗುಣಗಳೆಲ್ಲ ಇವನಿಂದ ದೂರ ಹೊರಟುಹೋದವು. ಅವನ ಜೀವನದಲ್ಲಿ ಶಾಂತಿಯೂ ತೃಪ್ತಿಯೂ ತುಂಬಿಕೊಂಡವು. ಅವನು ಬೆಳಗಾಗುತ್ತಲೂ ಕೆಲಸಕ್ಕೆ ಮೊದಲುಮಾಡಿ ಶ್ರದ್ಧೆಯಿಂದ ದುಡಿಯುತ್ತಿದ್ದನು. ಕಲಸದ ಹೊತ್ತು ಮುಗಿದಮೇಲೆ ಗೂಡಿನಿಂದ ಹಣತೆಯನ್ನು ತೆಗೆದು ಮೇಜಿನ ಮೇಲಿಟ್ಟು ಬೀರುವಿನಿಂದ ಪುಸ್ತಕವನ್ನೆಳೆದುಕೊಂಡು ಓದುವುದಕ್ಕೆ ಕುಳಿತುಬಿಡುತ್ತಿದ್ದನು. ಮತ್ತೆ ಮತ್ತೆ ಓದಿದ ಹಾಗೆಲ್ಲ ಹೆಚ್ಚು ಹೆಚ್ಚು ಸುಲಭವಾಗಿ ಅರ್ಥವಾಗುತ್ತಿದ್ದಿತು. ಅರ್ಥವನ್ನು ತಿಳಿದುಕೊಂಡಂತೆಲ್ಲ ಅವನು ಗಂಭೀರನೂ ಹಸನ್ಮುಖಿಯೂ ಆಗುತ್ತ ಬಂದನು.

ಒಂದು ದಿನ ರಾತ್ರೆ ಮಾರ್ಟಿನ್ನನು ಬಹಳ ಹೊತ್ತು ಓದುತ್ತ ಕುಳಿತಿದ್ದನು. ಸೇಂಟ್ ಲ್ಯೂಕನ ಸುವಾರ್ತೆಯಲ್ಲಿ ಆರನೆಯ ಅಧ್ಯಾಯವನ್ನು ಓದುತ್ತಿದ್ದನು. ಓದುತ್ತೋದುತ್ತ ಈ ಕೆಳಗಿನ ವಚನಗಳವರೆಗೂ ಬಂದುಬಿಟ್ಟನು. 'ಒಂದು ಕೆನ್ನೆಯ ಮೇಲೆ ಹೊಡೆಯ ಬಂದಾತಂಗೆ ಮತ್ತೊಂದನೂ ತೋರು ಹೊಡೆಯಬಹುದೆಂದು. ಉತ್ತರೀಯವಕೊಂಡು ಕವಚವನ್ನು

ತುಡುಕಿದರೆ ತಡೆಯದಿರು, ನುಡಿಯದಿರು ತುಡುಕಬೇಡೆಂದು. ಬೇಡಿದವ ರೆಲ್ಲರಿಗು ನೀಡು, ನಿನ್ನೊಡವೆಗಳ ಕೊಂಡವರ ಕೇಳದಿರು ಮತ್ತೆ ಕೊಡಿ ರೆಂದು. ಮಂದಿ ನಿನ್ನೊಡನೆಂತು ನಡೆಯಬೇಕೆನ್ನುವೆಯೊ, ಅಂತೆಯೇ ನಡೆ ನೀನು ಮಂದಿಯೊಡನೆ.'

ಯೇಸುಸ್ವಾಮಿಯು ಹೇಳಿದ ಈ ಮಾತುಗಳನ್ನೊಳಗೊಂಡ ಶ್ಲೋಕ ಗಳನ್ನೂ ಓದಿದನು.

'ಒಡೆಯ ಒಡೆಯಾ ಎಂದು ಬರಿದೆ ಕರೆಯುವಿರೇಕೆ? ನಾನೊರೆದ ಕಾರ್ಯಗಳ ಮಾಡಿರೇಕೆ? ನನ್ನ ಬಳಿಗೈತಂದು ನುಡಿಗಳೆಲ್ಲವ ಕೇಳಿ, ನುಡಿ ಯಂತೆ ನಡೆದವನ ಪರಿಯೆಂತು ಎಂಬುದನು ತೋರುವೆನು ನೋಡಿ. ತಳವ ನಾಳಕ ತೋಡಿ ಕಲ್ಲು ಬಂಡೆಯ ಕಂಡು ತಳಹದಿಯ ನಲ್ಲಿಂದ ಮಾಡಿ ಮೇಲ್ಗಡೆಯಲ್ಲಿ ಮನೆಯ ಕಟ್ಟಿದ ಜಾಣನಂದದವನವನು, ಹೊಳೆಯುಬ್ಬಿ ಹೆಚ್ಚಿದುದು, ರಭಸದಲಿ ತೆರೆ ಹೊರಳಿ ಮನೆಯನಪ್ಪಳಿಸಿದುದು, ಅಲುಗಲಿಲ್ಲಾ ಮನೆಯು ಗಟ್ಟಿಬಂಡೆಯ ಮೇಲೆ ಕಟ್ಟಿದುದರಿಂದ. ನನ್ನ ನುಡಿಗಳ ಕೇಳಿ ನಡೆಯದವನೆಂತೆನಲು, ತಳಹದಿಯ ಮಾಡದೆಯೆ ಮರಳ ಮೇಲ್ಗಡೆ ಮನೆಯ ಕಟ್ಟಿದವನಂತೆ. ಹೊಳೆಯುಬ್ಬಿ ರಭಸದಲಿ ತೆರೆ ಹೊರಳಿ ಮನೆಯನಪ್ಪಳಿಸಿ ದುದು, ಆಕ್ಷಣವೆ ಮನೆ ನೆಲಕೆ ಕುಸಿದೊರಗಿತು, ಆ ಮನೆಯ ನಾಶಕೆಣೆ ಯಿಲ್ಲವಾಯ್ತು.'

ಈ ಮಾತುಗಳನ್ನೋದಿ ಮಾರ್ಟಿನ್ನನಿಗೆ ಪರಮಾನಂದವಾಯಿತು. ಕನ್ನಡಕವನ್ನು ತೆಗೆದು ಪುಸ್ತಕದ ಮೇಲಿಟ್ಟು, ಮೇಜಿನ ಮೇಲೆ ಕೈಯೂರಿ ಕುಳಿತು, ಆಗತಾನೇ ತಾನು ಓದಿದ ವಚನಗಳಿಂದ ತನ್ನ ಜೀವಮಾನವನ್ನು ತೂಗಿ ನೋಡುತ್ತ, ಧ್ಯಾನದಲ್ಲಿ ಮುಳುಗಿಹೋದನು.

'ನನ್ನ ಮನೆಯನ್ನೆಲ್ಲಿ ಕಟ್ಟಿದೆ—ಬಂಡೆಯ ಮೇಲೋ, ಮರಳಿನ ಮೇಲೋ? ಬಂಡೆಯ ಮೇಲಾದರೆ ಒಳ್ಳೆಯದೇ ಆಯಿತು. ಒಬ್ಬನೇ ಇಲ್ಲಿ ಕುಳಿತಿರುವಾಗ ಎಲ್ಲ ಸುಲಭವಾಗಿಯೇ ಕಾಣುತ್ತದೆ. ದೇವರು ಆಜ್ಞೆ

ಮಾಡಿರುವುದನ್ನೆಲ್ಲ ಮಾಡಿರುವ ಹಾಗೆಯೇ ತೋರುತ್ತದೆ. ಆದರೆ ಎಲ್ಲಿ ಯಾದರೂ ಒಂದು ಕ್ಷಣ ಮರೆತೆನೋ ಆಗ ಮತ್ತೆ ಪಾಪಮಾಡಿಬಿಡುತ್ತೇನೆ ಆದರೂ ಕೈಯಲ್ಲಾದಷ್ಟು ಪ್ರಯತ್ನ ಮಾಡುತ್ತೇನೆ ಅದರಿಂದ ಎಷ್ಟು ಆನಂದ ಉಂಟಾಗುತ್ತದೆ! ಭಗವಂತಾ ನನ್ನ ಕೈ ಹಿಡಿದು ಸಹಾಯಮಾಡು!'

ಮಾರ್ಟಿನ್ನನು ಹೀಗೆಲ್ಲ ಯೋಚನೆಮಾಡಿ ಮಲಗುವುದರಲ್ಲಿದ್ದನು. ಆದರೆ ಪುಸ್ತಕವನ್ನು ಕೆಳಗಿಡುವುದಕ್ಕೆ ಮನಸ್ಸು ಬರಲಿಲ್ಲ. ಆದ್ದರಿಂದ ಓದುವುದನ್ನು ಮುಂದುವರಿಸಿ ಏಳನೆಯ ಅಧ್ಯಾಯವನ್ನು ಪ್ರಾರಂಭಿಸಿದನು ಒಂದೊಂದಾಗಿ ಸರದಾರನ ಕಥೆ, ವಿಧವೆಯ ಮಗನ ವಿಚಾರ, ಜಾನನ ಶಿಷ್ಯರಿಗೆ ಕೊಟ್ಟ ಉತ್ತರ—ಇವನ್ನೆಲ್ಲ ಓದಿ ಮುಗಿಸಿ, ಐಶ್ವರ್ಯವಂತನಾದ ಫೆರ್ರಿಸಿಯು ಸ್ವಾಮಿಯನ್ನು ತನ್ನ ಮನೆಗೆ ಬರಮಾಡಿಕೊಂಡ ಕಥೆಯ ವರೆಗೆ ಬಂದನು. ಪಾಪಿಯಾಗಿದ್ದ ಹೆಂಗಸೊಬ್ಬಳು ಅವನ ಪಾದಗಳಿಗೆ ಎಣ್ಣೆಯೊತ್ತಿ ಕಣ್ಣೀರಿನಿಂದ ತೊಳೆದದ್ದನ್ನೂ, ಆಮೇಲೆ ಅವನು ಅವಳನ್ನು ಮನ್ನಿಸಿದ್ದನ್ನೂ ಓದಿದನು. ಅದಾದಮೇಲೆ ನಲವತ್ತಾರನೆಯ ಶ್ಲೋಕಕ್ಕೆ ಬಂದನು ಅದರಲ್ಲಿ ಹೀಗಿದ್ದಿತು

'ಆ ಹೆಂಗುಸಿನ ಕಡೆ ತಿರುಗಿ ಸ್ವೈಮನನಿಗೆಂದ ನಿಂತು ನೋಡಿದೆಯ ಈ ಮಡದಿಯ? ನಾನಾಗಿ ನಿನ್ನ ಮನೆಗೈತಂದೆ, ಕಾಲ ತೊಳೆಯಲು ನೀರ ಕೊಡಲಿಲ್ಲ ನೀನು. ಆದರೀಕೆಯು ತನ್ನ ಕಣ್ಣೀರಿನಿಂದೆನ್ನ ಪಾದಗಳ ತೊಳೆದಿರುವಳು, ತಲೆಯ ಕೂದಲಿನಿಂದ ಒರೆಸಿರುವಳು. ಮುತ್ತೊಂದ ನೀನೆನಗೆ ಕೊಡಲಿಲ್ಲ, ಆದರೀಕೆಯ ನೋಡು, ನಾನೊಳಗೆ ಕಾಲಿಟ್ಟ ಕಾಲ ದಿಂದಲು ಬಿಡದೆ ಪಾದಗಳ ಮುತ್ತಿಡುತಲಿಹಳು. ನನ್ನ ತಲೆಗೆಣ್ಣೆಯನು ನೀನೊತ್ತಲಿಲ್ಲ, ಈ ಮಡದಿ ಪಾದಗಳಿಗೆಣ್ಣೆಯೊತ್ತಿರುವಳೀಗ.'

ಈ ಶ್ಲೋಕಗಳನ್ನೋದಿ ಮಾರ್ಟಿನ್ನನು—'ಅವನು ಕಾಲಿಗೆ ನೀರು ಕೊಡಲಿಲ್ಲ; ಮುತ್ತು ಕೊಡಲಿಲ್ಲ, ಅವನ ತಲೆಗೆ ಎಣ್ಣೆಯೊತ್ತಲಿಲ್ಲ.......' ಎಂದುಕೊಳ್ಳುತ್ತ ಯೋಚಿಸ ತೊಡಗಿದನು. ಆಮೇಲೆ ಮತ್ತೊಂದುಸಲ

ಕನ್ನಡಕವನ್ನು ತೆಗೆದು ಪುಸ್ತಕದ ಮೇಲಿಟ್ಟು ಮತ್ತೆ ಧ್ಯಾನದಲ್ಲಿ ಮುಳುಗಿದನು

'ನನ್ನಂಥವನೇ ಆಗಿರಬೇಕು, ಆ ಫೆರ್ರೈಸಿ ಅವನೂ ನನ್ನ ಹಾಗೆಯೇ ಕುಡಿಯುವ ಟೀ ಸಂಪಾದಿಸುವುದು ಹೇಗೆ? ಬೆಚ್ಚಗೆ ಮಲಗಬೇಕಾದರೆ ಏನು ಮಾಡಬೇಕು? ಎಂದು ಮುಂತಾಗಿ ತನ್ನ ಸುಖವನ್ನು ಮಾತ್ರ ಯೋಚಿಸಿಕೊಳ್ಳುತ್ತಿದ್ದನು. ಅತಿಥಿಯ ವಿಷಯವಾಗಿ ಯೋಚಿಸಲೇ ಇಲ್ಲ. ತನ್ನ ವಿಚಾರದಲ್ಲಿ ಮಾತ್ರ ಬಹು ಜಾಗರೂಕನಾಗಿ ನೋಡಿಕೊಳ್ಳುತ್ತಿದ್ದು ಮನೆಗೆ ಬಂದ ಅತಿಥಿಯ ಕಡೆಗೆ ಸ್ವಲ್ಪವೂ ಗಮನ ಕೊಡಲಿಲ್ಲ. ಆಗ ಬಂದಿದ್ದ ಅತಿಥಿ ಯಾರು? ಪ್ರತ್ಯಕ್ಷ ಪರಮಾತ್ಮನೇ! ಅವನು ಬಂದು ವೇಳೆ ನನ್ನ ಮನೆಗೆ ಬಂದರೆ ನಾನೂ ಹಾಗಯೇ ಮಾಡಲೇ?'

ಆಮೇಲೆ ಮಾರ್ಟಿನ್ನನು ಎರಡು ಕೈಗಳ ಮೇಲೂ ತಲೆಯನ್ನಿಟ್ಟು ಯೋಚಿಸುತ್ತ ಕುಳಿತನು. ಆಗ ಅವನಿಗೆ ತಿಳಿಯದಂತೆ ಯಾವಾಗಲೋ ನಿದ್ದೆ ಹತ್ತಿತು

ತಟಕ್ಕನೆ ಅವನ ಕಿವಿಯಲ್ಲಿ ಯಾರೋ ಏನನ್ನೋ ಹೇಳಿದ ಹಾಗಾಯಿತು—'ಮಾರ್ಟಿನ್' ಎಂದು ಪಿಸುಗುಟ್ಟಿದಂತಾಯಿತು.

ಮಾರ್ಟಿನ್ನನಿಗೆ ಎಚ್ಚರವಾಯಿತು. ಗಾಬರಿಯಾಗಿ 'ಯಾರದು?' ಎಂದು ಕೇಳಿದನು

ಅವನು ಸುತ್ತಲೂ ತಿರುಗಿ ಬಾಗಿಲ ಕಡೆಗೆ ನೋಡಿದನು ಆದರೆ ಅಲ್ಲಿ ಯಾರೂ ಇರಲಿಲ್ಲ ಮತ್ತೆ ತೂಕಡಿಕೆ ಹತ್ತಿತು. ಹಾಗೆ ತೂಕಡಿಸುತ್ತಿದ್ದಾಗ 'ಮಾರ್ಟಿನ್, ಮಾರ್ಟಿನ್, ನಾಳೆ ಬೀದಿಯ ಕಡೆ ನೋಡುತ್ತಿರು. ನಾನು ಬರುತ್ತೇನೆ' ಎಂದು ಬಹಳ ಸ್ಪಷ್ಟವಾಗಿ ಹೇಳಿದಂತೆ ಕೇಳಿಸಿತು.

ಮಾರ್ಟಿನ್ನನು ಮತ್ತೆ ಎಚ್ಚರ ಮಾಡಿಕೊಂಡು ಕುರ್ಚಿಯನ್ನು ಬಿಟ್ಟು ಎದ್ದು, ಕಣ್ಣು ಉಜ್ಜಿಕೊಂಡು ಯೋಚಿಸಿ ನೋಡಿದನು. 'ನಿಜವಾಗಿಯೂ ಆ ಮಾತುಗಳನ್ನು ಕೇಳಿದೆನೋ ಅಥವಾ ಇದೆಲ್ಲ ಬರಿಯ ಕನಸೋ'

ಎಂಬುದು ಅವನಿಗೆ ನಿರ್ಧರವಾಗಲಿಲ್ಲ. ಕಡೆಗೆ ದೀಪವನ್ನಾರಿಸಿ ಮಲಗಿಬಿಟ್ಟನು.

ಮರುದಿನ ಉಷಃಕಾಲಕ್ಕೆ ಮೊದಲೇ ಎದ್ದು, ದೇವರಿಗೆ ಕೈಮುಗಿದು ಪ್ರಾರ್ಥನೆಮಾಡಿ, ಒಲೆ ಹತ್ತಿಸಿ ಕೋಸುಗಡ್ಡೆಯ ಸಾರನ್ನೂ ಗೋಧಿಯ ಗಂಜಿಯನ್ನೂ ಮಾಡಿಟ್ಟು, ಟೀ ಕಾಸುವ ಗಡಿಗೆಗೆ ನೀರು ಹಾಕಿ ಕುದಿಯುವುದಕ್ಕಿಟ್ಟು, ಮೇಲು ಹೊದಿಕೆಯನ್ನು ಹೊದೆದುಕೊಂಡು ಕಿಟಿಕಿಯ ಬಳಿ ಕುಳಿತು ಕೆಲಸಕ್ಕೆ ಪ್ರಾರಂಭಮಾಡಿದನು. ಅವನು ಕೆಲಸಮಾಡುವಾಗಲೆಲ್ಲ ಹಿಂದಿನ ರಾತ್ರಿ ನಡೆದದ್ದನ್ನೇ ಎಡೆಬಿಡದೆ ಯೋಚಿಸುತ್ತಿದ್ದನು. ಒಂದೊಂದು ಸಲ ಅದು ಕನಸೆಂದು ತೋರಿತು. ಮತ್ತೆ ಕೆಲವು ವೇಳೆ ನಿಜವಾಗಿಯೂ ತನಗೆ ಆ ಧ್ವನಿ ಕೇಳಿಸಿತೆಂದುಕೊಂಡನು. 'ಈ ಮೊದಲೇ ಎಷ್ಟೋ ಸಲ ಹೀಗೂ ನಡೆದಿದೆಯಲ್ಲವೇ !' ಎಂದುಕೊಂಡನು.

ಅವನು ಕಿಟಿಕಿಯ ಹತ್ತಿರ ಕುಳಿತು ಹೀಗೆಯೇ ಯೋಚಿಸುತ್ತಿದ್ದನು. ಆ ದಿನವೆಲ್ಲ ಅವನು ಕೆಲಸಮಾಡಿದ್ದಕ್ಕಿಂತಲೂ ಆಗಾಗ ಬೀದಿಯ ಕಡೆಗೆ ಹಣಿಕಿ ನೋಡುತ್ತಿದ್ದೇ ಹೆಚ್ಚು. ತನಗೆ ಹೊಸದಾಗಿ ಕಂಡ ಮೋಜಗಳನ್ನು ಹಾಕಿಕೊಂಡವರು ಯಾರಾದರೂ ಬೀದಿಯಲ್ಲಿ ತಿರುಗಾಡಿದರೆ ಅವರ ಕಾಲೊಂದೇ ಅಲ್ಲದೆ ಮುಖವೂ ಕಾಣುವವರೆಗೆ ಕೆಳಗೆ ಬಗ್ಗಿ ಕಿಟಿಕಿಯಲ್ಲಿ ಮೇಲ್ಮುಖವಾಗಿ ನೋಡುತ್ತಿದ್ದನು. ಮೊದಲು ನೆರೆಮನೆಯ ಆಳು ಹೊಸ ಮೋಜಗಳನ್ನು ಹಾಕಿಕೊಂಡು ಬೀದಿಯಲ್ಲಿ ಹೊರಟನು; ಆಮೇಲೆ ಒಬ್ಬ ನೀರು ಹೊರುವವನು, ಅವನಾದ ಬಳಿಕ ಮೊದಲನೆಯ ನಿಕೊಲಾಸಿನ ಕಾಲದ ಒಬ್ಬ ಮುದಿ ಸಿಪಾಯಿ. ಈ ಸಿಪಾಯಿ ತೇಪೆ ಹಾಕಿದ ಮೋಜಗಳನ್ನು ಮೆಟ್ಟಿಕೊಂಡು ಕೈಯಲ್ಲಿ ಒಂದು ಗುದ್ದಲಿಯನ್ನು ಹಿಡಿದಿದ್ದನು. ಹಳೆಯದಾಗಿ ಅವಲಕ್ಷಣವಾಗಿದ್ದ ಆ ಮೋಜಗಳನ್ನು ನೋಡಿದ ಕೂಡಲೇ ಮಾರ್ಟಿನ್ನನಿಗೆ ಅವನು ಯಾರೆಂಬುದು ಗೊತ್ತಾಯಿತು. ಅವನನ್ನು ಸ್ಟೀವನ್ ಎಂದು ಕರೆಯುತ್ತಿದ್ದರು. ಧರ್ಮಿಷ್ಠನಾದ ನೆರೆಮನೆಯ ವರ್ತಕನೊಬ್ಬನು ಅವ

ನನ್ನು ತನ್ನ ಮನೆಯಲ್ಲಿಯೇ ಇಟ್ಟುಕೊಂಡು ಧರ್ಮಕ್ಕಾಗಿ ಹೊಟ್ಟೆಗೆ ಹಾಕುತ್ತಿದ್ದನು. ಮನೆಯ ಆಳಿಗೆ ಸಹಾಯ ಮಾಡುವುದೇ ಅವನ ಕೆಲಸ. ಅವನು, ಮಾರ್ಟಿನ್ನನ ಕಿಟಿಕಿಯ ಎದುರಿಗೆ ಸುರಿದಿದ್ದ ಮಂಜನ್ನೆಲ್ಲ ಬಾಚಿ ತೆಗೆದು ಚೊಕ್ಕಟಮಾಡುವುದಕ್ಕೆ ಪ್ರಾರಂಭಿಸಿದನು. ಮಾರ್ಟಿನ್ನನು ತಲೆಯೆತ್ತಿ ಒಂದುಸಲ ಅವನ ಕಡೆಗೆ ನೋಡಿ ಮತ್ತೆ ತನ್ನ ಕೆಲಸದಲ್ಲಿ ತಾನು ತೊಡಗಿದನು.

ಮಾರ್ಟಿನ್ನನು ತನ್ನ ಯೋಚನೆಗೆ ತಾನೇ ನಕ್ಕುಬಿಟ್ಟನು. 'ವಯಸ್ಸು ಹೆಚ್ಚಿದಂತೆಲ್ಲ ನನ್ನ ಬುದ್ಧಿಯೂ ಪಲ್ಲಟವಾಗುತ್ತಿರಬೇಕು. ಮುದಿಯ ಸ್ಟೀವನ್ನನು ಮಂಜು ಬಾಚುವುದಕ್ಕೆ ಬಂದರೆ ಅವನನ್ನು ನೋಡಿ ನನ್ನ ಮನೆಗೆ ಕ್ರಿಸ್ತನು ಬರುತ್ತಿದಾನೆ ಎಂದು ಭ್ರಾಂತಿಪಡುತ್ತೇನೆ. ಅಯ್ಯೋ ಅರುಳುಮರಳೇ!' ಎಂದು ನಕ್ಕನು.

ಆದರೂ ಈ ಯೋಚನೆ ಬಂದಮೇಲೆ ಮಾರ್ಟಿನ್ನನು ಹತ್ತು ಹನ್ನೆರಡು ಹೊಲಿಗೆಗಳನ್ನು ಹೊಲಿದಿರಬಹುದು. ಅಷ್ಟರಲ್ಲಿ ಮತ್ತೊಂದು ಸಲ ಕಿಟಿಕಿಯಲ್ಲಿ ನೋಡಬೇಕೆಂದು ಅಪೇಕ್ಷೆಯಾಯಿತು. ಆಗ ಸ್ಟೀವನ್ನನು ಗುದ್ದಲಿಯನ್ನು ಗೋಡೆಗೊರಗಿಸಿ ದಣಿವಾರಿಸಿಕೊಳ್ಳುವುದಕ್ಕೋ ಅಥವಾ ಮೈ ಬೆಚ್ಚಗೆ ಮಾಡಿಕೊಳ್ಳುವುದಕ್ಕೋ ಪ್ರಯತ್ನಿಸಿದನು. ಅವನು ಹಣ್ಣು ಹಣ್ಣು ಮುದುಕ, ತುಂಬ ಕುಗ್ಗಿಹೋಗಿದ್ದನು, ಒಂದು ಗುದ್ದಲಿ ಮಂಜನ್ನೂ ಎತ್ತುವುದಕ್ಕೆ ಸಾಗದವನಂತೆ ತೋರಿದನು.

ಮಾರ್ಟಿನ್ನನು 'ಅವನನ್ನು ಒಳಕ್ಕೆ ಕರೆದು ಅವನಿಗೂ ಸ್ವಲ್ಪ ಟೀ ಕೊಡಬಾರದೇ? ಕೆಟಲಿನಲ್ಲಿ ನೀರು ಕುದಿಯುತ್ತಿದೆ' ಎಂದು ಯೋಚಿಸಿಕೊಂಡನು.

ಹೊಲಿಯುವ ಸೂಜಿಯನ್ನು ಅದರ ಜಾಗದಲ್ಲಿರಿಸಿ ಮೇಲಕ್ಕೆ ಎದ್ದನು. ಕೆಟಲನ್ನು ತಂದು ಮೇಜಿನ ಮೇಲಿಟ್ಟು ಟೀ ಸಿದ್ಧಮಾಡಿದನು. ಆಮೇಲೆ ತನ್ನ ಬೆರಳುಗಳಿಂದ ಕಿಟಿಕಿಯನ್ನು ಒಂದೆರಡು ಸಲ ತಟ್ಟಿದನು. ಆ ಸದ್ದನ್ನು ಕೇಳಿ ಸ್ಟೀವನ್ನನು ಕಿಟಿಕಿಯ ಹತ್ತಿರ ಬಂದನು. ಮಾರ್ಟಿನ್ನನು ಒಳಗೆ ಬರುವಂತೆ ಅವನಿಗೆ ಸಂಜ್ಞೆ ಮಾಡಿ ಬಾಗಿಲು ತೆಗೆಯುವುದಕ್ಕೆ ಹೋದನು.

'ಬಾರಣ್ಣಾ ಒಳಕ್ಕೆ, ಒಂದು ಸ್ವಲ್ಪ ಬೆಚ್ಚಗೆ ಮಾಡಿಕೊಳ್ಳುವೆಯಂತೆ. ನಿನಗೆ ತುಂಬ ಚಳಿಯಾಗಿರಬೇಕು' ಎಂದು ಕರೆದನು.

'ದೇವರು ನಿನಗೆ ಒಳ್ಳೆಯದು ಮಾಡಲಪ್ಪಾ! ನನ್ನ ಮೈಯಿನ ಮೂಳೆ ಮೂಳೆಯೂ ನೋಯುತ್ತಿದೆ' ಎನ್ನುತ್ತ ಸ್ಟೀವನ್ನನು ಒಳಗೆ ಬಂದನು. ಮೊದಲು ಹೆಜ್ಜೆಗೆ ಅಂಟಿಕೊಂಡಿದ್ದ ಮಂಜನ್ನೆಲ್ಲ ಒದರಿ ಒಳಗೆ ಬಂದನು ಮನೆಯ ನೆಲದ ಮೇಲೆ ಹೆಜ್ಜೆಯೂರಿ ಗುರುತಾದೀತೆಂದು ಕಾಲನ್ನು ಒರೆಸಿಕೊಳ್ಳಲು ಪ್ರಾರಂಭಿಸಿದನು. ಆದರೆ ಹಾಗೆ ಮಾಡುತ್ತಿದ್ದಾಗ ತತ್ತರಿಸಿ ಬಿದ್ದುಬಿಡುವುದರಲ್ಲಿದ್ದನು.

ಮಾರ್ಟಿನ್ನನು 'ಕಾಲು ಒರೆಸುವುದಕ್ಕೆಂದು ತೊಂದರೆಪಟ್ಟುಕೊಳ್ಳಬೇಡವಪ್ಪಾ. ನೆಲವನ್ನು ನಾನು ಒರೆಸುತ್ತೇನೆ—ಅದು ನಿತ್ಯವೂ ನಾನು ಮಾಡಬೇಕಾಗಿರುವ ಕೆಲಸವೇ! ಬಾರಣ್ಣಾ, ಕುಳಿತುಕೊಂಡು ಸ್ವಲ್ಪ ಟೀ ಕುಡಿಯುವೆಯಂತೆ' ಎಂದನು.

ಆಮೇಲೆ ಎರಡು ಬಟ್ಟಲುಗಳಿಗೆ ಟೀ ಬಗ್ಗಿಸಿಕೊಂಡು ಬಂದನ್ನು ಅತಿಥಿಗೆ ಕೊಟ್ಟನು, ಇನ್ನೊಂದನ್ನು ತಾನು ಇಟ್ಟುಕೊಂಡನು. ತನ್ನ ಬಟ್ಟಲಿನ ಟೀಯನ್ನು ತಟ್ಟೆಗೆ ಸುರಿದು ಮೆಲ್ಲನೆ ಊದುತ್ತ ಕುಳಿತನು

ಸ್ಟೀವನ್ನನು ಬಟ್ಟಲಿನ ಟೀಯನ್ನೆಲ್ಲ ಕುಡಿದು ಬಟ್ಟಲನ್ನು ಮಗುಚಿ ಇನ್ನೂ ಕರಗದೆ ಉಳಿದಿದ್ದ ಒಂದು ಸಕ್ಕರೆಯ ಹಳುಕನ್ನು ಅದರ ಮೇಲಿಟ್ಟು 'ನಿನ್ನಿಂದ ಬಹಳ ಉಪಕಾರವಾಯಿತಯ್ಯ' ಎಂದು ಕೃತಜ್ಞತೆಯನ್ನು ತೋರಿಸತೊಡಗಿದನು. ಆದರೆ ಅವನಿಗೆ ಇನ್ನೂ ಸ್ವಲ್ಪ ಬೇಕಾಗಿದ್ದಿತೆಂಬುದು ಸ್ಪಷ್ಟವಾಗಿ ಕಾಣುತ್ತಿದ್ದಿತು.

ಮಾರ್ಟಿನ್ನನು 'ಇನ್ನೊಂದು ಬಟ್ಟಲು ತೆಗೆದುಕೊ' ಎಂದು ಹೇಳುತ್ತ ಅವನ ಬಟ್ಟಲಿಗೂ ತನ್ನ ಬಟ್ಟಲಿಗೂ ಮತ್ತೆ ಟೀ ಬಗ್ಗಿಸಿದನು. ಆದರೆ ಅವನು ತಾನು ಟೀ ಕುಡಿಯುವಾಗ ಮತ್ತೆ ಮತ್ತೆ ಕಿಟಿಕಿಯ ಕಡೆಗೆ ನೋಡುತ್ತಲೇ ಇದ್ದನು.

'ಯಾರಾದರೂ ಒಬ್ಬರೆಂದು ಎದುರುನೋಡುತ್ತಿರುವೆಯೋ?' ಎಂದು ಸ್ಟೀವನ್ನನು ಕೇಳಿದನು.

'ಹೌದಪ್ಪ. ಒಬ್ಬರನ್ನು ನಿರೀಕ್ಷಿಸುತ್ತಿದ್ದೇನೆ. ಆದರೆ ಅವರು ಯಾರೆಂದು ಬಾಯಿಬಿಟ್ಟು ಹೇಳುವುದಕ್ಕೇ ನಾಚಿಕೆಯಾಗುತ್ತದೆ. ನಿಜ ವಾಗಿಯೂ ಯಾರನ್ನಾದರೂ ನಿರೀಕ್ಷಿಸುತ್ತಿರುವೆನೆಂದು ಧೈರ್ಯವಾಗಿ ಹೇಳಲಾರೆ. ಆದರೆ, ನಿನ್ನೆ ರಾತ್ರಿ ನನ್ನ ಮನಸ್ಸಿಗೆ ಒಂದು ಮಾತು ಕೇಳಿದ ಹಾಗಾಯಿತು. ಅದೇನು ಬರಿಯ ಭ್ರಾಂತಿಯೋ, ಇಲ್ಲ ನಿಜವಾಗಿಯೂ ಕಿವಿಗೆ ಬಿದ್ದಿತೋ ಖಂಡಿತವಾಗಿ ಹೇಳಲಾರೆ. ನೋಡಣ್ಣಾ, ನಿನ್ನೆ ರಾತ್ರಿ, ಬೈಬಲಿನಲ್ಲಿ ಯೇಸುಸ್ವಾಮಿಯು ಲೋಕದ ಜನಗಳ ಜೊತೆಯಲ್ಲಿ ವಾಸ ಮಾಡಿದ್ದು, ಅವರಿಗಾಗಿ ಕಷ್ಟಪಟ್ಟದ್ದು,—ಎಲ್ಲ ಓದುತ್ತಿದ್ದೆ. ನೀನೂ ಕೇಳಿರಬಹುದು ಅದನ್ನೆಲ್ಲ.'

'ಹೌದು ಕೇಳಿ ಬಲ್ಲೆ. ಆದರೇನು, ನಾನೊಬ್ಬ ಮುದ್ಕಿ; ನನಗೆ ಓದುವುದಕ್ಕೆ ಬರುವುದಿಲ್ಲ' ಎಂದು ಸ್ಟೀವನ್ ಉತ್ತರ ಕೊಟ್ಟನು.

'ನೋಡು, ಆ ಸ್ವಾಮಿ ಭೂಮಿಯ ಮೇಲೆ ಜನಗಳ ಸಂಗಡ ಹೇಗೆ ನಡೆದುಕೊಳ್ಳುತ್ತಿದ್ದನು? ಅವನು ಮಾಡಿದ್ದು ಏನೇನು? ಎಂಬುದನ್ನೆಲ್ಲ ಓದುತ್ತಿದ್ದೆ. ಅವನು ಒಂದು ಸಲ ಒಬ್ಬ ಶಾಸ್ತ್ರಿಯ (ಫೆರೈಸಿ) ಮನೆಗೆ ಹೋದನಂತೆ. ಆಗ ಆ ಶಾಸ್ತ್ರಿ ಅವನಿಗೆ ಸರಿಯಾಗಿ ಸತ್ಕಾರ ಮಾಡಲೇ ಇಲ್ಲವಂತೆ. ಆ ಕಥೆಯನ್ನು ಓದುತ್ತಿರುವಾಗ ಜಗದ್ರಕ್ಷಕನಾದ ಆ ಸ್ವಾಮಿ ಯನ್ನು ಈ ಮನುಷ್ಯ ಇಷ್ಟು ಅಸಡ್ಡೆಯಾಗಿ ಹೇಗೆ ಕಂಡನಪ್ಪಾ!' ಎನ್ನಿಸಿತು. ಒಂದು ವೇಳೆ ನನ್ನಂಥ ಮನುಷ್ಯನಿಗೆ ಅಂಥ ಸಂದರ್ಭ ಸಿಕ್ಕಿದರೆ, ಆಗ ಆತನನ್ನು ಸರಿಯಾಗಿ ಸತ್ಕರಿಸುವುದಕ್ಕೆ ಏನು ತಾನೇ ಮಾಡುವುದಿಲ್ಲ? ಎಂದುಕೊಂಡೆ. ಆದರೆ ಆ ಮನುಷ್ಯ ಆತನನ್ನು ಕರೆದು ಸತ್ಕರಿಸಲೇ ಇಲ್ಲ! ನೋಡಣ್ಣಾ, ಹಾಗೆಯೇ ಯೋಚಿಸುತ್ತಿದ್ದಾಗ ನನಗೆ ನಿದ್ದೆ ಹತ್ತಿತು. ಮೆಲ್ಲಗೆ ತೂಕಡಿಸುತ್ತಿದ್ದೆ. ಆಗ, ಯಾರೋ ನನ್ನ ಹೆಸರು ಹಿಡಿದು ಕರೆದ

ಹಾಗಾಯಿತು. ಗಾಬರಿಯಾಗಿ ಮೇಲಕ್ಕೆದ್ದೆ. 'ಎದುರು ನೋಡುತ್ತಿರು, ನಾಳೆ ಬರುತ್ತೇನೆ!' ಎಂದು ಯಾರೋ ಪಿಸುಗುಟ್ಟಿದಂತಾಯಿತು. ಎರಡು ಸಲ ಹೀಗಾಯಿತಪ್ಪ. ನೀನು ನಂಬುವೆಯೋ ಇಲ್ಲವೋ; ನನಗಂತೂ ಆ ಮಾತು ಮನಸ್ಸಿಗೆ ನೆಟ್ಟುಹೋಗಿದೆ. ಒಂದೊಂದು ಸಲ 'ಥೆ ಇದೆಂಥ ಹುಚ್ಚು' ಎಂದು ನನ್ನನ್ನೇ ನಾನು ಅಂದುಕೊಳ್ಳುತ್ತೇನೆ. ಆದರೂ ಆ ಸ್ವಾಮಿ ಬರುತ್ತಾನೋ ಏನೋ ಎಂದು ನಿರೀಕ್ಷಿಸುತ್ತಲೇ ಇರುವ ಹಾಗಾಗುತ್ತದೆ.'

ಇದನ್ನು ಕೇಳಿ ಸ್ಟೀವನ್ನನು ಸುಮ್ಮನೆ ತಲೆಯನ್ನಲ್ಲಾಡಿಸಿದನು; ಏನೂ ಮಾತಾಡಲಿಲ್ಲ. ತನ್ನ ಕೈಯಲ್ಲಿದ್ದ ಟೀಯನ್ನು ಕುಡಿದು ಬಟ್ಟಲನ್ನು ಮೇಜಿನ ಮೇಲೆ ಮಲಗಿಸಿದನು. ಮಾರ್ಟಿನ್ನನು ಅದನ್ನು ನೆಟ್ಟಗೆ ನಿಲ್ಲಿಸಿ ಅದಕ್ಕೆ ಮತ್ತೆ ಟೀ ತುಂಬಿದನು.

'ಇಗೋ, ಇನ್ನೊಂದು ಬಟ್ಟಲು ಕುಡಿಯಪ್ಪಾ ನೋಡು' ಹಾಗೆಯೇ ಯೋಚಿಸುತ್ತಿದ್ದೆ. ಆ ಸ್ವಾಮಿಯು ಭೂಮಿಯ ಮೇಲೆ ಜೀವಿಸುತ್ತಿದ್ದಾಗ ಯಾರನ್ನೂ ಕೀಳೆಂದು ನಿರಾಕರಿಸುತ್ತಿರಲಿಲ್ಲ. ಅವನು ಉಪದೇಶ ಮಾಡಿದ್ದೆಲ್ಲ ಸರಳಜೀವಿಗಳಾದ ಸಾಮಾನ್ಯ ಜನರಿಗೆ. ಅವನು ನಡೆದದ್ದೆಲ್ಲ ಬಡವರ ಜೊತೆಯಲ್ಲಿ. ಶಿಷ್ಯರನ್ನು ಆರಿಸಿಕೊಂಡದ್ದೋ, ಅದು ಕೂಡ ನಮ್ಮ ಅಣ್ಣತಮ್ಮಂದಿರಲ್ಲಿಯೇ, ಅವರೂ ನಮ್ಮಂತೆಯೇ ಪಾಪಿಗಳು, ಕೂಲಿ ನಾಲಿ ಮಾಡಿ ಜೀವಿಸುತ್ತಿದ್ದವರು. ಅವನು ಹೇಳುವುದಾದರೂ ಏನು? ಬಲ್ಲೆಯಾ?—'ತಾನೆ ಮೇಲೆಂದವನು ಕೀಳಾಗಿ ಬೀಳುವನು, ತಾನೆ ಕೀಳೆಂದವನು ಮೇಲಕೇರುವನು.' 'ಒಡೆಯ ಒಡೆಯಾ ಎಂದು ನೀವೆನ್ನ ಕರೆಯುವಿರಿ, ನಾ ನಿಮ್ಮ ಪಾದಗಳ ತೊಳೆಯುವವನು.' 'ತಾನು ಮೊದಲಿಗ ನಾಗ ಬಯಸುವನು ಮನವೊಲಿದು ಸರ್ವರನು ಸೇವಿಸಲಿ ಆಳಾಗಿ ಮೊದಲು. ಬಡಜನರು, ತಗ್ಗಿ ನಡೆಯುವರು, ನಮ್ರರಾದವರು, ದಯೆಯನುಳ್ಳವರು— ಇವರೆಲ್ಲ ಧನ್ಯತೆಯ ಪಡೆದು ನಲಿಯುವರು.'

ಸ್ಟೀವನ್ನನು ಟೀ ಕುಡಿಯುವುದನ್ನು ಮರೆತನು. ಅವನು ಮೊದಲೇ ಮುದುಕ, ಫಕ್ಕನೆ ಕಣ್ಣೀರು ಹಾಕುವಂಥವನು. ಅಲ್ಲಿ ಕುಳಿತು ಮಾರ್ಟಿನ್ನನ ಮಾತುಗಳನ್ನು ಕೇಳುತ್ತ ಕೇಳುತ್ತ ಕಣ್ಣೀರು ಉಕ್ಕಿ ಹನಿಹನಿಯಾಗಿ ತೊಟ್ಟಿಕ್ಕ ತೊಡಗಿತು.

ಮಾರ್ಟಿನ್ನನು 'ಒಳ್ಳೆಯದಪ್ಪಾ, ಇನ್ನಷ್ಟು ತೆಗೆದುಕೋ' ಎಂದನು.

ಆದರೆ ಸ್ಟೀವನ್ನನು ಮತ್ತೆ ತೆಗೆದುಕೊಳ್ಳಲಿಲ್ಲ ಶಿಲುಬೆಯ ಆಕಾರಕ್ಕ ಕೈಯಾಡಿಸಿ ರಕ್ಷೆ ಹಾಕಿಕೊಂಡು, ಮಾರ್ಟಿನ್ನನನ್ನು ವಂದಿಸಿ ಬಟ್ಟಲನ್ನು ಕೆಳಗಿಟ್ಟು ಎದ್ದು ನಿಂತನು.

'ಅಯ್ಯಾ ಮಾರ್ಟಿನ್ ಅವ್‌ಡೀಚ್ ತುಂಬ ಉಪಕಾರ ಮಾಡಿರುವೆಯಪ್ಪಾ ನನಗೆ. ನನ್ನ ದೇಹಕ್ಕೂ ಆತ್ಮಕ್ಕೂ ಎರಡಕ್ಕೂ ಆಹಾರವನ್ನು ಕೊಟ್ಟು ಸುಖಪಡಿಸಿದೆಯಪ್ಪ!'

'ಒಳ್ಳೆಯದಣ್ಣ ಆಗಾಗ ಬಂದು ಹೋಗುತ್ತಿರು. ಮನೆಗೆ ಯಾರಾದರೂ ಅತಿಥಿ ಬಂದರೆ ನನಗೆ ತುಂಬ ಆನಂದ'

ಸ್ಟೀವನ್ನನು ಹೊರಟುಹೋದನು ಮಾರ್ಟಿನ್ನನು ಉಳಿದ ಟೀಯನ್ನು ಬಗ್ಗಿಸಿಕೊಂಡು ಕುಡಿದು, ಪಾತ್ರೆಗಳನ್ನೆಲ್ಲ ಒಂದು ಕಡೆಗೆ ತೆಗೆದಿಟ್ಟು ಮತ್ತೆ ಕಿಟಕಿಯ ಹತ್ತಿರ ಕುಳಿತುಕೊಂಡು ಕೆಲಸಕ್ಕ ಮೊದಲುಮಾಡಿದನು. ಹೊಲಿಯುವಾಗಲೆಲ್ಲ ಮತ್ತೆ ಮತ್ತೆ ಕಿಟಕಿಯಲ್ಲಿ ನೋಡುತ್ತಲೇ ಇದ್ದನು.

ಕ್ರಿಸ್ತನು ಬರುವನೆಂದೇ ನಿರೀಕ್ಷಿಸುತ್ತ ಅವನನ್ನೂ ಅವನು ಮಾಡಿದ ಕೆಲಸಗಳನ್ನೂ ಧ್ಯಾನಿಸುತ್ತಿದ್ದನು. ಅವನ ತಲೆಯ ತುಂಬ ಕ್ರಿಸ್ತನ ವಚನಗಳೇ ತುಂಬಿಕೊಂಡಿದ್ದವು.

ಬೀದಿಯಲ್ಲಿ ಇಬ್ಬರು ಸಿಪಾಯಿಗಳು ನಡೆದುಹೋದರು. ಒಬ್ಬನು ಹಾಕಿದ್ದದ್ದು ಸರ್ಕಾರದ ಮೋಜ, ಮತ್ತೊಬ್ಬನದು ಅವನೇ ಮಾಡಿ ಕೊಟ್ಟದ್ದು. ಆಮೇಲೆ ನೆರೆಮನೆಯ ಯಜಮಾನನು ಹೊಳೆಹೊಳೆಯುವ ಮೋಜಗಳನ್ನು ಮೆಟ್ಟಿ ಹೊರಗೆ ಬಂದನು. ಅವನಾದಮೇಲೆ ರೊಟ್ಟಿಯವನು

ಬುಟ್ಟಿಯ ತುಂಬ ರೊಟ್ಟಿಗಳನ್ನು ಹೊತ್ತುಕೊಂಡು ಹೊರಟನು. ಅವರೆಲ್ಲರೂ ಮುಂದಕ್ಕೆ ಹೋದಬಳಿಕ ತುಪಟದ ಕಾಲುಚೀಲಗಳನ್ನು ಹಾಕಿಕೊಂಡು ಹಳ್ಳಿಯ ಪಾಪಾಸು ಮೆಟ್ಟಿಕೊಂಡು ಒಬ್ಬ ಹೆಂಗಸು ಬಂದಳು. ಅವಳೂ ಮುಂದಕ್ಕ ಹೋಗತಕ್ಕವಳೇ, ಏನೋ ಕಿಟಿಕಿಯ ಹತ್ತಿರ ಸ್ವಲ್ಪ ನಿಂತುಕೊಂಡಳು. ಮಾರ್ಟಿನ್ನನು ಕಿಟಿಕಿಯಲ್ಲಿ ಬಗ್ಗಿ ಮೇಲ್ಮುಖವಾಗಿ ನೋಡಿದನು ಆ ಹೆಂಗಸು ಅಲ್ಲಿಗೆ ಹೊಸಬಳು ಮೈಮೇಲೆ ತಕ್ಕಷ್ಟು ಬಟ್ಟೆಯಿಲ್ಲ, ಕಂಕುಳಲ್ಲೊಂದು ಕೂಸು ಬೀಸುತ್ತಿದ್ದ ಥಂಡಿ ಗಾಳಿಗೆ ಬೆನ್ನೊಡ್ಡಿ, ಗೋಡೆಯ ಪಕ್ಕದಲ್ಲಿ ನಿಂತು ಮಗುವಿನ ಮೈ ಮುಚ್ಚುವುದಕ್ಕ ಹವಣಿಸುತ್ತಿದ್ದಳು. ಆದರೇನು, ಹೊದ್ದಿಸುವುದಕ್ಕ ಅವಳಲ್ಲಿ ಏನೂ ಇರಲಿಲ್ಲ ಇದ್ದ ಬಟ್ಟೆಯೆಲ್ಲ ಬೇಸಿಗೆ ಕಾಲಕ್ಕ ತಕ್ಕದ್ದು, ಅದೂ ಸಾಕಾದಷ್ಟಿಲ್ಲ; ಸಾಲದ್ದಕ್ಕ ತುಂಬ ಹಳೆಯದು. ಮಗು ಬಹಳ ಅಳುತ್ತಿದ್ದಿತು ತಾಯಿ ಅದನ್ನು ಸಮಾಧಾನಪಡಿಸುತ್ತಿದ್ದಳು, ಏನು ಮಾಡಿದರೂ ಮಗು ಮಾತ್ರ ಸುಮ್ಮನಾಗದು. ಇದೆಲ್ಲ ಮಾರ್ಟಿನ್ನನಿಗೆ ಕೇಳಿಸಿತು ಎದ್ದು ಹೋಗಿ ಬಾಗಿಲು ತೆಗೆದು ಮೆಟ್ಟಲಿನ ಮೇಲೆ ನಿಂತು 'ಅಮ್ಮಾ, ತಾಯಿ!' ಎಂದು ಕೂಗಿದನು. ಅವನು ಕೂಗಿದ್ದನ್ನು ಕೇಳಿ ಆಕೆ ಅತ್ತಕಡೆಗೆ ತಿರುಗಿದಳು. 'ಥಂಡಿಯಲ್ಲೇಕಮ್ಮಾ ನಿಂತೆ ಮಗುವನ್ನೆತ್ತಿಕೊಂಡು? ಒಳಗೆ ಬಾ. ಬೆಚ್ಚಗಿರುವ ಕಡೆಯಲ್ಲಿ ಮಗುವನ್ನು ಸಮಾಧಾನಮಾಡುವುದು ಸುಲಭ. ಬಾರಮ್ಮಾ ಒಳಗೆ' ಎಂದು ಕರೆದನು.

ಅವನ ಮಾತುಗಳನ್ನು ಕೇಳಿ ಆ ಹೆಂಗಸು ಬೆರಗಾಗಿ ಹೋದಳು. ತನ್ನನ್ನು ಒಳಕ್ಕೆ ಕರೆಯುತ್ತಿದ್ದವನು ಮೇಲು ಹೊದಿಕೆಯನ್ನು ಹೊದೆದು ಕನ್ನಡಕವನ್ನು ಹಾಕಿದ್ದ ಒಬ್ಬ ಮುದುಕನೆಂಬುದನ್ನು ತಿಳಿದು ಅವನನ್ನು ಹಿಂಬಾಲಿಸಿ ಒಳಕ್ಕೆ ಹೋದಳು.

ಇಬ್ಬರೂ ಮೆಟ್ಟಲನ್ನಿಳಿದು ಆ ಪುಟ್ಟ ಕೋಣೆಯೊಳಗೆ ಹೋದರು. ಮಾರ್ಟಿನ್ನನು ಆಕೆಯನ್ನು ತನ್ನ ಹಾಸಿಗೆಯ ಬಳಿಗೆ ಕರೆದುಕೊಂಡು ಹೋಗಿ,

'ತಾಯಿ, ಅಲ್ಲಿ ಕುಳಿತುಕೊಳ್ಳಮ್ಮಾ, ಆ ಒಲೆಯ ಹತ್ತಿರ. ಬೆಂಕಿ ಕಾಸಿಕೊ, ಸ್ವಲ್ಪ ಬೆಚ್ಚಗಾಗಲಿ. ಮಗುವನ್ನು ನಂಬಿಸಿ ಸಮಾಧಾನಪಡಿಸು' ಎಂದನು

ಆ ಹೆಂಗಸು 'ಹೇಗೆ ನಂಬಿಸಲಜ್ಜ ! ನನಗೆ ಹಾಲೇ ಇಲ್ಲ ಇವತ್ತು ಬೆಳಗಿನಿಂದ ಹೊಟ್ಟೆಗೂ ಇಲ್ಲ' ಎಂದು ಹೇಳುತ್ತ, ಹಾಲಿಲ್ಲದಿದ್ದರೂ ಮಗು ವನ್ನು ಎತ್ತಿಕೊಂಡು ಮೊಲೆ ಕೊಡುತ್ತಿದ್ದಳು.

ಮಾರ್ಟಿನ್ನನು ತಲೆಯನ್ನಲುಗಿಸುತ್ತಾ ತನ್ನ ಮೇಜಿನ ಹತ್ತಿರ ಹೋಗಿ, ರೊಟ್ಟಿಯನ್ನೂ ಒಂದು ಚಟ್ಟಿಯನ್ನೂ ತಂದು, ಒಲೆಯ ಬಾಗಿಲನ್ನು ತೆರೆದು ಕೋಸುಗೆಡ್ಡೆಯ ಹುಳಿಯನ್ನು ಚಟ್ಟಿಗೆ ಸ್ವಲ್ಪ ಬಗ್ಗಿಸಿ ಕೊಂಡನು. ಆಮೇಲೆ ಅಂಬಲಿಯ ಮಡಕೆಯ ಹತ್ತಿರ ಹೋಗಿ ನೋಡಿ ದನು. ಅದಿನ್ನೂ ಸರಿಯಾಗಿ ಬೆಂದಿರಲಿಲ್ಲ. ಆದ್ದರಿಂದ ಒರಿಯ ಹುಳಿ ಯನ್ನೇ ತೆಗೆದುಕೊಂಡು ಬಂದನು ರೊಟ್ಟಿಯನ್ನು ಕತ್ತರಿಸಿ, ಒಂದು ಬಟ್ಟೆಯನ್ನು ತಂದು ಆ ಮೇಜಿನ ಮೇಲೆ ಹರಡಿ, ಎಲ್ಲವನ್ನೂ ಅದರ ಮೇಲೆ ಅಣಿಮಾಡಿಟ್ಟನು

'ಅಮ್ಮಾ ನೀನು ಊಟಕ್ಕೇಳು ಅದುವರೆಗೂ ಮಗುವನ್ನು ನಾನು ನೋಡಿಕೊಳ್ಳುತ್ತೇನೆ ನನಗೂ ಮಕ್ಕಳಿದ್ದವು. ಅವುಗಳನ್ನು ಆಡಿಸಿ ಅಭ್ಯಾಸವಿದೆ' ಎಂದನು

ಆ ಹೆಂಗಸು ಶಿಲುಬೆಯ ಹಾಗೆ ಕೈಯಾಡಿಸಿ ರಕ್ಷೆ ಹಾಕಿಕೊಂಡು ಮೇಜಿನ ಮುಂದೆ ಕುಳಿತು ಊಟಕ್ಕೆ ಮೊದಲುಮಾಡಿದಳು. ಮಾರ್ಟಿನ್ನನು ಹಾಸಿಗೆಯ ಮೇಲೆ ಮಗುವಿನ ಹತ್ತಿರ ಕುಳಿತುಕೊಂಡು ಅದನ್ನು ಆಡಿಸ ತೊಡಗಿದನು ಎರಡು ತುಟಿಗಳನ್ನೂ ಒಂದರ ಮೇಲೊಂದನ್ನು ಚೆನ್ನಾಗಿ ಊರಿ ಬೇಗ ಬೇಗ ಬಿಟ್ಟು ಮುಚ್ಚಿ ಸದ್ದುಮಾಡಿ ನೋಡಿದನು. ಆದರೆ ಅವನಿಗೆ ಹಲ್ಲೇ ಇರಲಿಲ್ಲವಾದ್ದರಿಂದ ಅದು ಸಮರ್ಪಕವಾಗಲಿಲ್ಲ. ಮಗು ಅಳುವನ್ನು ನಿಲ್ಲಿಸಲೇ ಇಲ್ಲ. ಅದನ್ನು ಕಂಡು ಮಾರ್ಟಿನ್ನನು ತನ್ನ ಕೈ

ಬೆರಳಿನಿಂದ ತಿವಿಯುವವನ ಹಾಗೆ ನಟಿಸುವುದಕ್ಕೆ ಮೊದಲುಮಾಡಿದನು. ಬೆಟ್ಟನ್ನು ಚೆನ್ನಾಗಿ ಅಲುಗಾಡಿಸಿ ಮಗುವಿನ ಬಾಯಿನವರೆಗೂ ಚಾಚಿ ನೀಡುವುದು, ಕೂಡಲೆ ಫಕ್ಕನೆ ಹಿಂದಕ್ಕೆ ಎಳೆದುಕೊಳ್ಳುವುದು—ಹೀಗೆ ಮಾಡುತ್ತ ಬಂದನು. ಬೆರಳು ಅರಗು ಅಂಟಿ ಕಪ್ಪಾಗಿದ್ದಿತು. ಅದನ್ನೆಲ್ಲಿ ಮಗು ಚೀಪುವುದೋ ಎಂದು ಅವನಿಗೆ ಹೆದರಿಕೆ. ಮಗು ಆ ಕಪ್ಪನೆಯ ಬೆರಳನ್ನು ಒಂದೇ ಸಮನಾಗಿ ದುರುಗುಟ್ಟಿ ನೋಡಿ, ಕಡೆಗೆ ಅಳುವುದನ್ನು ಬಿಟ್ಟು ನಗತೊಡಗಿತು. ಇದನ್ನು ಕಂಡು ಮಾರ್ಟಿನ್ನನಿಗೆ ಬಹಳ ಆನಂದ ವಾಯಿತು.

ಅಷ್ಟು ಹೊತ್ತಿಗೆ ಆ ಹೆಂಗಸು ಊಟಕ್ಕ ಪ್ರಾರಂಭಿಸಿದ್ದಳು. ಊಟ ಮಾಡುವಾಗ ತಾನು ಯಾರು, ಹೋಗುತ್ತಿದ್ದದ್ದು ಎಲ್ಲಿಗೆ, ಎಂದು ಮುಂತಾದ ತನ್ನ ಕಥೆಯನ್ನೆಲ್ಲ ಮಾರ್ಟಿನ್ನನಿಗೆ ಹೇಳಿದಳು.

'ನಾನೊಬ್ಬ ಸಿಪಾಯಿಯ ಹೆಂಡತಿ. ಈಗ ಎಂಟು ತಿಂಗಳ ಹಿಂದೆ ನನ್ನ ಗಂಡನನ್ನು ಯಾವುದೋ ಒಂದು ದೂರ ದೇಶಕ್ಕೆ ಕಳುಹಿಸಿದರು. ಇವತ್ತಿನವರೆಗೂ ಅವನ ಸುದ್ದಿಯೇ ತಿಳಿಯದು. ನಾನು ಒಬ್ಬರ ಮನೆ ಯಲ್ಲಿ ಅಡಿಗೆ ಮಾಡಿಕೊಂಡಿದ್ದೆ. ಈ ಮಗು ಹುಟ್ಟಿತು. ಆಮೇಲೆ ಮಗು ವಿನ ತಾಯಿಯನ್ನು ಕೆಲಸಕ್ಕಿಟ್ಟುಕೊಳ್ಳುವುದಕ್ಕೆ ಅವರು ಒಪ್ಪಲಿಲ್ಲ. ಈಗ ಮೂರು ತಿಂಗಳಿಂದಲೂ ಒಂದು ಕೆಲಸವೂ ಇಲ್ಲದೆ ಹೊಟ್ಟೆ ಹೊರೆದು ಕೊಳ್ಳಲು ಒಲು ಬವಣೆ ಪಡುತ್ತಿದೇನೆ ಇದ್ದದ್ದನ್ನೆಲ್ಲ ಹೊಟ್ಟೆಗಾಗಿ ಮಾರಿಬಿಟ್ಟೆ. ಹಾಲು ಕೊಡುವ ದಾದಿಯಾದರೂ ಆಗೋಣವೆಂದು ಎಲ್ಲೆಲ್ಲಿಯೋ ಅಲೆದೆ. ಎಲ್ಲಿಯೂ ಕೆಲಸ ಸಿಕ್ಕಲಿಲ್ಲ. 'ನೀನು ಬಹಳ ಕೃಶ ವಾಗಿದ್ದೀಯ, ಬೇಡ' ಎಂದು ಬಿಟ್ಟರು. ಇಲ್ಲಿ ಒಬ್ಬ ಸಾಹುಕಾರರ ಮನೆಯಲ್ಲಿ ನಮ್ಮೂರಿನವಳೊಬ್ಬಳು ಕೆಲಸಕ್ಕಿದಾಳೆ. ಅವರ ಮನೆಗೆ ಹೋಗಿದ್ದೆ. ಸಾಹುಕಾರರ ಹೆಂಡತಿ ನನಗೆ ಕೆಲಸ ಕೊಡುವುದಾಗಿ ಹೇಳಿ ದ್ದರು. 'ಈಗಿನಿಂದಲೂ ಇಟ್ಟುಕೊಳ್ಳಬಹುದು' ಎಂದುಕೊಂಡಿದ್ದೆ. ಆದರೆ

ಅವರು 'ಮುಂದಿನ ವಾರಕ್ಕಿಂತ ಮುಂಚೆ ಬರಬೇಡ' ಅಂದುಬಿಟ್ಟರು. ಅವರ ಮನೆ ಇಲ್ಲಿಗೆ ಬಲು ದೂರ. ಹೋಗಿ ಬಂದು ನನಗೆ ಬಹಳ ಆಯಾಸ ವಾಯಿತು. ಪುಟ್ಟ ಮಗುವಂತೂ ತೀರ ಬಳಲಿಹೋಯಿತು. ದೇವರ ದಯದಿಂದ, ನಾಸಿರುವ ಮನೆಯ ಯಜಮಾನಿ ನನ್ನಲ್ಲಿ ತುಂಬ ಮರುಕ ವಿಟ್ಟಿದಾಳೆ. ಆ ನಮ್ಮ ತಂದೆ ಕ್ರಿಸ್ತನನ್ನು ನೆನೆದುಕೊಂಡು ನನಗೆ ಜಾಗ ವನ್ನು ಬಿಟ್ಟಿಯಾಗಿ ಕೊಟ್ಟಿದಾಳೆ. ಇಲ್ಲದಿದ್ದರೆ ನಾವು ಹೇಗೆ ಬದು ಕುತ್ತಿದ್ದೆವೋ ನನಗೆ ಬೇರೆ ತಿಳಿಯದು

ಮಾರ್ಟಿನ್ನನು ನಿಟ್ಟುಸಿರು ಬಿಟ್ಟು 'ಹೊದೆಯುವುದಕ್ಕೆ ಬೆಚ್ಚಗಿರುವ ಬಟ್ಟೆಯಾದರೂ ಇದೆಯೋ ಇಲ್ಲವೋ ?' ಎಂದು ಕೇಳಿದನು.

'ಅದು ಹೇಗಿದ್ದೀತಜ್ಜ ! ನನ್ನ ಹತ್ತಿರ ಇದ್ದ ಒಂದೇ ಒಂದು ಶಾಲನ್ನು ನಿನ್ನೆಯಿನ್ನೂ ಆರು ಪೆನ್ನಿಗೆ ಅಡವಿಟ್ಟು ಬಂದೆ.'

ಅವಳು ಹೀಗೆ ಹೇಳುತ್ತಾ ಹಾಸಿಗೆಯ ಹತ್ತಿರಹೋಗಿ ಮಗುವನ್ನು ಎತ್ತಿಕೊಂಡಳು. ಮಾರ್ಟಿನ್ನನು ಎದ್ದು ಪೆರಾರಿಯ ಬಳಿಗೆ ಹೋಗಿ, ಅಲ್ಲೆಲ್ಲ ಹುಡುಕಾಡಿ, ಒಂದು ಹಳೆಯ ಜಾಕೆಟ್ಟನ್ನು ತೆಗೆದುಕೊಂಡು ಬಂದು,

'ಇದು ನೋಡಮ್ಮ, ಅಷ್ಟೇನು ಚೆನ್ನಾಗಿಲ್ಲ. ಆದರೂ ಸ್ವಲ್ಪ ದಿನ ತೊಟ್ಟುಕೊಳ್ಳಬಹುದು' ಎಂದನು.

ಆಕೆ ಜಾಕೆಟ್ಟನ್ನು ನೋಡಿದಳು, ಮಾರ್ಟಿನ್ನನ ಮುಖವನ್ನೂ ದೃಷ್ಟಿಸಿದಳು. ಆಮೇಲೆ ಅದನ್ನು ಕೈಗೆ ತೆಗೆದುಕೊಂಡು ತುಟುತುಟನೆ ಕಣ್ಣೀರು ಸುರಿಸತೊಡಗಿದಳು. ಮಾರ್ಟಿನ್ನನು ಒಂದುಕಡೆ ತಿರುಗಿಕೊಂಡು ತಲೆದಿಂಬಿನ ಕೆಳಗೆ ಕೈತುರುಕಿ, ಒಂದು ಸಣ್ಣ ಪೆಟ್ಟಿಗೆಯನ್ನು ಹೊರಕ್ಕೆ ಎಳೆದುಕೊಂಡನು. ಅದರ ಬಾಯಿ ತೆಗೆದು ಸ್ವಲ್ಪ ಹೊತ್ತು ಹುಡುಕಾಡಿ ಆಮೇಲೆ ಹಿಂತಿರುಗಿ ಬಂದು ಆವಳಿಗೆ ಅಭಿಮುಖವಾಗಿ ಕುಳಿತುಕೊಂಡನು.

'ಅಜ್ಜ, ನಿನಗೆ ದೇವರು ಒಳ್ಳೆಯದು ಮಾಡಲಿ ! ಆ ಯೇಸುಸ್ವಾಮಿಯೇ ನನ್ನನ್ನು ನಿನ್ನ ಮನೆಗೆ ಕಳುಹಿಸಿರಬೇಕು. ಈ ಮಂಜಿನಲ್ಲಿ ಮಗು

ಕೊರಡಾಗಿ ಹೋಗುತ್ತಿತ್ತು. ನಾನು ಹೊರಟಾಗ ಏನೂ ಇರಲಿಲ್ಲ. ಈಗ ನೋಡಿದರೆ ಎಲ್ಲೆಲ್ಲಿಯೂ ಮಂಜಿನ ಉರುಳುಗಳೇ! ನಿಜವಾಗಿಯೂ ಆ ಕ್ರಿಸ್ತನೇ ಬಂದು ಕಿಟಿಕಿಯಲ್ಲಿ ನೋಡುವಹಾಗೆ ನಿನಗೆ ಹೇಳಿರಬೇಕಜ್ಜ! ನನ್ನಂಥ ದೀನದರಿದ್ರಳನ್ನು ಕಂಡು ಮರುಕಪಡುವಂತೆ ಅವನೇ ಹೇಳಿರಬೇಕಜ್ಜ ನಿನಗೆ!'

ಮಾರ್ಟಿನ್ನನು ಮುಗುಳುನಗೆಯನ್ನು ಸೂಸುತ್ತ 'ಹೌದಮ್ಮಾ, ನನಗೆ ಅವನು ಹಾಗೆ ಹೇಳಿದ್ದು ನಿಜ. ಯಾವ ಉದ್ದೇಶವೂ ಇಲ್ಲದೆ ಸುಮ್ಮನೆ ಕಿಟಕಿಯಲ್ಲಿ ನೋಡುತ್ತಿದ್ದು ಅಕಸ್ಮಾತ್ತಾಗಿ ನಿನ್ನನ್ನು ಕಾಣಲಿಲ್ಲ' ಎಂದು, ಹಿಂದಿನ ರಾತ್ರಿ ತನಗೆ ಆದ ಕನಸು, ಅದರಲ್ಲಿ ಆ ದಿನ ಕ್ರಿಸ್ತನು ಬರುವನೆಂದು ಒಂದು ವಾಣಿ ಕೇಳಿಸಿದ್ದು, ಎಲ್ಲವನ್ನೂ ವಿಸ್ತಾರವಾಗಿ ಹೇಳಿದನು.

'ಯಾರಿಗೆ ಗೊತ್ತು? ಎಲ್ಲವೂ ಸಾಧ್ಯವಾಗಬಹುದು' ಎಂದಳು ಆ ಹೆಂಗಸು. ಆಮೇಲೆ ಎದ್ದು ನಿಂತು ಜಾಕೆಟ್ಟನ್ನು ತೊಟ್ಟುಕೊಂಡಳು. ಮಗುವಿಗೂ ಅದನ್ನೇ ಸ್ವಲ್ಪ ಹೊದ್ದಿಸಿ ಮಾರ್ಟಿನ್ನನನ್ನು ಮನಃಪೂರ್ವಕವಾಗಿ ಹರಸಿದಳು.

ಮಾರ್ಟಿನ್ನನು ಆರು ಪೆನ್ನಿಗಳನ್ನು ಅವಳ ಕೈಗೆ ಕೊಟ್ಟು 'ಅಮ್ಮಾ, ಹೋಗಿ ನಿನ್ನ ಶಾಲನ್ನು ಬಿಡಿಸಿಕೊಳ್ಳಮ್ಮ' ಎಂದನು. ಬಳಿಕ ಇಬ್ಬರೂ ಶಿಲುಬೆಯ ರಕ್ಷೆ ಹಾಕಿಕೊಂಡರು. ಮಾರ್ಟಿನ್ನನು ಬಾಗಿಲು ತೆಗೆದನು, ಆ ಹೆಂಗಸು ಹೊರಟುಹೋದಳು.

ಅವಳು ಹೊರಟುಹೋದಮೇಲೆ ಮಾರ್ಟಿನ್ನನು ಪಾತ್ರೆಗಳನ್ನೆಲ್ಲ ತೆಗೆದಿರಿಸಿ, ಮತ್ತೆ ಕೆಲಸಕ್ಕೆ ಕುಳಿತನು. ಕೆಲಸಮಾಡುವಾಗ ಕಿಟಿಕಿಯಕಡೆ ಗಮನವಿಟ್ಟು ನೋಡುವುದನ್ನು ಮರೆಯಲಿಲ್ಲ. ಅದರಮೇಲೆ ನೆರಳುಬಿದ್ದು ಕತ್ತಲೆಯಾದರೆ ಕೂಡಲೆ ಕತ್ತೆತ್ತಿ ನೋಡುತ್ತಿದ್ದನು. ಅವನಿಗೆ ಪರಿಚಯವಿದ್ದವರೂ ಇಲ್ಲದವರೂ ಎಷ್ಟೋ ಜನರು ಬೀದಿಯಲ್ಲಿ ಹೋದರು. ಯಾರ

ಲ್ಲಿಯೂ ಏನೂ ವಿಶೇಷವಿರಲಿಲ್ಲ. ಕಟ್ಟಕಡೆಗೆ ಹಣ್ಣು ಮಾರುವ ಒಬ್ಬ ಮುದುಕಿ ಬಂದು ಅವನ ಕಿಟಿಕಿಯ ಎದುರಿಗೆ ನಿಂತಳು. ಅವಳ ತಲೆಯ ಮೇಲೆ ಒಂದು ಹಣ್ಣಿನ ಕುಕ್ಕೆ. ಮುಕ್ಕಾಲು ಮೂರುವೀಸಪಾಲು ಹಣ್ಣು ಗಳನ್ನೆಲ್ಲ ಮಾರಿದ್ದಳು, ಕುಕ್ಕೆಯಲ್ಲಿ ಇನ್ನು ಎಲ್ಲಿಯೋ ಸ್ವಲ್ಪ ಹಣ್ಣುಗಳು ಮಾತ್ರ ಉಳಿದಿದ್ದವು. ಯಾವುದೋ ಒಂದು ಹೊಸ ಮನೆಯ ಹತ್ತಿರ ಆರಿಸಿಕೊಂಡಿದ್ದಳೆಂದು ಕಾಣುತ್ತದೆ, ಹೆಗಲಮೇಲೆ ಚಕ್ಕೆಯನ್ನು ತುಂಬಿದ ಒಂದು ಚೀಲವನ್ನು ಹೊತ್ತು ಮನೆಗೆ ತೆಗೆದುಕೊಂಡು ಹೋಗುತ್ತಿದ್ದಳು. ಆ ಚೀಲ ಅವಳನ್ನು ಬಹಳ ದಣಿಸಿಬಿಟ್ಟಿದ್ದಿತು ಅದನ್ನು ಮತ್ತೊಂದು ಹೆಗಲಿಗೆ ಬದಲಾಯಿಸಿಕೊಳ್ಳುವುದಕ್ಕೆಂದು ಅಲ್ಲಿ ನಿಂತಳು. ಹಣ್ಣಿನ ಕುಕ್ಕೆ ಯನ್ನು ಒಂದು ಕಲ್ಲಿನ ಮೇಲಿಟ್ಟು, ಚಕ್ಕೆಯ ಚೀಲವನ್ನು ನೆಲಕ್ಕೆ ಎತ್ತಿಹಾಕಿ ಚಕ್ಕೆಯೆಲ್ಲ ಹೊಂದಿಕೊಳ್ಳುವ ಹಾಗೆ ಚೀಲವನ್ನು ಕುಲುಕತೊಡಗಿದಳು. ಅವಳು ಈ ಕಲಸದಲ್ಲಿರುವಾಗ ಹಣ್ಣಿನ ಕುಕ್ಕೆಯ ಒಳಿಗೆ ಹರುಕು ಟೋಪಿಯ ಒಬ್ಬ ಚಿಕ್ಕ ಹುಡುಗನು ತಟ್ಟನೆ ಬಂದು ಪಟಕ್ಕನೆ ಒಂದು ಹಣ್ಣನ್ನು ತೆಗೆದು ಕೊಂಡು ಹಾರಿ ಓಡುವುದಕ್ಕೆ ಮೊದಲುಮಾಡಿದನು. ಮುದುಕಿ ಅದನ್ನು ಕಂಡು ಆ ಕಡೆಗೆ ತಿರುಗಿ ಥಕ್ಕನೆ ಅವನ ಕೈ ಹಿಡಿದುಕೊಂಡಳು. ಹುಡು ಗನು ತಪ್ಪಿಸಿಕೊಳ್ಳುವುದಕ್ಕೆ ಬಹಳ ಹೆಣಗಾಡಿದನು ಮುದುಕಿ ಎರಡು ಕೈಗಳಲ್ಲಿಯೂ ಭದ್ರವಾಗಿ ಹಿಡಿದುಕೊಂಡು ತಪ್ಪಿಸಿಕೊಳ್ಳುವುದಕ್ಕೆ ಅವಕಾಶವನ್ನೇ ಕೊಡಲಿಲ್ಲ. ಕಡಗೆ ಹರುಕು ಟೋಪಿಯನ್ನು ಕೆಳಗೆ ಕಡವಿ ಬುಟ್ಟು ಹಿಡಿದು ನಿಲ್ಲಿಸಿಕೊಂಡಳು. ಹುಡುಗನು ಚೀರುತ್ತಿದ್ದನು, ಮುದುಕಿ ಬಯ್ಯುತ್ತಿದ್ದಳು. ಮಾರ್ಟಿನ್ನನು ಉಳಿ ಚಾಣಗಳನ್ನು ಮೇಜಿನೊಳಗೆ ಹಾಕುವುದಕ್ಕೂ ನಿಲ್ಲಲಿಲ್ಲ, ಎಲ್ಲವನ್ನೂ ನೆಲದಮೇಲೆ ಚೆಲ್ಲಾಡಿ, ಬೇಗಬೇಗ ಬೀದಿಯ ಕಡೆಗೆ ಓಡಿದನು. ಮೆಟ್ಟಿಲನ್ನು ಹತ್ತುವಾಗ ಎಡವಿ ಮುಗ್ಗರಿಸಿ ಕನ್ನಡಕವನ್ನು ಕೆಳಗೆ ಕೆಡವಿಕೊಂಡನು. ಅವನು ಬೀದಿಗೆ ಹೋದಾಗ ಮುದುಕಿ ಹುಡುಗನ ಕಿವಿಗಳನ್ನು ಹಿಂಡುತ್ತ ಪೋಲೀಸಿನವರಿಗೆ ತಿಳಿಸುವು

ದಾಗಿ ಹೆದರಿಸುತ್ತಿದ್ದಳು. ಹುಡುಗನು 'ನಾನು ತೆಗೆದುಕೊಳ್ಳಲಿಲ್ಲ! ನನ್ನನ್ನೇತಕ್ಕೆ ಹೊಡೆಯುತ್ತೀಯ? ಬಿಟ್ಟುಬಿಡು' ಎಂದು ಚೀರುತ್ತಲೂ ಬಿಡಿಸಿಕೊಳ್ಳುವುದಕ್ಕೆ ಹೆಣಗುತ್ತಲೂ ಇದ್ದನು. ಮಾರ್ಟಿನ್ನನು ಇಬ್ಬರಿಗೂ ನಡುವೆ ಹೋಗಿ, ಹುಡುಗನ ಕೈ ಹಿಡಿದುಕೊಂಡು, 'ತಾಯಿ' ಹೋಗಲಿ ಇವನನ್ನು ಬಿಟ್ಟು ಬಿಡು, ಯೇಸುಕ್ರಿಸ್ತನಿಗಾಗಿ ಇವನನ್ನು ಮನ್ನಿಸಿಬಿಡು' ಎಂದನು.

'ಮನ್ನಿಸಬೇಕೇ? ಆಗಲಿ! ಇನ್ನೊಂದು ವರ್ಷದ ವರೆಗೂ ಮರೆಯ ಬಾರದು, ಹಾಗೆ ಮಾಡುತ್ತೇನೆ! ಪೋಲೀಸಿಗೆ ಕೊಟ್ಟುಬಿಡುತ್ತೇನೆ, ಈ ತುಂಟನ್ನ.'

ಆ ಮುದುಕಿಯನ್ನು ಸಮಾಧಾನಪಡಿಸುವುದಕ್ಕೆ ಮಾರ್ಟಿನ್ನನು ಮತ್ತೆ ಪ್ರಯತ್ನಪಟ್ಟನು.

'ಹೋಗಲಿ, ಬಿಡು, ತಾಯಿ ಇನ್ನುಮೇಲೆ ಅವನೆಂದೂ ಹೀಗೆ ಮಾಡುವುದಿಲ್ಲ. ಏಸುಸ್ವಾಮಿಯನ್ನು ನೆನೆದುಕೊಂಡು ಬಿಟ್ಟುಬಿಡು ತಾಯಿ' ಎಂದನು.

ಮುದುಕಿ ಕೈಬಿಟ್ಟಳು. ಹುಡುಗನು ಓಡಿಹೋಗುವುದಕ್ಕೆ ಹವಣಿಸಿದನು. ಆದರೆ ಮಾರ್ಟಿನ್ನನು ಅವನನ್ನು ತಡೆದು ಗಟ್ಟಿಯಾಗಿ ಹಿಡಿದುಕೊಂಡು—

'ಈ ಅಜ್ಜಿಯನ್ನು ಬೇಡಿಕೊ, ನಿನ್ನನ್ನು ಮನ್ನಿಸುವ ಹಾಗೆ. ಮತ್ತೆ ಹೀಗೆ ಮಾಡಬೇಡ. ಈಗ ನೀನು ತೆಗೆದುಕೊಂಡದ್ದನ್ನು ನಾನು ಕಣ್ಣಾರ ಕಂಡಿದ್ದೇನೆ. ಬೇಗ ಕ್ಷಮಾಪಣೆ ಕೇಳಿಕೊ' ಎಂದನು.

ಹುಡುಗನು ಅಳುವುದಕ್ಕೆ ಪ್ರಾರಂಭಿಸಿದನು. ಅಳುತ್ತಳುತ್ತ ತನ್ನನ್ನು ಕ್ಷಮಿಸಬೇಕೆಂದು ಆ ಮುದುಕಿಯನ್ನು ಬೇಡಿಕೊಂಡನು.

'ಇದೀಗ ಸರಿಯಾದ ಕೆಲಸ. ಇಗೋ ಇಲ್ಲೊಂದು ಹಣ್ಣು. ತಗೋ ಇದನ್ನು' ಎಂದು ಮಾರ್ಟಿನ್ನನು ಕುಕ್ಕೆಯಿಂದ ಒಂದು ಹಣ್ಣನ್ನು ತೆಗೆದು

ಕೊಂಡು ಹುಡುಗನ ಕೈಗೆ ಕೊಟ್ಟನು. ಮುದುಕಿಗೆ 'ತಾಯಿ, ಇದಕ್ಕೆ ನಾನು ಬೆಲೆ ಕೊಡುತ್ತೇನೆ' ಎಂದು ಹೇಳಿದನು.

ಇದನ್ನು ಕಂಡು ಆ ಮುದುಕಿ, 'ಹೀಗೆ ಮಾಡಿ ಈ ತುಂಟರನ್ನೆಲ್ಲ ನೀನೇ ಕೆಡಿಸಿಬಿಡುತ್ತೀಯ! ಇವನ ತುಂಟತನಕ್ಕೆ ಇನ್ನೊಂದು ವಾರದ ವರೆಗೂ ಮರೆಯದ ಹಾಗೆ ಛಡಿ ಏಟು ಕೊಡುವುದೇ ತಕ್ಕ ಉಡುಗೆರೆ' ಎಂದಳು.

'ಹಾಗಲ್ಲ ತಾಯಿ, ಹಾಗಲ್ಲ ನಮಗೇನೋ ಅದು ನ್ಯಾಯವಾಗಿ ಕಾಣಬಹುದು ಆದರೆ ಭಗವಂತನಿಗೆ ಅದು ನ್ಯಾಯವಾಗಿ ಕಾಣುವುದಿಲ್ಲ. ಒಂದು ಹಣ್ಣು ತೆಗೆದುಕೊಂಡದ್ದಕ್ಕೆ ಅವನಿಗೆ ಛಡಿ ಏಟು ಕೊಡಬೇಕಾದರೆ, ನಾವು ಮಾಡಿರುವ ಪಾಪಕ್ಕೆ ನಮ್ಮನ್ನೇನು ಮಾಡಬೇಕು?'

ಮುದುಕಿ ಸುಮ್ಮನಾದಳು.

ಮಾರ್ಟಿನ್ನನು ಒಬ್ಬ ದೊರೆ ತನಗೆ ಅಪಾರ ಹಣ ಕೊಡಬೇಕಾಗಿದ್ದ ಒಬ್ಬನನ್ನು ಮನ್ನಿಸಿ ಕಳುಹಿಸಿದರೂ, ಆ ಸಾಲಗಾರನು ತನಗೆ ಅಲ್ಪ ಸ್ವಲ್ಪ ಹಣ ಕೊಡಬೇಕಾಗಿದ್ದ ಬೇರೊಬ್ಬನನ್ನು ಬಹಳವಾಗಿ ಹಿಂಸಿಸಿ ಛಳಿಸಿದ ಕಥೆಯನ್ನು ಅವಳಿಗೆ ಹೇಳಿದನು. ಮುದುಕಿ ಕೇಳುತ್ತಾ ನಿಂತಳು. ಹುಡುಗನೂ ನಿಶ್ಚಲವಾಗಿ ನಿಂತು ಆಲಿಸ ತೊಡಗಿದನು.

'ನಾವು ಕ್ಷಮಿಸಬೇಕೆಂಬುದು ದೇವರ ಆಜ್ಞೆ. ನಾವು ಕ್ಷಮಿಸದಿದ್ದರೆ ನಮಗೆ ಕ್ಷಮೆ ದೊರೆಯುವುದಿಲ್ಲ. ಪ್ರತಿಯೊಬ್ಬರನ್ನೂ ಕ್ಷಮಿಸಬೇಕು. ಅದರಲ್ಲಿಯೂ ಏನೂ ಅರಿಯದ ಮಕ್ಕಳನ್ನಂತೂ ಕ್ಷಮಿಸಿಯೇ ತೀರಬೇಕು' ಎಂದು ಹೇಳಿದ ಮುದಿ ಚಮ್ಮಾರನ ಮಾತನ್ನು ಕೇಳಿ ಮುದುಕಿಯು ತಲೆಯನ್ನಲುಗಿಸುತ್ತ—

'ಹೌದು, ಅದೆಲ್ಲ ಸರಿಯೇ! ಆದರೆ ಈ ಹುಡುಗರು ತುಂಬ ಕೆಟ್ಟು ಹೋಗಿದಾರಲ್ಲ?' ಎಂದಳು.

'ಹಾಗಿದ್ದರೆ ನಮ್ಮಂಥ ದೊಡ್ಡವರು ಅವರಿಗೆ ಚೆನ್ನಾಗಿ ಬುದ್ಧಿ ಹೇಳಬೇಕು.'

'ನಾನು ಹೇಳುವುದೂ ಅದೇ. ನನಗೆ ಏಳು ಜನ ಮಕ್ಕಳಿದ್ದರು. ಈಗ ಒಬ್ಬಳೇ ಒಬ್ಬಳು ಮಗಳಿದಾಳೆ' ಎಂದು ಆ ಮುದುಕಿ ತಾನು ಮಗಳ ಮನೆಯಲ್ಲಿ ವಾಸಮಾಡುತ್ತಿರುವುದು, ತನಗೆ ಎಷ್ಟು ಜನ ಮೊಮ್ಮಕ್ಕಳಿರುವರೆಂಬುದು ಮುಂತಾದ ಸಂಗತಿಗಳನ್ನೆಲ್ಲ ಹೇಳಿಕೊಂಡಳು. 'ಈಗ ನನಗೆ ಶಕ್ತಿ ಬಹಳ ಕುಗ್ಗಿಹೋಯಿತು. ಆದರೂ ಹೆಣಗುತ್ತ ಕಲಸ ಮಾಡುತ್ತೇನೆ. ನನಗೆ ಮಕ್ಕಳನ್ನು ಕಂಡರೆ ತುಂಬ ಆಸೆ, ಆ ಮಕ್ಕಳೂ ಒಳ್ಳೆಯುವು. ಅವುಗಳ ಹಾಗೆ ನನ್ನನ್ನು ಪ್ರೀತಿಸುವವರು ಯಾರೂ ಇಲ್ಲ. ನಮ್ಮ 'ಆನಿ'ಯಂತೂ ನಾನು ಮನೆಯಲ್ಲಿರುವ ವರೆಗೂ ನನ್ನನ್ನು ಒಂದು ಗಳಿಗೆಯೂ ಬಿಟ್ಟಿರುವುದಿಲ್ಲ. ಯಾವಾಗಲೂ ಅಜ್ಜಿಯ ಹತ್ತಿರವೇ ಇರಬೇಕು. ಅಜ್ಜೀ, ಅಜ್ಜಿ ಎನ್ನುತ್ತಲೇ ಇರುತ್ತಾಳೆ .. .' ಮುದುಕಿಗೆ ಮುಂದೆ ಮಾತು ಹೊರಡದ ಹಾಗಾಯಿತು

ಸ್ವಲ್ಪ ನಿದಾನಿಸಿ ಹುಡುಗನನ್ನು ನೋಡಿ 'ನಿಜ, ಇವನೂ ಚಿಕ್ಕ ಮಗು. ದೇವರು ತಣ್ಣಗಿಟ್ಟಿರಲಪ್ಪ ನಿನ್ನ' ಎಂದಳು

ಹೀಗೆಂದು ಹೇಳಿ ಚೀಲವನ್ನು ತೆಗೆದು ಹೆಗಲ ಮೇಲೆ ಹಾಕಿಕೊಳ್ಳುತ್ತಿದ್ದಳು. ಅಷ್ಟರಲ್ಲಿ ಆ ಹುಡುಗನು ಅವಳ ಹತ್ತಿರಕ್ಕೆ ನುಗ್ಗಿ 'ಅಜ್ಜೀ ಆ ಚೀಲವನ್ನು ನನಗೆ ಕೊಡು, ನಾನೂ ನಿನ್ನ ದಾರಿಯಲ್ಲೇ ಬರಬೇಕು' ಎಂದನು.

ಮುದುಕಿ ತಲೆಯನ್ನಲುಗಿಸಿ 'ಹಾಗೆಯೇ ಆಗಲಿ' ಎಂದು ಚೀಲವನ್ನು ಹುಡುಗನ ಬೆನ್ನಿನ ಮೇಲೆ ಹೊರಿಸಿದಳು ಆಮೇಲೆ ಇಬ್ಬರೂ ಜೊತೆಯಾಗಿ ಬಹಳ ವಿಶ್ವಾಸದಿಂದ ಹಿತವಾಗಿ ಮಾತಾಡುತ್ತ ಬೀದಿಯಲ್ಲಿ ಹೊರಟರು. ಮುದುಕಿಯು ಮಾರ್ಟಿನ್ನನಿಂದ ದುಡ್ಡು ತೆಗೆದುಕೊಳ್ಳುವುದನ್ನು ಕೂಡ ಮರೆತುಬಿಟ್ಟಳು. ಅವರ ಮಾತುಗಳನ್ನು ಕೇಳುತ್ತಲೂ ಅವರು

ಕಣ್ಮರೆಯಾಗುವ ವರೆಗೂ ಅವರನ್ನೇ ದೃಷ್ಟಿಸಿ ನೋಡುತ್ತಲೂ ಮಾರ್ಟಿನ್ನನು ಬಹಳ ಹೊತ್ತು ಹೊರಗೇ ನಿಂತುಬಿಟ್ಟನು

ಅವರು ಪೂರ್ತಿಯಾಗಿ ಕಾಣಿಸದೆ ಹೋದಮೇಲೆ ಹಿಂದಿರುಗಿ ಒಳಕ್ಕೆ ಹೋದನು. ಕನ್ನಡಕ ಮೊದಲು ಕಡವಿದ ಒಳಿಯಲ್ಲಿಯೇ ಬಿದ್ದಿದ್ದಿತು, ಅದು ಸ್ವಲ್ಪವೂ ಒಡೆದಿರಲಿಲ್ಲ ಉಳಿ ಚಾಣಗಳನ್ನು ಕೈಗೆ ತೆಗೆದುಕೊಂಡು ಮತ್ತೆ ಕಲಸಕ್ಕ ಪ್ರಾರಂಭಮಾಡಿದನು. ಬಹುಬೇಗ ಕತ್ತಲೆಯಾಯಿತು, ದಾರಗಳನ್ನು ಪೋಣಿಸುವುದಕ್ಕೆ ರಂಧ್ರಗಳೇ ಕಾಣಿಸದಂತಾಯಿತು ಅಷ್ಟು ಹೊತ್ತಿಗೆ ಬೀದಿಯ ದೀಪಗಳನ್ನು ಹತ್ತಿಸುವ ಜವಾನನು ಬೀದಿಯಲ್ಲಿ ಹೊರಟನು ಅವನನ್ನು ಕಂಡು, ಮಾರ್ಟಿನ್ನನು 'ದೀಪ ಹತ್ತಿಸುವ ಹೊತ್ತಾಯಿತೇ!' ಎಂದುಕೊಂಡು ಹಣತೆಯ ಬತ್ತಿಯನ್ನು ಮೀಟಿ ಹತ್ತಿಸಿ ಬೆಳಕು ಮಾಡಿದನು. ಆಮೇಲೆ ಅದನ್ನು ಗೂಟಕ್ಕ ತೂಗುಹಾಕಿ ಕೆಲಸ ಮಾಡುತ್ತ ಕುಳಿತನು ಸ್ವಲ್ಪ ಹೊತ್ತಿನೊಳಗಾಗಿ ಆಗ ಹೊಲಿಯುತ್ತಿದ್ದ ಮೋಜಿನ ಕೆಲಸ ಮುಗಿಯಿತು. ಅದನ್ನು ಕೈಯಲ್ಲಿ ಹಿಡಿದು ತಿರುಗಿಸಿ ತಿರುಗಿಸಿ ನೋಡಿದನು ಬಹಳ ಚೆನ್ನಾಗಿ ಕಂಡಿತು. ಆಯುಧಗಳನ್ನೆಲ್ಲ ತೆಗೆದಿರಿಸಿ, ಕೆಳಗೆ ಬಿದ್ದಿದ್ದ ಚೂರುಗಳನ್ನು ಗುಡಿಸಿ, ದಾರಗಳು, ಚಾಣಗಳು ಚಕ್ಕಳಗಳು—ಎಲ್ಲವನ್ನೂ ಒಂದು ಕಡೆಗೆ ತೆಗೆದಿಟ್ಟು ಹಣತೆಯನ್ನು ತಂದು ಮೇಜಿನ ಮೇಲಿಟ್ಟುಕೊಂಡನು. ಒಳಿಕ ಜೀರುವೆಯಿಂದ ಬೈಬಲನ್ನು ತೆಗದುಕೊಂಡು ಹಿಂದಿನ ರಾತ್ರೆ ಚಕ್ಕಳದ ಚೂರನ್ನಿಟ್ಟು ಗುರುತು ಮಾಡಿದ್ದ ಪುಟವನ್ನು ತೆರೆಯಬೇಕಂದು ಪುಸ್ತಕವನ್ನು ಬಿಚ್ಚಿದನು. ಗುರುತು ಮಾಡಿದ ಪುಟ ಬರದೆ ಬೇರೆ ಯಾವುದೋ ಒಂದು ಪುಟ ತೆರಯಿತು ಆಗ ಅವನಿಗೆ ತಟಕ್ಕನೆ ಹಿಂದಿನ ರಾತ್ರೆಯ ಕನಸು ಜ್ಞಾಪಕವಾಯಿತು. ಅದನ್ನೆಲ್ಲ ಚೆನ್ನಾಗಿ ಜ್ಞಾಪಿಸಿಕೊಳ್ಳುವುದರೊಳಗಾಗಿ ಹಿಂಭಾಗದಲ್ಲಿ ಏನೋ ಒಂದು ಸದ್ದು ಕೇಳಿಸಿತು. ಕೋಣೆಯಲ್ಲಿ ಜನರು ನಡೆದಾಡಿದ ಹಾಗೆ ಹೆಜ್ಜೆಯ ಸದ್ದಾಯಿತು. ಮಾರ್ಟಿನ್ನನು ಹಿಂತಿರುಗಿ ದೃಷ್ಟಿಸಿ ನೋಡಿದನು. ಕತ್ತಲೆ

ಕವಿದ ಒಂದು ಮೂಲೆಯಲ್ಲಿ ಯಾರೋ ನಿಂತಿದ್ದ ಹಾಗೆ ಕಾಣಿಸಿತು. ಮಸಕುಮಸಕಾದ ಆಕಾರ, ಯಾರೆಂಬುದು ಸ್ಪಷ್ಟವಾಗಿ ಗೊತ್ತಾಗಲಿಲ್ಲ.

'ಮಾರ್ಟಿನ್, ಮಾರ್ಟಿನ್ ನನ್ನ ಪರಿಚಯವಿಲ್ಲವೇ?' ಎಂದು ಒಂದು ವಾಣಿ ಅವನ ಕಿವಿಯಲ್ಲಿ ಪಿಸುಗುಟ್ಟಿತು

'ಯಾರದು?' ಎಂದು ಕೇಳಿದನು.

'ನಾನು!' ಎಂದು ಉತ್ತರ ಒಂದಿತು.

ಆಮೇಲೆ ಕತ್ತಲೆಯ ಮೂಲೆಯಿಂದ ಸ್ಟೀವನ್ನನ ಹಾಗಿದ್ದ ಒಂದು ಆಕಾರವು ಹೊರಗೆ ಬಂದಿತು. ಸ್ವಲ್ಪ ಹೊತ್ತು ಮುಗುಳುನಗೆ ಸೂಸುತ್ತಿದ್ದು ಮುಗಿಲಿನ ಹಾಗೆ ಕರಗಿ ಮಾಯವಾಯಿತು. ಅಲ್ಲಿ ಯಾರೂ ಇರಲಿಲ್ಲ.

'ನಾನು!' ಎಂದು ಮತ್ತೊಂದು ದನಿ ಕೇಳಿಸಿತು. ಕೂಡಲೆ ಕತ್ತಲೆಯೊಳಗಿನಿಂದ ಮಗುವನ್ನೆತ್ತಿಕೊಂಡ ಹೆಂಗಸು ಹೊರಟುಬಂದಳು. ಆಡುತ್ತಿದ್ದ ಮಗು, ಅದನ್ನು ನೋಡಿ ತಿಳಿನಗೆಯನ್ನು ಸೂಸಿ ನಲಿಯುತ್ತಿದ್ದ ತಾಯಿ. ಅವರೂ ಹಾಗೆಯೇ ಮಾಯವಾದರು.

'ನಾನು!' ಎಂದು ಇನ್ನೊಂದು ಸಲ ಸದ್ದಾಯಿತು ಮುದುಕಿಯೂ ಹುಡುಗನೂ ಮುಂದೆ ಬಂದು ಮುಗುಳುನಗೆ ನಕ್ಕು ಕೂಡಲೇ ಮಾಯವಾದರು.

ಇದನ್ನೆಲ್ಲ ಕಂಡು ಮಾರ್ಟಿನ್ನನ ಜೀವ ಆನಂದದಲ್ಲಿ ಮುಳುಗಿ ಹೋಯಿತು. ಶಿಲುಬೆಯ ರಕ್ಷೆ ಹಾಕಿಕೊಂಡು ಕನ್ನಡಕವನ್ನೆತ್ತಿ ಮೂಗಿನ ಮೇಲಿಟ್ಟು, ಪುಸ್ತಕದಲ್ಲಿ ಎಲ್ಲಿ ತೆರೆದಿದ್ದಿತೋ ಅಲ್ಲಿಂದಲೇ ಓದತೊಡಗಿದನು. ಆ ಪುಟದ ಪ್ರಾರಂಭದಲ್ಲಿ,

'ಹಸಿದು ನಾ ಒಂದಿರಲು ಅಶನವನು ನೀನಿತ್ತೆ; ಪರದೇಶಿಯಾಗಿರಲು ಒಳಗೆ ಕರೆದುಪಚರಿಸಿದೆ.' ಎಂಬ ವಚನವಿದ್ದಿತು.

ಹಾಗೆಯೇ ಓದುತ್ತಿರಲು ಆ ಪುಟದ ಕೆಳಗಡೆಯಲ್ಲಿ 'ಈ ನನ್ನ ಸೋದರರೊಳೆಲ್ಲ ಕೀಳಾದವನಿಗೊಬ್ಬನಿಗೆ ನೀಗೈದ ಸೇವೆಯೇ ನನ್ನ ಸೇವೆ' (ಮಾಥ್ಯೂ ೨೫) ಎಂಬ ವಚನ ಸಿಕ್ಕಿತು.

ಮಾರ್ಟಿನ್ನನು ತನ್ನ ಕನಸು ನಿಜವಾಯಿತೆಂದೂ, ಆ ದಿನ ತನ್ನ ಮನೆಗೆ ಜಗದ್ರಕ್ಷಕನು (ಕ್ರಿಸ್ತನು) ಬಂದಿದ್ದನೆಂದೂ, ಅವನನ್ನು ತಾನು ಚೆನ್ನಾಗಿ ಸತ್ಕರಿಸಿದ್ದನೆಂದೂ ಅರ್ಥಮಾಡಿಕೊಂಡನು.

---

# ಇಲಿಯಾಸನ ಕಥೆ



ಯೂಫಾ ರಾಜ್ಯದಲ್ಲಿ ಇಲಿಯಾಸ್ ಎಂಬ ಒಬ್ಬ ಬಷ್ಕೀರನಿದ್ದನು. ಅವರಪ್ಪನು ಒಂದು ವರ್ಷದ ಹಿಂದೆ ಅವನಿಗೆ ಮದುವೆ ಮಾಡಿ ಆಮೇಲೆ ಸತ್ತುಹೋದನು ಇಲಿಯಾಸನಿಗೆ ಅವರಪ್ಪನು ಬಿಟ್ಟುಹೋದ ಆಸ್ತಿ ಬಹಳ ಸ್ವಲ್ಪ, ಏಳು ಹೆಣ್ಣು ಕುದುರೆ, ಎರಡು ಹಸು, ಇಪ್ಪತ್ತು ಕುರಿ— ಇಷ್ಟೇ ಆದರೆ ಇಲಿಯಾಸನು ಮಿತವಾಗಿ ವೆಚ್ಚಮಾಡುತ್ತ, ಆಸ್ತಿಯನ್ನು ಚೆನ್ನಾಗಿ ರೂಢಿಸಿ, ಕ್ರಮಕ್ರಮವಾಗಿ ಶ್ರೀಮಂತನಾಗುತ್ತ ಬಂದನು. ಬೆಳಗಿನಿಂದ ಸಂಜೆಯವರೆಗೂ ದಂಪತಿಯೊಡನೆ ಕಷ್ಟಪಟ್ಟು ದುಡಿಯುತ್ತಿದ್ದನು. ನೆರೆಯವರೆಲ್ಲರಿಗಿಂತಲೂ ಮುಂದಾಗಿ ಎದ್ದು ಹಿಂದಾಗಿ ಮಲಗುತ್ತಿದ್ದನು ವರ್ಷ ವರ್ಷವೂ ಅವನ ಐಶ್ವರ್ಯವು ಹೆಚ್ಚುತ್ತಿದ್ದಿತು. ಹೀಗೆ ಮೂವತ್ತೈದು ವರ್ಷಗಳವರೆಗೆ ನಿರಾತಂಕವಾಗಿ ದುಡಿದು ಅಪಾರವಾದ ಐಶ್ವರ್ಯಕ್ಕೆ ಅಧಿಕಾರಿಯಾದನು.

ಈಗ ಅವನ ಮನೆಯಲ್ಲಿ ಮುನ್ನೂರು ಕುದುರೆಗಳು, ಐವತ್ತು ರಾಸು ದನಗಳು, ಮತ್ತು ಎರಡು ಸಾವಿರ ಕುರಿಗಳೂ ಇದ್ದುವು. ಅನೇಕ ಜನ ಆಳುಗಳು ಅವನ ಮಂದೆಗಳನ್ನೂ ಕುದುರೆಗಳನ್ನೂ ಕಾಯುತ್ತಿದ್ದರು. ಅನೇಕ ಜನ ಹೆಂಗಸರು ಹಸುಗಳ ಮತ್ತು ಕುದುರೆಗಳ ಹಾಲು ಕರೆದು "ಕೂಮೀಸ್" ಎಂಬ ಹುಳಿ ಹಾಲನ್ನೂ, ಬೆಣ್ಣೆಯನ್ನೂ, ಗಿಣ್ಣುವನ್ನೂ ಮಾಡುತ್ತಿದ್ದರು. ಅವನಿಗೆ ಎಲ್ಲವೂ ಸಮೃದ್ಧಿಯಾಗಿದ್ದಿತು, ಸುತ್ತ ಮುತ್ತಲ ಗೃಹಸ್ಥರೆಲ್ಲರೂ ಅವನ ಏಳಿಗೆಯನ್ನು ನೋಡಿ ಬಾಯಿಬಾಯಿ ಬಿಡುತ್ತಿದ್ದರು.

"ಅವನೊಳ್ಳೆಯ ಅದೃಷ್ಟಶಾಲಿಯಪ್ಪ, ಅವನಿಗೇನು, ಎಲ್ಲ ಬೇಕಾದಷ್ಟಿದೆ. ಸಾಯಬೇಕಾದ ಕಾರಣವಿಲ್ಲ" ಎನ್ನುತ್ತಿದ್ದರು.

ತೂಕವುಳ್ಳ ಜನರು ಇಲಿಯಾಸನ ಪರಿಚಯ ಮಾಡಿಕೊಂಡು ಅವನೊಡನೆ ಸ್ನೇಹದಿಂದ ವರ್ತಿಸಲು ಮೊದಲುಮಾಡಿದರು. ಬಹು ದೂರ ದೇಶಗಳಿಂದಲೂ ಅವನ ಮನೆಗೆ ಅತಿಥಿಗಳು ಬರುತ್ತಿದ್ದರು. ಇಲಿಯಾಸನು ಬಂದವರೆಲ್ಲರನ್ನು ವಿಶ್ವಾಸದಿಂದ ಆದರಿಸಿ ಅನ್ನೋದಕಗಳಿಂದ ತೃಪ್ತಿಪಡಿಸುತ್ತಿದ್ದನು. ಕೂಮಿಾಸ್, ಟೀ ಮತ್ತು ಕುರಿಯ ಮಾಂಸಗಳು ಬಂದವರಿಗೆಲ್ಲ ಯಥೇಚ್ಛವಾಗಿ ದೊರೆಯುತ್ತಿದ್ದುವು. ಅತಿಥಿಗಳು ಬಂದಾಗ ಒಂದೋ, ಎರಡೋ ಕುರಿಗಳನ್ನು ಕಡಿಯುತ್ತಿದ್ದನು. ಹೆಚ್ಚು ಜನ ಬಂದಾಗಲೆಲ್ಲ ಜೊತೆಗೆ ಒಂದೊಂದು ಕುದುರೆಯನ್ನು ಕಡಿಯುತ್ತಿದ್ದನು.

ಇಲಿಯಾಸನಿಗೆ ಇಬ್ಬರು ಗಂಡುಮಕ್ಕಳೂ ಒಬ್ಬ ಮಗಳೂ ಇದ್ದರು. ಅವರೆಲ್ಲರಿಗೂ ಯಥಾಯೋಗ್ಯವಾಗಿ ಮದುವೆಯನ್ನು ಮಾಡಿದ್ದನು. ಇಲಿಯಾಸನು ಬಡವನಾಗಿದ್ದಾಗ ಅವನ ಮಕ್ಕಳೆಲ್ಲರೂ ಅವನ ಜೊತೆಯಲ್ಲಿ ಕೆಲಸಮಾಡುತ್ತಲೂ ಕುರಿ ಕುದುರೆಗಳನ್ನು ನೋಡಿಕೊಳ್ಳುತ್ತಲೂ ಇದ್ದರು. ಆದರೆ ಈಗ ಅವನು ಶ್ರೀಮಂತನಾದದ್ದರಿಂದ ಅವರೆಲ್ಲರೂ ಮೈ ಬಗ್ಗಿಸದೆ ಸುಖಜೀವನದಲ್ಲಿ ಮಗ್ನರಾದರು, ಒಬ್ಬನು ಕುಡಿತವನ್ನು ಕಲಿತನು. ಹಿರಿಯವನು ಒಂದು ದೊಂಬಿ ಜಗಳದಲ್ಲಿ ಕೊಲೆಯಾದನು. ಕಿರಿಯವನು ಹಟಮಾರಿಯಾದ ತನ್ನ ಹೆಂಡತಿಯ ಮಾತು ಕೇಳಿ ತಂದೆಗೆ ಅವಿಧೇಯನಾದನು. ಆಗ ಇಲಿಯಾಸನು ಅವನಿಗೆ ಪಾಲುಕೊಟ್ಟು ಮನಸ್ಸು ಬಂದ ಕಡೆ ಹೋಗೆಂದು ಕಳುಹಿಸಿಬಿಟ್ಟನು

ತನ್ನ ಮಗನಿಗೆ ಒಂದು ಮನೆಯನ್ನೂ ಕೆಲವು ದನಕರುಗಳನ್ನು ಕೊಟ್ಟನು. ಅದಾದ ಸ್ವಲ್ಪ ಕಾಲದಲ್ಲಿಯೇ ರೋಗ ಬಡಿದು ಅನೇಕ ಕುರಿಗಳು ಸತ್ತುವು. ಆಮೇಲೆ ಒಂದು ವರ್ಷ ಕ್ಷಾಮ ಬಂದು ಬೆಳೆಯೆಲ್ಲ ಹಾಳಾಯಿತು. ಮುಂದಿನ ಮಾಗಿಯಲ್ಲಿ ಅನೇಕ ದನಕರುಗಳು ಸತ್ತು ಹೋದವು. ಜೊತೆಗೆ ಕಿರ್ಘಿಸ್ ಜನಗಳು ಉತ್ತಮವಾದ ಕುದುರೆಯ ಹಿಂಡನ್ನೇ ಕದ್ದು ಹೊಡೆದುಕೊಂಡು ಹೋದರು.

ಹೀಗೆ ದಿನ ದಿನಕ್ಕೆ ಅವನ ಸಂಪತ್ತು ಕಡಿಮೆಯಾಗಿ ಅವನ ಅಂತಸ್ತು ಕೆಳಕ್ಕೆ ಇಳಿಯುತ್ತ ಬಂದಿತು. ಅವನಿಗೆ ಶಕ್ತಿಯು ಕುಗ್ಗುತ್ತ ಬಂತು. ಎಪ್ಪತ್ತನೆಯ ವಯಸ್ಸಿನಲ್ಲಿ ತುಪ್ಪಟದ ಅಂಗಿಗಳು, ರತ್ನಗಂಬಳಿಗಳು, ಕುದುರೆಯ ತಡಿಗಳು, ಗಾಡಿಗಳು ಇವೆಲ್ಲವನ್ನೂ ಮಾರಬೇಕಾಯಿತು. ಎಲ್ಲ ಮಾರಿದಮೇಲೆ ತನ್ನಲ್ಲಿ ಉಳಿದಿದ್ದ ಕಡೆಯದೊಂದು ಹಸುವನ್ನೂ ಮಾರಿ ದರಿದ್ರದೇವತೆಗೆ ಅಭಿಮುಖನಾಗಿ ನಿಂತುಬಿಟ್ಟನು.

ತಮ್ಮ ಸ್ಥಿತಿಯಲ್ಲಿ ಇಷ್ಟುಮಟ್ಟಿನ ಬದಲಾವಣೆ ಹೇಗಾಯಿತೆಂದು ಗೊತ್ತೇ ಆಗದಷ್ಟು ಬೇಗ ಬೇಗನೆ ಇದೆಲ್ಲ ನಡೆದುಹೋಯಿತು. ಕಟ್ಟ ಕಡೆಗೆ ಮುಪ್ಪಿನ ಕಾಲದಲ್ಲಿ ಆ ಗಂಡ ಹೆಂಡರಿಗೆ ಜೀವನಕ್ಕೆ ಏನೂ ಇಲ್ಲ ವಾಯಿತು. ಹೊಟ್ಟೆಗಾಗಿ ಕೂಲಿಮಾಡಬೇಕಾಗಿ ಬಂದಿತು.

ಈಗ ಇಲಿಯಾಸನಿಗೆ ಮೈಮೇಲಿನ ಬಟ್ಟೆ—ಒಂದು ತುಪ್ಪಟದ ಅಂಗಿ, ಒಂದು ಟೋಪಿ, ಒಂದು ಜೊತೆ ಮೋಜ—ಇಷ್ಟು ಮಾತ್ರ ಉಳಿದು ಕೊಂಡಿತು. ಅವನ ಹೆಂಡತಿಯೊಬ್ಬಳು, ಷಮ್‌ಷೆಮಾಘಿ, ಜೊತೆಯಲ್ಲಿದ್ದಳು. ಮಗನು ಯಾವುದೋ ಒಂದು ದೂರದೇಶಕ್ಕೆ ವಲಸೆಹೋಗಿದ್ದನು; ಮಗಳು ಸತ್ತುಹೋಗಿದ್ದಳು. ಅಂತೂ ಈ ಮುದುಕ ದಂಪತಿಗಳಿಗೆ ನೆರ ವಾಗುವಂಥವರೊಬ್ಬರೂ ಇರಲಿಲ್ಲ.

ನೆರೆಮನೆಯ ಮಹಮದ್‌ಷಹನಿಗೆ ಇವರಲ್ಲಿ ಮರುಕವುಂಟಾಯಿತು. ಈ ಮಹಮದ್‌ಷಹನು ಶ್ರೀಮಂತನೂ ಅಲ್ಲ, ದರಿದ್ರನೂ ಅಲ್ಲ. ತನ್ನ ಹಾಳತಕ್ಕೆ ತಾನು ಸುಖವಾಗಿ ಜೀವಿಸುವಂತಿದ್ದನು. ಅವನು ಒಳ್ಳೆಯ ಮನುಷ್ಯ. ಇಲಿಯಾಸನ ಔದಾರ್ಯವನ್ನು ಸ್ಮರಿಸಿಕೊಂಡು, ಅವನಿಗೆ ಬಂದ ದುರ್ಗತಿಗೆ ಸಂಕಟಪಡುತ್ತ ಅವನನ್ನು ಕುರಿತು—

'ಇಲಿಯಾಸ್ ನೀನೂ ನಿನ್ನ ಹೆಂಡತಿಯೂ ನಮ್ಮ ಮನೆಗೆ ಬಂದು ಬಿಡಿ. ಬೇಸಿಗೆಯಲ್ಲಿ ತೋಟದಲ್ಲಿ ನಿನ್ನ ಕೈಲಾದಷ್ಟು ಕೆಲಸಮಾಡಿಕೊಡುವಿಯಂತೆ; ಮಾಗಿಯಲ್ಲಿ ದನಗಳಿಗೆ ಮೇವು ಹಾಕುತ್ತಿರಬಹುದು. ಷಮ್

ಷೆಮಾಘಿಯು ಕುದುರೆಗಳ ಹಾಲು ಕರೆದು ಕೂಮೀಸ್ ಮಾಡಿದರೆ ಸಾಕು. ನಿಮ್ಮ ಹೊಟ್ಟೆಬಟ್ಟೆಯ ಯೋಗಕ್ಷೇಮ ನನಗಿರಲಿ. ನಿನಗೇನಾದರೂ ಬೇಕಾದರೆ ಕೇಳು, ಕೊಡುತ್ತೇನೆ ' ಎಂದನು.

ಇಲಿಯಾಸನು ನೆರೆಯ ಗೃಹಸ್ಥನ ಸಲಹೆಗೆ ಸಂತೋಷದಿಂದ ಒಪ್ಪಿಕೊಂಡು ಹೆಂಡತಿಯೊಡನೆ ಮುಹಮುದ್‌ಷಹನ ಮನೆಯಲ್ಲಿ ಕೆಲಸಕ್ಕೆ ನಿಂತನು. ಮೊದಮೊದಲು ಅವರಿಗೆ ಬಹಳ ಕಷ್ಟವಾಗಿ ಕಂಡಿತು. ಆದರೆ ಬೇಗ ಇಬ್ಬರಿಗೂ ಅದು ಅಭ್ಯಾಸವಾಯಿತು. ನಿರ್ವಂಚನೆಯಾಗಿ ತಮ್ಮ ಕೈಲಾದಷ್ಟು ಕೆಲಸಮಾಡುತ್ತ ಜೀವಿಸತೊಡಗಿದರು

ಅಂಥ ಕಲಸಗಾರರಿದ್ದರೆ ತನಗೇ ಒಹಳ ಲಾಭವೆಂದು ಮುಹಮುದ್ ಷಹನಿಗೆ ಒಹು ಬೇಗ ಗೊತ್ತಾಯಿತು. ಈ ಮುದುಕ ದಂಪತಿಗಳು ಒಂದು ಕಾಲದಲ್ಲಿ ತಾವೇ ಯಜಮಾನರಾಗಿದ್ದದ್ದರಿಂದ ಏನೇನು ಕೆಲಸಮಾಡಬೇಕೆಂಬುದೆಲ್ಲ ಚೆನ್ನಾಗಿ ಗೊತ್ತಾಗಿದ್ದಿತು ಅಲ್ಲದೆ ಅವರು ಸೋಮಾರಿಗಳಾಗಿರದೆ ಯಾವಾಗಲೂ ತಮ್ಮ ಕೈಲಾದಷ್ಟು ಕೆಲಸಮಾಡುತ್ತಿದ್ದರು. ಅಷ್ಟು ಉನ್ನತ ಸ್ಥಿತಿಯಲ್ಲಿದ್ದವರು ಇಷ್ಟು ಕೀಳಾಗಿ ಇಳಿದರಲ್ಲಾ ಎಂದು ಮುಹಮುದ್‌ಷಹನು ಅವರನ್ನು ಕಂಡು ಎಷ್ಟೋ ಸಲ ' ಅಯ್ಯೋ ' ಎನ್ನುತ್ತಿದ್ದನು.

ಒಂದು ದಿನ ಮುಹಮುದ್‌ಷಹನ ಮನೆಗೆ ದೂರದೇಶದಿಂದ ಕಲವರು ಅತಿಥಿಗಳು ಒಂದರು. ಅವರಲ್ಲಿ ಒಬ್ಬ ಮುಲ್ಲನೂ ಇದ್ದನು. ಮುಹಮುದನು ಇಲಿಯಾಸನನ್ನು ಕರೆದು ಒಂದು ಕುರಿಯನ್ನು ಕಡಿಯುವಂತೆ ಹೇಳಿದನು. ಇಲಿಯಾಸನು ಹಾಗೆಮಾಡಿ, ಮಾಂಸವನ್ನೆಲ್ಲ ಬೇರ್ಪಡಿಸಿ, ಬೇಯಿಸಿ ಅತಿಥಿಗಳಿಗೆ ಬಡಿಸಿದನು. ಮಾಂಸವನ್ನು ತಿಂದಮೇಲೆ ಟೀಯನ್ನೂ ಕೂಮೀಸ್ಸನ್ನು ಕುಡಿದರು. ಅವರು ಮನೆಯ ಯಜಮಾನನ ಸಂಗಡ ಹಕ್ಕಿಯ ಪುಕ್ಕದ ಸುಪ್ಪತ್ತಿಗೆಯಮೇಲೆ ಕುಳಿತು ಕೂಮೀಸ್ ಕುಡಿಯುತ್ತಾ ಮಾತಾಡುತ್ತಿದ್ದಾಗ, ಇಲಿಯಾಸನು ಆಗತಾನೆ ತನ್ನ ಕೆಲಸವನ್ನು ಮುಗಿಸಿ ಬಾಗಿಲ ಮಗ್ಗುಲಲ್ಲಿ ಸುಳಿದು ಮುಂದೆ ಹೋದನು.

ಮಹಮದ್‌ಷಹನು ಅವನನ್ನು ಕಂಡು ಅತಿಥಿಗಳಲ್ಲೊಬ್ಬನನ್ನು ಕುರಿತು, 'ಈಗತಾನೆ ಇಲ್ಲಿ ಬಂದು ಹೋದನಲ್ಲ, ಆ ಮುದುಕನನ್ನು ನೋಡಿದಿರಾ' ಎಂದು ಕೇಳಿದನು.

'ಹೌದು, ನೋಡಿದೆ ಅವನ ಸಂಗತಿಯೇನು ?'

'ಅವನ ಸಂಗತಿ ಇಷ್ಟು. ಒಂದು ಕಾಲದಲ್ಲಿ ಅವನು ಈ ಪ್ರಾಂತದಲ್ಲೆಲ್ಲಾ ಬಹು ದೊಡ್ಡ ಶ್ರೀಮಂತನಾಗಿದ್ದನು ಅವನ ಹೆಸರು ಇಲಿಯಾಸ್. ಬಹುಶಃ ನೀವೂ ಕೇಳಿರಬಹುದು ಅವನ ವಿಷಯವನ್ನು.'

'ಓಹೋ, ಕೇಳದೆ ಏನು ! ಆದರೆ ನಾನು ಅವನನ್ನು ನೋಡಿರಲಿಲ್ಲ. ಅವನ ಹೆಸರು ಎಲ್ಲೆಲ್ಲೂ ಪ್ರಸಿದ್ಧಿಯಾಗಿದೆ.'

'ಸರಿ, ಅವನಿಗ ಈಗ ಏನೂ ಗತಿಯಿಲ್ಲ. ಇಲ್ಲಿ ನಮ್ಮ ಮನೆಯಲ್ಲಿ ಕೆಲಸಮಾಡಿಕೊಂಡಿದ್ದಾನೆ ಅವನ ಮುದುಕಿ ಹೆಂಡತಿ ಕುದುರೆಗಳ ಹಾಲು ಕರೆಯುತ್ತಾಳೆ.'

ಅತಿಥಿಗೆ ವಿಸ್ಮಯವಾಯಿತು ನಾಲಿಗೆಯನ್ನು ಕಡಿದುಕೊಂಡು ತಲೆಯನ್ನು ಅಲುಗಿಸುತ್ತಾ 'ಹೌದು, ಅದೃಷ್ಟವೆನ್ನುವುದು ಚಕ್ರದಹಾಗೆ, ಒಬ್ಬನನ್ನು ಮೇಲಕ್ಕೆ ಏರಿಸುತ್ತದೆ, ಒಬ್ಬನನ್ನು ಕಳಕ್ಕೆ ಅದುಮುತ್ತದೆ. ಮುದುಕ, ಪಾಪ, ಬಹಳ ಪೇಚಾಡುತ್ತಿರಬಹುದು' ಎಂದನು

'ಹೇಗೆ ಹೇಳುವುದು ? ಯಾವಾಗಲೂ ಶಾಂತವಾಗಿ ಸಮಾಧಾನವಾಗಿರುತ್ತಾನೆ' ಚೆನ್ನಾಗಿ ಕೆಲಸಮಾಡುತ್ತಾನೆ'

'ನಾನು ಅವನ ಸಂಗಡ ಮಾತಾಡಿ, ಅವನ ಬಾಳಿನ ಸಂಗತಿಗಳನ್ನು ಕೇಳಬಹುದೆ ?'

'ಅಗತ್ಯವಾಗಿ ಕೇಳಬಹುದು' ಎಂದು, ಮಹಮದ್‌ಷಹನು ಕಿಬಿಟ್ಕ* ದಲ್ಲಿದ್ದ ಇಲಿಯಾಸಿಗೆ ಕೇಳಿಸುವಂತೆ, "ಬಬಾಯ್, (ಚಿಕ್ಕಜ್ಜ) ಒಳಗೆ

* ಕಿಬಿಟ್ಕ ಎಂಬುದು ಒಂದು ಬಗೆಯ ಸಣ್ಣ ಗುಡಿಸಲು ಇದನ್ನು ಬೇಕಾದಾಗ ಬಿಚ್ಚಿ ಎಲ್ಲಿ ಬೇಕಾದರಲ್ಲಿಗೆ ತೆಗೆದುಕೊಂಡು ಹೋಗಿ ಒಡ್ಡಬಹುದು ಮರದ ಚಾಕಟ್ಟುಗಳನ್ನು ಜೋಡಿಸಿ ದುಂಡಗೆ ಕಟ್ಟಿ ಮೇಲೆ ಚಕ್ಕಳವನ್ನು ಹೊದ್ದಿಸುತ್ತಾರೆ

ಬಾ, ಸ್ವಲ್ಪ ಕೂಮಿಸ್ ಕುಡಿಯುವೆಯಂತೆ. ಸಂಗಡ ಮುದುಕಜ್ಜಿಯನ್ನೂ ಕರೆದುಕೊಂಡು ಬಾ'' ಎಂದು ಕೂಗಿದನು.

ಇಲಿಯಾಸನು ಹೆಂಡತಿಯನ್ನು ಕರೆದುಕೊಂಡು ಬಂದನು. ಬಂದು ತನ್ನ ಯಜಮಾನನಿಗೂ ಅತಿಥಿಗಳಿಗೂ ನಮಸ್ಕಾರಮಾಡಿ, ಆಮೇಲೆ ಒಂದು ಪ್ರಾರ್ಥನೆಯನ್ನು ಹೇಳಿ, ಕಾಲುಮಡಿಸಿಕೊಂಡು ಬಾಗಿಲ ಹತ್ತಿರ ಕುಳಿತುಕೊಂಡನು. ಅವನ ಹೆಂಡತಿಯು ಪರದೆಯ ಹಿಂದೆ ಹೋಗಿ ಯಜಮಾನಿಯ ಸಂಗಡ ಕುಳಿತಳು.

ಇಲಿಯಾಸನಿಗೆ ಒಂದು ಬಟ್ಟಲು ಕೂಮಿಸ್ ಕೊಟ್ಟರು ಅವನು ಯಜಮಾನನಿಗೂ ಅತಿಥಿಗಳಿಗೂ ತಲೆ ಬಗ್ಗಿ ನಮಸ್ಕರಿಸಿ ಒಳ್ಳೆಯ ಆರೋಗ್ಯವಿರಲೆಂದು ಹರಸಿ ಸ್ವಲ್ಪ ಕುಡಿದು ಬಟ್ಟಲನ್ನು ಕೆಳಗಿಟ್ಟನು

ಅತಿಥಿಯು 'ಒಳ್ಳೇದಜ್ಜ ! ನಮ್ಮನ್ನೆಲ್ಲಾ ನೋಡಿ, ಹಿಂದಿನ ನಿನ್ನ ಸಂಪತ್ತನ್ನು ನೆನೆದುಕೊಂಡರೆ ನಿನಗೆ ಸಂಕಟವಾಗುವುದಿಲ್ಲವ ? ಆಗ ನೀನು ಬಹು ಆನಂದವಾಗಿದ್ದೆ , ಈಗ ದುಃಖದಲ್ಲಿ ಬಾಳಬೇಕಾಗಿದೆ ' ಎಂದನು.

ಇಲಿಯಾಸನು ನಸುನಗೆಯನ್ನು ಸೂಸಿ 'ನನ್ನ ಸುಖದುಃಖಗಳನ್ನು ನಿಮಗೆ ಹೇಳಿಕೊಂಡರೆ ನೀವು ನಂಬುವುದಿಲ್ಲ. ನನಗಿಂತ ನಮ್ಮ ಮುದುಕಿಯನ್ನು ಕೇಳುವುದು ಒಳ್ಳೆಯದು. ಅವಳಪ್ಪಾದರೂ ಹೆಂಗಸು , ಮನಸ್ಸಿನಲ್ಲಿರುವುದೆಲ್ಲಾ ನಾಲಿಗೆಯ ಮೇಲೆಯೇ ಬಂದು ಬಿಡುತ್ತದೆ. ಅದರ ಸತ್ಯಾಂಶವನ್ನು ಅವಳು ಹೇಳಿಬಿಡುತ್ತಾಳೆ' ಎಂದು ಹೇಳಿದನು.

ಅತಿಥಿಯು ತೆರೆಯಕಡೆಗೆ ತಿರುಗಿದನು. 'ಅಜ್ಜಿ, ನಿಮ್ಮ ಹಿಂದಿನ ಸುಖಕ್ಕೂ, ಈಗಿನ ದುರದೃಷ್ಟಕ್ಕೂ ನಿನ್ನ ಮನಸ್ಸಿನಲ್ಲಿ ಹೇಗಾಗುತ್ತದೆ? ಹೇಳಜ್ಜಿ ' ಎಂದು ಕೇಳಿದನು.

ಷೆಮ್‌ಷೆಮಾಘಿಯು ತೆರೆಯ ಮರೆಯಿಂದ ಉತ್ತರ ಕೊಟ್ಟಳು. 'ಈ ವಿಷಯದಲ್ಲಿ ನನ್ನ ಅಭಿಪ್ರಾಯವಿಷ್ಟೇ. ನಾನೂ, ನನ್ನ ಗಂಡನೂ ಐವತ್ತು ವರ್ಷ ಸುಖವನ್ನು ಹುಡುಕುತ್ತಲೇ ಬಾಳಿದೆವು. ಆದರೆ ಆ ಸುಖ

ಮಾತ್ರ ನಮಗೆ ಸಿಕ್ಕಲೇ ಇಲ್ಲ. ಈಗ ನಮ್ಮದಾಗಿ ನಮಗೇನೂ ಇಲ್ಲ; ಮೈಮುರಿದು ಕೆಲಸಮಾಡಿ ಜೀವಿಸುತ್ತೇವೆ. ಈಗ ಮಾತ್ರ ನಮಗೆ ನಿಜ ವಾದ ಸುಖ ದೊರಕಿದೆ, ನಮಗೆ ಬೇರೆ ಏನೂ ಬೇಕಿಲ್ಲ' ಎಂದಳು

ಅತಿಥಿಗಳಿಗೆ ಆಶ್ಚರ್ಯವಾಯಿತು; ಯಜಮಾನನಿಗೂ ಆಶ್ಚರ್ಯ ವಾಯಿತು. ಕೂತಿದ್ದವನು ಎದ್ದು ಹೋಗಿ ತೆರೆಯನ್ನು ಓರಮಾಡಿ ಮುದುಕಿಯನ್ನು ನೋಡಿದನು. ಅವಳು ಕೈಗಳನ್ನು ಮಡಿಸಿಕೊಂಡು ಕುಳಿತು ನಸುನಗುತ್ತ ಇಲಿಯಾಸನ ಕಡೆಗೆ ನೋಡಿದಳು. ಇಲಿಯಾಸನು ಆ ನೋಟ ವನ್ನು ಗ್ರಹಿಸಿ ಪ್ರತಿಯಾಗಿ ನಸುನಗೆಯನ್ನು ಬೀರಿದನು. ಆಮೇಲೆ ಮುದುಕಿಯು 'ನಾನು ನಿಜವನ್ನೇ ಆಡುತ್ತಿದೇನೆ, ವಿನೋದ ಮಾಡು ತ್ತಿಲ್ಲ. ಅರ್ಧ ಶತಮಾನದ ವರೆಗೂ ಸುಖವನ್ನ ಹುಡುಕಿದೆವು, ನಾವು ಶ್ರೀಮಂತರಾಗಿರುವವರೆಗೂ ನಮಗೆ ಸುಖ ದೊರೆಯಲಿಲ್ಲ. ಈಗ ಇದ್ದದ್ದ ನ್ನೆಲ್ಲಾ ಕಳೆದುಕೊಂಡು ಸೇವೆಯಲ್ಲಿ ಕಾಲಕಳೆಯುತ್ತಿರುವುದರಿಂದ ನಮಗೆ ಉತ್ತಮವಾದ ಸುಖವು ಸಿಕ್ಕಿದಂತಾಗಿದೆ. ಇದಕ್ಕಿಂತ ಮೇಲಾದ ಸುಖ ಇಲ್ಲವೆಂದೇ ನನ್ನ ಭಾವನೆ.' ಎಂದಳು.

'ಹಾಗಾದರೆ ಈಗ ನಿಮಗೆ ಸುಖ ದೊರೆಯುತ್ತಿರುವುದು ಯಾವುದರಲ್ಲಿ?'

'ಹೇಳುತ್ತೇನೆ, ಕೇಳಿ. ನಾವು ಧನಿಕರಾಗಿದ್ದಾಗ ಒಂದು ಗಳಿಗೆಯೂ ಶಾಂತಿ ಇರುತ್ತಿರಲಿಲ್ಲ. ಒಟ್ಟಿಗೆ ಕುಳಿತು ಒಂದು ಗಳಿಗೆ ಮಾತಾಡೋಣ ವೆಂದರೆ ಹೊತ್ತಿರುತ್ತಿರಲಿಲ್ಲ ನಮ್ಮ ಆತ್ಮದ ವಿಚಾರವನ್ನು ಯೋಚಿಸುವುದ ಕ್ಕಾಗಲಿ, ದೇವರಿಗೆ ಪ್ರಾರ್ಥನೆ ಮಾಡುವುದಕ್ಕಾಗಲಿ ಅವಕಾಶವೇ ಸಿಕ್ಕು ತ್ತಿರಲಿಲ್ಲ, ಸಂಸಾರದ ತೊಡಕುಗಳು ಅಷ್ಟುಮಟ್ಟಿಗೆ ಹೆಚ್ಚಿಬಿಟ್ಟಿದ್ದವು. ಮೊದಲು ಅತಿಥಿ ಅಭ್ಯಾಗತರ ಯೋಚನೆ. ಅವರನ್ನು ಉಪಚರಿಸುವುದು ಹೇಗೆ? ಅವರಿಗೆ ಯಾವ ಉಡುಗೆರೆ ಕೊಡಬೇಕು? ನಮ್ಮ ವಿಷಯದಲ್ಲಿ ಕೆಟ್ಟ ಮಾತಾಡದಂತಿರಬೇಕಾದರೆ ಹೇಗೆ ನಡೆದುಕೊಳ್ಳಬೇಕು? ಎಂದು ಸರ್ವದಾ ಯೋಚನೆಮಾಡಬೇಕಾಗಿದ್ದಿತು. ಅತಿಥಿಗಳು ಹೊರಟುಹೋದಮೇಲೆ ಕೆಲಸ

ಗಾರರ ಮೇಲ್ವಿಚಾರಣೆ. ಅವರು ಸಾಧ್ಯವಾದಷ್ಟು ಸಿದ್ದೆಮಾಡಿ ಆದಷ್ಟು ಹೆಚ್ಚು ಆಹಾರವನ್ನು ಉಪಯೋಗಿಸಿಕೊಳ್ಳಲು ಹವಣಿಸುತ್ತಿದ್ದರು. ನಾವು ಅವರಿಂದ ಸಾಧ್ಯವಾದಷ್ಟು ಹೆಚ್ಚು ಕೆಲಸ ತೆಗೆಯಲು ಎತ್ನಿಸುತ್ತಿದ್ದೆವು. ಹೀಗಾಗಿ ನಾವು ಪಾಪಿಗಳಾದೆವು ಇದಾದಮೇಲೆ ತೋಳ ಒಂದು ಕರುವನ್ನೋ, ಕುದುರೆ ಮರಿಯನ್ನೋ ಕೊಂದೀತೆಂದು ಆತಂಕ, ಕಳ್ಳರು ಕುದುರೆಗಳನ್ನು ಹೊಡೆದುಕೊಂಡು ಹೋದಾರೆಂದು ಹೆದರಿಕೆ ಮಲಗಿದರೆ ಸಿದ್ದೆ ಹತ್ತದು. ಕುರಿಗಳು ಮರಿಗಳನ್ನು ತುಳಿದಾವೆಂದು ಹೆದರಿಕೆ. ಕೂಡಲೇ ಹಾಸಿಗೆಯಿಂದೆದ್ದು ರಾತ್ರಿಯಲ್ಲೆಲ್ಲಾ ಸುತ್ತಾಡಿ ನೋಡಿಕೊಂಡು ಒರುವುದು. ಸ್ವಲ್ಪ ಸಮಾಧಾನವಾಗುವುದೇ ತಡ, ಅಷ್ಟರಲ್ಲಿ ಮತ್ತೊಂದು ಆತಂಕ—ಮುಂದಿನ ಮಾಗಿಯಲ್ಲಿ ದನಕರುಗಳಿಗೆ ಸಾಕಾಗುವಷ್ಟು ಮೇವನ್ನು ಒದಗಿಸುವುದು ಹೇಗೆ? ಎಂದು ಯೋಚನೆ. ಇದಿಷ್ಟರ ಜೊತೆಗೆ ನಮ್ಮಿಬ್ಬರಿಗೂ ಅಸಮಾಧಾನ ಬೇರ, ಯಾವಾಗಲೂ ಹೊಂದಿಕ ಇರುತ್ತಿರಲಿಲ್ಲ. ಅವರೊಂದು ಕೆಲಸವನ್ನು ಮಾಡಬೇಕೆಂದು ಹೇಳಿದರೆ, ನಾನು ಬೇರೊಂದನ್ನು ಮಾಡಬೇಕನ್ನುತ್ತಿದ್ದೆನು, ಇದರಿಂದ ಇಬ್ಬರಿಗೂ ಜಗಳ, ಈ ಪಾಪ ಬೇರ. ಹೀಗೆ ಒಂದಾತಂಕದಿಂದ ಮತ್ತೊಂದಕ್ಕೂ ಒಂದು ಪಾಪದಿಂದ ಮತ್ತೊಂದು ಪಾಪಕ್ಕೂ ಉರುಳುತ್ತ ಜೀವಿಸಿಕೊಂಡು ಸುಖವಾಗಿರುವುದೆಂದರೆ ಏನೆಂಬುದನ್ನೇ ಕಂಡಿರಲಿಲ್ಲ.'

'ಅದು ಸರಿ, ಈಗಲೋ?'

'ಈಗ ನಾನೂ, ಅವರೂ, ಇಬ್ಬರೂ ಬೆಳಗ್ಗೆ ಮುಂಚೆ ಏಳುತ್ತೇವೆ. ಎದ್ದು ಶಾಂತಿಯಿಂದಲೂ ಪ್ರೇಮದಿಂದಲೂ ಸ್ವಲ್ಪ ಹೊತ್ತು ಮಾತಾಡಿಕೊಳ್ಳುತ್ತೇವೆ. ಮೊದಲಿನ ಹಾಗೆ ಜಗಳವಾಡುವುದಕ್ಕಾಗಲಿ, ಆತಂಕಪಡುವುದಕ್ಕಾಗಲಿ, ಕಾರಣವಿಲ್ಲ. ಯಜಮಾನನ ಸೇವೆಮಾಡುವುದೊಂದೇ ನಮ್ಮ ಯೋಚನೆ. ಯಜಮಾನನಿಗೆ ನಮ್ಮಿಂದ ನಷ್ಟವಾಗುವುದಕ್ಕೆ ಬದಲಾಗಿ ಲಾಭ ಬರಲೆಂಬ ಉದ್ದೇಶದಿಂದ ನಮ್ಮ ರಟ್ಟೆಯಲ್ಲಿ ಬಲವಿರುವಷ್ಟು,

ಮನಃಪೂರ್ವಕವಾಗಿ ಕೆಲಸ ಮಾಡುತ್ತೇವೆ. ನಾವು ಮನೆಗೆ ಬರುವಷ್ಟು ಹೊತ್ತಿಗೆ ಎಲ್ಲಾ ಸಿದ್ಧವಾಗಿರುತ್ತದೆ—ಊಟ, ತಿಂಡಿ, ಕೂಮಿಸ್, ಯಾವುದಕ್ಕೂ ಕೊರತೆ ಇಲ್ಲ. ಚಳಿಗಾಲದಲ್ಲಿ ತೊಟ್ಟುಕೊಳ್ಳುವುದಕ್ಕೆ ತುಬಟದ ಅಂಗಿಯೂ ಕಾಸಿಕೊಳ್ಳುವುದಕ್ಕೆ ಬೆಂಕಿಯೂ ಸಿಕ್ಕುತ್ತದೆ ಜೊತೆಯಲ್ಲಿ ಕೂತು ಮಾತಾಡುವುದಕ್ಕೂ, ಆತ್ಮದ ವಿಚಾರವಾಗಿ ಯೋಚಿಸುವುದಕ್ಕೂ, ದೇವರಿಗೆ ಪ್ರಾರ್ಥನೆ ಮಾಡುವುದಕ್ಕೂ ಬೇಕಾದಷ್ಟು ಅವಕಾಶವಿದೆ. ಐವತ್ತು ವರ್ಷದವರೆಗೂ ಸುಖವನ್ನು ಹುಡುಕಿ ಹುಡುಕಿ ಈಗ ಅದನ್ನು ಕಂಡುಕೊಂಡೆವು'

ಅತಿಥಿಗಳು ನಕ್ಕರು.

ಇಲಿಯಾಸನು 'ನಗಬೇಡಿ, ಅಣ್ಣಗಳಿರಾ, ಇದು ವಿನೋದದ ಮಾತಲ್ಲ; ಜೀವನದ ಸತ್ಯ. ಮೊದಲು ನಾವು ಅವಿವೇಕಿಗಳಾಗಿ ನಮ್ಮ ಸಂಪತ್ತು ಹೋಯಿತಲ್ಲಾ ಎಂದು ಅತ್ತೆವು. ಈಗ ದೇವರು ಸತ್ಯವನ್ನು ತೋರಿಸಿಕೊಟ್ಟಿದಾನೆ, ಅದನ್ನೇ ಈಗ ನಿಮಗೆ ಹೇಳುತ್ತಿದೇವೆ ನಮ್ಮ ಸಂತೋಷಕ್ಕಲ್ಲ ಅಣ್ಣಗಳಿರಾ, ಹೀಗೆ ಹೇಳುತ್ತಿರುವುದು, ನಿಮ್ಮ ಮೇಲ್ಮೆಗಾಗಿ' ಎಂದನು.

ಮುಲ್ಲನು 'ಇದೀಗ ವಿವೇಕದ ಮಾತುಗಳು. ಇಲಿಯಾಸ್ ಹೇಳುವುದು ಸತ್ಯ. ಪವಿತ್ರ ಗ್ರಂಥಗಳಲ್ಲಿಯೂ ಹೀಗೆಯೇ ಹೇಳಿದೆ' ಎಂದನು.

ಅತಿಥಿಗಳು ನಗುವನ್ನು ನಿಲ್ಲಿಸಿ ಯೋಚಿಸತೊಡಗಿದರು.

# ಕೆಲಸ, ಸಾವು ಮತ್ತು ರೋಗ



ದಕ್ಷಿಣ ಅಮೆರಿಕದ ಇಂಡಿಯನ್ ಜನರಲ್ಲಿ ಒಂದು ಕಥೆ ಪ್ರಚಾರ ದಲ್ಲಿದೆ.

ದೇವರು ಮನುಷ್ಯರನ್ನು ಕೆಲಸಮಾಡುವ ಆವಶ್ಯಕತೆಯೇ ಇಲ್ಲದಂತೆ ಸೃಷ್ಟಿಸಿದನು. ಅವರಿಗೆ ಮನೆಯಾಗಲಿ, ಬಟ್ಟೆಯಾಗಲಿ, ಆಹಾರವಾಗಲಿ ಬೇಕಾಗಿಯೇ ಇರಲಿಲ್ಲ. ನೂರು ವರ್ಷದವರೆಗೂ ಬದುಕುತ್ತಿದ್ದರು; ರೋಗವೆಂದರೇನೆಂಬುದೇ ಅವರಿಗೆ ಗೊತ್ತಿರಲಿಲ್ಲ. ಕಾಲ ಕಳೆಯಿತು. ಈ ಮನುಷ್ಯರು ಹೇಗೆ ಜೀವಿಸುತ್ತಿರುವರೋ ತಿಳಿದುಕೊಳ್ಳಬೇಕೆಂದು ದೇವರು ಬಂದು ನೋಡಿದನು. ಆನಂದವಾಗಿ ಜೀವಿಸುವ ಬದಲು ಅವರು ಪ್ರತಿ ಯೊಬ್ಬರೂ ತಮ್ಮಷ್ಟಕ್ಕೆ ತಾವು ಬೇರೆಯಾಗಿ ಬಾಳುತ್ತ ಒಬ್ಬರೊಡ ನೊಬ್ಬರು ಜಗಳವಾಡುತ್ತಿದ್ದರು ಜೀವನದಲ್ಲಿ ಆನಂದವನ್ನು ಕಾಣುವುದಕ್ಕೆ ಬದಲಾಗಿ ಅದೊಂದು ಕಂಟಕವೆಂದು ಭಾವಿಸುವ ಮಟ್ಟಿಗೆ ತಮ್ಮ ಜೀವನ ವನ್ನು ಹೊಲೆಗೆಡಿಸಿಬಿಟ್ಟಿದ್ದರು.

ಆಗ ದೇವರು ಇವರಲ್ಲಿ ಪ್ರತಿಯೊಬ್ಬನೂ ತನ್ನಷ್ಟಕ್ಕೆ ತಾನೇ ಬೇರೆ ಬೇರೆಯಾಗಿ ಜೀವಿಸುತ್ತಿರುವುದೇ ಅದಕ್ಕೆ ಕಾರಣವೆಂದೂ ಹಾಗಿರುವುದು ಸರಿಯಲ್ಲವೆಂದೂ ಯೋಚಿಸಿ ಮನುಷ್ಯರು ಕೆಲಸಮಾಡದಿದ್ದರೆ ಜೀವಿಸುವ ಸಂಭವವೇ ಇಲ್ಲದಂತೆ ಏರ್ಪಡಿಸಿದನು ಚಳಿಯಿಂದಲೂ ಹಸಿವಿನಿಂದಲೂ ತೊಂದರೆಪಡದಿರುವುದಕ್ಕಾಗಿ ಅವರು ನೆಲವನ್ನು ಅಗೆದು, ಸಸ್ಯಗಳನ್ನು ಬೆಳೆದು ಕಾಳುಗಳನ್ನು ಕೂಡಿಹಾಕಲೇ ಬೇಕಾಯಿತು.

ದೇವರು, "ಕೆಲಸವು ಇವರನ್ನು ಒಟ್ಟುಗೂಡಿಸುತ್ತದೆ. ಒಂಟಿ ಯಾಗಿ ತನ್ನಷ್ಟಕ್ಕೇ ತಾನಿರುವುದಾದರ ಮರದ ದಿಮ್ಮಿಗಳನ್ನು ಸಾಗಿಸಿ ಕೊಂಡು ಹೋಗುವುದಕ್ಕೂ ಮನೆ ಕಟ್ಟಿಕೊಳ್ಳುವುದಕ್ಕೂ ಸಾಧ್ಯವಾಗುವು

ದಿಲ್ಲ. ಆಯುಧಗಳನ್ನೂ ಇತರ ಉಪಕರಣಗಳನ್ನೂ ನಿರ್ಮಿಸಿಕೊಂಡು, ಬಿತ್ತಿ, ಬೆಳೆದು, ಪೈರು ತೆಗೆದುಕೊಳ್ಳುವುದೂ ಒಂಟಿಯಾದವನಿಗೆ ಸಾಗದ ಕೆಲಸ. ನೂಲು ನೂತು, ನೆಯ್ದು ಬಟ್ಟೆಗಳನ್ನು ಹೊಲಿದುಕೊಳ್ಳುವುದೂ ಅಸಾಧ್ಯ. ಇದರಿಂದ ಒಬ್ಬರೊಡನೊಬ್ಬರು ಸ್ನೇಹದಿಂದ ಒಟ್ಟುಗೂಡಿ ಕಲಸಮಾಡಿದಷ್ಟೂ ಹೆಚ್ಚು ಹೆಚ್ಚು ಕಾರ್ಯಸಾಧನೆಯಾಗುವುದೆಂದು ತಿಳಿದುಕೊಂಡು ಒಂದುಗೂಡಿ ಸುಖಿಸುತ್ತಾರೆ" ಎಂದು ಯೋಚಿಸಿದನು.

ಮತ್ತೆ ಕಲವು ಕಾಲ ಕಳೆಯಿತು ಮನುಷ್ಯರು ಹೇಗೆ ಜೀವಿಸು ತ್ತಿರುವರೋ ನೋಡಬೇಕೆಂದು ದೇವರು ಮತ್ತೊಂದು ಸಲ ಬಂದನು

ಮನುಷ್ಯರು ಮೊದಲಿಗಿಂತಲೂ ಕೀಳಾಗಿ ಜೀವಿಸುತ್ತಿದ್ದರು. ಒಟ್ಟು ಗೂಡಿ ಕೆಲಸವನ್ನೇನೋ ಮಾಡುತ್ತಿದ್ದರು. (ಹಾಗೆ ಮಾಡದಿರಲು ಸಾಧ್ಯವೇ ಇರಲಿಲ್ಲ) ಆದರೆ ಎಲ್ಲರೂ ಒಂದಾಗಿ ಸೇರಿರಲಿಲ್ಲ, ಸಣ್ಣ ಸಣ್ಣ ಗುಂಪುಗಳಾಗಿ ಸೇರಿಕೊಂಡಿದ್ದರು ಪ್ರತಿಯೊಂದು ಗುಂಪಿನವರೂ ಉಳಿದ ವರಿಗೆಲ್ಲ ಕಲಸಿಲ್ಲದಂತೆ ಮಾಡಲು ಹವಣಿಸುತ್ತಿದ್ದರು ಒಬ್ಬರಿಗೊಬ್ಬರು ಅಡ್ಡ ಬಂದು ತಮ್ಮ ಕಾಲವನ್ನೂ ಶಕ್ತಿಯನ್ನೂ ಕಡಿದಾಟದಲ್ಲಿ ಕಳೆಯು ತ್ತಿದ್ದರು. ಹೀಗಾಗಿ ಅವರೆಲ್ಲರೂ ಸಂಕಟಪಡುತ್ತಿದ್ದರು

ದೇವರು ಇದರಿಂದಲೂ ಒಳ್ಳೆಯದಾಗಲಿಲ್ಲವೆಂದು ತಿಳಿದು ಮನುಷ್ಯ ರಿಗೆ ಸಾವು ಯಾವಾಗ ಬರುವುದೆಂಬುದು ತಿಳಿಯದಂತೆಯೂ ಯಾವ ಕ್ಷಣದಲ್ಲಿ ಬೇಕಾದರೂ ಅವರು ಮರಣಹೊಂದುವ ಹಾಗಿರುವಂತೆಯೂ ಕಟ್ಟುಮಾಡಿ, ಈ ಸಂಗತಿಯನ್ನು ಅವರೆಲ್ಲರಿಗೂ ತಿಳಿಯಪಡಿಸಿದನು.

"ಮರಣಕಾಲ ಸರಿಯಾಗಿ ತಿಳಿಯದೆ ಯಾವ ಕ್ಷಣದಲ್ಲಿ ಬೇಕಾ ದರೂ ಸಾಯುವಂತಿರುವ ಕಾರಣ ಈ ಪ್ರಾಣದ ಮೇಲಿನ ಆಸೆಯಿಂದಲಾ ದರೂ ಒಬ್ಬರನ್ನೊಬ್ಬರು ದ್ವೇಷಿಸಿ ಫಲ ಸಾಧಿಸುವದಿಲ್ಲ. ಯಾವ ನಿಮಿಷ ದಲ್ಲಿ ಸಾಯಬೇಕಾಗುವುದೋ ಎಂಬ ಹೆದರಿಕೆಯಿಂದ ತಮಗೆ ದೊರೆತಿರು ವಷ್ಟು ಕಾಲವನ್ನೂ ಪರಸ್ಪರ ದ್ವೇಷದಲ್ಲಿ ವ್ಯರ್ಥವಾಗಿ ಹಾಳುಮಾಡಿಕೊಳ್ಳು ವುದಿಲ್ಲ" ಎಂದು ದೇವರು ಯೋಚಿಸಿದನು.

ಆದರೆ ನಡೆದದ್ದೇ ಬೇರೆ ಮನುಷ್ಯರು ಈಗ ಹೇಗೆ ಜೀವಿಸುವರೋ ನೋಡಬೇಕೆಂದು ದೇವರು ಮತ್ತೆ ಬಂದು ನೋಡಿದಾಗ ಅವರ ಜೀವನದ ರೀತಿ ಸ್ವಲ್ಪವೂ ಉತ್ತಮವಾಗಿರಲಿಲ್ಲ.

ಇತರರಿಗಿಂತಲೂ ಶಕ್ತಿವಂತರಾದ ಜನರು ಮನುಷ್ಯರಿಗೆ ಯಾವ ಕ್ಷಣದಲ್ಲಿ ಬೇಕಾದರೂ ಸಾವು ಬರಬಹುದೆಂಬುದರಿಂದ ಧೈರ್ಯಗೊಂಡು ಕೆಲವರನ್ನು ಕೊಂದೂ, ಮತ್ತೆ ಕೆಲವರನ್ನು ಕೊಲ್ಲುವುದಾಗಿ ಹೆದರಿಸಿಯೂ ತಮಗಿಂತ ಶಕ್ತಿಯಲ್ಲಿ ಕಡಮೆಯಾದವರನ್ನೆಲ್ಲ ಗೆದ್ದು ಅಡಿಯಾಳುಗಳಾಗಿ ಮಾಡಿಕೊಂಡರು. ಇದರ ಫಲವಾಗಿ ಅವರ ಜೀವನದ ರೀತಿಯೇ ಬದಲಾಯಿಸಿತು ಕೆಲವರು—ಶಕ್ತಿವಂತರೂ, ಅವರ ಸಂತತಿಯವರೂ—ಸ್ವಲ್ಪವೂ ಕೆಲಸಮಾಡುತ್ತಿರಲಿಲ್ಲ ಇವರು ಮೈ ಬಗ್ಗಿಸದೆ ಸೋಮಾರಿತನದಿಂದ ಸಂಕಟಪಡುತ್ತಿದ್ದರು ಶಕ್ತಿಹೀನರು ಮಿತಿಮೀರಿ ದುಡಿದು ದುಡಿದು ವಿಶ್ರಾಂತಿಯಿಲ್ಲದೆ ಬವಣೆಪಟ್ಟು ನಿರಾಸೆಯಿಂದ ನಲುಗಿ ಹೋಗಿದ್ದರು. ಈ ಎರಡು ಪಂಗಡಗಳೂ ಪರಸ್ಪರ ದ್ವೇಷಸಾಧನೆಯಲ್ಲಿ ತೊಡಗಿ ಯಾವಾಗಲೂ ಭಯದಿಂದ ನಡುಗುತ್ತಿದ್ದರು. ಹೀಗೆ ಮನುಷ್ಯರ ಜೀವನವು ಮತ್ತಷ್ಟು ದುಃಖಕರವಾಗಿ ಪರಿಣಮಿಸಿತು.

ಇದನ್ನು ಕಂಡು ದೇವರು ಈ ಅವ್ಯವಸ್ಥೆಯನ್ನು ಸರಿಪಡಿಸುವ ಅಪೇಕ್ಷೆಯಿಂದ ಕಟ್ಟಕಡೆಯ ಸಾಧನವನ್ನೇ ಉಪಯೋಗಿಸಿಬಿಡಬೇಕೆಂದು ನಿರ್ಧರಿಸಿದನು. ಹಾಗೆ ನಿರ್ಧರಿಸಿ ಬಗೆ ಬಗೆಯ ರೋಗಗಳನ್ನೆಲ್ಲ ಮನುಷ್ಯರ ಮೇಲೆ ಬಿಟ್ಟು ಬಿಟ್ಟನು. ಮನುಷ್ಯರೆಲ್ಲರನ್ನೂ ರೋಗಕ್ಕೆ ಒಳಪಡಿಸಿದರೆ ಆರೋಗ್ಯವಾಗಿರುವವರು ತಮಗೆ ರೋಗ ಬಂದ ಕಾಲದಲ್ಲಿ ಸುತ್ತಮುತ್ತ ಇರುವ ಆರೋಗ್ಯಶಾಲಿಗಳು ತಮಗೆ ಉಪಚರಿಸಿ ಸಹಾಯಮಾಡಲೆಂಬ ಉದ್ದೇಶದಿಂದ ತಾವು ಕೂಡ ರೋಗದಲ್ಲಿ ನರಳುವವರಿಗೆ ಮರುಕದಿಂದ ಸಹಾಯಮಾಡುತ್ತಾರೆಂದು ಭಗವಂತನು ಭಾವಿಸಿದನು.

ಆಮೇಲೆ ದೇವರು ಮನುಷ್ಯರನ್ನು ಅವರ ಹಾಳತಕ್ಕೆ ಅವರನ್ನು ಬಿಟ್ಟು ಹೊರಟುಹೋದನು. ರೋಗಕ್ಕೆ ವಶಪಡಿಸಿದ ಬಳಿಕ ಅವರ ಬಾಳ್ವೆ ಹೇಗಿದೆಯೋ ನೋಡುವುದಕ್ಕೆಂದು ಮತ್ತೊಂದುಸಲ ಹಿಂದಿರುಗಿ ಬಂದಾಗ ಮನುಷ್ಯಜೀವನವು ಇನ್ನೂ ಮಿಗಿಲಾದ ಕೀಳುಗತಿಗೆ ಇಳಿದಿದ್ದಿತು.

ದೇವರು ಯೋಚಿಸಿದಂತೆ ಜನರನ್ನು ಪರಸ್ಪರ ಒಟ್ಟುಗೂಡಿಸಬೇಕಾಗಿದ್ದ ಆ ರೋಗಗಳೇ ಅವರನ್ನು ಇನ್ನೂ ಹೆಚ್ಚಾಗಿ ದೂರ ದೂರಮಾಡಿ ವಿಭಾಗಿಸಿದವು. ಇತರರೆಲ್ಲರನ್ನೂ ತಮಗೋಸ್ಕರ ಕಲಸಮಾಡುವಂತೆ ನಿರ್ಬಂಧಿಸಿದ್ದ ಆ ಶಕ್ತಿವಂತರು ಈಗ ತಾವು ರೋಗದಿಂದ ನರಳುವಾಗಲೂ ಶುಶ್ರೂಷೆ ಮಾಡುವಂತೆ ಆ ಬಡವರನ್ನು ಬಲಾತ್ಕರಿಸಿದರು. ತಾವು ಮಾತ್ರ ರೋಗಿಗಳಿಗಾಗಿ ಸ್ವಲ್ಪ ಯೋಚನೆಯನ್ನೂ ಇಟ್ಟುಕೊಳ್ಳುತ್ತಿರಲಿಲ್ಲ. ಆದರೆ ಇತರರಿಗಾಗಿ ದುಡಿಯುತ್ತಲೂ ಇತರ ರೋಗಿಗಳನ್ನು ಉಪಚರಿಸುತ್ತಲೂ ನಿರ್ಬಂಧಕ್ಕೆ ಸಿಕ್ಕಿ ಪೇಚಾಡುತ್ತಿದ್ದವರಿಗೆ ತಮ್ಮ ಮನೆಯ ರೋಗಿಗಳನ್ನು ಉಪಚರಿಸಲು ಅವಕಾಶವೇ ಇಲ್ಲದೆ ಅವರನ್ನು ನಿಸ್ಸಹಾಯರಾಗಿ ಕೈಬಿಡುವ ಗತಿ ಬಂದಿದ್ದಿತು

ಶ್ರೀಮಂತರು ಈ ರೋಗಿಗಳು ಕಣ್ಣಿಗೆ ಬೀಳುವಂತಿದ್ದರೆ ತಮ್ಮ ಸುಖಸಂತೋಷಗಳಿಗೆ ಕುಂದಾಗುವುದೆಂದು ಅವರಿಗೆಲ್ಲ ಬೇರೊಂದು ಮನೆಯನ್ನು ಕಲ್ಪಿಸಿದರು. ಅವರು ರೋಗದ ಯಾತನೆಯಿಂದ ನರಳಿ ನರಳಿ ತಮ್ಮಲ್ಲಿ ಮರುಕಗೊಂಡು ವಿಶ್ವಾಸದಿಂದ ನೋಡುವಂಥವರೊಬ್ಬರನ್ನೂ ಕಾಣದೆ, ಕೂಲಿಗಾಗಿ ಉಪಚರಿಸಲು ನಿಂತ ಅಪರಿಚಿತರ ಕೈಕೆಳಗೆ ಪ್ರಾಣ ಬಿಡಬೇಕಾಗಿದ್ದಿತು ಈ ಕೂಲಿಯ ಪರಿಚಾರಕರಿಗೆ ರೋಗಿಗಳಲ್ಲಿ ಮರುಕವಿಲ್ಲದ್ದು ಹಾಗಿರಲಿ, ಅವರನ್ನು ಅಸಹ್ಯದಿಂದ ಅಸಡ್ಡೆಯಾಗಿಯೂ ನೋಡುತ್ತಿದ್ದರು. ಇದರ ಜೊತೆಗೆ ರೋಗಗಳಲ್ಲಿ ಮುಕ್ಕಾಲುಪಾಲು ಒಬ್ಬರಿಂದೊಬ್ಬರಿಗೆ ಹರಡುವ ಅಂಟು ರೋಗಗಳೆಂದು ತಿಳಿದು ಆ ಸುಂಕು ತಮಗೆಲ್ಲಿ ಅಂಟೀತೋ ಎಂಬ ಹೆದರಿಕೆಯಿಂದ ತಾವು ಅಂಥ ರೋಗಿಗಳ ಹತ್ತಿರಕ್ಕೆ

ಸುಳಿಯುವುದನ್ನೂ ಬಿಟ್ಟದ್ದಲ್ಲದೆ ತಮ್ಮೊಡನೆ ಸೇರಬಂದವರ ಸಂಪರ್ಕದಿಂದಲೂ ತಪ್ಪಿಸಿಕೊಂಡು ದೂರ ಹೋಗಿ ಬೇರೆಯಾಗಿರುತ್ತಿದ್ದರು.

ಆಗ ದೇವರು "ಜನರಿಗೆ ಸುಖವೆಂದರೇನೆಂಬುದನ್ನು ತಿಳಿಸಲು ಇಷ್ಟು ಪ್ರಯತ್ನಪಟ್ಟೆ ಅವರು ತಿಳಿದುಕೊಳ್ಳಲಿಲ್ಲ. ದುಃಖವನ್ನು ಅನುಭವಿಸಿ ಅನುಭವಿಸಿ ಅದರಿಂದಲೇ ಸುಖವೆಲ್ಲಿ ದೊರೆಯುವುದೆಂಬುದನ್ನು ತಾವಾಗಿಯೇ ತಿಳಿದುಕೊಳ್ಳಲಿ" ಎಂದು ಸುಮ್ಮನಾದನು.

ಆ ಬಳಿಕ ಮನುಷ್ಯರು ಯಾರ ತಂಟೆಯೂ ಇಲ್ಲದೆ ಒಹುಕಾಲ ಬಾಳಿದರು. ಅಷ್ಟು ಕಾಲ ಕಳೆದರೂ ತಾವು ಸುಖವಾಗಿರಬೇಕೆಂದಾಗಲಿ, ಸುಖವಾಗಿ ಒದುಕುವುದು ಸಾಧ್ಯವೆಂದಾಗಲಿ ತಿಳಿದುಕೊಳ್ಳಲೇ ಇಲ್ಲ. ಈಚೀಚೆಗೆ ಎಲ್ಲಿಯೋ ಕೆಲವರು ಮಾತ್ರ ತಿಳಿದುಕೊಳ್ಳುತ್ತಿದಾರೆ. 'ಕಲವರು ಕೆಲಸಮಾಡುವುದಕ್ಕೆ ಹೆದರಿ ನಡುಗುತ್ತ ಅದನ್ನು ತಪ್ಪಿಸಿಕೊಳ್ಳುವುದೂ, ಉಳಿದವರು ನಿರ್ಬಂಧದ ಗುಲಾಮಗಿರಿಗೊಳಗಾಗಿ ದುಡಿದು ಹಣ್ಣಾಗುವುದೂ ತಪ್ಪು ಎಂದಿಗೂ ಹೀಗಿರಬಾರದು. ಕೆಲಸಮಾಡುವುದು ಸರ್ವಸಾಮಾನ್ಯವಾಗಿ ಆನಂದದಾಯಕವಾಗಿರಬೇಕು, ಜನರೆಲ್ಲರನ್ನೂ ಒಟ್ಟುಗೂಡಿಸುವಂತಿರಬೇಕು.' ಎಂಬ ತತ್ವವನ್ನು ಅವರು ಈಗೀಗ ಅರಿತುಕೊಳ್ಳುತ್ತಿದ್ದಾರೆ.

ಪ್ರತಿಯೊಬ್ಬನನ್ನೂ ಗಳಿಗೆಗಳಿಗೆಗೂ ಮರಣ ಒಂದೀತೆಂಬ ಹೆದರಿಕೆಯು ಬಾಧಿಸುತ್ತಿರುವುದರಿಂದ ತಮ್ಮ ಪಾಲಿಗೆ ಒಂದಿರುವ ವರ್ಷ, ತಿಂಗಳು, ದಿನ, ಘಳಿಗೆ, ವಿಘಳಿಗೆಗಳನ್ನೆಲ್ಲ ಸೌಹಾರ್ದದಿಂದಲೂ ಪರಸ್ಪರ ಪ್ರೇಮದಿಂದಲೂ ಕಳೆಯಬೇಕೆಂಬುದು ಈಗೀಗ ಅವರಿಗೆ ಹೊಳೆಯುತ್ತಿದೆ. ರೋಗವು ಪರಸ್ಪರ ಅಗಲಿಕೆಗೆ ಕಾರಣವಾಗಬಾರದೆಂದೂ ಅದಕ್ಕೆ ಒಡಲಾಗಿ ಪರಸ್ಪರ ಪ್ರೇಮದಿಂದ ಐಕ್ಯವನ್ನು ಸಾಧಿಸಲು ಇದು ದಾರಿಯಾಗಬೇಕೆಂದೂ ಮುಂದಟ್ಟುಮಾಡಿಕೊಳ್ಳುತ್ತಿದಾರೆ.

# ಒಬ್ಬನಿಗೆ ಎಷ್ಟು ನೆಲ ಬೇಕು ?



ಅಕ್ಕ ಹಳ್ಳಿಗಾಡಿನಲ್ಲಿದ್ದ ತನ್ನ ತಂಗಿಯನ್ನು ನೋಡಿಕೊಂಡು ಹೋಗಲು ಬಂದಿದ್ದಳು. ಅಕ್ಕ ಪಟ್ಟಣದಲ್ಲಿನ ಒಬ್ಬ ವರ್ತಕನನ್ನು ಮದುವೆಯಾಗಿದ್ದಳು, ತಂಗಿ ಒಬ್ಬ ಹಳ್ಳಿಯ ರೈತನ ಕೈಹಿಡಿದಿದ್ದಳು. ಅಕ್ಕತಂಗಿಯರಿಬ್ಬರೂ ಟೀ ಕುಡಿದು ಮಾತಾಡುತ್ತ ಕುಳಿತಿದ್ದಾಗ ಅಕ್ಕನು ಪಟ್ಟಣವಾಸದ ಸೌಕರ್ಯಗಳನ್ನು ಹೊಗಳಿಕೊಳ್ಳಲು ಪ್ರಾರಂಭಿಸಿದಳು. ತಾವು ಅಲ್ಲಿ ಎಷ್ಟು ಸುಖವಾಗಿ ಬಾಳುತ್ತಿದ್ದರೆಂಬುದು, ಎಷ್ಟು ಅಂದವಾದ ಉಡುಪು ತೊಟ್ಟುಕೊಳ್ಳುತ್ತಿದ್ದರೆಂಬುದು, ತನ್ನ ಮಕ್ಕಳಿಗೆ ಎಷ್ಟು ಸೊಗಸಾದ ಬಟ್ಟೆಗಳನ್ನು ತೊಡಿಸುತ್ತಿದ್ದಳೆಂಬುದು, ತಾವು ಎಷ್ಟು ಚೆನ್ನಾದ ಪದಾರ್ಥಗಳನ್ನು ತಿಂದು ಕುಡಿಯುತ್ತಿದ್ದರೆಂಬುದು, ನಾಟಕಶಾಲೆಗಳಿಗೂ ವಿನೋದ ಕೂಟಗಳಿಗೂ ಉದ್ಯಾನವನಗಳಿಗೂ ಹೋಗಿ ಹೇಗೆ ಆನಂದಪಡುತ್ತಿದ್ದರೆಂಬುದು-ಇದನ್ನೆಲ್ಲ ಹೇಳಿಕೊಳ್ಳುತ್ತ ಬಂದಳು.

ತಂಗಿಗೆ ಸಿಟ್ಟು ಹತ್ತಿತು. ತಾನೂ ವರ್ತಕ ಜೀವನವನ್ನು ಅಲ್ಲಗಳೆಯುತ್ತ ರೈತನ ಪರವಾಗಿಯೇ ವಾದಿಸುತ್ತ ನಿಂತಳು

'ನನ್ನ ಜೀವನದ ರೀತಿಯನ್ನು ಬದಲಾಯಿಸಿ ನಿನ್ನ ಜೀವನದ ರೀತಿಯನ್ನು ಅನುಸರಿಸಲು ನನಗಂತೂ ಇಷ್ಟವಿಲ್ಲ. ನಾವು ಒರಟೊರಟಾಗಿ ಜೀವಿಸಬಹುದು. ಆದರೇನು ? ಆತಂಕವಾದರೂ ಇಲ್ಲದಂತಿದೇವೆ ನಮಗಿಂತ ನೀವು ಉತ್ತಮರೀತಿಯಲ್ಲಿ ಜೀವಿಸುತ್ತೀರಿ ಆದರೆ, ಅನೇಕವೇಳೆ ನಿಮಗೆ ಬೇಕಾದಷ್ಟಕ್ಕಿಂತಲೂ ಹೆಚ್ಚಾಗಿ ಸಂಪಾದಿಸುವಿರಾದರೂ ನಿಮ್ಮ ಸರ್ವಸ್ವವನ್ನೂ ಕಳೆದುಕೊಳ್ಳಬಹುದಾದ ಸಂಭವವೂ ಹೆಚ್ಚು "ಲಾಭ ನಷ್ಟಗಳು ಅವಳಿ ಮಕ್ಕಳು" ಎಂಬ ಗಾದೆ ನಿನಗೆ ಗೊತ್ತಿದೆಯಲ್ಲ. ಒಂದು ದಿನ ಶ್ರೀಮಂತರಾಗಿರುವವರು ಮರುದಿನ ಹೊಟ್ಟೆಗಾಗಿ ಭಿಕ್ಷೆ ಬೇಡುವಂತಾಗ

ಬಹುದು ; ಎಷ್ಟೋ ಸಲ ಹೀಗಾಗಿದೆ. ನಮ್ಮ ದಾರಿ ಹೆಚ್ಚು ಸುರಕ್ಷಿತವಾದದ್ದು. ರೈತನ ಜೀವನ ಸಮೃದ್ಧವಲ್ಲದಿದ್ದರೂ ಸ್ಥಿರವಾದದ್ದು. ನಾವು ಐಶ್ವರ್ಯವಂತರಾಗುವುದೇ ಇಲ್ಲ. ಆದರೆ ಯಾವಾಗಲೂ ನಮಗೆ ಉಣ್ಣುವುದಕ್ಕೆ ತಕ್ಕಷ್ಟು ಇದ್ದೇ ಇರುತ್ತದೆ' ಎಂದಳು.

ಅಕ್ಕನು 'ತಕ್ಕಷ್ಟಂತೆ, ತಕ್ಕಷ್ಟು! ಹೌದು, ಹಂದಿಗಳಂತೆಯೂ ದನಗಳಂತೆಯೂ ಇರುವುದಾದರೆ! ಅಚ್ಚುಕಟ್ಟಿನ ಸೊಗಸಾಗಲಿ ಗಂಭೀರವಾದ ನಡವಳಿಕೆಯಾಗಲಿ ನಿಮಗೇನು ಗೊತ್ತು? ನಿಮ್ಮಾತ ಎಷ್ಟೇ ಕಷ್ಟಪಟ್ಟು ದುಡಿದು ದುಡಿದು ಹಣ್ಣಾದರೂ ನೀವು ಈಗ ಹೇಗೆ ಜೀವಿಸುತ್ತಿರುವಿರೋ ಸಾಯುವವರೆಗೂ ಹಾಗೆಯೇ ಇರುತ್ತೀರಿ—ಸಗಣಿಯ ತಿಪ್ಪೆಯಮೇಲೆ—ನಿಮ್ಮ ಮಕ್ಕಳಿಗೂ ಇದೇ ಗತಿ' ಎಂದು ಅಣಕಿಸುತ್ತ ಹೇಳಿದಳು.

'ಆಗಲಿ, ಅದಕ್ಕೇನು' ನಮ್ಮ ಕೆಲಸ ಗಡಸು, ಒರಟು. ಆದರೇನಂತೆ? ಯಾವಾಗಲೂ ತಕ್ಕ ಪ್ರತಿಫಲ ಸಿಕ್ಕುವುದೆಂಬ ಖಂಡಿತವಿದೆ, ನಾವು ಯಾರೊಬ್ಬರಿಗೂ ತಲೆ ಒಗ್ಗಿಸಬೇಕಾಗಿಲ್ಲ. ನಿಮ್ಮನ್ನು ನೋಡಿದರೆ, ಯಾವಾಗಲೂ ಬಗೆಬಗೆಯ ಪ್ರಲೋಭನಗಳು ನಿಮ್ಮ ಸುತ್ತ ಮುತ್ತಿಕೊಂಡೇ ಇರುವವು, ಇವತ್ತು ಎಲ್ಲ ನೆಟ್ಟಗಿರಬಹುದು, ನಾಳೆ ಆ ಕೆಟ್ಟ ಶನಿ ನಿನ್ನ ಗಂಡನನ್ನು ಇಸ್ಪೀಟು (ಜೂಜು) ಹೆಂಡ, ಅಥವಾ ಹೆಂಗಸರ ಆಶೆಗೆ ಮರುಳಾಗುವಂತೆ ಮಾಡಿಬಿಡಬಹುದು, ಆಗ ಎಲ್ಲ ಹಾಳೇ. ಅಂಥ ಸಂಗತಿಗಳು ಅನೇಕ ಸಲ ನಡೆಯುವುದಿಲ್ಲವೆ?' ಎಂದು ಉತ್ತರ ಕೊಟ್ಟಳು.

ಪಾಹೋಮ್, ಮನೆಯ ಯಜಮಾನ, ಒಲೆಯ ನೆತ್ತಿಯ ಮೇಲೆ ಮಲಗಿದ್ದವನು ಈ ಹೆಂಗಸರ ಹರಟೆಯನ್ನು ಕಿವಿಗೊಟ್ಟು ಕೇಳುತ್ತಿದ್ದನು.

'ಹೌದು, ಇದು ನಿಜವಾದ ಮಾತು. ಬಾಲ್ಯದಿಂದಲೂ ನಾವು ರೈತರು ಭೂಮಿತಾಯಿಯನ್ನು ಉತ್ತು ಸದಾ ಕೆಲಸಮಾಡುತ್ತಲೇ ಇರುತ್ತೇವೆ ಆದ್ದರಿಂದ ನಮ್ಮ ತಲೆಯಲ್ಲಿ ಆ ಹಾಳು ಚಟಗಳು ಯಾವವೂ ಬಂದು ನೆಲೆಸುವಂತೆ ಅವಕಾಶಕೊಡಲು ನಮಗೆ ಹೊತ್ತೇ ಇಲ್ಲ. ನಮಗಿರುವ

ತೊಂದರೆ ಒಂದೇ ಒಂದು, ಸಾಕಾದಷ್ಟು ಭೂಮಿಯಿಲ್ಲ. ನನಗೆ ಬೇಕಾದಷ್ಟು ಭೂಮಿ ಮಾತ್ರ ಸಿಕ್ಕಿದರೆ ಆ ಪಿಶಾಚಿಗೂ ನಾನು ಹೆದರುವುದಿಲ್ಲ' ಎಂದು ಯೋಚಿಸಿದನು.

ಹೆಂಗಸರು ಟೀ ಕುಡಿದು, ಸ್ವಲ್ಪ ಹೊತ್ತು ಬಟ್ಟೆ ಬರೆಗಳ ವಿಷಯವಾಗಿ ಮಾತಾಡುತ್ತಿದ್ದರು. ಆಮೇಲೆ ಟೀ ಮಾಡುವ ಉಪಕರಣಗಳನ್ನೆಲ್ಲ ತೆಗೆದಿರಿಸಿ ಮಲಗಿಕೊಂಡರು.

ಆದರೆ ಪಿಶಾಚಿ ಒಲೆಯ ಹಿಂದುಗಡೆಯಲ್ಲಿಯೇ ಕುಳಿತುಕೊಂಡಿದ್ದು ಆಡಿದ ಮಾತನ್ನೆಲ್ಲ ಕೇಳಿದ್ದಿತು. ರೈತನ ಹೆಂಡತಿ ತನ್ನ ಗಂಡನು ಜಂಬ ಕೊಚ್ಚಿಕೊಳ್ಳುವ ಹಾಗೆ ಮಾಡಿದ್ದನ್ನೂ, ರೈತನು ತನಗೆ ಬೇಕಾದಷ್ಟು ಭೂಮಿ ಸಿಕ್ಕಿದರೆ ಪಿಶಾಚಿಗೂ ತಾನು ಹೆದರುವುದಿಲ್ಲವೆಂದದ್ದನ್ನೂ ಕಂಡು ಅದಕ್ಕೆ ಸಂತೋಷವಾಯಿತು

'ಒಳ್ಳೆಯದು! ಯಾರು ಗಟ್ಟಿಯೋ ಒಂದು ಕೈ ನೋಡೋಣ! ನಿನಗೆ ಎಷ್ಟು ಬೇಕೋ ಅಷ್ಟು ಭೂಮಿಯನ್ನು ಕೊಡುತ್ತೇನೆ ಆ ಭೂಮಿಯ ಮುಖಾಂತರವಾಗಿಯೇ ನಿನ್ನನ್ನು ನನ್ನ ಬಲೆಯಲ್ಲಿ ಸಿಕ್ಕಿಸಿಕೊಳ್ಳುತ್ತೇನೆ' ಎಂದು ಆ ಪಿಶಾಚಿ ಯೋಚಿಸಿಕೊಂಡಿತು.

೨

ಆ ಹಳ್ಳಿಗೆ ಬಹಳ ಹತ್ತಿರದಲ್ಲಿಯೇ ಒಬ್ಬ ಜಮೀನ್ದಾರ ಹೆಂಗಸು ವಾಸವಾಗಿದ್ದಳು. ಆಕೆಗೆ ಸುಮಾರು ಮುನ್ನೂರು ಎಕರೆಯಷ್ಟು ಆಸ್ತಿಯಿದ್ದಿತು. ಅವಳು ಯಾವಾಗಲೂ ರೈತರೊಡನೆ ಸಮಾಧಾನವಾಗಿಯೇ ಜೀವಿಸುತ್ತಿದ್ದಳು. ಕಡೆಗೆ ಒಬ್ಬ ಹಳೆಯ ಸಿಪಾಯಿಯನ್ನು ತನ್ನ ಆಸ್ತಿಯ ಮೇಲ್ವಿಚಾರಕನನ್ನಾಗಿ ನೇಮಿಸಿಕೊಂಡಳು. ಆಗಿನಿಂದ ಮೊದಲಿನ ಸ್ಥಿತಿ ಬದಲಾಯಿಸಿತು. ಈ ಮೇಲ್ವಿಚಾರಕನು ರೈತರಿಗೆ ದಂಡದ ಹೊರೆಯನ್ನು ಹೇರುತ್ತ ಬಂದನು. ಪಾಹೋಮ್ ಎಷ್ಟೇ ಎಚ್ಚರಿಕೆಯಿಂದ ನೋಡಿಕೊಳ್ಳಲು ಪ್ರಯತ್ನಿಸಿದರೂ ಒಂದುಸಲ ಅವನದೊಂದು ಕುದುರೆ ಆಕೆಯ

ಗದ್ದೆಯ ಓಟ್ಸಿಗೆ ನುಗ್ಗುವುದು, ಒಂದುಸಲ ಅವನ ಹಸು ಅವಳ ತೋಟಕ್ಕೆ ನುಸಿಯುವುದು, ಒಂದುಸಲ ಅವನ ಕರುಗಳು ಅವಳ ಹುಲ್ಲುಗಾವಲಿಗೆ ಸುಗ್ಗುವುದು—ಹೀಗೆ ಆಗಾಗ ಮತ್ತೆಮತ್ತೆ ಆಗುತ್ತಲೇ ಇದ್ದಿತು. ಇದರಿಂದ ಸದಾ ಅವನು ದಂಡ ತೆರಬೇಕಾಗುತ್ತಿದ್ದಿತು.

ಪಾಹೋಮ್ ದಂಡವನ್ನೇನೋ ಕೊಟ್ಟನು, ಆದರೆ ಕೊಡಬೇಕಾಯಿತಲ್ಲಾ ಎಂದು ಗೊಣಗಾಡಿಕೊಂಡನು. ಮನಸ್ಸಮಾಧಾನವಿಲ್ಲದೆ ರೇಗಿ ಮನೆಗೆ ಹೋಗಿ ಮನೆಯವರೊಡನೆಲ್ಲ ಬಹು ಒರಟೊರಟಾಗಿ ವರ್ತಿಸಿದನು. ಈ ಮೇಲ್ವಿಚಾರಕನಿಂದ ಆ ಬೇಸಿಗೆಯಲ್ಲೆಲ್ಲ ಅವನಿಗೆ ಬಹಳ ತೊಂದರೆಯಾಗುತ್ತಲೇ ಇದ್ದಿತು, ಕಡೆಗೆ ಮಾಗಿ ಒಂದು ದನಕರುಗಳನ್ನು ಕೊಟ್ಟಿಗೆಯಲ್ಲೇ ಕಟ್ಟಿ ಕಾಪಾಡಬೇಕಾಗಿ ಒಂದಾಗ ಸಂತೋಷವೂ ಆಯಿತು. ಹುಲ್ಲುಗಾವಲಿಗೆ ಹೋಗಿ ಮೆಯ್ದು ಬರುವುದು ತಪ್ಪಿ ಮನೆಯಲ್ಲೇ ಮೇವು ಹಾಕಬೇಕಾಯಿತಲ್ಲಾ ಎಂದು ಸ್ವಲ್ಪ ಯೋಚನೆಯಾದರೂ ಅವುಗಳ ವಿಚಾರದಲ್ಲಿ ಮತ್ತೆ ಯಾವ ಆತಂಕವೂ ಇಲ್ಲದಂತಾಯಿತು.

ಮಾಗಿಕಾಲದಲ್ಲಿ ಆ ಹೆಂಗಸು ತನ್ನ ಭೂಮಿಯನ್ನು ಮಾರಬೇಕೆಂದಿರುವಳೆಂದೂ ರಸ್ತೆಯ ಪಕ್ಕದ ಹೋಟಲಿನ ಯಜಮಾನನು ಅದನ್ನು ಕೊಳ್ಳುವುದಕ್ಕೆ ಮಾತುಕತೆಯಾಡುತ್ತಿರುವನೆಂದೂ ಸುದ್ದಿ ಹಬ್ಬಿತು. ಇದನ್ನು ಕೇಳಿ ರೈತರು ಬಹಳ ಹೆದರಿದರು.

"ಹೌದು, ಹೋಟಲಿನ ಯಜಮಾನನಿಗೆ ಈ ಭೂಮಿ ಸಿಕ್ಕಿದರೆ ಅವನು ಈ ಮೇಲ್ವಿಚಾರಕನಿಗಿಂತ ಹೆಚ್ಚಾಗಿ ದಂಡ ಹಾಕಿ ನಮ್ಮನ್ನು ಮತ್ತಷ್ಟು ಗೋಳು ಹುಯ್ದುಕೊಳ್ಳುತ್ತಾನೆ. ನಮಗೋ ಈ ಭೂಮಿಯನ್ನು ಬಿಟ್ಟರೆ ಗತಿಯಿಲ್ಲ" ಎಂದು ಅವರೆಲ್ಲರೂ ಯೋಚಿಸಿದರು.

ಆಗ ರೈತರೆಲ್ಲರೂ ಊರೊಟ್ಟಿನ ಪರವಾಗಿ ಆಕೆಯ ಹತ್ತಿರಕ್ಕೆ ಹೋಗಿ ತಾವೇ ಅವನಿಗಿಂತ ಹೆಚ್ಚು ಬೆಲೆ ಕೊಡುವುದಾಗಿ ಹೇಳಿ ಆ ಭೂಮಿಯನ್ನು ಹೋಟಲಿನ ಯಜಮಾನನಿಗೆ ಮಾರಬಾರದೆಂದು ಕೇಳಿ

ಕೊಂಡರು. ಆಕೆ ಅದನ್ನು ಅವರಿಗೇ ಕೊಡುವುದಾಗಿ ಸಮ್ಮತಿಸಿದಳು. ಅದನ್ನು ಮಧ್ಯಕದಲ್ಲಿಟ್ಟು ಎಲ್ಲರೂ ಉಪಯೋಗಿಸಿಕೊಳ್ಳಬೇಕಂಬ ಉದ್ದೇಶದಿಂದ ರೈತರೆಲ್ಲ ಆ ಆಸ್ತಿಯನ್ನೆಲ್ಲ ಊರೊಟ್ಟಿಗೆ ಕೊಳ್ಳುವ ಏರ್ಪಾಡು ಮಾಡಲು ಪ್ರಯತ್ನಿಸಿದರು. ಆ ವಿಚಾರವನ್ನು ಚರ್ಚಿಸುವುದಕ್ಕಾಗಿ ಎರಡು ಸಲ ಸಭೆ ಸೇರಿದರು. ಆದರೂ ತೀರ್ಮಾನಿಸುವುದಕ್ಕಾಗಲಿಲ್ಲ. ಆ ಕೆಟ್ಟ ಶನಿ ಅವರಲ್ಲಿ ಕಲಹವನ್ನು ಬಿತ್ತಿದ್ದರಿಂದ ಅವರು ಯಾವುದನ್ನೂ ಒಪ್ಪಿಕೊಳ್ಳಲಿಲ್ಲ. ಆಗ ಪ್ರತಿಯೊಬ್ಬರೂ ತಮ್ಮ ತಮ್ಮ ಅನುಕೂಲಕ್ಕೆ ತಕ್ಕಂತೆ ಬೇರೆ ಬೇರೆಯಾಗಿಯೇ ಭೂಮಿಯನ್ನು ಕೊಳ್ಳಬೇಕಂದು ಗೊತ್ತುಮಾಡಿಕೊಂಡರು. ಆ ಹೆಂಗಸು ಮೊದಲಿನ ಏರ್ಪಾಡಿಗೆ ಒಪ್ಪಿದ್ದಂತೆ ಇದಕ್ಕೂ ಸಮ್ಮತಿಪಟ್ಟಳು.

ಕೂಡಲೇ, ಪಾಹೋಮ್ ತನ್ನ ನೆರೆಯವನೊಬ್ಬನು ಐವತ್ತು ಎಕರೆಗಳನ್ನು ಕೊಳ್ಳುವನೆಂದೂ ಕೈಮೇಲೆ ಅರ್ಧಹಣವನ್ನು ತೆಗೆದುಕೊಂಡು ಉಳಿದ ಅರ್ಧಕ್ಕೆ ಒಂದು ವರ್ಷದ ವರೆಗೆ ನಿರೀಕ್ಷಿಸಲು ಆಕೆ ಒಪ್ಪಿರುವಳೆಂದೂ ಕೇಳಿದನು. ಪಾಹೋಮ್‌ಗೆ ಹೊಟ್ಟೆಯುಕಿಚ್ಚು ಹುಟ್ಟಿತು.

'ನೋಡು! ಭೂಮಿಯೆಲ್ಲ ಮಾರಿಹೋಗುತ್ತಿದೆ, ನನಗೆ ಸ್ವಲ್ಪವೂ ಸಿಕ್ಕುವುದಿಲ್ಲ' ಎಂದು ತನ್ನ ಹೆಂಡತಿಯ ಸಂಗಡ ಹೇಳಿದನು'

'ಉಳಿದವರು ಕೊಂಡುಕೊಳ್ಳುತ್ತಿದಾರೆ. ನಾವೂ ಒಂದಿಪ್ಪತ್ತೆಕರೆಗಳನ್ನು ಕೊಳ್ಳಬೇಕು. ಜೀವಿಸುವುದೇ ಅಸಾಧ್ಯವಾಗುತ್ತಬಂದಿದೆ ಆ ಮೇಲ್ವಿಚಾರಕನು ದಂಡಹಾಕಿ ಹಾಕಿ ನಮ್ಮನ್ನು ಅರೆಯುತ್ತಿದಾನೆ'

ಆಗ ಅವರು ತಮ್ಮಿಬ್ಬರ ಬುದ್ಧಿಯನ್ನೂ ಒಟ್ಟುಗೂಡಿಸಿ ಅದನ್ನು ತಾವು ಹೇಗೆ ಕೊಂಡುಕೊಳ್ಳಬಹುದೆಂಬುದನ್ನು ಆಲೋಚಿಸಿದರು. ಅವರು ಒಂದು ನೂರು ರೂಬಲ್‌ಗಳನ್ನು ಮಿಗಿಸಿಟ್ಟಿದ್ದರು. ಒಂದು ಕುದುರೆಯ ಮರಿಯನ್ನೂ ತಮ್ಮ ಜೇನಿನಲ್ಲಿ ಅರ್ಧ ಭಾಗವನ್ನು ಮಾರಿದರು; ಒಬ್ಬ ಮಗನನ್ನು ಜೀತಕ್ಕಿಟ್ಟು ಅವನ ಕೂಲಿಯನ್ನು ಮುಂಗಡವಾಗಿ ತೆಗೆದು

ಕೊಂಡರು, ಉಳಿದದ್ದನ್ನು ಒಬ್ಬ ಭಾವನ ಹತ್ತಿರ ಸಾಲ ತೆಗೆದುಕೊಂಡರು. ಹೀಗೆ ಅಂತೂ ಇಂತೂ ಅರ್ಧಬೆಲೆಯನ್ನು ಹೊಂದಿಸಿಕೊಂಡರು.

ಇಷ್ಟು ಮಾಡಿದ ಒಳಿಕ ಪೋಹಾಮ್ ಸಲವತ್ತು ಎಕರಯ ಒಂದು ಜಮೀನನ್ನು (ಅದರಲ್ಲಿ ಸ್ವಲ್ಪ ಭಾಗ ಮರಗಳು ತುಂಬಿದ ಪ್ರದೇಶವೂ ಇತ್ತು) ಆರಿಸಿಕೊಂಡು ಚೌಕಾಸಿಮಾಡಿ ಬೆಲೆಯನ್ನು ನಿರ್ಧರಿಸುವುದ ಕ್ಕಾಗಿ ಆ ಹೆಂಗಸಿನ ಬಳಿಗೆ ಹೋದನು ಅವರು ಒಂದು ತೀರ್ಮಾನಕ್ಕ ಬಂದರು, ಅವನು ಮುಂಗಡವಾಗಿ ಸ್ವಲ್ಪ ಹಣವನ್ನು ಕೊಟ್ಟನು. ಆಮೇಲೆ ಅವರು ಪಟ್ಟಣಕ್ಕ ಹೋಗಿ ಪತ್ರಕ್ಕೆ ರುಜುಹಾಕಿದರು, ಅವನು ಅರ್ಧ ಹಣವನ್ನು ಕೊಟ್ಟು ಉಳಿದದ್ದನ್ನು ಎರಡು ವರ್ಷದೊಳಗೆ ಕೊಡುವುದಾಗಿ ಮಾತುಕೊಟ್ಟನು.

ಈಗ ಪಾಹೋಮ್‌ಗೆ ಸ್ವಂತ ಭೂಮಿಯಾದಂತಾಯಿತು. ಬೀಜ ವನ್ನು ಸಾಲ ತಂದು ತಾನು ಕೊಂಡುಕೊಂಡಿದ್ದ ಭೂಮಿಯಲ್ಲಿ ಬಿತ್ತಿದನು. ಬಹು ಚೆನ್ನಾಗಿ ಬೆಳೆ ಬಂದಿತು, ಒಂದು ವರ್ಷದೊಳಗಾಗಿ ಆ ಹೆಂಗಸು ಮತ್ತು ತನ್ನ ಭಾವ ಈ ಇಬ್ಬರ ಸಾಲವನ್ನೂ ತೀರಿಸಿಬಿಟ್ಟನು. ಹೀಗೆ ಅವನು ತನ್ನ ನೆಲವನ್ನೇ ಉತ್ತು ಬಿತ್ತುತ್ತಲೂ, ತನ್ನ ನೆಲದಲ್ಲಿಯೇ ಹುಲ್ಲು ಬೆಳೆಸಿ ಕೂಡಿ ಹಾಕುತ್ತಲೂ, ತನ್ನ ಮರಗಳನ್ನೇ ತಾನು ಕಡಿದುಕೊಳ್ಳುತ್ತಲೂ, ತನ್ನ ಸ್ವಂತ ಕಾವಲಿನಲ್ಲೇ ದನಗಳನ್ನು ಮೇಯಿಸಿಕೊಳ್ಳುತ್ತಲೂ, ತಾನೂ ಒಬ್ಬ ಸ್ವತಂತ್ರನಾದ ಭೂಸ್ವಾಮಿಯಾದನು ಹೊಲಗದ್ದೆಗಳನ್ನು ಉಳುವು ದಕ್ಕಾಂದು ಹೊರಗೆ ಹೋದಾಗಲೂ, ಅಥವಾ ಬೆಳೆಯುತ್ತಿರುವ ಜೋಳ ವನ್ನಾಗಲಿ ಹುಲ್ಲಿನ ಮೈದಾನವನ್ನಾಗಲಿ ನೋಡಿದಾಗಲೂ, ಅವನ ಹೃದ ಯವು ಆನಂದದಿಂದ ತುಂಬುತ್ತಿದ್ದಿತು. ಅಲ್ಲಿ ಬೆಳೆದ ಹುಲ್ಲೂ ಅಲ್ಲಿ ಅರಳಿದ ಹೂವುಗಳೂ ಉಳಿದ ಕಡೆಗಳಲ್ಲಿ ಬೆಳೆದ ಹುಲ್ಲು ಹೂವುಗಳಿಗಿಂತ ಅತಿಶಯ ವಾಗಿ ಕಂಡವು. ಹಿಂದೆ ಅವನು ಆ ಭೂಮಿಯ ಬಳಿ ಸಂಚರಿಸುತ್ತಿದ್ದಾಗ ಅದೂ ಇತರ ಎಲ್ಲ ಭೂಮಿಗಳಂತೆಯೇ ಕಾಣುತ್ತಿದ್ದಿತು; ಆದರೆ ಈಗ ಅದೇ ಬೇರೆ ರೀತಿಯಾಗಿ ತೋರತೊಡಗಿತು.

೩

ಹೀಗೆ ಪಾಹೋಮ್ ಬಹಳ ತೃಪ್ತನಾಗಿದ್ದನು. ನೆರೆಹೊರೆಯ ರೈತರು ಅವನ ಜೋಳದ ಹೊಲದ ಮೇಲೂ ಹುಲ್ಲು ಬಯಲುಗಳ ಮೇಲೂ ಅತಿಕ್ರಮಿಸಿ ನುಗ್ಗದಿದ್ದರೆ ಎಲ್ಲ ಸರಿಹೋಗುತ್ತಿದ್ದಿತು. ಅವನು ಬಹಳ ಮರ್ಯಾದೆಯಿಂದ ಅವರಿಗೆ ಹೇಳಿಕೊಂಡನು, ಆದರೂ ಅವರು ಅತಿಕ್ರಮಿಸುತ್ತಲೇ ಇದ್ದರು, ಆಗಾಗ ಊರೊಟ್ಟಿನ ದನಗಾಹಿಗಳು ಊರಿನ ಹಸುಗಳನ್ನು ಅವನ ಹುಲ್ಲು ಬಯಲಿಗೆ ಬಿಡುತ್ತಿದ್ದರು, ರಾತ್ರಿಯ ಕಾವಲಿನಲ್ಲಿ ಮೇಯುವುದಕ್ಕೆ ಹೋಗಿದ್ದ ಕುದುರೆಗಳು ಅವನ ಜೋಳಕ್ಕೆ ನುಗ್ಗಿ ಬಿಡುತ್ತಿದ್ದವು. ಪಾಹೋಮ್ ಅಡಿಗಡಿಗೂ ಅವನ್ನು ಹೊರಕ್ಕೆ ಅಟ್ಟಿ ಅವುಗಳ ಮಾಲೀಕರನ್ನು ಮನ್ನಿಸಿಬಿಡುತ್ತಿದ್ದನು ಬಹುದಿನಗಳವರೆಗೂ ಅವರಲ್ಲಿ ಯಾರ ಮೇಲೂ ನ್ಯಾಯಸ್ಥಾನದಲ್ಲಿ ದೂರಿ ವ್ಯವಹಾರ ನಡೆಸದೆ ಸುಮ್ಮನಿದ್ದನು. ಆದರೆ ಕಟ್ಟಕಡೆಗೆ ಅವನ ಸಮಾಧಾನ ತಪ್ಪಿ ಹೋಗಿ ಡಿಸ್ಟ್ರಿಕ್ಟು ಕೋರ್ಟಿನಲ್ಲಿ ಫಿರ್ಯಾದು ಮಾಡಿದನು. ರೈತರಿಗೆ ತಕ್ಕಷ್ಟು ಭೂಮಿಯಿಲ್ಲದ್ದೇ ಈ ತೊಂದರೆಗೆ ಕಾರಣವೆಂದೂ ಅವರಿಗ ಯಾವ ದುರುದ್ದೇಶವೂ ಇರಲಿಲ್ಲವೆಂದೂ ಅವನಿಗೆ ಗೊತ್ತಿದ್ದಿತು. ಆದರೂ ಅವನು ಹೀಗೆ ಯೋಚಿಸಿದನು

'ಇದನ್ನೆಲ್ಲ ನಾನು ಕಡೆಗಣಿಸುತ್ತಾ ಹೋಗಲಾರೆ, ಹಾಗೆಯೇ ಸುಮ್ಮನಿದ್ದರ ನನಗಿರುವುದನ್ನೆಲ್ಲ ಅವರು ಹಾಳುಮಾಡಿ ಬಿಡುತ್ತಾರೆ. ಅವರಿಗೊಂದು ಪಾಠ ಕಲಿಸಬೇಕು.'

ಆದುದರಿಂದ ಅವರನ್ನು ಹಿಡಿದನು. ಒಂದು ಸಲ ಪಾಠ ಕಲಿಸಿದನು, ಆಮೇಲೆ ಇನ್ನೊಂದು ಸಲ, ಎರಡು ಮೂರು ಜನ ರೈತರಿಗೆ ಜುಲ್ಮಾನೆಯಾಯಿತು. ಕೆಲವು ಕಾಲ ಕಳೆದ ಬಳಿಕ ಪಾಹೋಮಿನ ನೆರೆಹೊರೆಯವರು ಇದಕ್ಕಾಗಿ ಅವನ ಮೇಲೆ ಅಂತರಂಗದಲ್ಲಿ ವೈರಸಾಧನೆ ಮಾಡತೊಡಗಿದರು; ಆಗಾಗ ಉದ್ದೇಶಪೂರ್ವಕವಾಗಿಯೇ ಅವನ ಜಮೀನಿಗೆ ತಮ್ಮ ದನಕರುಗಳನ್ನು ಬಿಡುತ್ತಾ ಬಂದರು. ಒಬ್ಬ ರೈತನಂತೂ ರಾತ್ರಿ ಹೊತ್ತು

ಪಾಹೋಮನ ಅಡವಿಗೆ ನುಗ್ಗಿ ಐದು ಎಳೆಯ ನಿಂಬೆ (ಲೈಮ್) ಗಿಡಗಳನ್ನು ಅವುಗಳ ತೊಗಟೆಗಾಗಿ ಕಡಿದುರುಳಿಸಿದನು. ಒಂದು ದಿನ ಪಾಹೋಮ್ ಅಡವಿಯೊಳಗಿನಿಂದ ಹೋಗುತ್ತಿದ್ದಾಗ ಬೆಳ್ಳಗೆ ಏನೋ ಒಂದು ವಸ್ತುವನ್ನು ಕಂಡನು. ಹತ್ತಿರಕ್ಕೆ ಬಂದು ನೋಡಲಾಗಿ ತೊಗಟೆಯನ್ನು ಬಿಡಿಸಿಕೊಂಡ ಮರದ ತಾಳುಗಳು ನೆಲದಮೇಲೆ ಬಿದ್ದಿದ್ದವು, ಹತ್ತಿರದಲ್ಲಿಯೇ ಆ ಮರಗಳಿದ್ದ ಕಡೆಯಲ್ಲಿ ಬುಡದ ಮೋಟು ತುಂಡುಗಳು ನಿಂತಿದ್ದವು. ಪಾಹೋಮ್ ರೋಷಾವಿಷ್ಟನಾದನು.

'ಅವನು ಅಲ್ಲೊಂದಿಲ್ಲೊಂದು ಗಿಡವನ್ನು ಕಡಿದಿದ್ದರೂ ಅದೇ ತಕ್ಕಷ್ಟು ಕೇಡಾಗುತ್ತಿತ್ತು. ಅಂಥದರಲ್ಲಿ ಆ ಭಂಡ ಒಟ್ಟಿಗೆ ಗುಂಪಿಗೆ ಗುಂಪನ್ನೇ ಉರುಳಿಸಿಬಿಟ್ಟಿದಾನೆ. ಇದನ್ನು ಮಾಡಿದವರು ಯಾರೆಂಬುದು ಮಾತ್ರ ನನಗೆ ಗೊತ್ತಾಗಿಬಿಟ್ಟರೆ, ಅವನಿಗೆ ತಕ್ಕದ್ದು ಮಾಡಿಬಿಡುತ್ತೇನೆ.' ಎಂದು ಯೋಚಿಸಿದನು.

ಅದು ಯಾರಾಗಿರಬಹುದೆಂದು ತನ್ನ ಬುದ್ಧಿಯನ್ನೆಲ್ಲ ಗೂರಾಡಿ ಕೊಂಡು ಯೋಚಿಸಿದನು. ಕಟ್ಟಕಡೆಗೆ 'ಅದು ಸೈಮನನೇ ಆಗಿರಬೇಕು— ಉಳಿದವರು ಯಾರೂ ಆ ಕೆಲಸವನ್ನು ಮಾಡಿರಲಾರರು' ಎಂದು ತೀರ್ಮಾನಿಸಿದನು ಹಾಗೆ ತೀರ್ಮಾನಿಸಿ ಸುತ್ತನೋಡಿ ಪರಿಕ್ಷಿಸೋಣವೆಂದು ಸೈಮನನ ಗುಡಿಸಲಿಗೆ ಹೋದನು. ಆದರೆ ಅಲ್ಲಿ ಅವನಿಗೆ ಏನೂ ಸಿಕ್ಕಲಿಲ್ಲ, ಕೋಪದಿಂದ ಕೂಗಾಡಿ ಬಂದದ್ದುಮಾತ್ರವಾಯಿತು. ಇಷ್ಟಾದರೂ ಸೈಮನನೇ ಆ ಕೆಲಸ ಮಾಡಿರಬೇಕೆಂದು ಮೊದಲಿಗಿಂತ ಈಗ ಅವನಿಗೆ ಇನ್ನೂ ಹೆಚ್ಚು ದೃಢವಾಗಿ ನಿರ್ಧರವಾಯಿತು; ಹಾಗೆ ಭಾವಿಸಿಕೊಂಡು ಅವನ ಮೇಲೆ ಫಿರ್ಯಾದುಮಾಡಿದನು. ಸೈಮನ್ನನ್ನು ನ್ಯಾಯಸ್ಥಾನಕ್ಕೆ ಕರೆಸಿದರು. ವ್ಯವಹಾರವನ್ನು ವಿಚಾರಿಸಿದರು, ಮತ್ತೆ ಮತ್ತೆ ಪುನರ್ವಿಚಾರಣೆಗಳೂ ನಡೆದವು. ಕಟ್ಟಕಡೆಯಲ್ಲಿ ಸೈಮನನಿಗೆ ವಿರುದ್ಧವಾಗಿ ಸಾಕ್ಷಿಯಿರಲಿಲ್ಲವಾದ್ದರಿಂದ ಅವನು ತಪ್ಪಿತಸ್ಥನಲ್ಲವೆಂದು ತೀರ್ಮಾನವಾಯಿತು. ಪಾಹೋಮ್

ತನಗೆ ಇನ್ನೂ ಹೆಚ್ಚು ಅನ್ಯಾಯವಾಯಿತೆಂದು ಭಾವಿಸಿದನು. ತನ್ನ ಸಿಟ್ಟನ್ನೆಲ್ಲ ಗ್ರಾಮದ ಪಟೇಲನ ಮೇಲೂ ಜಡ್ಜಿಗಳ ಮೇಲೂ ತಿರುಗಿಸಿದನು.

'ಕಳ್ಳರಿಂದ ನೀವು ಕೈ ಬೆಚ್ಚಗೆ ಮಾಡಿಸಿಕೊಳ್ಳುತ್ತೀರಿ ನೀವು ಪ್ರಾಮಾಣಿಕರೇ ಆಗಿದ್ದ ಪಕ್ಷದಲ್ಲಿ ಕಳ್ಳನನ್ನು ತಪ್ಪಿಸಿಕೊಂಡು ಹೋಗುವಂತೆ ಬಿಡುತ್ತಿರಲಿಲ್ಲ' ಎಂದನು.

ಹೀಗೆ ಪಾಹೋಮ್ ಜಡ್ಜಿಗಳೊಡನೆಯೂ ತನ್ನ ನೆರೆಹೊರೆಯವರೊಡನೆಯೂ ಜಗಳವಾಡಿದನು. ನಿನ್ನ ಮನೆಯನ್ನು ಸುಟ್ಟುಬಿಡುವೆವೆಂಬ ಬೆದರಿಕೆಯ ಮಾತುಗಳು ಹೊರಡಲು ಪ್ರಾರಂಭವಾಯಿತು. ಊರಿನಲ್ಲಿ ಅವನ ಸ್ಥಿತಿ ಮೊದಲಿಗಿಂತ ಬಹಳ ಬಿಕ್ಕಟ್ಟಿಗಿಟ್ಟುಕೊಂಡಿತು.

ಆ ಸಮಯದಲ್ಲಿ ಅನೇಕ ಜನರು ಹೊಸ ಹೊಸ ಪ್ರದೇಶಗಳಿಗೆ ಹೋಗುತ್ತಿರುವರೆಂದು ಸುದ್ದಿ ಹಬ್ಬಿತು.

'ನಾನು ನನ್ನ ಭೂಮಿಯನ್ನು ಬಿಟ್ಟು ಹೋಗಬೇಕಾದ ಅಗತ್ಯವೇನೂ ಇಲ್ಲ. ಉಳಿದವರಲ್ಲಿ ಕೆಲವರು ನಮ್ಮ ಹಳ್ಳಿಯನ್ನು ಬಿಟ್ಟು ಹೋಗಬಹುದು. ಆಗ ನಮಗೆ ಹೆಚ್ಚು ಜಾಗ ಉಳಿಯುತ್ತದೆ. ನಾನೇ ಅವರ ಭೂಮಿಯನ್ನು ಕೊಂಡುಕೊಂಡು ನನ್ನ ಆಸ್ತಿಯನ್ನು ಇನ್ನು ಸ್ವಲ್ಪ ಹೆಚ್ಚಿಸಿಕೊಳ್ಳುತ್ತೇನೆ. ಆಗ ನಾನು ಹೆಚ್ಚು ಸುಖವಾಗಿ ಬಾಳಬಹುದು. ಈಗಿರುವುದರಲ್ಲಿ ನೆಮ್ಮದಿಯಾಗಿರುವುದಕ್ಕಾಗದ ಹಾಗೆ ಇಕ್ಕಟ್ಟಾಗಿಬಿಟ್ಟಿದೆ' ಎಂದು ಪಾಹೋಮ್ ಆಲೋಚಿಸಿದನು.

ಒಂದು ದಿನ ಪಾಹೋಮ್ ಮನೆಯಲ್ಲಿ ಕುಳಿತಿದ್ದಾಗ ಹಳ್ಳಿಯಲ್ಲಿ ಹಾದುಹೋಗುತ್ತಿದ್ದ ಒಬ್ಬ ರೈತನು ಮನೆಯೊಳಕ್ಕೆ ಬಂದನು. ರಾತ್ರಿ ಅಲ್ಲೇ ಇರುವಂತೆ ಹೇಳಿ ಅವನಿಗೆ ಊಟಕ್ಕೆ ಬಡಿಸಿದರು. ಪಾಹೋಮ್ ಆ ರೈತನ ಸಂಗಡ ಮಾತಾಡುತ್ತ 'ನೀನೆಲ್ಲಿಂದ ಬಂದೆ?' ಎಂದು ಕೇಳಿದನು. ಆ ಅಪರಿಚಿತನು ತಾನು ವೋಲ್ಗಾನದಿಯ ಆಚೆಯಿಂದ ಬರುತ್ತಿರುವುದಾಗಿಯೂ ಅಲ್ಲಿಗೆ ಕೆಲಸಕ್ಕೆ ಹೋಗಿದ್ದಂತೆಯೂ ಹೇಳಿದನು. ಬಂದ

ರಿಂದೊಂದರಂತೆ ಮಾತು ಬೆಳೆಯುತ್ತಿರಲು ಆ ಪ್ರಾಂತದಲ್ಲಿ ಅನೇಕ ಜನರು ಬಂದು ನೆಲಸುತ್ತಿರುವರೆಂದು ಆತನು ಹೇಳಿದನು. ತನ್ನ ಹಳ್ಳಿಯವರೂ ಕೆಲವರು ಅಲ್ಲಿ ಹೋಗಿ ನೆಲಸಿರುವರಂದು ತಿಳಿಸಿದನು. ಅವರೆಲ್ಲರೂ ಊರೊಟ್ಟಿನಲ್ಲಿ ಸೇರಿಕೊಂಡಿರುವರೆಂದೂ ಪ್ರತಿಯೊಬ್ಬರಿಗೂ ಇಪ್ಪತ್ತೈದು ಎಕರೆ ಭೂಮಿಯನ್ನು ಕೊಟ್ಟಿರುವರೆಂದೂ ತಿಳಿಸಿದನು. 'ಅಲ್ಲಿನ ನೆಲ ಬಹಳ ಫಲವತ್ತಾಗಿದೆ ಅಲ್ಲಿ ಬಿತ್ತಿದ ಪೈರು ಕುದುರೆಯಷ್ಟು ಎತ್ತರ ವಾಗಿ ಬೆಳೆಯುತ್ತದೆ, ಐದು ಹಿಡಿ ಹುಲ್ಲು ಕುಯ್ದರೆ ಒಂದು ಕಂತೆಯಾಗು ವಷ್ಟು ಒತ್ತಾಗಿ ಬೆಳೆಯುತ್ತದೆ. ಒಬ್ಬ ರೈತನಂತೂ ಅಲ್ಲಿ ಬರುವಾಗ ತನ್ನ ಕೈಕಾಲುಗಳು ಹೊರತು ಮತ್ತೇನನ್ನೂ ತಂದಿರಲಿಲ್ಲ. ಈಗ ಅವನಿಗೆ ಸ್ವಂತ ದ್ದಾಗಿ ಆರು ಕುದುರಗಳೂ ಎರಡು ಹಸುಗಳೂ ಇವೆ' ಎಂದನು.

ಪಾಹೋಮನ ಹೃದಯದಲ್ಲಿ ಆಸೆ ಕುಡಿಯಿಟ್ಟಿತು. 'ಈ ಇಕ್ಕಟ್ಟಿನ ಕೊಂಪೆಯಲ್ಲಿ ನಾನೇಕೆ ಗೋಳಾಡಬೇಕು? ಬೇರೆ ಕಡೆಯಲ್ಲಿ ಅಷ್ಟು ಸುಖವಾಗಿ ಬದುಕಬಹುದಾದರೆ, ನನ್ನ ಇಲ್ಲಿನ ಮನೆಯನ್ನೂ ಭೂಮಿ ಯನ್ನೂ ಮಾರಿ ಅಲ್ಲಿ ಹೋಗಿ ಆ ಹಣದಿಂದ ಹೊಸಭೂಮಿ ಕಾಣಿಗಳನ್ನು ಕೊಂಡು ಎಲ್ಲವನ್ನೂ ಹೊಸದಾಗಿ ಪ್ರಾರಂಭಿಸಿಬಿಡುತ್ತೇನೆ. ಜನ ತುಂಬಿ ತುಳುಕುವ ಈ ಜಾಗದಲ್ಲಿ ಯಾವಾಗಲೂ ಹಗರಣವಿದ್ದೇ ಇರುತ್ತದೆ. ಆದರೆ ಮೊದಲು ನಾನೇ ಅಲ್ಲಿಗೆ ಹೋಗಿ ಎಲ್ಲ ಸಂಗತಿಗಳನ್ನೂ ಸ್ವತಃ ತಿಳಿದು ಕೊಂಡು ಬರಬೇಕು' ಎಂದು ಯೋಚಿಸಿದನು.

ಬೇಸಿಗೆಯ ಹೊತ್ತಿಗೆ ಸಿದ್ಧಮಾಡಿಕೊಂಡು ಹೊರಟನು. ವ್ರೋಲ್ಗಾ ನದಿಯಲ್ಲಿ ಒಂದು ಆವಿಯ ಜಹಜಿನಲ್ಲಿ ಕುಳಿತು ಸಮಾರದವರೆಗೆ ಹೋಗಿ, ಮುಂದೆ ಮುನ್ನೂರು ಮೈಲಿಗಳನ್ನು ಕಾಲ್ನಡಗೆಯಲ್ಲೇ ನಡೆದು, ಕಟ್ಟಕಡೆಗೆ ಆ ಜಾಗಕ್ಕೆ ತಲಪಿದನು. ಎಲ್ಲವೂ ಆ ಅಪರಿಚಿತನು ಹೇಳಿದ ಹಾಗೆಯೇ ಇದ್ದಿತು. ಭೂಮಿ ಬೇಕಾದಷ್ಟಿದ್ದಿತು. ಪ್ರತಿಯೊಬ್ಬನಿಗೂ ಊರೊಟ್ಟಿನ ಮುದ್ದಕದ ನೆಲದಲ್ಲಿ ಇಪ್ಪತ್ತೈದು ಎಕರೆಗಳನ್ನು ಕೊಡುತ್ತಿದ್ದರು, ಇದರ

ಜೊತೆಗೆ ದುಡ್ಡುಳ್ಳವರು ಯಾರು ಬೇಕಾದರೂ ಎಕರೆಗೆ ಎರಡೂಕಾಲು ರೂಪಾಯಿ (೨ ಷಿಲಿಂಗ್) ಸಂತೆ ಬೆಲೆ ಕೊಟ್ಟು ಒಳ್ಳೆಯ ಫಲವತ್ತಾದ ಭೂಮಿಯನ್ನು ಎಷ್ಟು ಬೇಕಾದರಷ್ಟು ಕೊಳ್ಳಬಹುದಾಗಿತ್ತು.

ತಾನು ಗೊತ್ತುಮಾಡಿಕೊಳ್ಳಬೇಕೆಂದಿದ್ದ ಸಂಗತಿಗಳನ್ನೆಲ್ಲ ತಿಳಿದು ಕೊಂಡು ವಾಗಿ ಬರುವ ಹೊತ್ತಿಗೆ ಪಾಹೋಮ್ ಮನೆಗೆ ಹಿಂದಿರುಗಿ ಬಂದು ತನ್ನ ಆಸ್ತಿಪಾಸ್ತಿಗಳನ್ನೆಲ್ಲ ಮಾರತೊಡಗಿದನು. ತನ್ನ ಭೂಮಿ ಯನ್ನು ಸ್ವಲ್ಪ ಲಾಭ ಬರುವಂತೆಯೇ ಮಾರಿದನು. ಮನೆಯನ್ನೂ ದನ ಕರುಗಳೆಲ್ಲವನ್ನೂ ಮಾರಿದನು, ಆಮೇಲೆ ಊರೊಟ್ಟಿನ ಸದಸ್ಯತನದಿಂದ ಬಿಡುಗಡೆ ಮಾಡಿಕೊಂಡನು. ವಸಂತ ಬರುವುದನ್ನೇ ಕಾದುಕೊಂಡಿದ್ದು, ಬಂದ ಕೂಡಲೆ ಸಂಸಾರ ಸಮೇತನಾಗಿ ಹೊಸ ಜಾಗಕ್ಕೆ ಪ್ರಯಾಣ ಮಾಡಿದನು.

೪

ಪಾಹೋಮ್ ತನ್ನ ಮನೆಯವರೊಡನೆ ಹೊಸ ನಿವಾಸಕ್ಕೆ ಬಂದು ತಲಪಿದ ಕೂಡಲೆ, ಒಂದು ದೊಡ್ಡ ಹಳ್ಳಿಗೆ ಹೋಗಿ ಅಲ್ಲಿನ 'ಊರೊಟ್ಟಿಗೆ' ತನ್ನನ್ನು ಸೇರಿಸಿಕೊಳ್ಳಬೇಕೆಂದು ಕೇಳಿಕೊಂಡನು ಊರಿನ ಮುಖಂಡ ರಿಗೆ ಔತಣಮಾಡಿಸಿ ಆವಶ್ಯಕವಾದ ಕಾಗದಪತ್ರಗಳನ್ನು ಪಡೆದುಕೊಂಡನು. ಅವನ ಮತ್ತು ಅವನ ಮಕ್ಕಳ ಉಪಯೋಗಕ್ಕಂದು ಊರೊಟ್ಟಿನ ಜಾಗ ದಲ್ಲಿ ಐದು ಪಾಲುಗಳನ್ನು ಅವನಿಗೆ ಕೊಟ್ಟರು. ಇದರಿಂದ ಒಟ್ಟು ೧೨೫ ಎಕರೆ ಭೂಮಿಯೂ (ಒಂದೇ ಕಡೆಯಲ್ಲಲ್ಲ, ಬೇರೆ ಬೇರೆ ಭಾಗಗಳಲ್ಲಿ) ಮುದ್ದ ಕದ ಗೋಮಾಳದ ಉಪಯೋಗವೂ ಅವನಿಗೆ ಸಿಕ್ಕಿದಂತಾಯಿತು. ಪಾಹೋಮ್ ತನಗೆ ಅತ್ಯಗತ್ಯವಾದ ಕಟ್ಟಡಗಳನ್ನು ಕಟ್ಟಿಸಿದನು; ದನಕರು ಗಳನ್ನು ಕೊಂಡುಕೊಂಡನು. ಮುದ್ದಕದ ಭೂಮಿಯೇ ಅವನಿಗೆ ಮೊದ ಲಿದ್ದದ್ದರ ಮೂರರಷ್ಟಾಯಿತು. ಆ ಭೂಮಿ ಫಲವತ್ತಾಗಿ ಜೋಳದ

ಬೆಳೆಗೆ ಅತ್ಯುತ್ತಮವಾಗಿದ್ದಿತು. ಅವನು ಮೊದಲಿಗಿಂತ ಹತ್ತರಷ್ಟು ಭಾಗ್ಯವಂತನಾದನು. ಉತ್ತು ಬಿತ್ತಿ ಬೆಳೆ ಮಾಡಲು ತಕ್ಕದ್ದಾದ ಭೂಮಿಯೂ, ಹುಲ್ಲುಗಾವಲೂ ಅವನಿಗೆ ಸಮೃದ್ಧಿಯಾಯಿತು, ತನಗೆ ಎಷ್ಟು ಬೇಕಾದರಷ್ಟು ದನಗಳನ್ನು ಇಟ್ಟುಕೊಳ್ಳುವುದಕ್ಕೂ ಅನುಕೂಲವಾಯಿತು.

ಮೊದಮೊದಲು ಮನೆ ಕಟ್ಟುವುದು ಎಲ್ಲವನ್ನು ಹೊಂದಿಸಿಕೊಳ್ಳುವುದು ಮುಂತಾದ ಕೆಲಸದ ಗಡಿಬಿಡಿಯಲ್ಲಿ ಪಾಹೋಮ್ ತೃಪ್ತನಾಗಿದ್ದನು. ಆದರೆ ಎಲ್ಲ ಒಗ್ಗಿದ ಒಳಿಕ ಇಲ್ಲಿ ಕೂಡ ತನಗೆ ಸಾಕಾಗುವಷ್ಟು ನೆಲವಿಲ್ಲವೆಂದು ಯೋಚಿಸತೊಡಗಿದನು. ಮೊದಲನೆಯ ವರ್ಷ ತನ್ನ ಪಾಲಿನ ಮುದ್ದಕದ ಭೂಮಿಯಲ್ಲಿ ಗೋಧಿಯನ್ನು ಬಿತ್ತಿ ಒಳ್ಳೆಯ ಪೈರು ತೆಗೆದನು, ಗೋಧಿಯನ್ನೇ ಮತ್ತೆ ಮತ್ತೆ ಬೆಳೆಯುತ್ತ ಬರಬೇಕೆಂದು ಅವನಿಗಿಷ್ಟ. ಆದರೆ ಅದಕ್ಕೆ ತಕ್ಕಷ್ಟು ಮುದ್ದಕದ ಭೂಮಿ ಅವನಿಗಿರಲಿಲ್ಲ, ಆ ಪ್ರಾಂತದಲ್ಲಿ ಗೋಧಿಯನ್ನು ಹಿಂದೆ ಏನೂ ಬೆಳೆಯದಿದ್ದ ಹೊಸಜಾಗದಲ್ಲಿ ಅಥವಾ ಬಂಜರು ಬಿದ್ದ ಜಮೀನುಗಳಲ್ಲಿ ಮಾತ್ರವೇ ಬೆಳೆಯುತ್ತಿದ್ದರಾದ್ದರಿಂದ ತಾನು ಆಗಲೇ ಉಪಯೋಗಿಸಿದ್ದ ಜಾಗ ಮತ್ತೆ ಉಪಯೋಗಕ್ಕೆ ಬರುವಂತಿರಲಿಲ್ಲ, ಒಂದು ಅಥವಾ ಎರಡುವರ್ಷ ಗೋಧಿ ಬಿತ್ತುವುದು, ಆಮೇಲೆ ಚೆನ್ನಾಗಿ ಹುಲ್ಲು ಬೆಳೆಯುವವರೆಗೂ ನೆಲವನ್ನು ಹಾಳುಬಿಟ್ಟು ಸುಮ್ಮನಿರುವುದು, ಇದು ಅಲ್ಲಿನ ಪದ್ಧತಿ. ಅಂಥ ಜಾಗವನ್ನು ಅಪೇಕ್ಷಿಸುವವರು ಬಹಳ ಜನರಿದ್ದರು, ಆದರೆ ಅವರೆಲ್ಲರಿಗೂ ಸಾಕಾಗುವಷ್ಟು ಭೂಮಿಯಿರಲಿಲ್ಲ. ಹೀಗಾಗಿ ಜಗಳಮಾಡುತ್ತಿದ್ದರು. ಅನುಕೂಲವಂತರಾದವರು ಗೋಧಿಯನ್ನು ಬೆಳೆದುಕೊಳ್ಳುವುದಕ್ಕಾಗಿ ಅಂಥ ನೆಲವನ್ನು ಅಪೇಕ್ಷಿಸುತ್ತಿದ್ದರು; ಬಡವರು ಕಂದಾಯ ಕೌಳಿಗೆಗಳಿಗೆ ಹಣವನ್ನು ಸಂಪಾದಿಸುವುದಕ್ಕೋಸ್ಕರ ಇತರರಿಗೆ ಗುತ್ತಿಗೆಗೆ ಕೊಡುವುದಕ್ಕೆ ಅಂಥ ನೆಲ ಬೇಕನ್ನುತ್ತಿದ್ದರು. ಪಾಹೋಮ್ ಮತ್ತಷ್ಟು ಗೋಧಿಯನ್ನು ಬಿತ್ತಬೇಕೆಂದಿದ್ದನು. ಆದ್ದರಿಂದ ಅವನು ಒಬ್ಬನಿಂದ ಒಂದುವರ್ಷದ ವರೆಗೆ ಭೂಮಿಯನ್ನು ಗುತ್ತಿಗೆಗೆ ತೆಗೆದು

ಕೊಂಡನು. ಅವನು ಬಹಳ ಗೋಧಿಯನ್ನು ಬಿತ್ತಿದನು, ಸೊಗಸಾಗಿ ಪೈರು ಬಂದಿತು. ಆದರೆ ಆ ಜಮೀನು ಊರಿಗೆ ಬಹಳ ದೂರದಲ್ಲಿದ್ದಿತು. ಗೋಧಿಯನ್ನು ಹತ್ತುಮೈಲಿಗಿಂತಲೂ ಹೆಚ್ಚು ದೂರದಿಂದ ಗಾಡಿಯಮೇಲೆ ಹೇರಿಕೊಂಡು ಬರಬೇಕಾಯಿತು. ಸ್ವಲ್ಪ ಕಾಲ ಕಳೆದ ಬಳಿಕ, ಕೆಲವು ರೈತ–ವರ್ತಕರು ಪ್ರತ್ಯೇಕವಾಗಿ ಬೇರೆಯ ಜಮೀನುಗಳಲ್ಲಿ ವಾಸ ಮಾಡುತ್ತ ದಿನದಿನಕ್ಕೆ ಶ್ರೀಮಂತರಾಗುತ್ತಿದ್ದದ್ದು ಪಾಹೋಮನ ಕಣ್ಣಿಗೆ ಬಿದ್ದಿತು. ಅದನ್ನು ಕಂಡು ಅವನು ಹೀಗೆ ಯೋಚಿಸಿದನು

'ನಾನು ಸ್ವತಂತ್ರವಾಗಿರುವ ಭೂಮಿಯನ್ನು ಕೊಂಡು ಅದರಲ್ಲಿ ಮನೆಕಟ್ಟಿಕೊಂಡಿರುವುದಾದರೆ ಅದೇ ಬೇರೆಯಾಗಿರುತ್ತಿತ್ತು, ಆಗ ಎಲ್ಲ ಒಂದುಕಡೆಯಲ್ಲಿದ್ದು ಬಹು ಸೊಗಸಾಗಿರುತ್ತಿತ್ತು.'

ಸ್ವತಂತ್ರವಾಗಿ ಅನುಭವಿಸಬಹುದಾದ ಭೂಮಿಯನ್ನು ಕೊಳ್ಳುವ ಅಭಿಲಾಷೆ ಮತ್ತೆ ಮತ್ತೆ ಅವನಿಗೆ ಉಂಟಾಗುತ್ತಲೇ ಇದ್ದಿತು

ಹೀಗೆ ಇತರರ ಭೂಮಿಯನ್ನು ಗುತ್ತಿಗೆಗೆ ತೆಗೆದುಕೊಂಡು ಗೋಧಿ ಬೆಳೆಯುತ್ತಲೇ ಮೂರು ವರ್ಷಗಳನ್ನು ಕಳೆದನು ಕಾಲಸ್ಥಿತಿ ಚನ್ನಾಗಿ ನಡೆಸಿತು, ಸಮೃದ್ಧಿಯಾಗಿ ಪೈರು ಬಂದಿತು, ಅದರ ಪರಿಣಾಮವಾಗಿ ದುಡ್ಡು ಕೂಡಿಡಲು ಮೊದಲುಮಾಡಿದನು. ಅವನು ಕೊನೆಯವರೆಗೂ ತೃಪ್ತನಾಗಿ ಜೀವಿಸುತ್ತಿರಬಹುದಾಗಿದ್ದಿತು. ಆದರೆ ಪ್ರತಿವರ್ಷವೂ ಇತರರ ಜಮೀನನ್ನು ಬಾಡಿಗೆಗೆ ತೆಗೆದುಕೊಳ್ಳಬೇಕಾದದ್ದಕ್ಕೂ ಆ ಜಮೀನಿಗಾಗಿ ನಾಮೇಲು ತಾಮೇಲೆಂದು ನುಗ್ಗಿ ಪರದಾಡುವುದಕ್ಕೂ ಅವನು ರೋಸಿದನು. ಎಲ್ಲಿಯಾದರೂ ಒಳ್ಳೆಯ ನೆಲ ಸಿಕ್ಕುವಹಾಗಿದ್ದರೆ ಸಾಕು, ಅದಕ್ಕಾಗಿ ರೈತರು ಅಲ್ಲಿಗೆ ನುಗ್ಗಿ ಒಂದು ತಕ್ಷಣ ಅದನ್ನು ತೆಗೆದುಕೊಂಡು ಬಿಡುತ್ತಿದ್ದರು. ಆದ್ದರಿಂದ ಮೊದಲಿನಿಂದಲೂ ಬಹಳ ಜಾಗರೂಕರಾಗಿಲ್ಲದಿದ್ದರೆ ಸ್ವಲ್ಪವೂ ಸಿಕ್ಕುತ್ತಿರಲಿಲ್ಲ. ಮೂರನೆಯ ವರ್ಷ ಅವನೂ ಇನ್ನೊಬ್ಬ ವ್ಯಾಪಾರಿಯೂ ಒಟ್ಟಾಗಿ ಕೆಲವು ರೈತರ ಕಾವಲು ನೆಲವನ್ನು ಗುತ್ತಿಗೆ

ಮಾಡಿಕೊಂಡರು ; ಅದನ್ನು ಉತ್ತೂ ಇದ್ದರು. ಅಷ್ಟರಲ್ಲಿ ಯಾವುದೋ ಒಂದು ವಾಗ್ವಾದ ನಡೆದು ರೈತರು ನ್ಯಾಯಕ್ಕೆ ಹೋದರು, ಇದರ ಪರಿಣಾಮವಾಗಿ ಮಾಡಿದ ಕೆಲಸವೆಲ್ಲ ದಂಡವಾಯಿತು.

ಪಾಹೋಮ್ 'ಅದು ನನ್ನ ಸ್ವಂತ ಭೂಮಿಯಾಗಿದ್ದರೆ, ನಾನು ಸ್ವತಂತ್ರನಾಗಿರುತ್ತಿದ್ದೆನು, ಆಗ ಈ ರಗಳೆಯೆಲ್ಲ ಇರುತ್ತಿರಲಿಲ್ಲ' ಎಂದುಕೊಂಡನು.

ಆದ್ದರಿಂದ ಪಾಹೋಮ್ ತಾನು ಯಾವುದನ್ನು ಕೂಂಡುಕೊಳ್ಳಬಹುದೆಂದು ಭೂಮಿಯನ್ನು ನೋಡುವುದಕ್ಕೆ ಪ್ರಾರಂಭಿಸಿದನು. ಸಾವಿರದ ಮುನ್ನೂರು ಎಕರೆಗಳನ್ನು ಕೂಂಡುಕೂಂಡಿದ್ದು, ಕಷ್ಟದಲ್ಲಿ ಸಿಕ್ಕಿಕೊಂಡು ಪುನಃ ಅದೆಲ್ಲವನ್ನೂ ಅಗ್ಗವಾಗಿ ಮಾರುವುದಕ್ಕೆ ಸಿದ್ಧನಾಗಿದ್ದ ಒಬ್ಬ ರೈತನು ಅವನಿಗೆ ಸಿಕ್ಕಿದನು ಪಾಹೋಮ್ ಅವನೊಡನೆ ಹಿಂದಕ್ಕೆ ಮುಂದಕ್ಕ ಎಳೆದಾಡಿ ಬಹಳ ಚೌಕಾಸಿ ಮಾಡಿದನು. ಕಡೆಗೆ ಅದರ ಬೆಲೆಯನ್ನು ೧,೫೦೦ ರೂಬಲ್‌ಗಳಿಗೆ ಗೊತ್ತುಮಾಡಿ ಸ್ವಲ್ಪ ಭಾಗವನ್ನು ನಗದಾಗಿಯೂ, ಸ್ವಲ್ಪ ಭಾಗವನ್ನು ಕೆಲವು ಕಾಲ ಕಳೆದ ಮೇಲೂ ಕೂಡುವಂತೆ ನಿಷ್ಕರ್ಷಿಸಿಕೊಂಡರು ಆ ನಿಷ್ಕರ್ಷೆಯನ್ನು ಆಚರಣೆಗೆ ತರುವುದೊಂದು ಉಳಿದಿದ್ದಿತು, ಅಷ್ಟರಲ್ಲಿ ಒಂದು ದಿನ ಒಬ್ಬ ದಾರಿಕಾರ ವ್ಯಾಪಾರಿಯು ತನ್ನ ಕುದುರೆಗಳಿಗೆ ಮೇವು ಹಾಕುವುದಕ್ಕಾಗಿ ಪಾಹೋಮನ ಮನೆಯಲ್ಲಿ ನಿಂತನು. ಅವನು ಪಾಹೋಮನ ಸಂಗಡ ಟೀ ತೆಗೆದುಕೂಂಡನು ಇಬ್ಬರಿಗೂ ಮಾತುಕತೆಗಳಾಯಿತು. ವ್ಯಾಪಾರಿಯು ತಾನು ಬಹುದೂರದಲ್ಲಿರುವ ಬಷ್ಕೀರರ ದೇಶದಿಂದ ಆಗತಾನೇ ಬರುತ್ತಿರುವುದಾಗಿಯೂ ಅಲ್ಲಿ ತಾನು ಹದಿಮೂರು ಸಾವಿರ ಎಕರೆ ಭೂಮಿಯನ್ನು ಕೊಂಡಿರುವುದಾಗಿಯೂ ಅದಕ್ಕೆಲ್ಲ ಒಟ್ಟು ೧,೦೦೦ ರೂಬಲುಗಳನ್ನು ಮಾತ್ರ ಕೂಟ್ಟದ್ದಾಗಿಯೂ ಹೇಳಿದನು. ಪಾಹೋಮ್ ಅವನನ್ನು ಮುಂದಕ್ಕೆ ಪ್ರಶ್ನೆಮಾಡಿದನು. ಆ ವ್ಯಾಪಾರಿಯು ಹೇಳಿದನು.

'ಮುಖಂಡರೊಡನೆ ಸ್ನೇಹಮಾಡಿಕೊಂಡು ಬಿಟ್ಟರೆ ಸಾಕು. ನಾನು ನೂರು ರೂಬಲ್ ಬೆಲೆ ಬಾಳುವಷ್ಟು ರೇಷ್ಮೆಯ ಬಟ್ಟೆಗಳನ್ನೂ ರತ್ನಗಂಬಳಿಗಳನ್ನೂ ಅದರ ಜೊತೆಗೆ ಒಂದು ಪೆಟ್ಟಿಗೆ ಟೀಯನ್ನೂ ಕೊಟ್ಟೆನು. ಯಾರು ಯಾರು ಕುಡಿಯಲು ಇಷ್ಟಪಟ್ಟರೋ ಅವರಿಗೆಲ್ಲ 'ಸಾರಾಯಿ' ಕೊಟ್ಟೆನು ; ಇದರಿಂದ ಎಕರೆಗೆ ಒಂದಾಣೆಗಿಂತಲೂ ಕಡಮೆ ಬೆಲೆಯಲ್ಲಿ ನನಗೆ ಭೂಮಿ ಸಿಕ್ಕಿತು' ಎಂದು ಅವನು ಪಾಹೋಮನಿಗೆ ಕಾಗದ ಪತ್ರಗಳನ್ನೂ ತೋರಿಸಿದನು. ತೋರಿಸುತ್ತಾ

'ಆ ಭೂಮಿ ಒಂದು ಹೊಳೆಯ ಹತ್ತಿರದಲ್ಲಿದೆ. ಬಯಲಿನಲ್ಲೆಲ್ಲ ಎಂದೂ ಯಾವ ಬೆಳೆಯನ್ನೂ ತೆಗೆಯದಿರುವ ಫಲವತ್ತಾದ ಮಣ್ಣಿದೆ' ಎಂದನು.

ಪಾಹೋಮ್ ಅವನನ್ನು ಮತ್ತೆ ಮತ್ತೆ ಪ್ರಶ್ನಿಸುತ್ತಾ ಬಂದನು. ವರ್ತಕನು ಹೀಗೆ ಹೇಳಿದನು.

'ಒಂದು ವರ್ಷದವರೆಗೆ ನಡೆದರೂ ಮುಗಿಸಲಾಗದಷ್ಟು ನೆಲ ಅಲ್ಲಿದೆ. ಅದಷ್ಟೂ ಬಷ್ಕೀರರಿಗೇ ಸೇರಿದೆ. ಅವರೋ ಕುರಿಗಳ ಹಾಗೆ ಸರಳ ಸ್ವಭಾವದವರು. ಮುಕ್ಕಾಲು ಮೂರುವೀಸಪಾಲು ಬಿಟ್ಟಿಯಾಗಿಯೇ ಭೂಮಿಯನ್ನು ಸಂಪಾದಿಸಿಕೊಳ್ಳಬಹುದು.'

ಪಾಹೋಮನು 'ಇದೀಗ ಸರಿಯಾಯ್ತು. ನನ್ನ ಸಾವಿರ ರೂಬಲುಗಳಿಗೆ ಸಾವಿರದ ಮುನ್ನೂರು ಎಕರೆಗಳನ್ನು ಮಾತ್ರ ಕೊಂಡುಕೊಂಡು ಜೊತೆಗೆ ಸಾಲವನ್ನೂ ಏಕೆ ಹೊರಬೇಕು ? ಇದನ್ನು ಅಲ್ಲಿಗೆ ತೆಗೆದುಕೊಂಡು ಹೋದರೆ ಅದೇ ಹಣಕ್ಕೆ ಇದರ ಹತ್ತರಷ್ಟಕ್ಕಿಂತಲೂ ಹೆಚ್ಚಾಗಿ ಸಂಪಾದಿಸಬಹುದು' ಎಂದುಕೊಂಡನು.

೫

ಪಾಹೋಮನು ಆ ಸ್ಥಳಕ್ಕೆ ಹೋಗುವುದು ಹೇಗೆಂಬುದನ್ನು ವಿಚಾರಿಸಿ ತಿಳಿದುಕೊಂಡು ಆ ವರ್ತಕನು ತಮ್ಮ ಮನೆಯಿಂದ ಪ್ರಯಾಣಮಾಡಿದ ಕೂಡಲೇ ಆ ಬಳಿಗೆ ತಾನೇ ಹೋಗಿ ಬರುವುದಕ್ಕೆ ಸಿದ್ಧಮಾಡಿಕೊಂಡನು.

ಮನೆಯ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕೆ ಹೆಂಡತಿಯನ್ನು ಬಿಟ್ಟು ತನ್ನ ಸಂಗಡ ಒಬ್ಬ ಆಳನ್ನು ಕರೆದುಕೊಂಡು ಪ್ರಯಾಣ ಹೊರಟನು ದಾರಿಯಲ್ಲಿ ಸಿಕ್ಕಿದ ಒಂದು ಪಟ್ಟಣದಲ್ಲಿ ನಿಂತು, ಅಲ್ಲಿ ಆ ವರ್ತಕನ ಸಲಹೆಯಂತೆ ಒಂದು ಪೆಟ್ಟಿಗೆ ಟೀ, ವೈನ್, ಮತ್ತು ಇತರ ಉಡುಗೊರೆಯ ಪದಾರ್ಥಗಳನ್ನು ಕೊಂಡುಕೊಂಡರು. ಕೊಂಡುಕೊಂಡು ಮುಂದು ಮುಂದಕ್ಕೆ ಪ್ರಯಾಣಮಾಡುತ್ತಲೇ ಇದ್ದರು. ಮುನ್ನೂರು ಮೈಲಿಗಳಿಂತಲೂ ಹೆಚ್ಚು ದೂರ ಹೋದ ಮೇಲೆ ಏಳನೆಯ ದಿನ ಬಷ್ಕೀರರು ಗುಡಾರ ಹೊಡೆದುಕೊಂಡಿದ್ದ ಒಂದು ಸ್ಥಳಕ್ಕೆ ಬಂದು ಸೇರಿದರು. ಅಲ್ಲಿನ ಸ್ಥಿತಿಯೆಲ್ಲ ಆ ವರ್ತಕನು ಹೇಳಿದಂತೆಯೇ ಇದ್ದಿತು. ಆ ಜನರು ಒಂದು ನದಿಯ ದಡದಲ್ಲಿ ಬೋರೆಗಳ ಮೇಲೆ ಚಕ್ಕಳ ಹೊದಿಸಿದ ಗುಡಾರಗಳಲ್ಲಿ ವಾಸಮಾಡುತ್ತಿದ್ದರು. ಅವರು ನೆಲವನ್ನು ಉಳುತ್ತಲೂ ಇರಲಿಲ್ಲ, ರೊಟ್ಟಿಯನ್ನು ತಿನ್ನುತ್ತಲೂ ಇರಲಿಲ್ಲ. ಅವರ ದನಕರುಗಳೂ ಕುದುರೆಗಳೂ ಬೋರೆಯ ಮೇಲೆ ಹಿಂಡು ಹಿಂಡಾಗಿ ಮೇಯುತ್ತಿದ್ದವು. ಕುದುರೆಯ ಮರಿಗಳನ್ನು ಗುಡಾರಗಳ ಹಿಂದುಗಡೆ ಕಟ್ಟಿಹಾಕಿ ದಿನಕ್ಕೆರಡು ಸಲ ತಾಯಿ ಕುದುರೆಗಳನ್ನು ಅವುಗಳ ಒಳಿಗೆ ಹೊಡೆದುಕೊಂಡು ಹೋಗಿ ಬಿಡುತ್ತಿದ್ದರು. ಕುದುರೆಗಳ ಹಾಲು ಕರೆದು ಆ ಹಾಲಿನಿಂದ ಕೂಮಿಸ್ ಮಾಡುತ್ತಿದ್ದರು. ಕೂಮಿಸ್ ಮಾಡುತ್ತಿದ್ದವರು ಹೆಂಗಸರು, ಅವರು ಅದರಿಂದ ಗಿಣ್ಣವನ್ನೂ ಮಾಡುತ್ತಿದ್ದರು. ಅವರ ಗಂಡಸರು ಮಾಡುತ್ತಿದ್ದ ಕೆಲಸವೆಲ್ಲಾ ಕೂಮಿಸ್ ಮತ್ತು ಟೀ ಕುಡಿಯುವುದು, ಕುರಿಯ ಮಾಂಸ ತಿನ್ನುವುದು, ಕೊಳಲೂದುವುದು—ಇಷ್ಟೇ. ಅವರೆಲ್ಲರೂ ಸ್ಥೂಲದೇಹಿಗಳಾಗಿಯೂ ನಿತ್ಯಸಂತೋಷಿಗಳಾಗಿಯೂ ಇದ್ದರು. ಬೇಸಿಗೆಯಲ್ಲೆಲ್ಲ ಮತ್ತೆ ಯಾವ ಬಗೆಯ ಕೆಲಸಮಾಡುವುದಕ್ಕೂ ಅವರು ಮನಸ್ಸು ಕೊಡುತ್ತಿರಲಿಲ್ಲ. ಅವರಿಗೆ ಸ್ವಲ್ಪವೂ ತಿಳಿವಳಿಕೆಯಿರಲಿಲ್ಲ; ರಷ್ಯನ್ ಭಾಷೆ ಗೊತ್ತಿರಲಿಲ್ಲ; ಆದರೆ ಒಳ್ಳೆಯ ಸ್ವಭಾವವುಳ್ಳವರಾಗಿದ್ದರು.

ಪಾಹೋಮನನ್ನು ಕಂಡೊಡನೆಯೇ ಅವರು ಗುಡಾರಗಳಿಂದ ಹೊರಟು ಬಂದು ತಮ್ಮ ಅತಿಥಿಯ ಸುತ್ತಲೂ ಗುಂಪು ಕಟ್ಟಿಕೊಂಡರು. ಒಬ್ಬರು ಆಡಿದ್ದನ್ನು ಮತ್ತೊಬ್ಬರಿಗೆ ತಿಳಿಸಬಲ್ಲ ಒಬ್ಬ ದ್ವಿಭಾಷಿ ಸಿಕ್ಕಲಾಗಿ, ಪಾಹೋಮ್ ತಾನು ಸ್ವಲ್ಪ ಭೂಮಿಗೋಸ್ಕರ ಬಂದಿರುವುದಾಗಿ ತಿಳಿಸಿದನು. ಒಷ್ಕೀರರು ಬಹಳ ಸಂತೋಷಗೊಂಡವರಂತೆ ಕಂಡರು. ಅವರು ಪಾಹೋಮ ನನ್ನು ಅಲ್ಲಿದ್ದವುಗಳಲ್ಲೆಲ್ಲ ಅತ್ಯುತ್ತಮವಾದ ಒಂದು ಗುಡಾರದೊಳಕ್ಕೆ ಕರೆದುಕೊಂಡು ಹೋಗಿ, ಒಂದು ಚಾಪೆಯ ಮೇಲೆ ಮೃದುವಾದ ಸಣ್ಣ ತುಪ್ಪಟದಿಂದ ಮಾಡಿದ ಮೆತ್ತೆಯನ್ನು ಹಾಕಿ ಅದರ ಮೇಲೆ ಅವನನ್ನು ಕೂರಿಸಿ ತಾವು ಸುತ್ತಲೂ ಕುಳಿತುಕೊಂಡರು ಆಮೇಲೆ ಅವನಿಗೆ ಸ್ವಲ್ಪ ಟೀಯನ್ನೂ ಕೂಮಿಸ್ಸನ್ನೂ ಕೊಟ್ಟರು, ಒಂದು ಕುರಿಯನ್ನು ಕುಯ್ದು ಅವನಿಗೆ ತಿನ್ನಲು ಮಾಂಸವನ್ನು ಕೊಟ್ಟರು. ಪಾಹೋಮ್ ತಾನು ತಂದಿದ್ದ ಉಡುಗೊರೆಯ ವಸ್ತುಗಳನ್ನು ಗಾಡಿಯಿಂದ ಇಳಿಸಿ ತಂದುಕೊಂಡು ಒಷ್ಕೀರರಲ್ಲರಿಗೂ ಕೊಟ್ಟನು, ಟೀಯನ್ನೂ ಅವರೆಲ್ಲರಿಗೂ ಹಂಚಿಕೊಟ್ಟನು. ಒಷ್ಕೀರರಿಗೆ ಬಹಳ ಆನಂದವಾಯಿತು ಅವರು ತಮ್ಮ ತಮ್ಮಲ್ಲೇ ಬಹಳ ಹೊತ್ತು ಮಾತಾಡಿಕೊಳ್ಳುತ್ತಿದ್ದು ಕಡೆಗೆ ಅದನ್ನು ಭಾಷಾಂತರ ಮಾಡಿ ಹೇಳುವಂತೆ ದ್ವಿಭಾಷಿಗೆ ತಿಳಿಸಿದರು

ಅವನು 'ನಿನ್ನ ಮೇಲೆ ನಮಗೆ ವಿಶ್ವಾಸಹುಟ್ಟಿದೆ, ನಮ್ಮಲ್ಲಿಗೆ ಬಂದ ಅತಿಥಿಯನ್ನು ತೃಪ್ತಿಪಡಿಸುವುದಕ್ಕೆ ನಮ್ಮ ಕೈಲಾದದ್ದನ್ನೆಲ್ಲ ಮಾಡು ವುದೂ, ಅವನು ಕೊಟ್ಟ ಉಡುಗೊರೆಗೆ ತಕ್ಕಂತೆ ಪ್ರತಿಯಾಗಿ ಕೊಡುವುದೂ ನಮ್ಮ ವಾಡಿಕೆ ನಮಗೆ ನೀನು ಉಡುಗೊರೆಗಳನ್ನು ಕೊಟ್ಟಿರುವೆ ನಮ್ಮಲ್ಲಿ ರುವ ಪದಾರ್ಥಗಳಲ್ಲಿ ನಿನಗೆ ಹೆಚ್ಚು ಮೆಚ್ಚಾಗಿರುವುದು ಯಾವುದು ಹೇಳು. ಅದನ್ನು ನಿನಗೆ ಬಹುಮಾನವಾಗಿ ಕೊಡುತ್ತೇವೆ ಎಂದು ಹೇಳು ತ್ತಾರೆ' ಎಂದನು.

ಅದಕ್ಕೆ ಉತ್ತರವಾಗಿ ಪಾಹೋಮ್ 'ಇಲ್ಲಿ ನನಗೆ ಹೆಚ್ಚು ಮೆಚ್ಚಾ ಗಿರುವುದು ನಿಮ್ಮ ನೆಲ. ನಮ್ಮ ಕಡೆ ಜನರ ಗುಂಪು ಹೆಚ್ಚು. ಅಲ್ಲದೆ

ಮಣ್ಣಿನ ಸಾರವೂ ಮುಗಿದು ಹೋಗಿದೆ. ನಿಮಗಾದರೋ ಬೇಕಾದಷ್ಟು ನೆಲವಿದೆ, ಅದೆಲ್ಲ ಒಳ್ಳೆಯ ನೆಲ ಎಂದನು.

ದ್ವಿಭಾಷಿ ಅದನ್ನು ಪರಿವರ್ತಿಸಿ ಹೇಳಿದನು. ಬಷ್ಕೀರರು ಸ್ವಲ್ಪ ಹೊತ್ತು ತಮ್ಮ ತಮ್ಮಲ್ಲೇ ಮಾತಾಡಿಕೊಂಡರು. ಅವರೇನು ಹೇಳುತ್ತಿರುವ ರೆಂಬುದು ಪಾಹೋಮ್‌ಗೆ ಗೊತ್ತಾಗುತ್ತಿರಲಿಲ್ಲ. ಆದರೆ ಅವರು ಬಹಳ ಆಶ್ಚರ್ಯಗೊಂಡಿರುವಂತೆ ಕಂಡಿತು. ಅವರು ಗಟ್ಟಿಯಾಗಿ ಕೂಗುತ್ತಿದ್ದದ್ದೂ, ನಗುತ್ತಿದ್ದದ್ದೂ ಮಾತ್ರ ಗೊತ್ತಾಯಿತು ಆಮೇಲೆ ಅವರು ಸದ್ದು ನಿಲ್ಲಿಸಿ ಸುಮ್ಮನೆ ಪಾಹೋಮನ ಕಡೆಗೆ ನೋಡತೊಡಗಿದರು ದ್ವಿಭಾಷಿಯು

'ನಿನ್ನ ಉಡುಗೊರೆಗಳಿಗೆ ಪ್ರತಿಯಾಗಿ ನಿನಗೆಷ್ಟು ಬೇಕೋ ಅಷ್ಟು ನೆಲವನ್ನು ಸಂತೋಷದಿಂದ ಕೊಡುತ್ತೇವೆಂದು ಹೇಳುತ್ತಾರೆ ಯಾವುದು ಬೇಕೋ ಅದನ್ನು ನೀನು ಕೈಯಿಂದ ತೋರಿಸಿದರೆ ಸಾಕು, ಅದೆಲ್ಲ ನಿನ್ನ ದಾಗುತ್ತದೆ' ಎಂದನು.

ಬಷ್ಕೀರರು ಮತ್ತೆ ಸ್ವಲ್ಪ ಹೊತ್ತು ಮಾತಾಡಿ ವಾಗ್ವಾದಕ್ಕೆ ಪ್ರಾರಂಭಿಸಿದರು ಅವರು ಏತಕ್ಕೆ ಹಾಗೆ ವಾದಿಸುತ್ತಿರುವರೆಂದು ಪಾಹೋಮ್ ಕೇಳಿದನು, 'ಅವರಲ್ಲಿ ಕೆಲವರು ನೆಲದ ವಿಚಾರದಲ್ಲಿ ತಮ್ಮ ಯಜಮಾನನನ್ನು ಕೇಳಬೇಕೆಂದೂ ಅವನಿಲ್ಲದಾಗ ಏನೂ ಮಾಡಬಾರದೆಂದೂ ವಾದಿಸುತ್ತಾರೆ. ಉಳಿದವರು ಅವನು ಬರುವವರೆಗೂ ಕಾದಿರಬೇಕಾದ ಅಗತ್ಯವಿಲ್ಲವೆನ್ನುತ್ತಾರೆ' ಎಂದನು.

೬

ಬಷ್ಕೀರರಿನ್ನೂ ವಾದಿಸುತ್ತಿರುವಾಗಲೇ ನರಿಯ ತುಪ್ಪಟದ ದೊಡ್ಡದೊಂದು ಟೋಪಿಯನ್ನು ಹಾಕಿಕೊಂಡು ಒಬ್ಬ ಮನುಷ್ಯನು ಅಲ್ಲಿಗೆ ಬಂದನು. ಅವರೆಲ್ಲರೂ ಗದ್ದಲವನ್ನು ನಿಲ್ಲಿಸಿ ಎದ್ದು ನಿಂತರು. ದ್ವಿಭಾಷಿಯು 'ಇಗೋ, ಇವನೇ ನಮ್ಮ ಯಜಮಾನ' ಎಂದು ಹೇಳಿದನು.

ಪಾಹೋಮ್ ಕೂಡಲೇ ತನ್ನ ಗಾಡಿಯಿಂದ ಅತ್ಯಂತ ಶ್ರೇಷ್ಠವಾದ ಮೇಲುಹೊದಿಕೆಯೊಂದನ್ನೂ ಐದು ಪೌಂಡು ಟೀಯನ್ನೂ ತಂದು ಆ ಯಜಮಾನನಿಗೆ ಕಾಣಿಕೆ ಕೊಟ್ಟನು. ಯಜಮಾನನು ಅದನ್ನು ತೆಗೆದುಕೊಂಡು ತನ್ನ ಗೌರವಕ್ಕೆ ಯೋಗ್ಯವಾದ ಪೀಠದ ಮೇಲೆ ಕುಳಿತುಕೊಂಡನು. ಕೂಡಲೆ ಬಷ್ಕೀರರು ಅವನಿಗೆ ಏನನ್ನೋ ಹೇಳುವುದಕ್ಕೆ ಮೊದಲು ಮಾಡಿದರು. ಯಜಮಾನನು ಸ್ವಲ್ಪ ಹೊತ್ತು ಅವರ ಮಾತ್ನು ಆಲಿಸುತ್ತಿದ್ದು ಎಲ್ಲರೂ ಸುಮ್ಮನಿರುವಂತೆ ತಲೆಯಲುಗಿಸಿ ಸನ್ನೆಮಾಡಿ ಪಾಹೋಮನನ್ನು ಕುರಿತು ರಷ್ಯನ್ ಭಾಷೆಯಲ್ಲಿಯೇ,

'ಒಳ್ಳೆಯದು. ಹಾಗೆಯೇ ಆಗಲಿ. ನಿನಗೆ ಇಷ್ಟ ಬಂದ ನೆಲವನ್ನು ನೀನು ಆರಿಸಿಕೊ, ನಮಗೆ ಬೇಕಾದಷ್ಟಿದೆ' ಎಂದನು.

'ನನಗೆಷ್ಟು ಬೇಕೋ ಅಷ್ಟನ್ನೂ ತೆಗೆದುಕೊಳ್ಳುವುದು ಹೇಗೆ? ಅದನ್ನು ಭದ್ರಪಡಿಸಿಕೊಳ್ಳುವುದಕ್ಕೆ ಪತ್ರಬರೆಸಿಕೊಳ್ಳಲೇ ಬೇಕು. ಇಲ್ಲದಿದ್ದರೆ ಅವರು ಈಗ 'ಇದು ನಿನ್ನದು' ಎಂದು ಹೇಳಿ, ಮತ್ತೆ ಹಿಂದಕ್ಕೆ ಕಸಿದುಕೊಂಡು ಬಿಡಬಹುದು' ಎಂದು ಪಾಹೋಮ್ ತನ್ನ ಮನಸ್ಸಿನಲ್ಲೇ ಆಲೋಚಿಸಿದನು.

ಹೀಗೆ ಆಲೋಚಿಸಿ ಗಟ್ಟಿಯಾಗಿ 'ಕರುಣಾಪೂರ್ಣವಾದ ನಿಮ್ಮ ಒಳ್ಳೆಯ ಮಾತುಗಳನ್ನು ಕೇಳಿ ಬಹಳ ಸಂತೋಷವಾಯಿತು. ನಿಮಗೆ ಬೇಕಾದಷ್ಟು ನೆಲವಿದೆ; ನನಗೆ ಬೇಕಾಗಿರುವುದೆಲ್ಲೋ ಸ್ವಲ್ಪ. ಅದನ್ನು ಅಳೆದು ನನ್ನ ಸ್ವಾಧೀನಕ್ಕೆ ಕೊಡುವುದಕ್ಕಾಗುವುದಿಲ್ಲವೆ? ಬಾಳು ಸಾವುಗಳು ದೇವರ ಕೈಯಲ್ಲಿವೆ. ನೀವು ಒಳ್ಳೆಯ ಮನುಷ್ಯರು, ನನಗೆ ಕೊಡುತ್ತೀರಿ; ಆದರೆ ನಿಮ್ಮ ಮಕ್ಕಳು ಅದನ್ನು ಪುನಃ ತೆಗೆದುಕೊಳ್ಳಬೇಕೆಂದು ಇಷ್ಟಪಡಬಹುದು' ಎಂದು ನುಡಿದನು.

'ಆ ಯಜಮಾನು ನೀನಾಡಿದ್ದು ನ್ಯಾಯವಾದದ್ದೇ ಸರಿ. ನಾವು ಅದನ್ನು ನಿನ್ನ ಸ್ವಾಧೀನಕ್ಕೆ ಕೊಟ್ಟು ಬಿಡುತ್ತೇವೆ' ಎಂದನು.

ಪಾಹೋಮ್ ಮಾತು ಮುಂದುವರಿಸುತ್ತಾ 'ಇಲ್ಲಿಗೆ ಒಬ್ಬ ವ್ಯಾಪಾರಿ ಬಂದಿದ್ದಂತೆ ಕೇಳಿದೆ. ಅವನಿಗೂ ನೀವು ಸ್ವಲ್ಪ ಭೂಮಿಯನ್ನು ಕೊಟ್ಟಿರಂತೆ, ಹಾಗೆ ಕೊಟ್ಟದ್ದಕ್ಕೆ ಪತ್ರವನ್ನೂ ಬರೆಸಿ ಕೊಟ್ಟಿರಂತೆ. ನನಗೂ ಹಾಗೇ ಮಾಡಿ ಕೊಟ್ಟರೆ ವಾಸಿ' ಎಂದನು.

ಯಜಮಾನನು ಅವನ ಅಭಿಪ್ರಾಯವನ್ನು ತಿಳಿದುಕೊಂಡನು.

'ಆಗಲಿ. ಅದನ್ನೇನು, ಸುಲಭವಾಗಿ ಮಾಡಿಬಿಡಬಹುದು. ನಮ್ಮಲ್ಲಿ ಬರೆಯುವವನೊಬ್ಬನಿದಾನೆ. ನಿನ್ನ ಜೊತೆಯಲ್ಲಿ ನಾವೂ ಪಟ್ಟಣಕ್ಕೆ ಬರುತ್ತೇವೆ. ಬಂದು ನ್ಯಾಯರೀತಿಯಲ್ಲಿ ಪತ್ರಕ್ಕೆ ರುಜುಹಾಕಿ ಮುದ್ರೆಮಾಡಿ ಕೊಡುತ್ತೇವೆ' ಎಂದನು.

'ಸರಿ ಬೆಲೆಯೇನಾದೀತು?' ಎಂದು ಪಾಹೋಮ್ ಕೇಳಿದನು.

'ನಮ್ಮ ಬೆಲೆ ಯಾವಾಗಲೂ ಒಂದೇ ದಿನಕ್ಕೊಂದು ಸಾವಿರ ರೂಬಲ್‌ಗಳು.'

ಪಾಹೋಮ್‌ಗೆ ತಿಳಿಯಲಿಲ್ಲ,

'ಒಂದು ದಿನ? ಅದು ಯಾವ ಅಳತೆ? ಅದಕ್ಕೆ ಎಷ್ಟು ಎಕರೆ ಯಾಗುತ್ತದೆ?'

'ಅದನ್ನು ಹೇಗೆ ಲೆಕ್ಕಮಾಡಬೇಕೋ ನಮಗೆ ಗೊತ್ತಿಲ್ಲ. ದಿನದ ಲೆಕ್ಕದಲ್ಲಿಯೇ ನಾವು ಮಾರುವುದು. ಒಂದು ದಿನದಲ್ಲಿ ಕಾಲ್ನಡಗೆಯಲ್ಲಿ ಎಷ್ಟನ್ನು ನೀನು ಸುತ್ತುಗಟ್ಟಬಲ್ಲೆಯೋ ಅಷ್ಟೂ ನಿನ್ನದು, ಬೆಲೆ ದಿನಕ್ಕೆ ಒಂದು ಸಾವಿರ ರೂಬಲ್‌ಗಳು' ಎಂದು ಯಜಮಾನನು ಹೇಳಿದನು.

ಪಾಹೋಮ್‌ಗೆ ಆಶ್ಚರ್ಯವಾಯಿತು.

'ಹಾಗಾ ಆದರೆ ಒಂದು ದಿನದಲ್ಲಿ ಬಹು ವಿಸ್ತಾರವಾದ ಪ್ರದೇಶವನ್ನು ಸುತ್ತುಗಟ್ಟಬಹುದಲ್ಲಾ' ಎಂದನು.

ಯಜಮಾನನು ನಕ್ಕನು.

'ಅದೆಲ್ಲ ನಿನ್ನದಾಗುತ್ತದೆ! ಆದರೆ ಇದಕ್ಕ ಒಂದು ನಿಯಮವುಂಟು: ನೀನು ಯಾವ ಸ್ಥಳದಿಂದ ಹೊರಡುತ್ತಿಯೋ ಅಲ್ಲಿಗೆ ಅದೇ ದಿನ ಹಿಂದಿರುಗ ದಿದ್ದರೆ ನಿನ್ನ ಹಣವನ್ನು ಕಳೆದುಕೊಳ್ಳಬೇಕು' ಎಂದನು.

'ಆದರೆ ನಾನು ಹೋಗಿ ಬಂದ ದಾರಿಯನ್ನು ಗುರುತುಮಾಡು ವುದು ಹೇಗೆ?'

'ಅದಕ್ಕೇನು. ನೀನು ಇಷ್ಟಪಟ್ಟ ಸ್ಥಳಕ್ಕೆ ನಾವು ಒಂದು ಅಲ್ಲೇ ಇರುತ್ತೇವೆ. ನೀನು ಆ ಸ್ಥಳದಿಂದ ಹೊರಟು ಸಂಗಡ ಒಂದು ಗುದ್ದಲಿ ಯನ್ನು ತೆಗೆದುಕೊಂಡು ಸುತ್ತುಗಟ್ಟುವುದಕ್ಕೆ ಹೋಗಬೇಕು. ನಿನಗೆ ಅಗತ್ಯವೆಂದು ತೋರಿದ ಕಡೆಗಳಲ್ಲೆಲ್ಲ ಒಂದೊಂದು ಗುರುತುಮಾಡು. ಪ್ರತಿಯೊಂದು ತಿರುವಿನಲ್ಲಿಯೂ ಒಂದು ಗುಂಡಿಯನ್ನು ತೋಡಿ ಮಣ್ಣನ್ನು ರಾಸಿ ಹಾಕು, ಆಮೇಲೆ ಕಡಯಲ್ಲಿ ಗುಂಡಿಯಿಂದ ಗುಂಡಿಗೆ ನೇಗಿಲಿನಿಂದ ಉತ್ತು ಗೆರೆಮಾಡುತ್ತ ಸುತ್ತಲೂ ಹೋಗುತ್ತೇವೆ. ನಿನಗೆ ತೋರಿದಷ್ಟು ದೊಡ್ಡದಾಗಿ ಸುತ್ತುಗಟ್ಟಬಹುದು. ಆದರೆ ಹೊತ್ತು ಮುಳುಗುವುದರೊಳ ಗಾಗಿ ನೀನು ಎಲ್ಲಿಂದ ಹೊರಟೆಯೋ ಅಲ್ಲಿಗೆ ಒಂದು ಸೇರಬೇಕು. ನೀನು ಸುತ್ತುಗಟ್ಟಿದ ನೆಲವೆಲ್ಲ ನಿನ್ನದಾಗುವುದು.'

ಪಾಹೋಮನಿಗೆ ಹಿಡಿಸಲಾರದಷ್ಟು ಸಂತೋಷವಾಯಿತು. ಮರು ದಿನ ಬೆಳಿಗ್ಗೆ ಹೊತ್ತಿಗೆ ಮುಂಚೆ ಹೊರಡುವುದಾಗಿ ನಿರ್ಧರವಾಯಿತು. ಅವರು ಸ್ವಲ್ಪ ಹೊತ್ತು ಮಾತಾಡುತ್ತಿದ್ದರು. ಮತ್ತಷ್ಟು ಕೂಮಿಸ್ಸನ್ನೂ ಟೀಯನ್ನೂ ಕುಡಿದು ಇನ್ನಷ್ಟು ಕುರಿಯ ಮಾಂಸವನ್ನು ತಿಂದ ಬಳಿಕ ಮತ್ತೆ ಟೀ ಕುಡಿದರು. ಅಷ್ಟು ಹೊತ್ತಿಗೆ ರಾತ್ರಿಯಾಯಿತು. ಅವರು ಪಾಹೋಮ್‌ಗೆ ಮಲಗುವುದಕ್ಕೆ ಒಂದು ತುಪ್ಪಟದ ಹಾಸಿಕೆಯನ್ನು ಕೊಟ್ಟರು. ಮಾರನೆಯ ದಿನ ಉಷಃಕಾಲಕ್ಕೆ ಎಲ್ಲರೂ ಮತ್ತೆ ಒಟ್ಟಿಗೆ ಸೇರಿ ಗೊತ್ತಾದ ಸ್ಥಳಕ್ಕೆ ಸೂರ್ಯೋದಯಕ್ಕೆ ಮುಂಚೆ ಸವಾರಿ ಮಾಡಿಕೊಂಡು

ಹೋಗುವುದಾಗಿ ಮಾತುಕೊಟ್ಟು ಬಷ್ಕೀರರೆಲ್ಲರೂ ಎದ್ದು ಒಬ್ಬೊಬ್ಬ ರೊಂದೊಂದು ಕಡೆ ಹೊರಟುಹೋದರು.

೭

ಪಾಹೋಮ್ ತುಪ್ಪಟದ ಹಾಸಿಗೆಯ ಮೇಲೆ ಮಲಗಿಕೊಂಡನು. ಆದರೆ ನಿದ್ದೆಮಾಡುವುದಕ್ಕಾಗಲಿಲ್ಲ. ನೆಲದ ವಿಚಾರವನ್ನೇ ಯೋಚಿಸು ತ್ತಿದ್ದನು.

'ಎಷ್ಟು ದೊಡ್ಡ ಪ್ರಾಂತವನ್ನು ಗುರುತುಮಾಡಿ ಬಿಡುತ್ತೇನೋ! ನಾನು ದಿನಕ್ಕೆ ಮೂವತ್ತೈದು ಮೈಲಿಗಳನ್ನು ಸುಖವಾಗಿ ನಡೆಯಬಲ್ಲೆ. ಈಗ ಹಗಲು ಹೊತ್ತೇ ಹೆಚ್ಚು. ಮೂವತ್ತೈದು ಮೈಲಿಗಳ ಸುತ್ತಿನಲ್ಲಿ ಎಷ್ಟೆಷ್ಟು ನೆಲ ಸಿಕ್ಕಿ ಬಿಡುತ್ತದೆಯೋ! ಸಾರ ಕಮ್ಮಿಯಾದ ನೆಲವನ್ನೆಲ್ಲ ಮಾರುತ್ತೇನೆ, ಅಥವಾ ಅದನ್ನೆಲ್ಲ ರೈತರಿಗೆ ಗುತ್ತಿಗೆಗೆ ಕೊಡುತ್ತೇನೆ ಆದರೆ ನಾನು ಮಾತ್ರ ಸರ್ವೋತ್ತಮವಾದದ್ದನ್ನು ಆರಿಸಿಕೊಂಡು ವ್ಯವಸಾಯ ಮಾಡುತ್ತೇನೆ. ಎರಡು ಜೋಡಿ ಎತ್ತು ಕೊಂಡುಕೊಂಡು ಇಬ್ಬರು ಆಳು ಗಳನ್ನಿಟ್ಟುಕೊಳ್ಳುತ್ತೇನೆ. ಸುಮಾರು ನೂರೈವತ್ತು ಎಕರೆಗಳಷ್ಟನ್ನು ಉತ್ತು ಸಾಗುಮಾಡಿ ಉಳಿದದ್ದನ್ನು ಹುಲ್ಲುಗಾವಲು ಮಾಡಿ ದನಗಳನ್ನು ಮೇಯಿ ಸುತ್ತೇನೆ' ಎಂದು ಮುಂತಾಗಿ ಯೋಚಿಸುತ್ತಿದ್ದನು.

ರಾತ್ರಿಯೆಲ್ಲ ಪಾಹೋಮ್ ಎಚ್ಚರವಾಗಿಯೇ ಇದ್ದನು. ಉಷಃ ಕಾಲಕ್ಕೆ ಸ್ವಲ್ಪ ಮುಂಚೆ ಸ್ವಲ್ಪ ತೂಕಡಿಕೆ ಬಂದಿತು. ಕಣ್ಣು ಮುಚ್ಚಿ ದನೋ ಇಲ್ಲವೋ ಆಗಲೇ ಅವನಿಗೊಂದು ಕನಸಾಯಿತು. ತಾನು ಅದೇ ಗುಡಾರದಲ್ಲಿ ಮಲಗಿರುವಂತೆ ಭಾವಿಸಿದನು, ಯಾರೋ ಹೊರಗಡೆ ಸಂತೋಷದಿಂದ ಕಿಲಕಿಲನೆ ನಗುತ್ತಿದ್ದ ಹಾಗೆ ಕೇಳಿತು. ಅದು ಯಾರಾಗಿರ ಬಹುದೆಂದು ಅವನಿಗೆ ಆಶ್ಚರ್ಯವಾಯಿತು. ಎದ್ದು ಹೊರಗೆ ಬಂದನು. ಬಷ್ಕೀರರ ಯಜಮಾನನು ಗುಡಾರದ ಮುಂದೆ ಕುಳಿತು, ತನ್ನ ಎರಡು ಪಕ್ಕೆ ಗಳನ್ನೂ ಕೈಯಿಂದ ಅದುಮಿಕೊಂಡು ನಗುತ್ತ ಉರುಳಾಡುತ್ತಿದ್ದುದನ್ನು

ಕಂಡನು. ಪಾಹೋಮ್ ಯಜಮಾನನ ಹತ್ತಿರ ಹೋಗಿ 'ಏನನ್ನು ಕಂಡು ಹೀಗೆ ನಗುತ್ತಿರುವೆ?' ಎಂದು ಕೇಳಿದನು. ಆದರೆ ಅವನು ಬಷ್ಕೀರರ ಯಜಮಾನನಾಗಿರಲಿಲ್ಲ, ಸ್ವಲ್ಪ ದಿನಗಳ ಹಿಂದೆ ತನ್ನ ಮನೆಯಲ್ಲಿ ಇಳಿದುಕೊಂಡು ಈ ಭೂಮಿಯ ಸಂಗತಿಯನ್ನು ತನಗೆ ತಿಳಿಸಿದ್ದ ವರ್ತಕನಾಗಿ ಕಂಡನು. 'ನೀನು ಇಲ್ಲಿ ಬಂದು ಎಷ್ಟು ದಿನವಾಯಿತು?' ಎಂದು ಅವನನ್ನು ಕೇಳಬೇಕೆಂದಿರುವಷ್ಟರಲ್ಲಿಯೇ ಅವನು ವರ್ತಕನಾಗಿ ಕಾಣಲೇ ಇಲ್ಲ, ಬಹಳ ಕಾಲದ ಹಿಂದೆ ವೋಲ್ಗಾನದಿಯ ಕಡೆಯಿಂದ ತನ್ನ ಪೂರ್ವದ ಮನೆಗೆ ಬಂದಿದ್ದ ರೈತನಂತೆ ಕಾಣಿಸಿದನು ಮತ್ತೆ ನೋಡಲಾಗಿ ಆ ರೈತನೂ ಆಗಿರದೆ ಕೊಂಬು ಗೊರಸುಗಳಿಂದ ಕೂಡಿದ ಪ್ರತ್ಯಕ್ಷ ಪಿಶಾಚಿಯೇ ಕಿಲಕಿಲನೆ ನಗುತ್ತ ಅಲ್ಲಿ ಕುಳಿತಿರುವಂತೆಯೂ, ಅದರ ಮುಂದುಗಡೆ ಷರಟು ಷರಾಯಿಗಳನ್ನು ಮಾತ್ರ ತೊಟ್ಟು ಬರಿಯ ಕಾಲಿನ ಒಬ್ಬ ಮನುಷ್ಯನು ಮುಖವಡಿಯಾಗಿ ನೆಲದ ಮೇಲೆ ಬಿದ್ದಿರುವಂತೆಯೂ ಕಾಣಿಸಿತು. ಅಲ್ಲಿ ಮಲಗಿರುವ ಮನುಷ್ಯನು ಎಂಥವನೆಂದು ತಿಳಿಯುವುದಕ್ಕಾಗಿ ಬಹಳ ಜಾಗರೂಕತೆಯಿಂದ ನೋಡಿದ ಹಾಗೂ, ಆ ಮನುಷ್ಯನು ಸತ್ತುಹೋಗಿದ್ದ ಹಾಗೂ, ಅವನು ತಾನೇ ಆಗಿದ್ದ ಹಾಗೂ ಕನಸುಕಂಡನು. ಕಂಡು ಭಯಭ್ರಾಂತನಾಗಿ ಎಚ್ಚರಗೊಂಡನು.

'ಎಂಥೆಂಥ ಕನಸಾಗುತ್ತದೆಯಪ್ಪಾ!' ಎಂದುಕೊಂಡನು.

ಸುತ್ತಲೂ ನೋಡಲಾಗಿ ತೆರೆದ ಬಾಗಿಲಿನಿಂದ ಉಷಃಕಾಲವಾಗುತ್ತಿರುವುದು ಕಂಡುಬಂದಿತು.

'ಅವರನ್ನು ಎಬ್ಬಿಸುವ ಹೊತ್ತಾಯಿತು. ನಾವೀಗ ಹೊರಟಿರಬೇಕಾಗಿದ್ದಿತು.' ಎಂದುಕೊಂಡನು.

ಅವನು ಎದ್ದು ಗಾಡಿಯಲ್ಲಿ ಮಲಗಿದ್ದ ತನ್ನ ಆಳನ್ನು ಎಬ್ಬಿಸಿದನು; ಕುದುರೆಗೆ ಹಲ್ಲಣ ಹಾಕುವಂತೆ ಹೇಳಿ ಬಷ್ಕೀರರನ್ನು ಕರೆಯುವುದಕ್ಕೆ ಹೋದನು.

ಅವನು 'ಹೊತ್ತಾಯಿತು. ಮೈದಾನಕ್ಕೆ ಹೋಗಿ ನೆಲವನ್ನು ಅಳೆಯುವುದಕ್ಕೆ ಹೊರಡೋಣ' ಎಂದನು.

ಬಷ್ಕೀರರು ಎದ್ದು ಒಂದು ಕಡೆ ಕಲೆತರು; ಅವರ ಯಜಮಾನನೂ ಬಂದನು. ಆಗ ಅವರು ಮತ್ತೆ ಕೂಮಿಸ್ ಕುಡಿಯಲು ಪ್ರಾರಂಭಿಸಿದರು. ಪಾಹೋಮ್‌ಗೆ ಸ್ವಲ್ಪ ಟೀ ಕೊಡ ಹೋದರು. ಆದರೆ ಅವನು ನಿದಾನ ಮಾಡಲು ಇಷ್ಟಪಡಲಿಲ್ಲ.

'ನಾವು ಹೋಗಬೇಕಾಗಿದ್ದರೆ ಹೊರಡೋಣ, ಈಗಾಗಲೇ ಹೊತ್ತು ಬಹಳವಾಗಿಬಿಟ್ಟಿದೆ' ಎಂದನು.

೮

ಬಷ್ಕೀರರು ಎಲ್ಲವನ್ನೂ ಸಿದ್ಧಮಾಡಿಕೊಂಡು ಹೊರಟರು, ಕೆಲವರು ಕುದುರೆಯನ್ನು ಹತ್ತಿದರು, ಕೆಲವರು ಗಾಡಿಯಲ್ಲಿ ಕುಳಿತರು. ಪಾಹೋಮ್ ತನ್ನ ಆಳಿನೊಡನೆ ತನ್ನ ಚಿಕ್ಕಗಾಡಿಯಲ್ಲಿಯೇ ಕುಳಿತುಕೊಂಡನು. ಸಂಗಡ ಒಂದು ಗುದ್ದಲಿಯನ್ನು ತೆಗೆದುಕೊಂಡು ಗಾಡಿಯನ್ನು ಹೊಡೆದುಕೊಂಡು ಹೊರಟನು. ಮೈದಾನಕ್ಕೆ ಹೋಗಿ ತಲುಪಿದಾಗ ಬೆಳಗಿನ ಕಂಪು ಹರಡುವುದಕ್ಕೆ ಮೊದಲಾಗಿದ್ದಿತು. ಅವರು ಒಂದು ಸಣ್ಣ ಗುಡ್ಡವನ್ನು ಹತ್ತಿದರು. (ಅದನ್ನು ಬಷ್ಕೀರರು ಷಿಖನ್ ಎಂದು ಕರೆಯುತ್ತಿದ್ದರು). ಅಲ್ಲಿ ಕುದುರೆಗಳಿಂದಲೂ ಗಾಡಿಗಳಿಂದಲೂ ಕೆಳಕ್ಕಿಳಿದು ಒಂದು ಕಡೆ ಒಂದು ಸೇರಿದರು. ಯಜಮಾನನು ಪಾಹೋಮನ ಬಳಿಗೆ ಬಂದು ಬಯಲಿನ ಕಡೆಗೆ ಕೈಚಾಚಿ ತೋರಿಸುತ್ತ,

'ನೋಡು, ನಿನ್ನ ದೃಷ್ಟಿ ಓಡುವವರೆಗೂ ಇಲ್ಲಿ ಕಾಣುವುದೆಲ್ಲ ನಮ್ಮದು. ಅದರಲ್ಲಿ ನಿನಗೆ ಯಾವ ಭಾಗ ಬೇಕಾದರೂ ತೆಗೆದುಕೊಳ್ಳಬಹುದು' ಎಂದನು.

ಪಾಹೋಮನ ಕಣ್ಣುಗಳು ಅರಳಿಕೊಂಡವು: ಎಲ್ಲ ಕಡೆಯಲ್ಲಿಯೂ ಎಂದೂ ಬೆಳೆಮಾಡದ ಉತ್ತಮವಾದ ಮಣ್ಣು, ಅಂಗೈಯ ಹಾಗೆ ಸಮ

ಭೂಮಿ, ಮಣ್ಣಿನ ಬಣ್ಣ 'ಪಾಪಿ' ಬೀಜದ ಹಾಗೆ ಕಪ್ಪು, ತಗ್ಗುಗಳಲ್ಲಿ ಬಗೆಬಗೆಯ ಹುಲ್ಲುಗಳು ಎದೆಮಟ್ಟಕ್ಕೆ ಬೆಳೆದಿದ್ದವು.

ಯಜಮಾನನು ತನ್ನ ನರಿ ತುಪಟದ ಟೋಪಿಯನ್ನು ತೆಗೆದು ನೆಲದ ಮೇಲಿಟ್ಟು,

'ಇದೇ ಗುರುತು. ಇಲ್ಲಿಂದ ಹೊರಟು ಮತ್ತೆ ಇಲ್ಲಿಗೇ ಬಂದು ಸೇರ ಬೇಕು. ನೀನು ಸುತ್ತುಗಟ್ಟುವ ನೆಲವೆಲ್ಲ ನಿನ್ನದೇ ಆಗುತ್ತದೆ' ಎಂದನು.

ಪಾಹೋಮ್ ಹಣವನ್ನು ಹೊರಕ್ಕೆ ತೆಗೆದು ಟೋಪಿಯ ಮೇಲಿಟ್ಟನು. ಬಳಿಕ ಮೇಲಿನ ಅಂಗಿಯನ್ನು ಬಿಚ್ಚಿಹಾಕಿ ಒಳಗಿನ ತೋಳಿಲ್ಲದ ಅಂಗಿಯ ಲ್ಲಿಯೇ ನಿಂತನು. ನಡುಕಟ್ಟನ್ನು ಬಿಚ್ಚಿ ಹೊಟ್ಟೆಯ ಕೆಳಭಾಗದಲ್ಲಿ ಭದ್ರವಾಗಿ ಬಿಗಿದನು. ರೊಟ್ಟಿಯ ಒಂದು ಸಣ್ಣ ಚೀಲವನ್ನು ಅಂಗಿಯ ಜೇಬಿಗೆ ತುರುಕಿ ದನು ನಡುಕಟ್ಟಿಗೆ ನೀರಿನ ಸೀಸೆಯೊಂದನ್ನು ಕಟ್ಟಿಕೊಂಡನು. ಬೂಟುಗಳ ಮೇಲ್ಭಾಗವನ್ನೆಳೆದು ಸರಿಮಾಡಿ, ಆಳಿನ ಕೈಯಿಂದ ಗುದ್ದಲಿಯನ್ನು ತೆಗೆದು ಕೊಂಡು ಹೊರಡುವುದಕ್ಕೆ ಸಿದ್ಧನಾಗಿ ನಿಂತನು. ಯಾವ ಕಡೆಗೆ ಹೋಗು ವುದು ಒಳ್ಳೆಯದೆಂದು ಸ್ವಲ್ಪ ಹೊತ್ತು ಯೋಚಿಸುತ್ತ ನಿಂತನು—ಎಲ್ಲ ಕಡೆಯಲ್ಲಿಯೂ ಮನಸ್ಸು ಸೆಳೆಯುವ ಹಾಗಿದ್ದಿತು.

'ಆದಕ್ಕೇನಂತೆ, ಉದಯ ಸೂರ್ಯನ ಕಡೆಗೇ ಹೋಗೋಣ' ಎಂದು ತೀರ್ಮಾನಿಸಿದನು.

ಅವನು ಪೂರ್ವಕ್ಕೆ ಮುಖವನ್ನು ತಿರುಗಿಸಿ, ನೇರವಾಗಿ ನಿಂತು, ಸೂರ್ಯನು ಮೇಲೆ ಕಾಣಿಸಿಕೊಳ್ಳುವುದನ್ನೇ ಕಾಯುತ್ತಿದ್ದನು.

'ಸ್ವಲ್ಪವೂ ಹೊತ್ತು ಕಳೆಯಬಾರದು. ಇನ್ನೂ ತಂಪಾಗಿರುವಾಗ ನಡೆಯುವುದಕ್ಕೂ ಸುಲಭ' ಎಂದುಕೊಂಡನು.

ಸೂರ್ಯಕಿರಣಗಳು ಕ್ಷಿತಿಜದಿಂದ ಮೇಲಕ್ಕೆ ಹಾರಿದವೋ ಇಲ್ಲವೋ ಪಾಹೋಮನಾಗಲೇ ಗುದ್ದಲಿಯನ್ನು ಹೆಗಲಿಗೆ ಹಾಕಿಕೊಂಡು ಮೈದಾ ನದ ಕಡೆಗೆ ಇಳಿದು ಹೋಗುತ್ತಿದ್ದನು.

ಪಾಹೋಮನು ನಿದಾನವಾಗಿಯೂ ಅಲ್ಲದೆ ವೇಗವಾಗಿಯೂ ಅಲ್ಲದೆ ಸಾಧಾರಣವಾಗಿ ನಡೆಯ ತೊಡಗಿದನು. ಒಂದು ಸಾವಿರ ಗಜಗಳಷ್ಟು ದೂರ ನಡೆದ ಮೇಲೆ ಅಲ್ಲಿ ನಿಂತು ಒಂದು ಗುಂಡಿಯನ್ನು ತೋಡಿ ಅದು ಇನ್ನೂ ಚೆನ್ನಾಗಿ ಕಾಣುವಂತಾಗಲೆಂದು ಕಡ್ಡಿಯ ಚೂರುಗಳನ್ನು ಒಂದರ ಮೇಲೊಂದನ್ನಿಟ್ಟು ಪೇರಿಸಿದನು. ಆಮೇಲೆ ಮುಂದಕ್ಕೆ ಹೊರಟನು. ಇಷ್ಟು ಹೊತ್ತಿಗೆ ಕೈಕಾಲುಗಳ ಸೆಳೆತ ತಪ್ಪಿದ್ದರಿಂದ ನಡಗೆಯ ವೇಗವನ್ನು ಹೆಚ್ಚುಮಾಡಿದನು. ಸ್ವಲ್ಪಹೊತ್ತಿನಮೇಲೆ ಮತ್ತೊಂದು ಗುಂಡಿಯನ್ನು ತೋಡಿದನು.

ಪಾಹೋಮ್ ಹಿಂದಕ್ಕೆ ನೋಡಿದನು ಸೂರ್ಯನ ಬೆಳಕಿನಲ್ಲಿ ಆ ಸಣ್ಣಗುಡ್ಡ ಮೇಲಿದ್ದ ಜನರ ಸಮೇತವಾಗಿ ಚೆನ್ನಾಗಿ ಕಾಣುತ್ತಿದ್ದಿತು. ಬಂಡಿಯ ಚಕ್ರಗಳ ಪಟ್ಟಿಗಳು ಹೊಳೆಯುತ್ತಿದ್ದವು ಕಣ್ಣಳತೆಯಲ್ಲಿ ನೋಡಿ ತಾನು ಸುಮಾರು ಮೂರು ಮೈಲಿಗಳ ದೂರ ನಡೆದಿರಬಹುದೆಂದು ನಿರ್ಧರಿಸಿದನು. ಸೆಕೆಯಾಗುತ್ತಾ ಬಂದಿತು, ಒಳ ಅಂಗಿಯನ್ನು ಬಿಚ್ಚಿ ಹೆಗಲಮೇಲೆ ಹಾಕಿಕೊಂಡು ಮುಂದಕ್ಕೆ ಹೊರಟನು. ಅಷ್ಟುಹೊತ್ತಿಗೆ ಚಳಿಯೆಲ್ಲ ಹೋಗಿ ಚೆನ್ನಾಗಿ ಶಾಖವಾಗಿದ್ದಿತು. ಸೂರ್ಯನ ಕಡೆಗೆ ನೋಡಿದನು, ತಿಂಡಿಯನ್ನು ತಿನ್ನುವ ಹೊತ್ತಾಗಿದ್ದಿತು.

'ಒಂದು ಜಾವ ಕಳೆಯಿತು. ಆದರೇನು. ಒಂದು ಹಲಿಗೆ ನಾಲ್ಕಿವೆಯಲ್ಲಾ, ಹಿಂದಿರುಗುವುದಕ್ಕೆ ಇದು ಇನ್ನೂ ಬಹಳ ಮುಂಚೆ. ಈ ಬೂಟುಗಳನ್ನಷ್ಟು ತೆಗೆದುಬಿಡೋಣ' ಎಂದುಕೊಂಡನು.

ಹಾಗೆ ಯೋಚಿಸಿ, ಅಲ್ಲಿ ಕುಳಿತುಕೊಂಡು ಬೂಟುಗಳನ್ನು ತೆಗೆದು ನಡುಕಟ್ಟಿಗೆ ಸೇರಿಸಿ ಕಟ್ಟಿ ಮುಂದಕ್ಕೆ ಹೊರಟನು. ಆಗ ನಡೆಯುವುದಕ್ಕೆ ಸರಾಗವಾಯಿತು.

'ಇನ್ನೊಂದು ಮೂರು ಮೈಲಿಗಳವರೆಗೂ ಹೋಗಿ ಆಮೇಲೆ ಎಡಗಡೆಗೆ ತಿರುಗುತ್ತೇನೆ. ಈ ಸ್ಥಳ ಬಹಳ ಚೆನ್ನಾಗಿದೆ; ಇದನ್ನು ಕಳೆದು

ಕೊಳ್ಳುವುದು ಶುದ್ಧ ಪೆಚ್ಚು ಕೆಲಸ. ಮುಂದೆ ಮುಂದೆ ಹೋದಂತೆಲ್ಲ ನೆಲ ಹೆಚ್ಚು ಹೆಚ್ಚು ಶ್ರೇಷ್ಠವಾಗಿರುವಂತೆ ಕಾಣುತ್ತದೆ' ಎಂದು ಯೋಚಿಸಿದನು.

ಅವನು ಸ್ವಲ್ಪ ಹೊತ್ತು ನೇರವಾಗಿ ಹೋಗುತ್ತಿದ್ದು ಸುತ್ತಲೂ ತಿರುಗಿ ನೋಡಲಾಗಿ ಗುಡ್ಡವು ಕಂಡೂ ಕಾಣಿಸದ ಹಾಗಿದ್ದಿತು, ಅದರ ಮೇಲಿದ್ದ ಜನರು ಕರಿಯ ಇರುವೆಗಳಂತೆ ತೋರುತ್ತಿದ್ದರು. ಅಲ್ಲಿ ಬಿಸಲಿನಲ್ಲಿ ಏನೋ ಹೊಳೆಯುತ್ತಿದ್ದಂತೆ ಕಂಡಿತು.

ಆಗ ಪಾಹೋಮ್, 'ಓಹೋ, ನಾನು ಈ ದಿಕ್ಕಿನಲ್ಲಿ ಬಹಳದೂರ ಬಂದುಬಿಟ್ಟೆ. ಇನ್ನು ತಿರುಗಬೇಕು. ಇದಲ್ಲದೆ ನನ್ನ ಮೈಮೇಲೆಲ್ಲ ಬೆವರಿಳಿಯುತ್ತಿದೆ, ಬಾಯಾರಿಕೆಯೂ ಹೆಚ್ಚಾಗಿದೆ' ಎಂದುಕೊಂಡನು.

ಅವನು ಅಲ್ಲಿ ನಿಂತು ಒಂದು ದೊಡ್ಡ ಗುಂಡಿಯನ್ನು ತೋಡಿ ಕಡ್ಡಿಗಳನ್ನು ಒಟ್ಟಿದನು. ಆಮೇಲೆ ಸೀಸಿಯನ್ನು ಬಿಚ್ಚಿಕೊಂಡು ಸ್ವಲ್ಪ ನೀರು ಕುಡಿದು ಎಡಗಡೆಗೆ ತಿರುಗಿದನು. ಅವನು ಮುಂದು ಮುಂದಕ್ಕೆ ಹೋಗುತ್ತಲೇ ಇದ್ದನು. ಹುಲ್ಲು ಬಹಳ ಎತ್ತರವಾಗಿದ್ದಿತು, ಸಕೆಯೂ ಹೆಚ್ಚಾಗಿದ್ದಿತು.

ಪಾಹೋಮನಿಗೆ ಆಯಾಸವಾಗುತ್ತ ಬಂದಿತು. ಸೂರ್ಯನ ಕಡೆಗೆ ನೋಡಿದನು. ಮಧ್ಯಾಹ್ನವಾಗಿದ್ದಿತು.

'ಇನ್ನು ನಾನು ಸ್ವಲ್ಪ ವಿಶ್ರಮಿಸಿಕೊಳ್ಳಬೇಕು' ಎಂದುಕೊಂಡನು.

ಅವನು ಅಲ್ಲಿ ಕುಳಿತು ಸ್ವಲ್ಪ ರೊಟ್ಟಿಯನ್ನು ತಿಂದು ಸ್ವಲ್ಪ ನೀರನ್ನು ಕುಡಿದನು. ಮಲಗಿದರೆ ನಿದ್ದೆ ಹತ್ತಿಬಿಡಬಹುದೆಂದು ಯೋಚಿಸಿ ಅವನು ಮಲಗಲಿಲ್ಲ. ಅಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಮತ್ತೆ ಮುಂದಕ್ಕೆ ನಡೆದನು. ಮೊದಲು ಮೊದಲು ಸುಲಭವಾಗಿಯೇ ನಡೆದನು. ಆಹಾರದಿಂದ ಶಕ್ತಿ ಬಂದಿದ್ದಿತು; ಆದರೆ ಸೆಕೆ ವಿಪರೀತ ಹೆಚ್ಚಿದ್ದರಿಂದ ಅವನಿಗೆ ನಿದ್ದೆ ಬರುವಂತಾಯಿತು. ಆದರೂ 'ಒಂದು ಗಂಟೆಯ ಗೋಳು ಜೀವಮಾನದ ಬಾಳು' ಎಂದು ನೆನೆದು ಮುಂದೆ ಮುಂದೆ ಹೋಗುತ್ತಲೇ ಇದ್ದನು.

ಈ ದಿಕ್ಕಿನಲ್ಲಿಯೂ ಬಹಳ ದೂರ ನಡೆದುಬಿಟ್ಟನು. ಇನ್ನೇನು ಎಡಗಡೆಗೆ ತಿರುಗಬೇಕೆಂದಿರುವಷ್ಟರಲ್ಲಿ ತೇವವಾಗಿರುವ ಒಂದು ತಗ್ಗು ಅವನ ಕಣ್ಣಿಗೆ ಬಿದ್ದಿತು; 'ಅದನ್ನು ಬಿಟ್ಟುಬಿಡುವುದು ಶುದ್ಧ ಅನ್ಯಾಯ. 'ಫ್ಲ್ಯಾಕ್ಸ್' ಅಲ್ಲಿ ಬಹಳ ಚೆನ್ನಾಗಿ ಬೆಳೆಯುತ್ತದೆ' ಎಂದುಕೊಂಡನು. ಆ ತಗ್ಗನ್ನೂ ದಾಟಿ ಅದರ ಆಚೆಯ ದಡದಲ್ಲಿ ಒಂದು ಗುಂಡಿಯನ್ನು ತೋಡಿ ಮೂಲೆಯನ್ನು ತಿರುವಿದನು. ಪಾಹೋಮ್ ಗುಡ್ಡದ ಕಡೆಗೆ ನೋಡಿದನು. ಶಾಖವು ಗಾಳಿಯನ್ನು ಮಸಕುಮಾಡಿಬಿಟ್ಟಿದ್ದಿತು. ಅದು ನಡುಗುತ್ತಿರುವಂತೆ ಕಾಣುತ್ತಿದ್ದಿತು. ಆ ಮಸಕಿನಲ್ಲಿ ಗುಡ್ಡದ ಮೇಲಿದ್ದ ಜನರನ್ನು ಕಾಣುವುದೇ ಕಷ್ಟವಾಗಿದ್ದಿತು.

'ಓಹೋ ಎರಡು ಅಂಚುಗಳನ್ನೂ ಬಹಳ ಉದ್ದವಾಗಿ ಮಾಡಿಬಿಟ್ಟೆ, ಇದನ್ನು ಸಣ್ಣದು ಮಾಡಬೇಕು' ಎಂದುಕೊಂಡು ಮೂರನೆಯ ಅಂಚಿನಲ್ಲಿ ಹೆಚ್ಚು ಹೆಚ್ಚು ವೇಗವಾಗಿ ಹೆಜ್ಜೆಯಿಡುತ್ತ ಹೋದನು. ಅವನು ಸೂರ್ಯನ ಕಡೆಗೆ ನೋಡಿದನು. ಅದಾಗಲೇ ಕ್ಷಿತಿಜಕ್ಕೆ ಅರ್ಧದಾರಿಯಷ್ಟು ಕೆಳಗಿಳಿದುಬಿಟ್ಟಿದ್ದಿತು, ಅವನಿನ್ನೂ ಚೌಕದ ಮೂರನೆಯ ಅಂಚಿನಲ್ಲಿ ಎರಡು ಮೈಲಿಗಳನ್ನು ಕೂಡ ನಡೆದಿರಲಿಲ್ಲ. ಅವನಿಗೂ ಗುಡ್ಡಕ್ಕೂ ನಡುವೆ ಇನ್ನೂ ಹತ್ತು ಮೈಲಿಯ ದೂರವಿದ್ದಿತು.

'ಆಗದು. ನನ್ನ ಭೂಮಿ ಒಂದು ಅಂಚಿನಲ್ಲಿ ಮುಕ್ಕಾಗುವುದಾದರೂ ಈಗ ನಾನು ಒಂದೇ ನೇರಕ್ಕೆ ಹಿಂದಿರುಗಬೇಕು. ಇಲ್ಲದಿದ್ದರೆ ನಾನು ಹೋಗಬೇಕಾದದ್ದಕ್ಕಿಂತಲೂ ಹೆಚ್ಚು ದೂರ ಹೋಗಿಬಿಡಬಹುದು. ಈಗಿರುವಂತಾದರೂ ನನಗೆ ಯಥೇಚ್ಛ ನೆಲ ಸಿಕ್ಕಿದೆ' ಎಂದು ಯೋಚಿಸಿದನು.

ಆದ್ದರಿಂದ, ಪಾಹೋಮ್ ಬೇಗ ಬೇಗ ಒಂದು ಗುಂಡಿಯನ್ನು ತೋಡಿ ಗುಡ್ಡದ ಕಡೆಗೆ ತಿರುಗಿ ನೇರವಾಗಿ ಹೊರಟನು.

೯

ಪಾಹೋಮ್ ಗುಡ್ಡದ ಕಡೆಗೆ ನೇರವಾಗಿ ಹೊರಟನು. ಆದರೆ ಈಗ ಅವನಿಗೆ ನಡೆಯುವುದು ಕಷ್ಟವಾಯಿತು. ಅವನು ಬಿಸಿಲಿನ ಬೇಗೆಯಿಂದ

ಬಹಳ ಬಳಲಿದ್ದನು ; ಅವನ ಒರಿಯು ಹೆಜ್ಜೆಗಳಲ್ಲಿ ಕತ್ತರಿಸಿ ಗಾಯಗಳಾಗಿದ್ದವು ಕಾಲುಗಳು ಮುಂದಕ್ಕ ಏಳಲಾರದೆ ಹೋದವು. ವಿಶ್ರಮಿಸಿಕೊಳ್ಳಬೇಕೆಂದು ಬಯಸಿದನು. ಆದರೆ ಹೊತ್ತು ಮುಳುಗುವುದರೊಳಗೆ ಹಿಂದಕ್ಕೆ ಹೋಗಬೇಕೆಂದು ಇಷ್ಟವಿದ್ದರೆ ಅದು ಸಾಧ್ಯವಾಗಿರಲಿಲ್ಲ ಸೂರ್ಯನು ಯಾರಿಗೂ ಕಾಯುತ್ತ ಕೂರುವುದಿಲ್ಲ, ಕೆಳಕ್ಕೆ ಕೆಳಕ್ಕೆ ಇಳಿಯುತ್ತಿದ್ದನು.

ಆಗ ಅವನು ' ಅಯ್ಯೋ ದೇವರೇ, ಅತಿಯಾಗಿ ಪ್ರಯತ್ನ ಪಟ್ಟು ತಪ್ಪು ಮಾಡದೆ ಇದ್ದರೆ ಚೆನ್ನಾಗಿದ್ದಿತಲ್ಲಾ ! ಹೊತ್ತು ಮೀರಿಹೋದರೆ ಏನು ಮಾಡಲಿ ?' ಎಂದುಕೊಂಡನು.

ಗುಡ್ಡದ ಕಡೆಗೊಂದು ಸಲ ಸೂರ್ಯನ ಕಡೆಗೊಂದು ಸಲ ನೋಡಿದನು. ಹೋಗಿ ಸೇರಬೇಕಾದ ಸ್ಥಳದಿಂದ ಅವನು ಇನ್ನೂ ಬಹುದೂರದಲ್ಲಿದ್ದನು. ಸೂರ್ಯನಾಗಲೇ ಅಂಚಿನ ಹತ್ತಿರಕ್ಕೆ ಇಳಿದುಬಿಟ್ಟಿದ್ದನು.

ಪಾಹೋಮ್ ಮುಂದು ಮುಂದಕ್ಕೆ ನಡೆದನು, ನಡೆಯುವುದು ಬಹು ಕಷ್ಟವಾಗಿದ್ದಿತು. ಆದರೂ ಅವನು ವೇಗವನ್ನು ಹೆಚ್ಚಿಸುತ್ತಲೇ ಇದ್ದನು ಅವನು ಮುಂದು ಮುಂದೆ ಸುಗ್ಗುತ್ತಲೇ ಇದ್ದನು. ಆದರೂ ಆ ಸ್ಥಳದಿಂದ ಇನ್ನೂ ಬಹಳ ದೂರದಲ್ಲಿಯೇ ಇದ್ದನು ಆಗ ಅವನು ಓಡತೊಡಗಿದನು. ತನ್ನ ಅಂಗಿ, ಬೂಟುಗಳು, ಸೀಸೆ, ಟೋಪಿ-ಇವನ್ನೆಲ್ಲ ತೆಗೆದೆಸೆದು ಗುದ್ದಲಿಯೊಂದನ್ನು ಮಾತ್ರ ಇಟ್ಟುಕೊಂಡು, ಅದನ್ನು ಊರೆಗೋಲಿನಂತೆ ಉಪಯೋಗಿಸುತ್ತಿದ್ದನು.

' ಏನು ಮಾಡಲಿ ? ಮಿತಿಮೀರಿ ಹಿಡಿದುಕೊಂಡು ಎಲ್ಲವನ್ನೂ ಹಾಳು ಮಾಡಿಕೊಂಡೆ. ಹೊತ್ತು ಮುಳುಗುವುದಕ್ಕೆ ಮುಂಚೆ ಅಲ್ಲಿಗೆ ಹೋಗಿ ಸೇರಲಾರೆ ' ಎಂದು ಮತ್ತೆ ಯೋಚಿಸಿಕೊಂಡನು.

ಈ ಹೆದರಿಕೆಯು ಅವನಿಗೆ ಇನ್ನೂ ಉಸಿರಿಲ್ಲದಂತೆ ಮಾಡಿತು. ಪಾಹೋಮ್ ಓಡುತ್ತಲೇ ಇದ್ದನು. ಒದ್ದೆಯಾದ ಷರಟು ಷರಾಯಿಗಳು ಅವನ ಮೈಗೆ ಅಂಟಿಕೊಂಡಿದ್ದವು, ಬಾಯಿ ಒಣಗಿಹೋಗಿದ್ದಿತು. ಅವನ

ಎದೆಯು ಕಮ್ಮಾರನ ತಿದಿಯಂತೆ ಒತ್ತುತ್ತಿದ್ದಿತು, ಹೃದಯವು ಕೊಡತಿಯಂತೆ ಮಿಡಿಯುತ್ತಿದ್ದಿತು, ಕಾಲುಗಳು ಅವನವೇ ಅಲ್ಲವೇನೋ ಎಂಬಂತೆ ಹಿಂದೆಗೆಯುತ್ತಿದ್ದವು ಈ ಆಯಾಸದಿಂದ ಎಲ್ಲಿ ಸತ್ತುಹೋಗುತ್ತೇನೋ ಎಂಬ ಭಯವು ಅವನನ್ನು ಆವರಿಸಿಕೊಂಡಿತು.

ಸಾವಿಗೆ ಹೆದರಿದರೂ ಅವನು ನಿಲ್ಲಲಾರದೆ ಹೋದನು. ' ಅಷ್ಟು ದೂರವನ್ನೆಲ್ಲ ಓಡಿ ಬಂದಬಳಿಕ ಈಗ ನಿಂತುಬಿಟ್ಟರೆ ನನ್ನನ್ನು ಅವರು ಬೆಪ್ಪನೆಂದು ಕರೆಯುತ್ತಾರೆ ' ಎಂದು ಯೋಚಿಸಿದನು. ಹಾಗೆ ಯೋಚಿಸಿ ಮುಂದೆ ಮುಂದೆ ಓಡುತ್ತಲೇ ಇದ್ದನು. ಓಡುತ್ತೋಡುತ್ತ ಗುಡ್ಡದ ಹತ್ತಿರಕ್ಕೆ ಬಂದನು. ತನ್ನನ್ನು ಕಂಡು ಬಷ್ಕೀರರು ಗಟ್ಟಿಯಾಗಿ ಕೂಗುತ್ತಿದ್ದದ್ದು ಕೇಳಿಸಿತು. ಅವರ ಕೂಗು ಇವನ ಹೃದಯಕ್ಕೆ ಮತ್ತಷ್ಟು ಉತ್ತೇಜನ ಕೊಟ್ಟು ಹುರಿದುಂಬಿಸಿತು. ಅವನು ತನ್ನ ಕಟ್ಟಕಡೆಯ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಮುಂದಕ್ಕೆ ಓಡಿದನು.

ಸೂರ್ಯನು ಅಂಚಿನ ಹತ್ತಿರಕ್ಕೆ ಬಂದಿದ್ದನು. ತೆಳ್ಳನೆಯ ಮಂಜು ಮುಸುಕಿದ್ದದ್ದರಿಂದ ಬಹಳ ದೊಡ್ಡದಾಗಿಯೂ ರಕ್ತದಂತೆ ಕೆಂಪಾಗಿಯೂ ಕಾಣುತ್ತಿದ್ದನು. ಈಗ, ಹೌದು ಈಗ, ಇನ್ನೇನು ಮುಳುಗುವುದರಲ್ಲಿದ್ದನು ! ಸೂರ್ಯನೇನೋ ಬಹಳ ಕೆಳಗಿದ್ದನು , ಆದರೆ ಇವನೂ ತನ್ನ ಗುರಿಗೆ ಬಹಳ ಸಮೀಪವಾಗಿ ಬಂದುಬಿಟ್ಟಿದ್ದನು. ಗುಡ್ಡದ ಮೇಲಿದ್ದ ಜನರು ಬೇಗ ಬೇಗ ಬರುವಂತೆ ಸಂಜ್ಞೆಮಾಡಲು ತಮ್ಮ ತೋಳುಗಳನ್ನು ಬೀಸುತ್ತಿದ್ದದ್ದು ಪಾಹೋಮಿಗೆ ಕಾಣಿಸಿತು. ನೆಲದಮೇಲಿದ್ದ ನರಿ ತುಪ್ಪಟದ ಟೋಪಿಯೂ, ಅದರ ಮೇಲಿಟ್ಟಿದ್ದ ತನ್ನ ಹಣವೂ ಅವನಿಗೆ ಕಂಡವು, ತನ್ನ ಪಕ್ಕಗಳನ್ನು ಅದುಮಿಕೊಂಡು ನೆಲದ ಮೇಲೆ ಕುಳಿತುಕೊಂಡಿದ್ದ ಯಜಮಾನನ್ನೂ ಅವನು ನೋಡಿದನು. ಅದನ್ನು ಕಂಡಕೂಡಲೆ ತನಗಾಗಿದ್ದ ಕನಸು ನೆನಪಾಯಿತು.

'ಬೇಕಾದಷ್ಟು ಭೂಮಿಯಿದೆ. ಆದರೆ ಅದನ್ನನುಭವಿಸುವಂತೆ ದೇವರು ನನ್ನನ್ನು ಉಳಿಸುತ್ತಾನೆಯೇ? ನನ್ನ ಜೀವವನ್ನು ಕಳೆದುಕೊಂಡೆ! ನಾನೆಂದಿಗೂ ಆ ಸ್ಥಳಕ್ಕೆ ತಲಪಲಾರೆ!' ಎಂದುಕೊಂಡನು.

ಪಾಹೋಮ್ ಸೂರ್ಯನ ಕಡೆಗೆ ನೋಡಿದನು. ಸೂರ್ಯಮಂಡಲವು ಭೂಮಿಯನ್ನು ಮುಟ್ಟಿದ್ದಿತು. ಅದರ ಒಂದು ಭಾಗವಾಗಲೇ ಮರೆಯಾಗಿದ್ದಿತು. ತನ್ನಲ್ಲಿ ಉಳಿದಿದ್ದ ಶಕ್ತಿಯನ್ನೆಲ್ಲ ಕೂಡಿಸಿಕೊಂಡು ಮೈಯನ್ನು ಮುಂದುಗಡೆಗೆ ಬಗ್ಗಿಸಿ ಓಡುತ್ತ ಮುಂದಕ್ಕೆ ನುಗ್ಗಿದನು. ಓಡುವಾಗ ಅವನು ಬೀಳದಂತೆ ತಪ್ಪಿಸುವುದಕ್ಕೆ ತಕ್ಕಷ್ಟು ವೇಗವಾಗಿ ಅವನ ಕಾಲುಗಳೂ ಹಿಂಬಾಲಿಸಲಾರದೆ ಹೋದವು. ಅವನು ಗುಡ್ಡವನ್ನು ತಲಪಿದ ಕೂಡಲೆ ತಟ್ಟನೆ ಕತ್ತಲಾಯಿತು. ಅವನು ಕತ್ತೆತ್ತಿ ನೋಡಿದನು—ಸೂರ್ಯನಾಗಲೇ ಮುಳುಗಿದ್ದನು! ನೋಡಿ ಅವನು ನಿರಾಶೆಯಿಂದ ಕೂಗಿಕೊಂಡನು. 'ನನ್ನ ಶ್ರಮವೆಲ್ಲ ವ್ಯರ್ಥವಾಯಿತು!' ಎಂದು ಯೋಚಿಸಿ ಅಲ್ಲೇ ನಿಲ್ಲುವುದರಲ್ಲಿದ್ದನು. ಅಷ್ಟರಲ್ಲಿ ಬಷ್ಕೀರರು ಇನ್ನೂ ಕೂಗುತ್ತಲೇ ಇರುವುದು ಕೇಳಿಸಿತು. ಆಗ ಕೆಳಗಡೆ ಇರುವ ತನಗೆ ಸೂರ್ಯನು ಮುಳುಗಿದಂತೆ ಕಂಡರೂ ಗುಡ್ಡದಮೇಲೆ ಇರುವವರಿಗೆ ಇನ್ನೂ ಕಾಣುತ್ತಲೇ ಇರುವನೆಂಬುದನ್ನು ಜ್ಞಾಪಿಸಿಕೊಂಡನು. ಒಂದುಸಲ ದೊಡ್ಡದಾಗಿ ಉಸಿರೆಳೆದುಕೊಂಡು ಗುಡ್ಡದ ಮೇಲಕ್ಕೆ ಓಡಿದನು. ಅಲ್ಲಿನ್ನೂ ಬೆಳಕಾಗಿಯೇ ಇದ್ದಿತು. ಅವನು ತುದಿಗೆ ತಲಪಿ ಟೋಪಿಯನ್ನು ನೋಡಿದನು. ಅದರ ಮುಂದೆ ಯಜಮಾನನು ತನ್ನ ಪಕ್ಕಗಳನ್ನು ಅದುಮಿಕೊಂಡು ನಗುತ್ತ ಕುಳಿತಿದ್ದನು. ಪಾಹೋಮನಿಗೆ ಮತ್ತೆ ಕನಸು ನೆನಪಾಗಿ ಕಿರಚಿಕೊಂಡನು; ಕಾಲಿನ ಶಕ್ತಿ ಹಾಗೇ ಉಡುಗಿ ಹೋಯಿತು; ಮುಂದಕ್ಕೆ ಬಿದ್ದು ಕೈಗಳಲ್ಲಿ ಟೋಪಿಯನ್ನು ಮುಟ್ಟಿದನು.

ಆ ಯಜಮಾನನು 'ಆ! ಎಂಥ ಒಳ್ಳೆಯ ಅದೃಷ್ಟಶಾಲಿ! ಬಹಳ ಭೂಮಿಯನ್ನು ಸಂಪಾದಿಸಿಬಿಟ್ಟ!' ಎಂದನು.

ಪಾಹೋಮನ ಆಳು ಓಡುತ್ತ ಬಂದು ಅವನನ್ನು ಮೇಲಕ್ಕೆ ಎಬ್ಬಿಸಲು ಪ್ರಯತ್ನಮಾಡಿದನು. ಅವನ ಬಾಯಿಂದ ರಕ್ತ ಹರಿಯುತ್ತಿದ್ದದ್ದು ಕಂಡುಬಂದಿತು. ಪಾಹೋಮ್ ಸತ್ತಿದ್ದನು !

ಬಷ್ಕೀರರು ನಾಲಿಗೆಯನ್ನು ತಮ್ಮ ಅಂಗಳಿಗೆ ಒತ್ತಿ ತಮ್ಮ ವ್ಯಸನವನ್ನು ಸೂಚಿಸಿದರು.

ಆಳು ಗುದ್ದಲಿಯನ್ನು ತೆಗೆದುಕೊಂಡು ಪಾಹೋಮನನ್ನು ಮಲಗಿಸಲು ಸಾಕಾದಷ್ಟು ಉದ್ದವಾಗಿ ಒಂದು ಸಮಾಧಿಯನ್ನು ತೋಡಿ ಅದರಲ್ಲಿ ಅವನನ್ನು ಹೂಳಿದನು. ನೆತ್ತಿಯಿಂದ ಅಂಗುಷ್ಠದವರೆಗೆ ಅವನಿಗೆ ಬೇಕಾಗಿದ್ದದ್ದೆಲ್ಲ ಆರೇ ಅಡಿಗಳು.

---

# ಕೆಟ್ಟದು ನೆಳೆಯುತ್ತದೆ; ಒಳ್ಳೆಯದು ಉಳಿಯುತ್ತದೆ



ಹಿಂದಿನ ಕಾಲದಲ್ಲಿ ದಯಾಶಾಲಿಯಾದ ಒಬ್ಬ ಒಳ್ಳೆಯ ಮನುಷ್ಯ ನಿದ್ದನು. ಈ ಪ್ರಪಂಚದ ಸುಖಗಳೆಲ್ಲ ಅವನಿಗೆ ಸಮೃದ್ಧಿಯಾಗಿದ್ದಿತು. ಅನೇಕ ಜನ ಗುಲಾಮರು ಅವನನ್ನು ಸೇವಿಸುತ್ತಿದ್ದರು. ಆ ಗುಲಾಮ ರೆಲ್ಲರೂ ತಮಗೆ ಅಂಥ ಒಳ್ಳೆಯ ದಣಿಯಿರುವನೆಂದು ಹೊಗಳಿಕೊಳ್ಳು ತ್ತಿದ್ದರು. ಅವರು,

' ಪ್ರಪಂಚದಲ್ಲಿ ಎಲ್ಲಿಯೂ ನಮ್ಮ ದಣಿಗಿಂತ ಒಳ್ಳೆಯ ದಣಿಯಿಲ್ಲ. ಅವನು ನಮಗೆ ಚೆನ್ನಾಗಿ ಹೊಟ್ಟೆಗೆ ಕೊಡುತ್ತಾನೆ, ನಮ್ಮ ಕೈಯಲ್ಲಾಗು ವಷ್ಟು ಕೆಲಸ ಮಾಡಿಸುತ್ತಾನೆ. ಅವನಿಗೆ ಹೊಟ್ಟೆಯ ಕಿಚ್ಚಿಲ್ಲ, ಯಾರೊ ಬ್ಬರಿಗೂ ಅವನು ಕೆಟ್ಟ ಮಾತನ್ನು ಆಡುವುದೇ ಇಲ್ಲ. ತಮ್ಮ ಗುಲಾಮ ರನ್ನು ನ್ಯಾಯವೋ ಅನ್ಯಾಯವೋ ನೋಡದೆ ಶಿಕ್ಷಿಸುತ್ತಲೂ, ಒಂದಾ ದರೂ ಒಳ್ಳೆಯ ಮಾತನ್ನೇ ಆಡದೆಯೂ ದಿನಗಳಿಗೂ ಕಡೆಯಾಗಿ ನಡೆಸಿ ಕೊಳ್ಳುವ ಬೇರೆಯ ದಣಿಗಳ ಹಾಗಿಲ್ಲ, ನಮ್ಮ ದಣಿ ಅವನು ನಮಗೆ ಒಳ್ಳೆ ಯದು ಬಯಸುತ್ತಾನೆ, ನಮಗೆ ಒಳ್ಳೆಯದನ್ನೇ ಮಾಡುತ್ತಾನೆ. ದಯೆಯಿಂದ ಮಾತನಾಡುತ್ತಾನೆ. ಇದಕ್ಕಿಂತ ಮೇಲಾದ ಬಾಳನ್ನು ನಾವು ಆಸೆಮಾಡು ವುದೇ ಇಲ್ಲ ' ಎನ್ನುತ್ತಿದ್ದರು.

ಹೀಗೆ ಗುಲಾಮರು ತಮ್ಮ ದಣಿಯನ್ನು ಹೊಗಳುತ್ತಿದ್ದರು. ಪಿಶಾಚಿಗೆ ಇದನ್ನು ಕಂಡು, ಗುಲಾಮರು ತಮ್ಮ ದಣಿಗಳೊಡನೆ ಅಷ್ಟು ವಿಶ್ವಾಸದಿಂದ ಹೊಂದಿಕೊಂಡಿರುವರಲ್ಲಾ ಎಂದು ಬಹಳ ಸಂಕಟವಾಯಿತು. ಆದ್ದರಿಂದ ಅವರಲ್ಲಿ ಅಲೆಬ್ ಎಂಬವನೊಬ್ಬನನ್ನು ತನ್ನ ವಶಪಡಿಸಿಕೊಂಡು ಉಳಿದ

ಗುಲಾಮರನ್ನು ಮರುಳುಮಾಡುವಂತೆ ಅವನಿಗೆ ಅಪ್ಪಣೆ ಮಾಡಿತು. ಒಂದು ದಿನ ಅವರೆಲ್ಲ ಒಟ್ಟಿಗೆ ಕುಳಿತು ವಿಶ್ರಮಿಸಿಕೊಳ್ಳುತ್ತ ತಮ್ಮ ದಣಿಯ ಒಳ್ಳೆಯತನದ ವಿಚಾರವಾಗಿ ಮಾತಾಡಿಕೊಳ್ಳುತ್ತಿದ್ದಾಗ ಆಲೆಬನು ತಾನು ದನಿಯೆತ್ತಿ,

'ನಮ್ಮ ದಣಿ ಬಹಳ ಒಳ್ಳೆಯವನೆಂದು ಅಷ್ಟು ಮಟ್ಟಿಗೆ ಹೊಗಳಿಕೊಳ್ಳುವುದು ದಡ್ಡ ಕೆಲಸ. ಬಯಸಿದ್ದನ್ನೆಲ್ಲ ನೀವು ಮಾಡುತ್ತಿದ್ದರೆ ಆ ಪಿಶಾಚಿ ಕೂಡ ನಮ್ಮಲ್ಲಿ ದಯವುಳ್ಳದ್ದಾಗಿಯೇ ಇರುತ್ತದೆ. ನಾವು ಚೆನ್ನಾಗಿ ಊಳಿಗ ಮಾಡುತ್ತ ಪ್ರತಿಯೊಂದು ಕೆಲಸದಲ್ಲಿಯೂ ಅವನಿಗೆ ಹಿತವಾಗುವಂತೆ ನಡೆದುಕೊಳ್ಳುತ್ತೇವೆ. ಅವನು ಏನನ್ನಾದರೂ ಯೋಚಿಸಿಕೊಂಡರೆ, ಅವನ ಇಷ್ಟಗಳನ್ನೆಲ್ಲ ಮೊದಲೇ ಊಹಿಸಿಕೊಂಡು ಆ ಕೂಡಲೇ ಅದನ್ನು ಮಾಡುತ್ತೇವೆ. ನಮ್ಮಲ್ಲಿ ದಯವುಳ್ಳವನಾಗಿರದೆ ಇನ್ನೇನು ಮಾಡಿಯಾನು? ಅವನನ್ನು ಒಲಿಸುವುದಕ್ಕೆ ಬದಲಾಗಿ ಅವನಿಗೆ ನಾವು ಏನಾದರೂ ಕೇಡುಮಾಡಿದರೆ ಹೇಗಾಗುತ್ತದೆಯೋ ಒಂದು ಸಲ ಪ್ರಯತ್ನ ಮಾಡಿ ನೋಡಿ. ಉಳಿದವರಂತೆಯೇ ಅವನೂ ಮಾಡುತ್ತಾನೆ, ತೀರ ಕೆಟ್ಟ ದಣಿಯ ಹಾಗೆಯೇ ಕೆಟ್ಟದ್ದಕ್ಕೆ ಪ್ರತಿಯಾಗಿ ಕೆಟ್ಟದ್ದನ್ನೇ ಮಾಡುತ್ತಾನೆ' ಎಂದನು.

ಉಳಿದ ಗುಲಾಮರು ಆಲೆಬ್ ಹೇಳಿದ್ದನ್ನು ಅಲ್ಲವೆನ್ನುವುದಕ್ಕೆ ಮೊದಲುಮಾಡಿದರು, ಕಡೆಗೆ ಅವನೊಡನೆ ಪಂತಕ್ಕೆ ನಿಂತರು. ತಮ್ಮ ದಣಿಯನ್ನು ಸಿಟ್ಟಿಗೆಬ್ಬಿಸುವುದಾಗಿ ಆಲೆಬ್ ಪಂತಕಟ್ಟಿದನು. ಸೋತರೆ ಅವನು ತನ್ನ ರಜಾದಿನದ ಬಟ್ಟೆಯನ್ನು ಕಳೆದುಕೊಳ್ಳಬೇಕು, ಗೆದ್ದರೆ ಉಳಿದ ಗುಲಾಮರು ತಮ್ಮದನ್ನು ಅವನಿಗೆ ಕೊಡಬೇಕು. ಇದರ ಜೊತೆಗೆ ಅವನಿಗೆ ಸಂಕೋಲೆ ತೊಡಿಸಿದರಾಗಲಿ ಸೆರೆಗೆ ಹಾಕಿದರಾಗಲಿ ತಾವೆಲ್ಲರೂ ಅವನ ಪರವಾಗಿ ದಣಿಯ ಹತ್ತಿರ ವಾದಿಸಿ ಬಿಡುಗಡೆಮಾಡಿಸುವುದಾಗಿ ಮಾತು ಕೊಟ್ಟರು. ಈ ರೀತಿ ಪಂತಮಾಡಿಕೊಂಡು ಮರುದಿನ ಬೆಳಿಗ್ಗೆ ದಣಿಯನ್ನು ಸಿಟ್ಟಿಗೆಬ್ಬಿಸುವುದಾಗಿ ಆಲೆಬನು ಒಪ್ಪಿಕೊಂಡನು.

ಆಲೆಬ್ ಕುರಿಗಳನ್ನು ಕಾಯುತ್ತಿದ್ದನು, ಅವನ ಕೈಕೆಳಗೆ ಬಹು ಬೆಲೆಯ ಶುದ್ಧ ತಳಿಯ ಅನೇಕ ಕುರಿಗಳಿದ್ದವು, ದಣಿಗೆ ಅವುಗಳಲ್ಲಿ ತುಂಬ ಅಭಿಮಾನವಿದ್ದಿತು. ಮರುದಿನ ಬೆಳಿಗ್ಗೆ ದಣಿಯು ತನ್ನ ಬೆಲೆಯುಳ್ಳ ಕುರಿಗಳನ್ನು ತೋರಿಸುವುದಕ್ಕಾಗಿ ದೊಡ್ಡಿಗೆ ಕೆಲವರು ಆಗಂತುಕರನ್ನು ಕರೆದುಕೊಂಡು ಬಂದಾಗ, ಆಲೆಬ್, 'ಈಗ ನೋಡಿ, ಅವನನ್ನು ಎಷ್ಟುಮಟ್ಟಿಗೆ ರೇಗಿಸುತ್ತೇನೋ ನೋಡಿ' ಎಂದು ಹೇಳುವಂತೆ ತನ್ನ ಸಂಗಾತಿಗಳ ಕಡೆಗೆ ಕಣ್ಣು ಮಿಟಕಿಸಿದನು.

ಉಳಿದ ಗುಲಾಮರೆಲ್ಲ ಒಂದು ಕಡೆ ಸೇರಿಕೊಂಡು ಬಾಗಿಲಿನಿಂದಲೋ ಬೇಲಿಯ ಮೇಲಿನಿಂದಲೋ ಒಳಗಡೆಗೆ ನೋಡುತ್ತ ನಿಂತರು; ಪಿಶಾಚಿ ತನ್ನ ಸೇವಕನು ಹೇಗೆ ತನ್ನ ಕಲಸವನ್ನು ಸಾಧಿಸುತ್ತಾನೋ ನೋಡಬೇಕೆಂದು ಸಮೀಪದಲ್ಲಿದ್ದ ಒಂದು ಮರವನ್ನು ಹತ್ತಿತು. ದಣಿ ಬಂದವರಿಗೆ ಕುರಿಗಳನ್ನೂ ಮರಿಗಳನ್ನೂ ತೋರಿಸುತ್ತ ದೊಡ್ಡಿಯಲ್ಲಿ ಅಲ್ಲಲ್ಲೇ ಸುತ್ತಾಡುತ್ತಿದ್ದು, ತನ್ನ ಹತ್ತಿರ ಇದ್ದ ಎಲ್ಲಕ್ಕಿಂತಲೂ ಸೊಗಸಾದ ಟಗರೊಂದನ್ನು ಅವರಿಗೆ ತೋರಿಸಬೇಕೆಂದು ಇಷ್ಟಪಟ್ಟನು.

'ಎಲ್ಲ ಟಗರುಗಳೂ ಬೆಲೆಯುಳ್ಳವೇ ಸರಿ ಆದರೆ ಕೊಂಬುಗಳು ಚೆನ್ನಾಗಿ ಸುರುಳಿ ಸುತ್ತಿಕೊಂಡಿರುವ ಒಂದು ಟಗರಿದೆ, ಅದಕ್ಕೆ ಇಷ್ಟೆಂದು ಬೆಲೆ ಕಟ್ಟುವುದಕ್ಕೇ ಆಗುವುದಿಲ್ಲ. ಅದನ್ನು ನನ್ನ ಕಣ್ಣಿನ ಬೊಂಬೆಯೆಂದು ತಿಳಿದುಕೊಂಡಿದ್ದೇನೆ'

ಹೊಸಬರು ಬಂದದ್ದರಿಂದ ಗಾಬರಿಯಾಗಿ ಕುರಿಗಳು ದೊಡ್ಡಿಯಲ್ಲಿ ಸುತ್ತಾಡತೊಡಗಿದವು. ಅದರಿಂದ ಅವರು ಟಗರನ್ನು ಸರಿಯಾಗಿ ನೋಡುವುದಕ್ಕೆ ಸಾಧ್ಯವಾಗಲಿಲ್ಲ. ಅದು ಸ್ಥಿರವಾಗಿ ಒಂದು ಕಡೆ ನಿಂತ ಕೂಡಲೆ ಅಕಸ್ಮಾತ್ತಾಗಿ ಆಯಿತೆಂದು ಕಾಣುವ ಹಾಗೆ ಆಲೆಬನು ಕುರಿಗಳನ್ನೆಲ್ಲ ಚದರಿಸಿದನು; ಮತ್ತೆ ಅವು ಒಂದರೊಡನೊಂದು ಬೆರೆತು ಹೋದವು.

ಬಹು ಬೆಲೆಯುಳ್ಳ ಆ ಟಗರು ಯಾವುದೆಂದು ಬಂದವರಿಗೆ ಗೊತ್ತಾಗಲಿಲ್ಲ. ಕಡೆಗೆ ದಣಿಗೆ ಬೇಸರವಾಯಿತು.

'ಅಣ್ಣಾ, ಆಲೆಬ್, ಆ ನಮ್ಮ ಉತ್ತಮವಾದ ಟಗರನ್ನು ಸ್ವಲ್ಪ ಹಿಡಿದುಕೊಳ್ಳಪ್ಪಾ—ಬಿಗಿಯಾಗಿ ಸುತ್ತಿಕೊಂಡಿರುವ ಕೊಂಬುಗಳಿರುವ ಆ ಟಗರು. ಜೋಕೆಯಾಗಿ ಅದನ್ನು ಹಿಡಿದುಕೊಂಡು ಒಂದು ನಿಮಿಷ ನಿಲ್ಲಿಸಿಕೊಂಡಿರು' ಎಂದನು.

ಹೀಗೆಂದು ದಣಿ ಹೇಳಿದ್ದೇ ತಡ ಆಲೆಬನು ಕುರಿಗಳ ನಡುವೆ ಸಿಂಹ ದಂತೆ ನುಗ್ಗಿಬಂದು ಬಹು ಬೆಲೆಯುಳ್ಳ ಆ ಟಗರನ್ನು ಭದ್ರವಾಗಿ ಅದುಮಿ ಹಿಡಿದುಕೊಂಡನು. ತುಪಟವನ್ನು ಹಿಡಿದು ಅಲುಗದಂತೆ ನಿಲ್ಲಿಸಿಕೊಂಡು ಒಂದು ಕೈಯಲ್ಲಿ ಅದರ ಎಡಗಡೆಯ ಹಿಂಗಾಲನ್ನು ಹಿಡಿದು, ದಣಿಯ ಕಣ್ಣೆದುರಿಗೇ ಅದನ್ನು ಮೇಲಕ್ಕೆ ಎತ್ತಿ, ಒಂದು ಒಣಕಡ್ಡಿಯಂತೆ ಮುರಿದು ಹೋಗುವ ಹಾಗೆ ಅದನ್ನು ತಟಕ್ಕನೆ ತಿರುಗಿಸಿಬಿಟ್ಟನು. ಟಗರಿನ ಕಾಲು ಮುರಿದುಹೋಯಿತು, ಅದು ಅರಚುತ್ತ ಮುಂಡಿಯ ಮೇಲೆ ಬಿದ್ದುಕೊಂಡಿತು. ಆಮೇಲೆ ಆಲೆಬನು ಬಲಗಡೆಯ ಹಿಂಗಾಲನ್ನು ಹಿಡಿದುಕೊಂಡನು, ಎಡಗಡೆಯದು ದುಂಡಗೆ ತಿರಚಿಕೊಂಡು ಜೋತಾಡುತ್ತಿದ್ದಿತು, ಆಗಂತು ಕರೂ ಗುಲಾಮರೂ ನೊಂದು ಅಯ್ಯೋ ಎಂದರು, ಮರದಮೇಲೆ ಕುಳಿತಿದ್ದ ಪಿಶಾಚಿ ಆಲೆಬನು ತನ್ನ ಕಲಸವನ್ನು ಅಷ್ಟು ಚಾತುರ್ಯದಿಂದ ಮಾಡಿದ್ದಕ್ಕೆ ಬಹಳ ಆನಂದಗೊಂಡಿತು. ದಣಿಯ ಮುಖ ಕಾರ್ಮೋಡದಂತೆ ಕಪ್ಪಾ ಯಿತು, ಹುಬ್ಬು ಗಂಟಿಕ್ಕಿದನು, ತಲೆ ತಗ್ಗಿಸಿದನು, ಒಂದು ಮಾತನ್ನೂ ಆಡಲಿಲ್ಲ. ಆಗಂತುಕರೂ ಗುಲಾಮರೂ ಮುಂದೇನಾಗುವುದೋ ಎಂದು ಕಾದುಕೊಂಡು ಸದ್ದುಮಾಡದೆ ಸುಮ್ಮನೆ ನಿಂತಿದ್ದರು. ದಣಿ ಸ್ವಲ್ಪ ಹೊತ್ತು ಸುಮ್ಮನಿದ್ದು, ಏನೋ ಒಂದು ಭಾರವನ್ನು ತೆಗೆದೆಸೆಯುತ್ತಿರುವವನಂತೆ ತನ್ನ ಮೈ ಕೊಡವಿಕೊಂಡನು. ತಕ್ಷಣ ಅವನ ಮುಖದ ಮೇಲಿನ ಸುಕ್ಕು ಗಳು ಮಾಯವಾದವು; ಅವನು ನಗುನಗುತ್ತ ಆಲೆಬನ ಕಡೆಗೆ ನೋಡಿ ದನು. ನೋಡಿ ಹೀಗೆ ಹೇಳಿದನು.

'ಓ, ಆಲೆಬ್, ಆಲೆಬ್! ನನ್ನನ್ನು ಕೋಪಗೊಳಿಸುವಂತೆ ನಿನ್ನ ದಣಿ ನಿನಗೆ ಅಪ್ಪಣೆ ಮಾಡಿದನು; ಆದರೆ ನನ್ನ ದಣಿ ನಿನ್ನ ದಣಿಗಿಂತ ಸಮರ್ಥನು. ನಿನ್ನ ಮೇಲೆ ನಾನು ಕೋಪಗೊಂಡಿಲ್ಲ; ಆದರೆ ನಿನ್ನ ದಣಿಗೇ ಸಿಟ್ಟುಬರುವಂತೆ ಮಾಡುತ್ತೇನೆ. ನಾನು ನಿನಗೆ ಶಿಕ್ಷೆ ಮಾಡುವೆನೆಂದು ಹೆದರಿದ್ದೀಯ. ಅಲ್ಲದೆ ಸ್ವಾತಂತ್ರ್ಯವನ್ನು ಪಡೆಯಬೇಕೆಂದು ವೊಲಿನಿಂದ ಆಸೆಪಡುತ್ತಲೇ ಇದ್ದೀಯ. ಆಲೆಬ್, ಇಲ್ಲಿ ಕೇಳು, ನಾನು ನಿನ್ನನ್ನು ಶಿಕ್ಷಿಸುವುದಿಲ್ಲ; ಆದರೆ ಬಿಡುಗಡೆಬೇಕೆಂದು ನೀನು ಬಯಸುತ್ತಿರುವುದರಿಂದ, ಇಲ್ಲಿ ಈ ಆಗಂತುಕರೆದುರಿಗೆ ನಿನ್ನನ್ನು ಬಿಡುಗಡೆ ಮಾಡಿದ್ದೇನೆ ನಿನಗೆ ಇಷ್ಟಬಂದ ಕಡೆಗೆ ನೀನು ಹೋಗಬಹುದು, ನಿನ್ನ ಹಬ್ಬದ ಉಡುಗೆಯನ್ನು ಜೊತೆಯಲ್ಲಿಯೇ ತೆಗೆದುಕೊಂಡು ಹೋಗಬಹುದು!'

ಹೀಗೆ ಹೇಳಿ ದಯಾಶಾಲಿಯಾದ ಆ ದಣಿಯು ಒಂದವರೊಡನೆ ಮನೆಗೆ ಹಿಂದಿರುಗಿದನು, ಆದರೆ ಪಿಶಾಚಿ ಹಲ್ಲು ಕಡಿಯುತ್ತ, ಮರದ ಮೇಲಿನಿಂದ ಕೆಳಕ್ಕೆ ಬಿದ್ದು ನೆಲದೊಳಗೆ ಮುಳುಗಿ ಹೋಯಿತು.

# ಚಿಕ್ಕ ಹುಡುಗಿಯರು ದೊಡ್ಡವರಿಗಿಂತ ವಿವೇಕಿಗಳು

---

ಈಸ್ಟರ್ ಪ್ರಾರಂಭಕಾಲ. ಸ್ಲೆಡ್ಜ್ ಪ್ರಯಾಣ ಆಗ ತಾನೇ ಮುಗಿದಿದ್ದಿತು, ಮಂಜು ಇನ್ನೂ ಅಂಗಳದಲ್ಲಿ ಬಿದ್ದೇ ಇದ್ದಿತು, ನೀರು ಹಳ್ಳಿಯ ಬೀದಿಯುದ್ದಕ್ಕೂ ಹಳ್ಳವಾಗಿ ಹರಿಯುತ್ತಿದ್ದಿತು

ಇಬ್ಬರು ಚಿಕ್ಕ ಹುಡುಗಿಯರು ಬೇರೆ ಬೇರೆಯ ಮನೆಗಳಿಂದ ಎರಡು ಮನೆಗಳ ನಡುವಣ ಒಂದು ಓಣಿಯಲ್ಲಿ ಸಂಧಿಸಿದರು. ಅಲ್ಲಿ ಮನೆಯ ಅಂಗಳಗಳಿಂದ ಹರಿದು ಬಂದ ಕೊಚ್ಚೆಯ ನೀರು ನಿಂತು ಒಂದು ದೊಡ್ಡ ಗುಂಡಿಯಾಗಿದ್ದಿತು. ಒಬ್ಬ ಹುಡುಗಿ ಬಹಳ ಚಿಕ್ಕವಳು, ಮತ್ತೊಬ್ಬಳು ಸ್ವಲ್ಪ ದೊಡ್ಡವಳು. ಅವರ ತಾಯಿಯರು ಅವರಿಬ್ಬರಿಗೂ ಹೊಸ ಫ್ರಾಕುಗಳನ್ನು ತೊಡಿಸಿದ್ದರು. ಚಿಕ್ಕ ಹುಡುಗಿ ನೀಲಿಯದನ್ನು ತೊಟ್ಟಿದ್ದಳು, ಇನ್ನೊಬ್ಬಳು ಹಳದಿಯ ಚೀಟಿಯುದನ್ನು ತೊಟ್ಟಿದ್ದಳು, ಇಬ್ಬರ ತಲೆಯ ಮೇಲೂ ಕೆಂಪು ಕೈವಸ್ತ್ರಗಳನ್ನು ಕಟ್ಟಿದ್ದರು. ಅವರಿಬ್ಬರೂ, ಆಗತಾನೇ ಚರ್ಚಿನಿಂದ ಬರುತ್ತಿದ್ದರು. ಒಬ್ಬರನ್ನೊಬ್ಬರು ಸಂಧಿಸಿದಾಗ, ಮೊದಲು ಪ್ರತಿಯೊಬ್ಬ ಹುಡುಗಿಯೂ ತನ್ನ ಸೊಗಸಿನ ಉಡುಪನ್ನು ಮತ್ತೊಬ್ಬಳಿಗೆ ತೋರಿಸಿದಳು, ತೋರಿಸಿದ ಮೇಲೆ ಅವರು ಆಡುವುದಕ್ಕೆ ಪ್ರಾರಂಭಿಸಿದರು. ಕೂಡಲೇ ಅವರಿಬ್ಬರಿಗೂ ನೀರಿನಲ್ಲಿ ಆಡ್ಬೇಕೆಂದು ಮನಸ್ಸಾಯಿತು, ಚಿಕ್ಕವಳು, ಮೋಜು ಮುಂತಾದವುಗಳ ಸಮೇತವಾಗಿಯೇ ಕೊಚ್ಚೆಯ ಗುಂಡಿಗೆ ಇನ್ನೇನು ಇಳಿಯಬೇಕು, ಅಷ್ಟರಲ್ಲಿ ದೊಡ್ಡವಳು ಅವಳನ್ನು ತಡೆದಳು.

'ಹಾಗೆ ಒಳಕ್ಕೆ ಹೋಗಬೇಡ, ಮಲಾಷ, ನಿಮ್ಮಮ್ಮ ನಿನ್ನ ಬಯ್ಯುತ್ತಾಳೆ. ನಾನು ನನ್ನ ಮೋಜುಗಳನ್ನೂ ಕಾಲುಚೀಲಗಳನ್ನೂ ತೆಗೆದುಬಿಡುತ್ತೇನೆ, ನಿನ್ನದನ್ನು ನೀನೂ ತೆಗೆದುಬಿಡು.'

ಅವರು ಹಾಗೆ ಮಾಡಿದರು : ಆಮೇಲೆ ಫ್ರಾಕಿನ ಅಂಚನ್ನು ಮೇಲಕ್ಕೆ ಎತ್ತಿಕೊಂಡು ಕೊಚ್ಚೆಯ ಗುಂಡಿಯಲ್ಲಿಳಿದು ಒಬ್ಬರ ಕಡೆ ಗೊಬ್ಬರು ನಡೆಯುವುದಕ್ಕೆ ಪ್ರಾರಂಭಿಸಿದರು. ನೀರು ಮಲಾಷಳ ಹರಡಿನ ವರೆಗೂ ಬಂದಿತು ; ಅವಳು,

'ಅಕೂಲ್ಯ, ಇದು ಆಳವಾಗಿರುವಂತೆ ಕಾಣುತ್ತದೆಯಮ್ಮ' ಎಂದಳು.

'ಬಾ, ಬಾ, ಹೆದರಬೇಡ. ಇನ್ನೇನು ಹೆಚ್ಚು ಆಳವಿಲ್ಲ' ಎಂದು ಇನ್ನೊಬ್ಬಳು ಉತ್ತರ ಕೊಟ್ಟಳು.

ಇಬ್ಬರೂ ಹತ್ತಿರ ಹತ್ತಿರಕ್ಕೆ ಬಂದಾಗ ಅಕೂಲ್ಯ, 'ಜೋಕೆ, ಮಲಾಷ, ಚಿಮ್ಮಬೇಡ, ಎಚ್ಚರವಾಗಿ ನಡಿ ?' ಎಂದಳು.

ಅವಳು ಹಾಗೆ ಹೇಳುವಷ್ಟರಲ್ಲಿಯೇ ಮಲಾಷ ತನ್ನ ಹೆಜ್ಜೆಯನ್ನು ಗಟ್ಟಿಯಾಗಿ ಕುಟ್ಟಿಬಿಟ್ಟಳು. ನೀರು ಅಕೂಲ್ಯಳ ಫ್ರಾಕಿನ ಮೇಲಕ್ಕೆ ಸರಿಯಾಗಿ ಸಿಡಿಯಿತು. ಫ್ರಾಕು ನೆನೆಯಿತು, ಅಕೂಲ್ಯಳ ಕಣ್ಣು ಮೂಗಿಗೆ ಕೂಡ ಹಾಗೆಯೇ ಆಯಿತು. ತನ್ನ ಫ್ರಾಕಿನ ಮೇಲೆ ಆದ ಕರೆಯನ್ನು ಕಂಡು ಅವಳಿಗೆ ಕೋಪ ಬಂದಿತು ; ಮಲಾಷನನ್ನು ಹೊಡೆಯುವುದಕ್ಕೆ ಅವಳನ್ನು ಹಿಂಬಾಲಿಸಿ ಓಡಿದಳು. ಮಲಾಷಳಿಗೆ ದಿಗಿಲಾಯಿತು, ತಾನು ತೊಂದರೆಗೆ ಸಿಕ್ಕಿಬಿದ್ದದ್ದನ್ನು ತಿಳಿದುಕೊಂಡು ಹಾಗೂ ಹೀಗೂ ಒದ್ದಾಡಿ ಕೊಚ್ಚೆ ಗುಂಡಿಯ ಹೊರಕ್ಕೆ ಹೋಗಿ ಮನೆಗೆ ಓಡುವುದಕ್ಕೆ ಸಿದ್ಧವಾಗಿ ನಿಂತಳು. ಆಗತಾನೆ ಅಕೂಲ್ಯಳ ತಾಯಿ ಅಲ್ಲಿ ಬಂದಳು ; ತನ್ನ ಮಗಳ ಫ್ರಾಕಿನ ಅಂಚು ನೆನೆದಿರುವುದನ್ನೂ ಅದರ ತೋಳುಗಳು ಕೊಳೆಯಾಗಿರುವುದನ್ನೂ ಕಂಡಳು. ಕಂಡು,

'ಎಲಾ ತುಂಟಿ, ಕೊಳಕು ಹುಡುಗಿ, ಏನುಮಾಡುತ್ತಿದ್ದೀಯೇ, ಅಲ್ಲಿ ?' ಎಂದಳು.

'ಮಲಾಷ ಬೇಕೆಂದು ಹಾಗೆ ಮಾಡಿದಳು' ಎಂದಳು ಆ ಹುಡುಗಿ.

ಇದನ್ನು ಕೇಳಿ ಅಕೂಲ್ಯಳ ತಾಯಿ ಮಲಾಷಳನ್ನು ಭದ್ರವಾಗಿ ಹಿಡಿದುಕೊಂಡು ಅವಳ ಕುತ್ತಿಗೆಯ ಹಿಂಭಾಗದಮೇಲೆ ಹೊಡೆದಳು. ಮಲಾಷ ಬೀದಿಯೆಲ್ಲ ಕೇಳುವಂತೆ ಕಿರಿಚಲು ಪ್ರಾರಂಭಿಸಿದಳು. ಅವರಮ್ಮ ಹೊರಕ್ಕೆ ಬಂದಳು.

'ನನ್ನ ಹುಡುಗಿಯನ್ನು ಅದೇಕೆ ಹೊಡೆಯುತ್ತಿದ್ದೀಯೆ?' ಎಂದು ತನ್ನ ನೆರೆಯವಳನ್ನು ಬಯ್ಯ ತೊಡಗಿದಳು ಮಾತಿಗೆ ಮಾತು ಬೆಳೆಯಿತು; ಸಿಟ್ಟು ಹತ್ತಿ ಜಗಳವಾಡಿದರು ಗಂಡಸರು ಹೊರಕ್ಕ ಬಂದರು, ಬೀದಿಯಲ್ಲಿ ಒಂದು ಗುಂಪು ಸೇರಿತು, ಪ್ರತಿಯೊಬ್ಬರೂ ಕೂಗಾಡುವವರೇ, ಕೇಳುವವ ರೊಬ್ಬರೂ ಇಲ್ಲ. ಅವರೆಲ್ಲರೂ ಹಾಗೆಯೇ ಜಗಳ ಕಾದುತ್ತಲೇ ಇದ್ದರು, ಒಬ್ಬನು ಒಬ್ಬನನ್ನು ನೂಕಿದನು, ಏಟಿಗೆ ಮೊದಲಾಗುವುದರಲ್ಲಿದ್ದಿತು. ಅಷ್ಟ ರಲ್ಲಿ ಅಕೂಲ್ಯಳ ಅಜ್ಜಿ, ಮುದುಕಿ, ಅವರ ಬಳಿಗೆ ಬಂದು ಸಮಾಧಾನಮಾಡು ವುದಕ್ಕೆ ಪ್ರಯತ್ನಪಟ್ಟಳು.

'ಅಣ್ಣಾಗಳಿರಾ, ಇದೇನು ಯೋಚಿಸುತ್ತಿದೀರಿ? ಹೀಗೆ ನಡೆಯು ವುದು ಸರಿಯೆ? ಅದರಲ್ಲಿಯೂ ಇವತ್ತಿನಂಥ ದಿವಸದಲ್ಲಿ? ಇದು ಸಂತೋಷ ವಾಗಿರಬೇಕಾದ ಕಾಲ, ಇಂಥ ಅವಿವೇಕಕ್ಕಲ್ಲ.'

ಅವರು ಮುದುಕಿಯ ಮಾತಿಗೆ ಕಿವಿಗೊಡಲಿಲ್ಲ. ಸ್ವಲ್ಪದರಲ್ಲಿ ಅವ ಳನ್ನು ಕೆಳಕ್ಕೆ ಬೀಳಿಸಿಬಿಡುತ್ತಿದ್ದರು, ತಮ್ಮ ಜಗಳದಲ್ಲಿ. ಅಕೂಲ್ಯಾ ಮತ್ತು ಮಲಾಷ ಇಬ್ಬರೂ ಸಹಾಯವಾಗದಿದ್ದರೆ ಅವಳಿಗೆ ಆ ಗುಂಪನ್ನು ಸಮಾ ಧಾನಗೊಳಿಸುವುದಕ್ಕ ಆಗುತ್ತಲೇ ಇರಲಿಲ್ಲ. ಹೆಂಗಸರು ಒಬ್ಬರನ್ನೊಬ್ಬರು ಬಯ್ಯಾಡುತ್ತಿದ್ದಾಗ ಅಕ್ಯೂಲಳು ತನ್ನ ಫ್ರಾಕಿನ ಮೇಲೆ ಬಿದ್ದ ಮಣ್ಣನ್ನು ಒರೆಸಿ ತೆಗೆದು ಮತ್ತೆ ಗೊಜ್ಜೆಯ ಗುಂಡಿಗೆ ಹಿಂದಿರುಗಿದಳು. ಅವಳು ಒಂದು ಕಲ್ಲನ್ನು ತೆಗೆದುಕೊಂಡು ನೀರು ಬೀದಿಗೆ ಹರಿಯುವಂತೆ ಮಾಡು ವುದಕ್ಕೆ ಒಂದು ಕಾಲುವೆಯನ್ನು ತೋಡಬೇಕೆಂದು ಗುಂಡಿಯ ಮುಂದು ಗಡೆಯಲ್ಲಿ ಮಣ್ಣನ್ನು ಕೆರೆದು ತೆಗೆಯುವುದಕ್ಕೆ ಮೊದಲು ಮಾಡಿದಳು.

11

ಕೂಡಲೆ ಮಲಾಷ ಅವಳ ಜೊತೆಗೆ ಸೇರಿದಳು ; ಒಂದು ಮರದ ಚಕ್ಕೆಯನ್ನು ತೆಗೆದುಕೊಂಡು ಅವಳೂ ಕಾಲುವೆಯನ್ನು ತೋಡುವುದಕ್ಕೆ ನೆರವಾದಳು. ಗಂಡಸರು ಇನ್ನೇನು ಗುದ್ದಾಟಕ್ಕೆ ಪ್ರಾರಂಭಿಸಬೇಕು, ಅಷ್ಟರಲ್ಲಿ ಚಿಕ್ಕ ಹುಡುಗಿಯರು ತೋಡಿದ ಕಾಲುವೆಯಿಂದ ನೀರು ಬೀದಿಯೊಳಕ್ಕೆ ಹರಿದು, ಮುದುಕಿ ಅವರಿಗೆ ಸಮಾಧಾನ ಹೇಳುತ್ತ ನಿಂತಿದ್ದ ಕಡೆಗೇ ನುಗ್ಗಿ ಬಂದಿತು. ಹುಡುಗಿಯರೂ ಅದನ್ನೇ ಹಿಂಬಾಲಿಸಿದರು, ಆ ಚಿಕ್ಕ ಕಾಲುವೆಯ ಒಂದೊಂದು ಪಕ್ಕದಲ್ಲಿ ಒಬ್ಬೊಬ್ಬರು ಓಡುತ್ತಿದ್ದರು.

'ಹಿಡಿದುಕೋ, ಮಲಾಷ! ಹಿಡಿದುಕೋ!' ಎಂದು ಅಕೂಲ್ಕ ಕೂಗಿದಳು ; ಮಲಾಷಳಿಗೆ ನಗುವಿನಲ್ಲಿ ಮಾತೇ ಹೊರಡುತ್ತಿರಲಿಲ್ಲ.

ಮಿತಿಯಿಲ್ಲದ ಸಂತೋಷದಿಂದ, ತಮ್ಮ ಕಾಲುವೆಯಲ್ಲಿ ಮರದ ಚಕ್ಕೆ ತೇಲುವುದನ್ನೇ ನೋಡುತ್ತ, ಆ ಚಿಕ್ಕ ಹುಡುಗಿಯರು ಜನಗಳ ಗುಂಪಿನ ಮಧ್ಯಕ್ಕೇ ನೇರವಾಗಿ ನುಗ್ಗಿದರು, ಆ ಮುದುಕಿ ಹುಡುಗಿಯರನ್ನು ಕಂಡು ಜನರಿಗೆ ಹೀಗೆ ಹೇಳಿದಳು.

'ನಿಮಗೆ ನಾಚಿಕೆಯಾಗುವುದಿಲ್ಲವೇ? ಈ ಹುಡುಗಿಯರು ತಾವೇ ಎಲ್ಲವನ್ನೂ ಮರೆತು ಆನಂದದಿಂದ ಇಬ್ಬರೂ ಒಟ್ಟಿಗೆ ಆಟವಾಡುತ್ತಿದಾರೆ? ಹಾಗಾದರೂ, ಅವರ ವಿಚಾರವಾಗಿ ಬಡಿದಾಡುತ್ತಿರುವುದಕ್ಕೆ ನಿಮಗೆ ನಾಚಿಕೆಯಾಗುವುದಿಲ್ಲವೆ? ಎಂಥ ಒಳ್ಳೆಯ ಮಕ್ಕಳು! ಅವರೇ ನಿಮಗಿಂತಲೂ ವಿವೇಕಿಗಳು!'

ಅವರು ಚಿಕ್ಕ ಹುಡುಗಿಯರನ್ನು ನೋಡಿ ನಾಚಿಕೊಂಡರು ; ತಮ್ಮನ್ನು ನೋಡಿಕೊಂಡು ತಾವೇ ನಗುತ್ತ ಪ್ರತಿಯೊಬ್ಬರೂ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಿ ಹೊರಟುಹೋದರು.

'ನೀವು ಚಿಕ್ಕಮಕ್ಕಳ ಹಾಗೆ ಆಗುವ ವರೆಗೂ ಏನುಮಾಡಿದರೂ ಸ್ವರ್ಗರಾಜ್ಯದೊಳಕ್ಕೆ ಪ್ರವೇಶಮಾಡಲಾರಿರಿ.'

---

# ಕೋಳಿಯ ಮೊಟ್ಟೆಯಷ್ಟು ದೊಡ್ಡದಾದ ಜೋಳದ ಕಾಳು



ಒಂದುದಿನ ಕೆಲವು ಮಕ್ಕಳಿಗೆ ಒಂದು ಕೊರಕಲಿನಲ್ಲಿ ಒಂದು ಪದಾರ್ಥ ಸಿಕ್ಕಿತು. ಅದರ ಆಕಾರ ಒಂದು ಜೋಳದ ಕಾಳಿನ ಹಾಗಿದ್ದಿತು, ಅದರ ಮಧ್ಯಭಾಗದಲ್ಲಿ ಒಂದು ಹಳ್ಳವಿದ್ದಿತು. ಆದರೆ ಅದು ಕೋಳಿಯ ಮೊಟ್ಟೆಯಷ್ಟು ದೊಡ್ಡದಾಗಿದ್ದಿತು. ಅಲ್ಲಿ ಹೋಗುತ್ತಿದ್ದ ಒಬ್ಬ ದಾರಿಕಾರನು ಅದನ್ನು ಕಂಡು ಮಕ್ಕಳಿಗೆ ಒಂದು ಪೆನ್ನಿಯನ್ನು ಕೊಟ್ಟು ಅದನ್ನು ಕೊಂಡುಕೊಂಡು ಪಟ್ಟಣಕ್ಕೆ ತೆಗೆದುಕೊಂಡು ಹೋಗಿ, ವಿಚಿತ್ರ ವಸ್ತುವೆಂದು ರಾಜನಿಗೆ ಮಾರಿದನು.

ರಾಜನು ತನ್ನ ಹತ್ತಿರ ಇದ್ದ ಪಂಡಿತರನ್ನೆಲ್ಲ ಕರೆಕಳುಹಿಸಿ ಆ ಪದಾರ್ಥವೇನೆಂಬುದನ್ನು ಗೊತ್ತುಮಾಡುವಂತೆ ಹೇಳಿದನು. ಪಂಡಿತರು ಯೋಚಿಸಿ ಯೋಚಿಸಿ ಸಾಕಾದರು ಆದರೂ ಅದರ ತಲೆ ಬಾಲ ಒಂದೂ ಗೊತ್ತಾಗಲಿಲ್ಲ. ಹೀಗಿರುವಲ್ಲಿ ಒಂದುದಿನ ಆ ಪದಾರ್ಥ ಕಿಟಿಕಿಯ ದಿಂಡಿನ ಮೇಲೆ ಬಿದ್ದಿರುವಾಗ ಒಂದು ಕೋಳಿ ಒಳಕ್ಕೆ ಹಾರಿ ಬಂದು, ಅದನ್ನು ಕುಕ್ಕಿ, ಅದರೊಳಗೆ ಒಂದು ತೂತುಮಾಡಿತು ಆಗ ಅದೊಂದು ಜೋಳದ ಕಾಳೆಂದು ಎಲ್ಲರೂ ತಿಳಿದುಕೊಂಡರು. ಪಂಡಿತರು ದೊರೆಯ ಬಳಿಗೆ ಹೋಗಿ 'ಇದು ಒಂದು ಜೋಳದ ಕಾಳು' ಎಂದರು.

ಇದನ್ನು ಕೇಳಿ ದೊರೆಗೆ ಬಹಳ ಆಶ್ಚರ್ಯವಾಯಿತು, ಅಂಥ ಜೋಳದ ಕಾಳು ಯಾವಾಗ, ಎಲ್ಲಿ ಬೆಳೆಯುತ್ತಿದ್ದಿತೋ ಗೊತ್ತುಮಾಡಬೇಕೆಂದು ಪಂಡಿತರಿಗೆ ಕಟ್ಟುಮಾಡಿದನು. ಪಂಡಿತರು ಮತ್ತೆ ಯೋಚಿಸಿದರು, ತಮ್ಮ ಪುಸ್ತಕಗಳಲ್ಲಿ ಹುಡುಕಿದರು, ಆದರೆ ಅದರ ವಿಚಾರದಲ್ಲಿ ಏನೂ ಗೊತ್ತಾಗಲಿಲ್ಲ. ಆದ್ದರಿಂದ ಅವರು ದೊರೆಯ ಹತ್ತಿರಕ್ಕೆ ಹಿಂದಿರುಗಿ ಬಂದು,

'ನಿನಗೆ ನಾವು ಉತ್ತರ ಕೊಡಲಾರೆವು. ನಮ್ಮ ಪುಸ್ತಕಗಳಲ್ಲಿ ಅದರ ವಿಚಾರವಾಗಿ ಏನೂ ಇಲ್ಲ. ನೀನು ರೈತರನ್ನು ಕೇಳಬೇಕಾಗುತ್ತದೆ; ಯಾವಾಗ ಮತ್ತು ಎಲ್ಲಿ ಜೋಳದ ಕಾಳು ಅಷ್ಟು ದೊಡ್ಡದಾಗಿ ಬೆಳೆಯುತ್ತಿದ್ದಿತೆಂಬುದನ್ನು ಅವರಲ್ಲಿ ಕೆಲವರು ತಮ್ಮ ಹಿರಿಯರಿಂದ ಕೇಳಿದ್ದರೂ ಇರಬಹುದು' ಎಂದರು.

ಆಗ, ಬಹಳ ಮುದುಕನಾದ ಯಾರಾದರೂ ಒಬ್ಬ ರೈತನನ್ನು ತನ್ನೆದುರಿಗೆ ಕರೆದುಕೊಂಡು ಬರಬೇಕೆಂದು ದೊರೆ ಅಪ್ಪಣೆಮಾಡಿದನು, ಅವನ ಆಳುಗಳಿಗೆ ಅಂಥ ಮನುಷ್ಯನೊಬ್ಬನು ಸಿಕ್ಕಲು ಅವರು ಅವನನ್ನು ದೊರೆಯ ಬಳಿಗೆ ಕರೆದುಕೊಂಡು ಬಂದರು. ಮುದಿಯಾಗಿ ಬಾಗಿ, ಬೂದಿಯಂತೆ ಬಿಳಿಚಿಕೊಂಡು, ಹಲ್ಲಿಲ್ಲದೆ ಇದ್ದ ಆ ಮನುಷ್ಯನು ಎರಡು ಊರುಗೋಲುಗಳ ಸಹಾಯದಿಂದ ತತ್ತರಿಸುತ್ತ ಹಾಗೂ ಹೀಗೂ ದೊರೆಯ ಎದುರಿಗೆ ಬಂದು ನಿಂತನು.

ದೊರೆ ಅವನಿಗೆ ಆ ಕಾಳನ್ನು ತೋರಿಸಿದನು. ಆದರೆ ಮುದುಕನಿಗೆ ಅದು ಕಾಣಿಸಲೇ ಇಲ್ಲ, ಕೈಗೆ ತೆಗೆದುಕೊಂಡು ಅದನ್ನು ಸುತ್ತಲೂ ಸವರಿ ನೋಡಿದನು. ದೊರೆಯು ಅವನನ್ನು ಹೀಗೆಂದು ಪ್ರಶ್ನೆಮಾಡಿದನು.

'ಅಯ್ಯಾ ಮುದುಕ, ಇದರಂಥ ಜೋಳದ ಕಾಳು ಎಲ್ಲಿ ಬೆಳೆಯುತ್ತಿದ್ದಿತೋ ಹೇಳಬಲ್ಲೆಯಾ? ನೀನು ಎಂದಾದರೂ ಇಂಥ ಕಾಳನ್ನು ಕಂಡಿದ್ದೆಯಾ? ಅಥವ, ನಿನ್ನ ಹೊಲಗಳಲ್ಲಿ ಬಿತ್ತಿದ್ದೆಯಾ?'

ಮುದುಕನಿಗೆ ದೊರೆ ಹೇಳಿದ್ದು ಕೇಳಿಸಲಾರದಷ್ಟು ಕಿವುಡಾಗಿದ್ದಿತು, ಅವನು ಅದನ್ನು ತಿಳಿದುಕೊಳ್ಳುವ ಹೊತ್ತಿಗೆ ಬಹಳ ಕಷ್ಟವಾಯಿತು.

ಕಟ್ಟಕಡೆಗೆ ಅವನು 'ಇಲ್ಲ' ಎಂದನು. 'ನಾನೆಂದೂ ನನ್ನ ಹೊಲಗಳಲ್ಲಿ ಅಂಥದೇನನ್ನೂ ಬಿತ್ತಲೂ ಇಲ್ಲ, ಕುಯ್ಯಲೂ ಇಲ್ಲ. ಎಂದೂ ಅಂಥದೇನನ್ನೂ ಕೊಳ್ಳಲೂ ಇಲ್ಲ. ನಾವು ಜೋಳವನ್ನು ಕೊಂಡಾಗ

ಕಾಳುಗಳು ಯಾವಾಗಲೂ ಈಗಿರುವಷ್ಟು ಸಣ್ಣಾಗಿಯೇ ಇರುತ್ತಿದ್ದವು. ಆದರೆ ನೀವು ನಮ್ಮ ಅಪ್ಪನನ್ನು ಕೇಳಿದರೆ ಉತ್ತಮ, ಅಂಥ ಕಾಳು ಎಲ್ಲಿ ಬೆಳೆಯುತ್ತಿದ್ದಿತೆಂಬುದನ್ನು ಅವನು ಕೇಳಿದ್ದರೂ ಕೇಳಿರಬಹುದು.'

ಆಗ ದೊರೆಯು ಮುದುಕನ ತಂದೆಗೆ ಹೇಳಿ ಕಳುಹಿಸಿದನು. ಅವನನ್ನು ಕಂಡು, ದೊರೆಯು ಎದುರಿಗೆ ಕರೆದುಕೊಂಡು ಬಂದರು. ಅವನು ಒಂದು ಊರುಗೋಲನ್ನು ಊರಿಕೊಂಡು ನಡೆದು ಬಂದನು. ದೊರೆ ಅವನಿಗೆ ಕಾಳನ್ನು ತೋರಿಸಿದನು, ಆ ಮುದಿರೈತನಿಗೆ ಇನ್ನೂ ಕಣ್ಣು ಕಾಣುತ್ತಿದ್ದಿತು, ಅವನು ಅದನ್ನು ಒಂದು ಸಲ ಚೆನ್ನಾಗಿ ನೋಡಿದನು. ದೊರೆಯು ಅವನನ್ನು,

ಅಯ್ಯಾ ಮುದುಕ, ಇಂಥ ಕಾಳು ಎಲ್ಲಿ ಬೆಳೆಯುತ್ತಿದ್ದಿತೆಂಬುದನ್ನು ನಮಗೆ ಹೇಳಲಾರೆಯಾ ? ಅಂಥದನ್ನೇನಾದರೂ ನೀನು ಕೊಂಡಿರುವೆಯಾ ? ಅಥವ ನಿನ್ನ ಹೊಲಗಳಲ್ಲಿ ಬಿತ್ತಿರುವೆಯಾ ?' ಎಂದು ಕೇಳಿದನು.

ಅವನು, ' ಇಲ್ಲ, ನಾನು ನನ್ನ ಹೊಲಗಳಲ್ಲಿ ಇದರಂಥ ಯಾವ ಕಾಳನ್ನೂ ಬಿತ್ತಲೂ ಇಲ್ಲ, ಕುಯ್ಯಲೂ ಇಲ್ಲ. ಕೊಳ್ಳುವುದೆಂದರೆ, ನಾನೆಂದೂ ಏನನ್ನೂ ಕೊಳ್ಳಲೇ ಇಲ್ಲ , ನಮ್ಮ ಕಾಲದಲ್ಲಿ ಹಣ ಇನ್ನೂ ಉಪಯೋಗಕ್ಕೆ ಬಂದೇ ಇರಲಿಲ್ಲ. ಪ್ರತಿಯೊಬ್ಬರೂ ತಮ್ಮ ಕಾಳನ್ನು ತಾವೇ ಬೆಳೆದುಕೊಳ್ಳುತ್ತಿದ್ದರು. ಅಗತ್ಯವಿದ್ದಾಗಲೆಲ್ಲ ಒಬ್ಬರೊಬ್ಬರಿಗೆ ಕೊಟ್ಟು ಹಂಚಿಕೊಳ್ಳುತ್ತಿದ್ದೆವು. ಇದರಂಥ ಕಾಳು ಎಲ್ಲಿ ಬೆಳೆಯುತ್ತಿದ್ದಿತೋ ನನಗೆ ತಿಳಿಯದು. ನಮ್ಮ ಕಾಲದ ಕಾಳು ಈಗಿನ ಕಾಲದ ಕಾಳಿಗಿಂತಲೂ ದೊಡ್ಡದಾಗಿದ್ದಿತು, ಹೆಚ್ಚು ಹಿಟ್ಟನ್ನೂ ಕೊಡುತ್ತಿದ್ದಿತು ಆದರೆ ಇದರ ಹಾಗಿದ್ದದ್ದನ್ನು ನಾನು ಕಾಣಲೇ ಇಲ್ಲ. ಆದರೆ ನಮ್ಮಪ್ಪ ತನ್ನ ಕಾಲದಲ್ಲಿ ಕಾಳು ನಮ್ಮ ಕಾಳಿಗಿಂತಲೂ ದೊಡ್ಡದಾಗಿ ಬೆಳೆದು ಹೆಚ್ಚು ಹಿಟ್ಟನ್ನು ಕೊಡುತ್ತಿದ್ದಿತೆಂದು ಹೇಳುತ್ತಿದ್ದದ್ದನ್ನು ಕೇಳಿದ್ದೆನು. ಅವನನ್ನು ಕೇಳುವುದು ಮೇಲು' ಎಂದನು.

ಆದ್ದರಿಂದ ರಾಜನು ಈ ಮುದುಕನ ತಂದೆಗೆ ಹೇಳಿ ಕಳುಹಿಸಿದನು. ಸೇವಕರು ಅವನನ್ನೂ ಗೊತ್ತು ಮಾಡಿ ದೊರೆಯ ಎದುರಿಗೆ ಕರೆದುಕೊಂಡು ಬಂದರು. ಅವನು ಊರುಗೋಲುಗಳಿಲ್ಲದೆ ಸುಖವಾಗಿ ನಡೆದುಕೊಂಡು ಬಂದನು. ಅವನ ಕಣ್ಣುಗಳು ಸ್ವಚ್ಛವಾಗಿ ಕಾಣುತ್ತಿದ್ದವು, ಕಿವಿ ಚೆನ್ನಾಗಿ ಕೇಳುತ್ತಿದ್ದಿತು; ಮತ್ತು ಸ್ಪಷ್ಟವಾಗಿ ಮಾತಾಡುತ್ತಿದ್ದನು. ದೊರೆ ಅವನಿಗೆ ಕಾಳನ್ನು ತೋರಿಸಿದನು. ಆ ಮುದುಕಜ್ಜ ಅದನ್ನು ನೋಡಿ, ತನ್ನ ಕೈಗೆ ತೆಗೆದುಕೊಂಡು ಸುತ್ತ ತಿರುಗಿಸಿದನು.

'ಇಂಥ ಸೊಗಸಾದ ಕಾಳನ್ನು ನೋಡಿ ಬಹುಕಾಲವಾಯಿತು' ಎಂದನು, ಹಾಗೆಂದು ಅದರಲ್ಲಿ ಒಂದು ಚೂರನ್ನು ಕಚ್ಚಿ ತಿಂದು ರುಚಿ ನೋಡಿದನು.

'ಇದು ಪಕ್ಕಾ ಅದೇ ಜಾತಿಯದು' ಎಂದನು.

'ಅಜ್ಜ, ಅಜ್ಜ, ಯಾವಾಗ ಮತ್ತು ಎಲ್ಲಿ ಅಂಥ ಕಾಳನ್ನು ಬೆಳೆಯುತ್ತಿದ್ದರು? ನೀನೆಂದಾದರೂ ಅದರಂಥದನ್ನು ಕೊಂಡಿದ್ದೆಯಾ? ಅಥವ ನಿನ್ನ ಹೊಲಗಳಲ್ಲಿ ಬಿತ್ತಿದ್ದೆಯಾ? ನಮಗೆ ಹೇಳಜ್ಜ' ಎಂದು ದೊರೆ ಕೇಳಿದನು.

ಆ ಮುದುಕನು ಉತ್ತರ ಕೊಟ್ಟನು:

'ನನ್ನ ಕಾಲದಲ್ಲಿ ಇಂಥ ಕಾಳು ಎಲ್ಲೆಲ್ಲಿಯೂ ಬೆಳೆಯುತ್ತಿದ್ದಿತು. ನಾನು ಚಿಕ್ಕಂದಿನಲ್ಲಿ ಇಂಥ ಕಾಳನ್ನೇ ತಿಂದು ಬೆಳೆದೆನು, ಇತರರಿಗೂ ಇದನ್ನೇ ತಿನ್ನಲು ಕೊಡುತ್ತಿದ್ದೆನು. ನಾವು ಬಿತ್ತಿ ಕುಯ್ದು ಒಕ್ಕುತ್ತಿದ್ದದ್ದೂ ಇಂಥ ಕಾಳುಗಳೇ.'

'ಅಜ್ಜ, ನೀನು ಅದನ್ನು ಎಲ್ಲಿಯಾದರೂ ಕೊಳ್ಳುತ್ತಿದ್ದೆಯೋ? ಇಲ್ಲ ಎಲ್ಲವನ್ನೂ ನೀನೇ ಬೆಳೆದುಕೊಳ್ಳುತ್ತಿದ್ದೆಯೋ? ಹೇಳು' ಎಂದು ದೊರೆ ಕೇಳಿದನು.

ಮುದುಕನು ನಕ್ಕನು.

'ನನ್ನ ಕಾಲದಲ್ಲಿ ಯಾರೊಬ್ಬರೂ ಆಹಾರವನ್ನು ಮಾರುವ ಅಥವ ಕೊಳ್ಳುವಂಥ ಪಾಪವನ್ನು ಯೋಚಿಸುತ್ತಲೂ ಇರಲಿಲ್ಲ ನಮಗೆ ದುಡ್ಡಿನ ಸಂಬಂಧವಾಗಿ ಏನೂ ಗೊತ್ತಿರಲಿಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ತನ್ನ ತನ್ನ ಕಾಳೇ ಬೇಕಾದಷ್ಟಿರುತ್ತಿದ್ದಿತು' ಎಂದು ಉತ್ತರಕೊಟ್ಟನು.

'ಹಾಗಾದರೆ ನಿನ್ನ ಹೊಲ ಎಲ್ಲಿದ್ದಿತು? ಎಲ್ಲಿ ಇಂಥ ಕಾಳನ್ನು ನೀನು ಬೆಳೆಯುತ್ತಿದ್ದೆ? ಹೇಳಜ್ಜ' ಎಂದು ದೊರೆ ಕೇಳಿದನು

ಅಜ್ಜ ಉತ್ತರಕೊಟ್ಟನು.

'ದೇವರು ಮಾಡಿದ ನೆಲವೇ ನನ್ನ ಹೊಲವಾಗಿದ್ದಿತು ನಾನು ಎಲ್ಲಿ ಉತ್ತರೆ ಅಲ್ಲೇ ನನ್ನ ಹೊಲ. ಆಗ ನೆಲ ಬಿಟ್ಟಿಯಾಗಿದ್ದಿತು. ಅದನ್ನು ಯಾವ ಮನುಷ್ಯನೂ ತನ್ನದು ಎಂದು ಕರೆಯುತ್ತಿರಲಿಲ್ಲ. ಕೆಲಸವೊಂದೇ ಮನುಷ್ಯರು ತಮ್ಮದು ಎಂದುಕೊಳ್ಳುತ್ತಿದ್ದದ್ದು.'

'ಇನ್ನೆರಡು ಪ್ರಶ್ನೆಗಳಿಗೆ ಉತ್ತರ ಹೇಳಿಬಿಡು. ಮೊದಲನೆಯದು— ಭೂಮಿ ಆಗ ಅಂಥ ಕಾಳುಗಳನ್ನು ಕೊಡುತ್ತಿದ್ದು ಈಗೇಕೆ ಹಾಗೆ ಮಾಡದೆ ಸುಮ್ಮನಿದೆ? ಎರಡನೆಯದು—ನಿನ್ನ ಮೊಮ್ಮಗನು ಎರಡು ಊರುಗೋಲುಗಳನ್ನೂ ಮಗನು ಒಂದನ್ನೂ ಉಪಯೋಗಿಸಿಕೊಂಡು ನಡೆದರೆ ನೀನು ಏನೂ ಇಲ್ಲದೆ ನಡೆಯುತ್ತೀಯಲ್ಲ, ಇದು ಏಕೆ? ನಿನ್ನ ಕಣ್ಣುಗಳು ಹೊಳೆಯುತ್ತಿವೆ, ನಿನ್ನ ಹಲ್ಲುಗಳು ಗಟ್ಟಿಯಾಗಿವೆ, ನಿನ್ನ ಮಾತು ಸ್ಪಷ್ಟವಾಗಿಯೂ ಕಿವಿಗೆ ಇಂಪಾಗಿಯೂ ಇದೆ. ಅದೆಲ್ಲ ಏಕೆ ಹೀಗಾಯಿತು' ಎಂದು ಕೇಳಿದನು.

'ಮನುಷ್ಯರು ತಮ್ಮ ಕೆಲಸದಿಂದ ಜೀವಿಸುವುದನ್ನು ನಿಲ್ಲಿಸಿ, ಇತರರ ಕೆಲಸಕ್ಕೆ ಅಧೀನರಾಗಿ ಬಾಳ ತೊಡಗಿರುವುದರಿಂದ ಇದೆಲ್ಲ ಹೀಗಾಗಿದೆ. ಹಿಂದಿನ ಕಾಲದಲ್ಲಿ ಜನರು ದೇವರ ಕಟ್ಟಳೆಗೆ ಅನುಸಾರವಾಗಿ ಜೀವಿಸುತ್ತಿದ್ದರು, ತಮ್ಮದು ಯಾವುದೋ ಅದನ್ನು ಇಟ್ಟುಕೊಳ್ಳುತ್ತಿದ್ದರು, ಇತರರು ಉಂಟುಮಾಡಿದ್ದು ಯಾವುದಕ್ಕೂ ಆಸೆಪಡುತ್ತಿರಲಿಲ್ಲ' ಎಂದು ಮುದುಕನು ಉತ್ತರಕೊಟ್ಟನು.

# ದೇವರು ಸತ್ಯವನ್ನು ಕಾಣುತ್ತಾನೆ; ಆದರೆ ನಿದಾನಿಸುತ್ತಾನೆ



ವ್ಲಾಡಿಮಿರ್ ಪಟ್ಟಣದಲ್ಲಿ ಇವ್ಯಾನ್ ಡ್ಮಿಟ್ರಿಕ್ ಅಕ್ಸ್ಯೋನೋವ್ ಎಂಬ ಒಬ್ಬ ವರ್ತಕನಿದ್ದನು. ಅವನಿಗೆ ಎರಡು ಅಂಗಡಿಗಳೂ ಒಂದು ಸ್ವಂತ ಮನೆಯೂ ಇದ್ದವು.

ಅಕ್ಸ್ಯೋನೋವ್ ಸುಂದರಪುರುಷ. ಕೂದಲು ಸೊಗಸಾಗಿದ್ದಿತು; ತಲೆಯ ತುಂಬ ಗುಂಗುರು ಗುಂಗುರಾದ ಕೂದಲು ತುಂಬಿದ್ದಿತು ಅವನು ಯಾವಾಗಲೂ ನಗುನಗುತ್ತಾ ಹರ್ಷವಾಗಿದ್ದನು. ಮತ್ತು ಅವನಿಗೆ ಸಂಗೀತ ದಲ್ಲಿ ತುಂಬ ಅಭಿಮಾನವಿದ್ದಿತು ತೀರ ಚಿಕ್ಕವನಾಗಿದ್ದಾಗ ಅವನಿಗೆ ಕುಡಿ ಯುವ ಅಭ್ಯಾಸವಿದ್ದಿತು. ಸ್ವಲ್ಪ ಹೆಚ್ಚಾಗಿ ಕುಡಿದಾಗಲೆಲ್ಲ ಬಹು ಗದ್ದಲ ಮಾಡುತ್ತಿದ್ದನು ಆದರೆ ಮದುವೆಯಾದ ಮೇಲೆ ಕುಡಿತವನ್ನು ಬಿಟ್ಟು ಬಿಟ್ಟನು, ಎಲ್ಲಿಯೋ ಒಂದೊಂದು ಸಲ ಮಾತ್ರ ಸ್ವಲ್ಪ ಕುಡಿಯುತ್ತಿದ್ದನು

ಒಂದಾನೊಂದು ಬೇಸಿಗೆಯಲ್ಲಿ ಅಕ್ಸ್ಯೋನೋವ್ ನಿಷ್ನಿ ಜಾತ್ರೆಗೆ ಹೊರಟನು. ಅವನು ತನ್ನ ಮನೆಯವರಿಗೆಲ್ಲ ಹೋಗಿ ಬರುವೆನೆಂದು ಹೇಳಿ ಹೊರಡುವುದಕ್ಕೆ ಸಿದ್ಧನಾದಾಗ ಅವನ ಹೆಂಡತಿಯು 'ಇವ್ಯಾನ್ ಡ್ಮಿಟ್ರಿಕ್, ಇವತ್ತು ಹೊರಡಬೇಡ. ನಿನ್ನ ವಿಷಯದಲ್ಲಿ ನನಗೊಂದು ಕೆಟ್ಟ ಕನಸಾ ಯಿತು' ಎಂದಳು

ಅಕ್ಸ್ಯೋನೋವ್ ನಕ್ಕುಬಿಟ್ಟು, 'ನಾನು ಜಾತ್ರೆಗೆ ಹೋದರೆ ಕುಡಿದು ಖುಷಿ ಮಾಡುವೆನೆಂದು ನಿನಗೆ ಹೆದರಿಕೆ' ಎಂದು ಹೇಳಿದನು.

'ಯಾವುದಕ್ಕೆ ಹೆದರಿಕೆಯಾಗುತ್ತದೆಯೋ ನನಗೆ ಗೊತ್ತಿಲ್ಲ, ಒಂದು ಕೆಟ್ಟ ಕನಸಾಯಿತೆಂಬುದು ಮಾತ್ರ ನನಗೆ ಗೊತ್ತು. ನೀನು ಪಟ್ಟಣದಿಂದ

ಹಿಂದಿರುಗಿ ಒಂದ ಹಾಗೂ, ನಿನ್ನ ಟೋಪಿಯನ್ನು ತೆಗೆಯುಲಾಗಿ ತಲೆಯ ಕೂದಲೆಲ್ಲ ನರೆತುಹೋಗಿದ್ದ ಹಾಗೂ ನನಗೆ ಕನಸಾಯಿತು' ಎಂದು ಅವನ ಹೆಂಡತಿ ಉತ್ತರಕೊಟ್ಟಳು.

ಅಕ್ಸ್ಯೋನೋವ್ ನಕ್ಕನು 'ಅದು ಒಳ್ಳೆಯ ಶಕುನ ನನ್ನ ಸಾಮಾನುಗಳನ್ನೆಲ್ಲ ಮಾರಿ, ಜಾತ್ರೆಯಿಂದ ನಿನಗೆ ಏನಾದರೂ ಒಂದು ಉಡುಗೆರೆಯನ್ನು ತರದಿದ್ದರೆ ಆಗ ಕೇಳು' ಎಂದನು

ಹೀಗೆ ಅವನು ಮನೆಯವರನ್ನು ಬೀಳ್ಕೊಂಡು ಪ್ರಯಾಣಮಾಡಿದನು

ಅರ್ಧದಾರಿ ಪ್ರಯಾಣ ಮಾಡಿದಮೇಲೆ ಅವನಿಗೆ ಹಿಂದೆ ಪರಿಚಿತನಾಗಿದ್ದ ಒಬ್ಬ ವರ್ತಕ ಸಿಕ್ಕಿದನು. ಅವರಿಬ್ಬರೂ ಆ ರಾತ್ರಿ ಒಂದೇ ಛತ್ರದಲ್ಲಿ ಇಳಿದುಕೊಂಡರು ಅವರು ಒಟ್ಟಿಗೆ ಸ್ವಲ್ಪ ಟೀ ಕುಡಿದು ಆಮೇಲೆ ಅಕ್ಕಪಕ್ಕದಲ್ಲಿದ್ದ ಎರಡು ಕೊಠಡಿಗಳಲ್ಲಿ ಮಲಗಿಕೊಂಡರು.

ಅಕ್ಸ್ಯೋನೋವ್ ಬಹಳ ಹೊತ್ತು ಮಲಗುವ ಸ್ವಭಾವದವನಲ್ಲ. ಇನ್ನೂ ತಂಪಾಗಿರುವಾಗಲೇ ಪ್ರಯಾಣ ಮಾಡಬೇಕೆಂದುಕೊಂಡು ಅರುಣೋದಯಕ್ಕ ಮುಂಚೆಯೇ ಗಾಡಿಯ ಆಳನ್ನು ಎಬ್ಬಿಸಿ ಗಾಡಿಗೆ ಕುದುರಗಳನ್ನು ಹೂಡುವಂತೆ ಹೇಳಿದನು.

ಬಳಿಕ ಆ ಹೋಟಲಿನ ಯಜಮಾನನು ಇದ್ದ ಬಳಿಗೆ ಹೋಗಿ (ಅವನು ಹಿಂದುಗಡೆ ಒಂದು ಮನೆಯಲ್ಲಿ ವಾಸಮಾಡುತ್ತಿದ್ದನು) ಅವನಿಗೆ ಕೊಡಬೇಕಾದದ್ದನ್ನು ಕೊಟ್ಟು ತನ್ನ ಪ್ರಯಾಣವನ್ನು ಮುಂದುವರಿಸಿದನು

ಸುಮಾರು ಇಪ್ಪತ್ತೈದು ಮೈಲಿಗಳಷ್ಟು ದೂರ ಹೋದಮೇಲೆ ಕುದುರೆಗಳನ್ನು ಮೇಯಿಸುವುದಕ್ಕಾಗಿ ಗಾಡಿಯನ್ನು ನಿಲ್ಲಿಸಿದನು. ಅಕ್ಸ್ಯೋನೋವ್ ಸ್ವಲ್ಪ ಹೊತ್ತು ಹೋಟಲಿನ ಜಗುಲಿಯಮೇಲೆ ವಿಶ್ರಮಿಸಿಕೊಂಡು ಆಮೇಲೆ ಕೈಸಾಲೆಯೊಳಕ್ಕೆ ಬಂದು ಒಂದು ಕೆಟ್ಲ್ ಟೀ ಕಾಸುವಂತೆ ಹೇಳಿ ತನ್ನ ಸಿತಾರ್ ಹೊರಕ್ಕೆ ತೆಗೆದುಕೊಂಡು ಬಾರಿಸುವುದಕ್ಕೆ ಪ್ರಾರಂಭಿಸಿದನು.

ಕೂಡಲೆ ಮೂರು ಕುದುರೆಗಳನ್ನು ಕಟ್ಟಿದ ಒಂದು ಗಾಡಿ ಗಂಟೆಗಳನ್ನು ಝುಣಗುಟ್ಟಿಸುತ್ತ ಅಲ್ಲಿಗೆ ಬಂದು ನಿಂತಿತು. ಆ ಗಾಡಿಯಿಂದ ಒಬ್ಬ ಅಧಿಕಾರಿಯೂ ಇಬ್ಬರು ಸಿಪಾಯಿಗಳೂ ಇಳಿದರು. ಅವನು ಅಕ್ಸ್ಯೋನೋವನ ಬಳಿಗೆ ಬಂದು, 'ನೀನು ಯಾರು? ಎಲ್ಲಿಂದ ಬಂದೆ?' ಎಂದು ಮುಂತಾಗಿ ಅವನನ್ನು ಕೇಳತೊಡಗಿದನು. ಅಕ್ಸ್ಯೋನೋವ್ ಎಲ್ಲಕ್ಕೂ ಪೂರ್ತಿಯಾಗಿ ಉತ್ತರಕೊಟ್ಟನು. ಕೊಟ್ಟು, 'ಜೊತೆಯಲ್ಲಿ ಸ್ವಲ್ಪ ಟೀ ತೆಗೆದುಕೊಳ್ಳೋಣವಂತೆ' ಎಂದನು. ಆದರೆ ಆ ಅಧಿಕಾರಿಯು ನೀನು 'ನಿನ್ನೆ ರಾತ್ರಿಯನ್ನು ಎಲ್ಲಿ ಕಳೆದೆ? ನೀನೊಬ್ಬನೇ ಇದ್ದೆಯೋ ಅಥವಾ ಸಂಗಡ ಒಬ್ಬ ವರ್ತಕನಿದ್ದನೊ? ಆ ವರ್ತಕನನ್ನು ಇವತ್ತು ಬೆಳಿಗ್ಗೆ ನೋಡಿದೆಯಾ? ಅರುಣೋದಯಕ್ಕೆ ಮುಂಚೆಯೇ ಹೋಟಲನ್ನು ಬಿಟ್ಟು ನೀನು ಹೊರಟದ್ದೇಕೆ?' ಎಂದು ಪ್ರಶ್ನೆಯ ಮೇಲೆ ಪ್ರಶ್ನೆ ಹಾಕುತ್ತ ಬಂದನು.

ಹೀಗೆಲ್ಲ ತನ್ನನ್ನೇಕೆ ಕೇಳುವನೆಂದು ಅಕ್ಸ್ಯೋನೋವ್‌ಗೆ ಬಹಳ ಆಶ್ಚರ್ಯವಾಯಿತು ಆದರೆ ನಡೆದದ್ದನ್ನೆಲ್ಲ ವಿಶದವಾಗಿ ತಿಳಿಸಿ, ಆಮೇಲೆ, 'ನಾನು ಕಳ್ಳನೋ ದರೋಡೆಕೋರನೋ ಆಗಿದ್ದರೆ ಹೇಗೋ ಹಾಗೆ ಹೀಗೆಲ್ಲ ನನ್ನನ್ನೇಕೆ ಕೇಳುತ್ತೀರಿ? ನಾನು ಸ್ವಂತ ಉದ್ಯೋಗಕ್ಕಾಗಿ ಪ್ರಯಾಣ ಮಾಡುತ್ತಿದೇನೆ. ನನ್ನನ್ನು ಹೀಗೆ ಪ್ರಶ್ನೆ ಮಾಡುವ ಆವಶ್ಯಕವಿಲ್ಲ' ಎಂದನು

ಆಗ ಆ ಅಧಿಕಾರಿಯು ಸಿಪಾಯಿಗಳನ್ನು ಕೂಗಿ ಕರೆದು 'ನಾನು ಈ ಡಿಸ್ಟ್ರಿಕ್ಟಿನ ಪೋಲೀಸು ಅಧಿಕಾರಿ. ನಿನ್ನನ್ನು ಹೀಗೆ ಕೇಳುವುದಕ್ಕೆ ಕಾರಣವಿದೆ ನಿನ್ನೆ ರಾತ್ರಿ ನಿನ್ನ ಸಂಗಡ ಇದ್ದ ವರ್ತಕನ ಕತ್ತನ್ನು ಯಾರೋ ಕತ್ತರಿಸಿ ಹಾಕಿದಾರೆ. ನಿನ್ನ ಸಾಮಾನುಗಳನ್ನು ಹುಡುಕಬೇಕು' ಎಂದನು.

ಅವರು ಮನೆಯೊಳಕ್ಕೆ ನುಗ್ಗಿದರು. ಸಿಪಾಯಿಗಳೂ ಪೋಲೀಸು ಅಧಿಕಾರಿಯೂ ಅಕ್ಸ್ಯೋನೋವನ ಸಾಮಾನುಗಳನ್ನೆಲ್ಲ ಕಟ್ಟುಬಿಚ್ಚಿ ಪರೀಕ್ಷೆ ಮಾಡಿದರು. ಪೋಲೀಸಧಿಕಾರಿಯು ಒಂದು ಚೀಲದೊಳಗಿನಿಂದ

ಒಂದು ಚೂರಿಯನ್ನು ಸರಕ್ಕನೆ ಹಿರಿದುಕೊಂಡು 'ಇದು ಯಾರ ಚೂರಿ?' ಎಂದು ಕೇಳಿದನು.

ಅಕ್ಸ್ಯೋನೋವ್ ನೋಡಿದನು. ತನ್ನ ಚೀಲದೊಳಗಿನಿಂದ ರಕ್ತದ ಕಲೆಯಾಗಿದ್ದ ಒಂದು ಚೂರಿಯನ್ನು ಹಿರಿದದ್ದನ್ನು ಕಂಡು ಅವನಿಗೆ ಭಯ ವಾಯಿತು.

'ಈ ಚೂರಿಯ ಮೇಲೆ ರಕ್ತ ಹೇಗೆ ಬಂತು?'

ಅಕ್ಸ್ಯೋನೋವ್ ಉತ್ತರಕೊಡಬೇಕೆಂದು ಯತ್ನಿಸಿದನು ಆದರೆ ಒಂದು ಮಾತೂ ಹೊರಡಲಿಲ್ಲ 'ನನಗೆ ತಿಳಿಯದು—ನನ್ನದಲ್ಲ' ಎಂದು ಉಗ್ಗುತ್ತ ಹೇಳಿದನು.

ಆಗ ಪೋಲೀಸಧಿಕಾರಿಯು 'ಇವತ್ತು ಬೆಳಿಗ್ಗೆ ವರ್ತಕನು ಹಾಸಿಗೆಯ ಮೇಲೆ ಕತ್ತು ಕತ್ತರಿಸಿ ಬಿದ್ದಿದ್ದನು ಆ ಕಲಸವನ್ನು ಮಾಡಿರಬಹುದಾದವನು ನೀನೊಬ್ಬನೇ ಸರಿ ಮನೆಗೆ ಒಳಗಡೆಯಿಂದ ಬೀಗ ಹಾಕಿದ್ದಿತು, ಅಲ್ಲಿ ಇನ್ನು ಯಾರೂ ಇರಲಿಲ್ಲ ಇಲ್ಲಿ, ನಿನ್ನ ಚೀಲದಲ್ಲಿ ರಕ್ತಕಟ್ಟಿದ ಈ ಚೂರಿ ಸಿಕ್ಕಿದೆ, ನಿನ್ನ ಮುಖವನ್ನೂ ಇರಿಕೆಯನ್ನೂ ನೋಡಿದರೆ ನೀನು ಸಿಕ್ಕಿ ಬಿದ್ದವನ ಹಾಗೆ ಕಾಣುತ್ತೀಯ ಅವನನ್ನು ಹೇಗೆ ಕೊಂದೆ? ಎಷ್ಟು ಹಣವನ್ನು ಕದ್ದೆ? ಹೇಳಿ ಬಿಡು ನನಗೆ' ಎಂದನು.

ಅಕ್ಸ್ಯೋನೋವ್ ತಾನು ಅದನ್ನು ಮಾಡಲಿಲ್ಲವೆಂದೂ, ಇಬ್ಬರೂ ಜೊತೆಯಲ್ಲಿ ಟೀ ಕುಡಿದ ಬಳಿಕ ವರ್ತಕನನ್ನು ತಾನು ನೋಡಲೇ ಇಲ್ಲ ವೆಂದೂ, ತನ್ನ ಸ್ವಂತ ಹಣ ಎಂಟುಸಾವಿರ ರೂಬಲ್ ಹೊರತಾಗಿ ತನ್ನ ಹತ್ತಿರ ಬೇರೆ ಏನೂ ಇಲ್ಲವೆಂದೂ, ಮತ್ತು ಆ ಚೂರಿ ತನ್ನದಲ್ಲವೆಂದೂ ಪ್ರಮಾಣಮಾಡಿ ಹೇಳಿದನು. ಆದರೆ ಅವನ ಧ್ವನಿ ತಡೆಯುತ್ತಿದ್ದಿತು, ಮುಖ ಬಿಳುಪೇರಿತು, ತಾನೇ ಅಪರಾಧಿಯಾಗಿದ್ದರೆ ಹೇಗೋ ಹಾಗೆ ಭಯದಿಂದ ನಡುಗುತ್ತಿದ್ದನು.

ಪೋಲೀಸಧಿಕಾರಿಯು ಅಕ್ಸ್ಯೋನೋವನ್ನು ಬಂಧಿಸಿ ಗಾಡಿಯಲ್ಲಿ ಕೂರಿಸುವಂತೆ ಸಿಪಾಯಿಗಳಿಗೆ ಅಪ್ಪಣೆಮಾಡಿದನು. ಅವರು ಅವನ ಕಾಲುಗಳೆರಡನ್ನೂ ಸೇರಿಸಿ ಕಟ್ಟಿ ಗಾಡಿಯೊಳಕ್ಕೆ ಎಸೆದಾಗ ಅಕ್ಸ್ಯೋನೋವ್ ಶಿಲುಬೆಯ ರಕ್ಷೆ ಹಾಕಿಕೊಂಡು ಅತ್ತನು. ಅವನ ಹಣವನ್ನೂ ಸಾಮಾನುಗಳನ್ನೂ ಕಿತ್ತುಕೊಂಡರು. ಅವನನ್ನು ಅತಿ ಸಮೀಪದಲ್ಲಿದ್ದ ಪಟ್ಟಣಕ್ಕ ಕಳುಹಿಸಿ ಅಲ್ಲಿ ಸೆರೆಯಲ್ಲಿಟ್ಟರು. ವ್ಲಾಡಿಮಿರ್ ಪಟ್ಟಣದಲ್ಲಿ ಅವನ ಶೀಲ ಸ್ವಭಾವಗಳನ್ನು ಕುರಿತು ವಿಚಾರಿಸಿದರು. ಆ ಪಟ್ಟಣದ ವರ್ತಕರೂ ಇತರ ಪುರನಿವಾಸಿಗಳೂ ಅಕ್ಸ್ಯೋನೋವ್ ಹಿಂದೆ ಮಾತ್ರ ಕುಡಿದು ವ್ಯರ್ಥವಾಗಿ ಕಾಲ ಕಳೆಯುತ್ತಿದ್ದನೆಂದೂ ಆದರೆ ಅವನು ಒಳ್ಳೆಯ ಮನುಷ್ಯನೆಂದೂ ಹೇಳಿದರು. ಆಮೇಲೆ ಅಪರಾಧದ ವಿಚಾರಣೆ ಪ್ರಾರಂಭವಾಯಿತು. ರ್ಯಾಸಾನಿನಿಂದ ಬಂದಿದ್ದ ಒಬ್ಬ ವರ್ತಕನನ್ನು ಕೊಲೆಮಾಡಿ ಅವನಲ್ಲಿದ್ದ ಇಪ್ಪತ್ತು ಸಾವಿರ ರೂಬಲ್‌ಗಳನ್ನು ಕದ್ದನೆಂದು ಅವನ ಮೇಲೆ ಅಪರಾಧವನ್ನು ಹೊರಿಸಿದ್ದರು.

ಅವನ ಹೆಂಡತಿಗೆ ದಿಕ್ಕೇ ತೋಚಲಿಲ್ಲ, ಯಾವುದನ್ನು ನಂಬಬೇಕೋ ತಿಳಿಯದೇ ಹೋಯಿತು. ಮಕ್ಕಳೆಲ್ಲ ಚಿಕ್ಕವರು, ಒಂದು ಮೊಲೆಯುಣ್ಣುವ ಕೂಸು. ಆ ಮಕ್ಕಳನ್ನೆಲ್ಲ ಜೊತೆಯಲ್ಲಿ ಕರೆದುಕೊಂಡು ತನ್ನ ಗಂಡನನ್ನು ಸೆರೆಯಿಟ್ಟಿದ್ದ ಪಟ್ಟಣಕ್ಕ ಹೋದಳು. ಮೊದಮೊದಲು ಗಂಡನನ್ನು ನೋಡುವುದಕ್ಕೆ ಅವಳಿಗೆ ಅವಕಾಶ ಕೊಡಲಿಲ್ಲ, ಆದರೆ ಬಹುವಾಗಿ ಬೇಡಿಕೊಂಡ ಮೇಲೆ ಅಧಿಕಾರಿಗಳು ಅಪ್ಪಣೆ ಕೊಟ್ಟರು. ಆಗ ಅವಳನ್ನು ಅವನ ಬಳಿಗೆ ಕರೆದುಕೊಂಡು ಹೋದರು. ತನ್ನ ಗಂಡನಿಗೆ ಸೆರೆಮನೆಯ ಉಡುಪುಗಳನ್ನು ತೊಡಿಸಿ, ಸರಪಣಿಗಳಿಂದ ಬಿಗಿದು ಕಳ್ಳರೊಡನೆಯೂ ಕೊಲೆಪಾತಕಿಗಳೊಡನೆಯೂ ಕೂಡಿದ್ದುದನ್ನು ಕಂಡು ಅವಳು ಕೆಳಗೆ ಬಿದ್ದು ಮೂರ್ಛಿತಳಾದಳು.

ಬಹಳ ಹೊತ್ತಿನವರೆಗೂ ಜ್ಞಾನವೇ ಬರಲಿಲ್ಲ. ಎಚ್ಚರವಾದ ಮೇಲೆ ಮಕ್ಕಳನ್ನೆಲ್ಲ ಹತ್ತಿರಕ್ಕೆ ಸೆಳೆದುಕೊಂಡು, ಅವನ ಪಕ್ಕದಲ್ಲಿ ಕುಳಿತು

ಕೊಂಡಳು. ಮನೆಯ ಸಂಗತಿಗಳನ್ನೆಲ್ಲ ಅವನಿಗೆ ತಿಳಿಸಿ, ನಡೆದದ್ದನ್ನೆಲ್ಲ ತನಗೆ ಹೇಳಬೇಕೆಂದು ಕೇಳಿದಳು. ಅವನು ಎಲ್ಲವನ್ನೂ ಹೇಳಿದನು. 'ಈಗ ನಾವೇನು ಮಾಡೋಣ?' ಎಂದು ಅವಳು ಕೇಳಿದಳು.

'ನಿರ್ದೋಷಿಯಾದ ಮನುಷ್ಯನು ಹಾಳಾಗುವಂತೆ ಅವಕಾಶ ಕೊಡ ಬಾರದೆಂದು ಸಾರ್ ಚಕ್ರವರ್ತಿಗೆ ಮನವಿ ಮಾಡಿಕೊಳ್ಳಬೇಕು'

ಅವನ ಹೆಂಡತಿ ತಾನು ಸಾರ್ ಚಕ್ರವರ್ತಿಗೆ ಒಂದು ಅರ್ಜಿ ಬರೆಸಿ ಕಳುಹಿಸಿದ ಹಾಗೂ, ಆದರೆ ಆ ಅರ್ಜಿಯನ್ನು ಅವರು ಅಂಗೀಕರಿಸಲಿಲ್ಲ ವೆಂದೂ ತಿಳಿಸಿದಳು

ಅಕ್ಸ್ಯೋನೋವ್ ಮರುಮಾತಾಡಲಿಲ್ಲ, ಜೋಲು ಮುಖ ಹಾಕಿ ಕೊಂಡು ಕುಳಿತನು.

ಆಗ ಅವನ ಹೆಂಡತಿ 'ನಿನ್ನ ಕೂದಲು ನೆರೆತಂತೆ ನನಗೆ ಕನಸಾಯಿ ತಲ್ಲ, ಸುಮ್ಮಸುಮ್ಮನೆ ಹಾಗಾಗಲಿಲ್ಲ. ನಿನಗೆ ನೆನಪಿದೆಯಷ್ಟೆ? ನೀನು ಅವತ್ತು ಹೊರಡಬಾರದಾಗಿದ್ದಿತು' ಎಂದಳು. ಆಮೇಲೆ ಅವನ ತಲೆಯ ಕೂದಲಿನಲ್ಲಿ ತನ್ನ ಕೈ ಬೆರಳುಗಳನ್ನು ತೂರಿಸಿ ಆಡಿಸುತ್ತ 'ಪ್ರಿಯತಮ, ವ್ಯಾನ್ಯಾ, ನಿನ್ನ ಹೆಂಡತಿಗೆ ನಿಜವನ್ನು ಹೇಳಿಬಿಡು, ಅದನ್ನು ಮಾಡಿದವನು ನೀನಲ್ಲವೇ?' ಎಂದು ಕೇಳಿದಳು.

'ಹಾಗಾದರೆ ನಿನಗೂ ನನ್ನ ಮೇಲೆಯೇ ಅನುಮಾನ!' ಎನ್ನುತ್ತ ಎರಡು ಕೈಗಳಲ್ಲಿಯೂ ಮುಖವನ್ನು ಮುಚ್ಚಿಕೊಂಡು ಅಳುವುದಕ್ಕೆ ಪ್ರಾರಂಭಿಸಿದನು. ಅಷ್ಟು ಹೊತ್ತಿಗೆ ಒಬ್ಬ ಸಿಪಾಯಿ ಅಲ್ಲಿಗೆ ಬಂದು 'ಇನ್ನು ಹೆಂಡತಿಯೂ ಮಕ್ಕಳೂ ಹೊರಟುಹೋಗಬೇಕು' ಎಂದು ಹೇಳಿ ದನು. ಅಕ್ಸ್ಯೋನೋವ್ ಕೊನೆಯ ಸಲ ತನ್ನ ಮನೆಯವರನ್ನು ನೋಡಿ ಬೀಳ್ಕೊಟ್ಟನು.

ಅವರೆಲ್ಲ ಹೊರಟುಹೋದ ಬಳಿಕ ಆಗ ನಡೆದ ಮಾತುಗಳನ್ನೆಲ್ಲ ಅಕ್ಸ್ಯೋನೋವ್ ಜ್ಞಾಪಿಸಿಕೊಂಡನು. ತನ್ನ ಹೆಂಡತಿಯೂ ತನ್ನ ವಿಚಾರ ದಲ್ಲಿ ಸಂದೇಹಪಟ್ಟದ್ದನ್ನು ನೆನೆದು ತನ್ನಲ್ಲಿ ತಾನೇ 'ಸತ್ಯ ಯಾವುದೆಂಬುದು

ದೇವರೊಬ್ಬನಿಗೇ ಗೊತ್ತಾಗುವುದೆಂದು ತೋರುತ್ತದೆ ಅವನಿಗೆ ಮಾತ್ರವೇ ನಾವು ದೂರು ಹೇಳಿಕೊಳ್ಳಬೇಕು, ಅವನೊಬ್ಬನಿಂದಲೇ ಕ್ಷಮೆಯನ್ನು ನಿರೀಕ್ಷಿಸಬೇಕು' ಎಂದುಕೊಂಡನು.

ಆ ಬಳಿಕ ಅಕ್ಸ್ಯೋನೋವ್ ಪುನಃ ಅರ್ಜಿಯನ್ನೇ ಬರೆಯಲಿಲ್ಲ ಆಸೆಯನ್ನು ಪೂರ್ತಿಯಾಗಿ ತೊರೆದುಬಿಟ್ಟನು. ದೇವರಿಗೆ ಮಾತ್ರ ಪ್ರಾರ್ಥನೆ ಮಾಡುತ್ತಿದ್ದನು.

ಅಕ್ಸ್ಯೋನೋವ್‌ಗೆ ಛಡಿ ಏಟು ಕೊಟ್ಟು ಆಮೇಲೆ ಅವನನ್ನು ಗಣಿಯ ಕೆಲಸಕ್ಕೆ ಕಳುಹಿಸಬೇಕೆಂದು ಶಿಕ್ಷೆಯನ್ನು ವಿಧಿಸಿದರು. ಅದರಂತೆ ಒಂದು ಬಾರುಕೋಲಿನಿಂದ ಅವನನ್ನು ಹೊಡೆದರು. ಈ ಏಟಿನಿಂದ ಅವನ ಮೈಮೇಲೆ ಆದ ಗಾಯಗಳೆಲ್ಲ ಮಾದ ಬಳಿಕ ಇತರ ಅಪರಾಧಿಗಳ ಜೊತೆಯಲ್ಲಿ ಅವನನ್ನೂ ಸೈಬೀರಿಯಕ್ಕೆ ಅಟ್ಟಿಕೊಂಡು ಹೋದರು

ಹೀಗೆ ಖೈದಿಯಾಗಿ ಇಪ್ಪತ್ತಾರು ವರ್ಷಗಳ ವರೆಗೆ ಅಕ್ಸ್ಯೋನೋವ್ ಸೈಬೀರಿಯದಲ್ಲಿ ವಾಸಮಾಡಿದನು. ಅವನ ಕೂದಲು ಮಂಜುಗೆಡ್ಡೆಯ ಹಾಗೆ ಬೆಳ್ಳಗಾಯಿತು ಅವನ ಗಡ್ಡವು ಉದ್ದವಾಗಿ ಬೆಳೆದು ತೆಳ್ಳಗಾಗಿ ನರೆತುಹೋಯಿತು. ಅವನ ಆನಂದವೆಲ್ಲ ಮಾಯವಾಯಿತು, ಸೊಂಟ ಬಗ್ಗಿತು. ಅವನು ಬಹು ನಿದಾನವಾಗಿ ನಡೆಯುತ್ತಿದ್ದನು, ಬಹು ಮಿತವಾಗಿ ಮಾತಾಡುತ್ತಿದ್ದನು ಆದರೆ ಆಗಾಗ ದೇವರನ್ನು ಪ್ರಾರ್ಥಿಸುತ್ತಿದ್ದನು.

ಸೆರೆಯಲ್ಲಿ ಅಕ್ಸ್ಯೋನೋವ್ ಬೂಟುಗಳನ್ನು ಮಾಡುವುದನ್ನು ಕಲಿತುಕೊಂಡು ಸ್ವಲ್ಪ ದುಡ್ಡು ಸಂಪಾದಿಸಿದನು. ಈ ಹಣದಿಂದ 'ಸಂತರ ಜೀವನ ಚರಿತೆ'ಗಳ ಒಂದು ಪ್ರತಿಯನ್ನು ಕೊಂಡುಕೊಂಡನು. ಸೆರೆಮನೆಯಲ್ಲಿ ಸಾಕಾದಷ್ಟು ಬೆಳಕು ಇದ್ದಾಗಲೆಲ್ಲ ಆ ಪುಸ್ತಕವನ್ನು ಓದುತ್ತಿದ್ದನು. ಪ್ರತಿ ಭಾನುವಾರವೂ ಸೆರೆಮನೆಯ ಚರ್ಚಿನಲ್ಲಿ ಬೈಬಲನ್ನು ಓದಿ, ಪ್ರಾರ್ಥನೆಗಳನ್ನು ಹಾಡುತ್ತಿದ್ದನು. ಇನ್ನೂ ಅವನ ಕಂಠ ಚೆನ್ನಾಗಿಯೇ ಇದ್ದಿತು

ಅಕ್ಸ್ಯೋನೋವನ ನಮ್ರತೆಯನ್ನು ಕಂಡು ಸೆರೆಮನೆಯ ಅಧಿಕಾರಿಗಳೆಲ್ಲ ಅವನಲ್ಲಿ ಅಭಿಮಾನವಿಟ್ಟಿದ್ದರು. ಅವನ ಜೊತೆಯ ಬಂದಿಗಳು ಅವನನು

ಮರ್ಯಾದೆಯಿಂದ ಗೌರವಿಸುತ್ತಿದ್ದರು. ಎಲ್ಲರೂ ಅವನನ್ನು 'ಅಜ್ಜ' 'ಸಂತ' ಎಂದು ಕರೆಯುತ್ತಿದ್ದರು. ಯಾವ ವಿಚಾರದಲ್ಲಿಯಾದರೂ ಸೆರೆಮನೆಯ ಅಧಿಕಾರಿಗಳಿಗೆ ದೂರು ಹೇಳಿಕೊಳ್ಳಬೇಕಾದರೆ ಅಕ್ಸ್ಯೋನೋವನನ್ನೇ ಅವರು ತಮ್ಮ ಮುಂದಾಳು ಮಾಡಿಕೊಳ್ಳುತ್ತಿದ್ದರು. ತಮ್ಮ ತಮ್ಮೊಳಗೆ ಜಗಳವೇನಾದರೂ ಆದರೆ ಆಗ ಅವರೆಲ್ಲರೂ ಅಕ್ಸ್ಯೋನೋವನ ಹತ್ತಿರ ಬಂದು ನ್ಯಾಯವನ್ನು ವಿಚಾರಿಸಿ ತೀರ್ಪು ಹೇಳಿ ಜಗಳವನ್ನು ಪರಿಹರಿಸಬೇಕೆಂದು ಕೇಳಿಕೊಳ್ಳುತ್ತಿದ್ದರು

ಅಕ್ಸ್ಯೋನೋವ್‌ಗೆ ಮನೆಯಿಂದ ಯಾವ ಸಮಾಚಾರವೂ ತಲುಪಲಿಲ್ಲ ತನ್ನ ಹೆಂಡತಿಯೂ ಮಕ್ಕಳೂ ಇನ್ನೂ ಬದುಕಿದ್ದರೋ ಇಲ್ಲವೋ ಅದೂ ಅವನಿಗೆ ಗೊತ್ತಿರಲಿಲ್ಲ.

ಒಂದು ದಿನ ಹೊಸದಾಗಿ ಒಂದು ಬಂದಿಗಳ ತಂಡವನ್ನು ಸೆರೆಮನೆಗೆ ತಂದರು ಸಂಜೆಯಲ್ಲಿ ಹಳೆಯ ಬಂದಿಗಳು ಹೊಸ ಬಂದಿಗಳ ಸುತ್ತಮುತ್ತಲೂ ಸೇರಿಕೊಂಡು, ಯಾವ ಪಟ್ಟಣ ಅಥವ ಹಳ್ಳಿಗಳಿಂದ ಅವರು ಬಂದಿದ್ದರೆಂಬುದನ್ನೂ ಯಾವ ಅಪರಾಧಕ್ಕಾಗಿ ಅವರಿಗೆ ಶಿಕ್ಷೆಯಾಯಿತೆಂದೂ ವಿಚಾರಿಸುತ್ತಿದ್ದರು. ಉಳಿದವರ ಜೊತೆಯಲ್ಲಿಯೇ ಅಕ್ಸ್ಯೋನೋವ್ ಕೂಡ ಹೊಸಬರ ಹತ್ತಿರ ಮುಖತಗ್ಗಿಸಿ ಕುಳಿತುಕೊಂಡು ಅವರು ಹೇಳುತ್ತಿದ್ದದ್ದನ್ನು ಕೇಳುತ್ತಿದ್ದನು.

ಹೊಸದಾಗಿ ಬಂದ ಬಂದಿಗಳಲ್ಲಿ ಎತ್ತರವಾಗಿಯೂ ಬಲಶಾಲಿಯಾಗಿಯೂ ಇದ್ದ ಮತ್ತು ಬುಡದವರೆಗೆ ಕತ್ತರಿಸಿದ ನರೆತ ಗಡ್ಡವುಳ್ಳ ಅರವತ್ತು ವರ್ಷದ ಒಬ್ಬ ಮುದುಕನು ತನ್ನನ್ನು ಏತಕ್ಕಾಗಿ ಸೆರೆಹಿಡಿದರೆಂಬ ಸಂಗತಿಯನ್ನು ಉಳಿದವರಿಗೆಲ್ಲ ಹೇಳುತ್ತಿದ್ದನು.

'ಇಲ್ಲಿ ಕೇಳಿ, ಗೆಳೆಯರೇ. ಒಂದು ಸ್ಲೆಡ್ಜಿಗೆ (ಮಂಜಿನಮೇಲೆ ಉರುಳಿ ಹೋಗುವ ಚಕ್ರವಿಲ್ಲದ ಗಾಡಿ) ಕಟ್ಟಿದ್ದ ಒಂದು ಕುದುರೆಯನ್ನು ತೆಗೆದುಕೊಂಡೆ. ನನ್ನನ್ನು ಸೆರೆಹಿಡಿದು ಕದ್ದನೆಂದು' ತಪ್ಪುಹೊರಿಸಿದರು.

ಜಾಗ್ರತೆ ಮನೆಗೆ ಹೋಗುವುದಕ್ಕೋಸ್ಕರ ಅದನ್ನು ತೆಗೆದುಕೊಂಡಿದ್ದೆನೆಂದೂ ಮನೆಗೆ ಸೇರಿದಮೇಲೆ ಅದನ್ನು ಬಿಟ್ಟುಬಿಟ್ಟೆನೆಂದೂ, ಇಷ್ಟರಮೇಲೆ ಆ ಗಾಡಿಯುವನು ನನಗೆ ಇಷ್ಟಮಿತ್ರನಾಗಿದ್ದನೆಂದೂ ನಾನು ಹೇಳಿದೆ. ನಿಜಸ್ಥಿತಿ ಹೀಗಿದ್ದುದರಿಂದ 'ಎಲ್ಲ ಸರಿಯಾಗಿಯೇ ಇದೆ' ಎಂದೆ. ಅವರು 'ಇಲ್ಲ, ನೀನು ಅದನ್ನು ಕದ್ದೆ' ಎಂದರು. ಆದರೆ ನಾನು ಹೇಗೆ ಕದ್ದೆ ಎಲ್ಲಿ ಕದ್ದೆ, ಎಂಬುದೊಂದನ್ನೂ ಅವರು ಹೇಳಲಾರದೆ ಹೋದರು. ಒಂದುಸಲ ನಿಜವಾಗಿಯೂ ನಾನು ತಪ್ಪಿನ ಕೆಲಸವನ್ನು ಮಾಡಿದ್ದೆ. ನ್ಯಾಯವಾಗಿ ನೋಡಿದರೆ ಬಹಳ ಕಾಲದ ಹಿಂದೆಯೇ ನಾನು ಇಲ್ಲಿಗೆ ಬಂದಿರಬೇಕಾಗಿದ್ದಿತು. ಆದರೆ ಆಗ ನಾನು ಸಿಕ್ಕಿ ಬೀಳಲಿಲ್ಲ. ಈಗ ಸುಮ್ಮ ಸುಮ್ಮನೇ ನನ್ನನ್ನು ಇಲ್ಲಿಗೆ ಕಳುಹಿಸಿ ಬಿಟ್ಟಿದಾರೆ ..........ಏ! ನಿಮಗೆ ನಾನು ಹೇಳಿದ್ದು ಬರೀ ಸುಳ್ಳು, ನಾನು ಮೊದಲೇ ಸೈಬೀರಿಯಕ್ಕೆ ಬಂದಿದ್ದೆ, ಆದರೆ ಬಹುದಿನ ಇಲ್ಲಿ ನಿಲ್ಲಲಿಲ್ಲ.'

'ನಿಮ್ಮ ಊರು ಯಾವುದು?' ಎಂದು ಒಬ್ಬನು ಅವನನ್ನು ಕೇಳಿದನು.

'ವ್ಲಾಡಿಮಿರ್. ನಮ್ಮ ಮನೆಯವರು ಆ ಪಟ್ಟಣದವರು. ನನ್ನ ಹೆಸರು ಮಕಾರ್. ನನ್ನನ್ನು ಸಮ್ಯೋನಿಕ್ ಎಂದೂ ಕರೆಯುತ್ತಾರ.'

ಅಕ್ಸ್ಯೋನೋವ್ ಕತ್ತೆತ್ತಿ 'ಸಮ್ಯೋನಿಕ್, ವ್ಲಾಡಿಮಿರ್ ಪಟ್ಟಣದ ಅಕ್ಸ್ಯೋನೋವ್ ವರ್ತಕರ ವಿಚಾರ ನಿನಗೇನಾದರೂ ಗೊತ್ತಿದೆಯೇ? ಅವರಿನ್ನೂ ಬದುಕಿದಾರೆಯೇ? ಹೇಳಯ್ಯಾ' ಎಂದನು.

'ಅವರು ಗೊತ್ತಿಲ್ಲವೇ? ಅವರೆಲ್ಲ ನನಗೆ ಚೆನ್ನಾಗಿ ಗೊತ್ತು. ಅಕ್ಸ್ಯೋನೋವ್ ವರ್ತಕರು ಬಹಳ ಐಶ್ವರ್ಯವಂತರು. ಅವರಪ್ಪ ಮಾತ್ರ ಸೈಬೀರಿಯದಲ್ಲಿದಾನೆ, ನಮ್ಮಂತೆಯೇ ಅವನೂ ಪಾಪ ಮಾಡಿರಬಹುದು! ಅದಿರಲಿ, ಅಜ್ಜಯ್ಯಾ, ನೀನು ಹೇಗೆ ಬಂದೆ ಇಲ್ಲಿಗೆ?'

ತನ್ನ ದುರದೃಷ್ಟವನ್ನು ವಿವರಿಸಿ ಹೇಳಿಕೊಳ್ಳುವುದಕ್ಕೆ ಅಕ್ಸ್ಯೋನೋವ್‌ಗೆ ಇಷ್ಟವಿರಲಿಲ್ಲ. ಅವನು ನಿಟ್ಟುಸಿರುಬಿಡುತ್ತ 'ನನ್ನ ಪಾಪಗಳಿಗೆ

ಫಲವನ್ನನುಭವಿಸುತ್ತ ಈ ಇಪ್ಪತ್ತಾರು ವರ್ಷಗಳೂ ಸೆರೆಯಲ್ಲಿದೇನೆ' ಎಂದಿಷ್ಟೇ ಹೇಳಿದನು.

'ಯಾವ ಪಾಪಗಳಿಗೆ?' ಎಂದು ಮಕಾರ್ ಸೆಮ್ಯೋನಿಕ್ ಕೇಳಿದನು.

ಅಕ್ಸ್ಯೋನೋವ್, 'ಒಳ್ಳೇದು, ಒಳ್ಳೇದು—ನನಗೆ ಅದು ತಕ್ಕದ್ದೇ ಆಗಿರಬೇಕು' ಎಂದನು. ಇಷ್ಟು ಹೊರತು ಮತ್ತೇನೂ ಹೇಳಲಿಲ್ಲ. ಆದರೆ ಅವನ ಜೊತೆಗಾರರು ಅಕ್ಸ್ಯೋನೋವ್ ಸೈಬೀರಿಯಕ್ಕೆ ಹೇಗೆ ಬಂದನೆಂಬುದನ್ನು ಆ ಹೊಸಬನಿಗೆ ಹೇಳಿದರು. ಯಾವನೋ ಒಬ್ಬನು ಒಬ್ಬ ವರ್ತಕನನ್ನು ಕೊಂದು ಚೂರಿಯೊಂದನ್ನು ಅಕ್ಸ್ಯೋನೋವನ ಸಾಮಾನಿನ ಜೊತೆಯಲ್ಲಿ ಸೇರಿಸಿದ್ದನೆಂದೂ ಅದರಿಂದ ಅವನಿಗೆ ಅನ್ಯಾಯವಾಗಿ ಶಿಕ್ಷೆಯಾಯಿತೆಂದೂ ತಿಳಿಸಿದರು.

ಇದನ್ನು ಕೇಳಿ, ಮಕಾರ್ ಸೆಮ್ಯೋನಿಕ್ ಅಂಗೈಯಿಂದ ಮೊಳಕಾಲುಗಳನ್ನು ತಟ್ಟಿಕೊಂಡು 'ಏನು! ಏನಾಶ್ಚರ್ಯ! ನಿಜವಾಗಿಯೂ ಇದು ಬಹಳ ಆಶ್ಚರ್ಯ! ಆದರೆ, ಅಜ್ಜ, ನೀನೆಷ್ಟು ಮುದುಕನಾಗಿ ಬಿಟ್ಟಿದೀಯಪ್ಪಾ!' ಎಂದು ಆಶ್ಚರ್ಯದಿಂದ ಗಟ್ಟಿಯಾಗಿ ಆಡಿದನು.

ಉಳಿದವರು ಅವನು ಅಷ್ಟು ಆಶ್ಚರ್ಯಪಟ್ಟದ್ದೇಕೆಂದೂ ಅಕ್ಸ್ಯೋನೋವನ್ನು ಆ ಹಿಂದೆ ಎಲ್ಲಿ ನೋಡಿದ್ದನೆಂದೂ ಕೇಳಿದರು. ಆದರೆ ಮಕಾರ್ ಸೆಮ್ಯೋನಿಕ್ ಅದಕ್ಕೆ ಉತ್ತರ ಹೇಳಲಿಲ್ಲ. 'ನಾವು ಇಲ್ಲಿ ಸಂಧಿಸಿದ್ದು ಬಹಳ ಆಶ್ಚರ್ಯ!' ಎಂದು ಮಾತ್ರ ಹೇಳಿದನು.

ಅಕ್ಸ್ಯೋನೋವ್ ಈ ಮಾತುಗಳನ್ನು ಕೇಳಿ ವರ್ತಕನನ್ನು ಕೊಂದವರು ಯಾರೆಂಬುದು ಈ ಮನುಷ್ಯನಿಗೆ ಗೊತ್ತಿರಬಹುದೆಂದು ಊಹಿಸಿದನು. ಆದ್ದರಿಂದ ಅವನು 'ಸೆಮ್ಯೋನಿಕ್ ಒಂದುವೇಳೆ ನೀನು ಆ ವಿಚಾರವನ್ನು ಕೇಳಿರಬಹುದು. ಅಥವಾ ಈ ಮೊದಲೇ ನೀನು ನನ್ನನ್ನು ನೋಡಿದ್ದರೂ ನೋಡಿರಬಹುದು' ಎಂದನು.

'ಕೇಳದೆ ಇರುವುದು ಹೇಗೆ? ಲೋಕದಲ್ಲಿ ಎಲ್ಲೆಲ್ಲಿ ನೋಡಿದರೂ ಬಗೆಬಗೆಯ ಸುದ್ದಿಗಳೇ. ಆದರೆ ಅದು ಬಹಳ ಹಿಂದಿನ ಕಾಲದ ಮಾತು. ಆಗ ಏನು ಕೇಳಿದೆನೋ ಮರೆತು ಹೋಗಿದೆ.'

'ಇರಲಿ, ಆ ವರ್ತಕನನ್ನು ಕೊಂದವರು ಯಾರೆಂಬುದನ್ನು ಕೇಳಿ ರುವೆಯಲ್ಲವೆ?' ಎಂದು ಅಕ್ಸ್ಯೋನೋವ್ ಕೇಳಿದನು.

ಮಕಾರ್ ಸೆಮ್ಯೋನಿಕ್ ನಕ್ಕು, 'ಯಾರ ಚೀಲದಲ್ಲಿ ಚೂರಿ ಸಿಕ್ಕಿತೋ ಅವನೇ ಇರಬೇಕು! ಬೇರೆ ಯಾರಾದರೂ ಚೂರಿಯನ್ನು ಅಲ್ಲಿ ಮುಚ್ಚಿಟ್ಟಿದ್ದ ಪಕ್ಷದಲ್ಲಿ—ಗಾದೆಯ ಮಾತಿದೆಯಲ್ಲ, ಅದರಂತೆ "ಸಿಕ್ಕಿ ಬೀಳುವವರೆಗೂ ಅವನು ಕಳ್ಳನಲ್ಲ." ಚೀಲವನ್ನು ನಿನ್ನ ತಲೆಯ ಕೆಳಗೇ ಇಟ್ಟುಕೊಂಡಿರುವಾಗ ಬೇರೆ ಯಾರಾದರೂ ಅದರೊಳಕ್ಕೆ ಚೂರಿಯನ್ನು ಹೇಗೆ ತಾನೇ ತಂದಿಟ್ಟಾರು? ಹಾಗೆ ಮಾಡುವಾಗ ಖಂಡಿತವಾಗಿಯೂ ನಿನಗೆ ಎಚ್ಚರವಾಗುತ್ತಿದ್ದಿತಲ್ಲವೇ?' ಎಂದು ಉತ್ತರ ಕೊಟ್ಟನು.

ಅಕ್ಸ್ಯೋನೋವ್ ಈ ಮಾತುಗಳನ್ನು ಕೇಳಿದ ಕೂಡಲೇ ಅವನಿಗೆ ವರ್ತಕನನ್ನು ಕೊಂದವನು ಈ ಮನುಷ್ಯನೇ ಇರಬೇಕು ಅನ್ನಿಸಿತು. ಅವನು ಎದ್ದು ಅಲ್ಲಿಂದ ಹೊರಟುಹೋದನು. ಅವನಿಗೆ ಹೇಳಲಾರದಷ್ಟು ಸಂಕಟ ವಾಯಿತು, ನಾನಾ ಬಗೆಯ ಚಿತ್ರಗಳು ಮನಸ್ಸಿನಲ್ಲಿ ಮೂಡತೊಡಗಿದವು. ಮೊದಲು ಅವನ ಹೆಂಡತಿಯ ಚಿತ್ರ. ಜಾತ್ರೆಗೆ ಹೋಗುವುದಕ್ಕೆಂದು ಅವ ಳನ್ನು ಅಗಲಿ ಹೊರಟಾಗ ಹೇಗಿದ್ದಳೋ ಹಾಗೆಯೇ ಇದ್ದಳು. ಅವಳು ಎದುರಿಗಿದ್ದಂತೆಯೇ ಅವನಿಗೆ ತೋರಿತು. ಅವಳ ಮುಖವೂ ಕಣ್ಣುಗಳೂ ಅವನ ಮುಂದೆ ಸ್ಫುಟವಾಗಿ ಗೋಚರಿಸಿದವು. ಅವಳು ಮಾತಾಡುತ್ತ ನಗು ತ್ತಿದ್ದದ್ದು ಅವನಿಗೆ ಕೇಳಿಸಿತು. ಆಮೇಲೆ ಮಕ್ಕಳು ಕಾಣಿಸಿದವು; ಆಗ ಇದ್ದಂತೆ ಅವಿನ್ನೂ ಚಿಕ್ಕ ಚಿಕ್ಕವು; ಒಂದು ಒಂದು ಪುಟ್ಟ ಅಂಗಿಯನ್ನು ತೊಟ್ಟುಕೊಂಡಿದ್ದಿತು. ಇನ್ನೊಂದು ತಾಯಿಯ ಮೊಲೆಯುಣ್ಣುತ್ತಿದ್ದಿತು. ಆ ಬಳಿಕ, ಆಗ ತಾನು ತರುಣನಾಗಿ ಆನಂದಮಯನಾಗಿ ಹೇಗಿರುತ್ತಿದ್ದನೋ

ಅದನ್ನು ಸ್ಮರಿಸಿಕೊಂಡನು. ತನ್ನನ್ನು ಸೆರೆಹಿಡಿದ ಆ ಚತ್ರದ ಜಗುಲಿಯ ಮೇಲೆ ಗಿಟಾರ್ ಬಾರಿಸುತ್ತ ಯಾವ ಚಿಂತೆಯೂ ಇಲ್ಲದೆ ಸಂತೋಷದಿಂದ ಕೂತಿದ್ದದ್ದು ಜ್ಞಾಪಕವಾಯಿತು. ತನ್ನನ್ನು ಛಡಿಗಳಿಂದ ಹೊಡೆದ ಸ್ಥಳ, ಹಾಗೆ ಹೊಡೆದ ಮನುಷ್ಯ, ಸುತ್ತಲೂ ನಿಂತು ನೋಡುತ್ತಿದ್ದ ಜನರು, ಸರಪಣಿಗಳು, ಬಂದಿಗಳು, ತಾನು ಸೆರೆಮನೆಯಲ್ಲಿ ದಬ್ಬಿದ ಆ ಇಪ್ಪತ್ತಾರು ವರ್ಷಗಳ ಕಷ್ಟ ಜೀವನ, ಮತ್ತು ತನ್ನ ಅಕಾಲವಾರ್ಧಕ್ಯ, ಇಷ್ಟೂ ಅವನ ಮನಸ್ಸಿನಲ್ಲಿ ಮಿಂಚಿ ಇದನ್ನೆಲ್ಲ ಯೋಚಿಸಿ ಅವನಿಗೆ ಅಪರಿಮಿತವಾದ ಸಂಕಟ ವಾಯಿತು, ಪ್ರಾಣ ಕಳೆದುಕೊಳ್ಳಬೇಕೆನ್ನುವಷ್ಟು ದುಃಖವಾಯಿತು.

'ಇದೆಲ್ಲ ಆ ನೀಚ ಮಾಡಿದ ಕೆಲಸ!' ಎಂದುಕೊಂಡನು. ಮಕಾರ್ ಸೆಮ್ಯೋನಿಕ್‌ನ ಮೇಲೆ ಅವನಿಗೆ ಮಿತಿಮೀರಿದ ಕೋಪವುಂಟಾಯಿತು, ತನ್ನ ಪ್ರಾಣವೇ ಹೋಗುವುದಾದರೂ ಲಕ್ಷಿಸದೆ ಅವನ ಮೇಲೆ ಸೇಡು ತೀರಿಸಿ ಕೊಳ್ಳಬೇಕೆಂದು ಹಾತೊರೆಯತೊಡಗಿದನು. ರಾತ್ರಿಯೆಲ್ಲ ಎಡಬಿಡದೆ ಪ್ರಾರ್ಥನೆಗಳನ್ನು ಹೇಳಿಕೊಳ್ಳುತ್ತಿದ್ದನು, ಆದರೂ ಮನಸ್ಸಿಗೆ ಶಾಂತಿ ದೊರೆಯಲಿಲ್ಲ. ಹಗಲು ಹೊತ್ತು ಅವನು ಮಕಾರ್ ಸೆಮ್ಯೋನಿಕ್‌ನ ಹತ್ತಿರ ಹೋಗಲಿಲ್ಲ; ಅವನ ಕಡೆಗೆ ನೋಡಲೂ ಇಲ್ಲ.

ಈ ರೀತಿಯಲ್ಲಿ ಒಂದು ಪಕ್ಷ ಕಳೆಯಿತು. ಅಕ್ಸ್ಯೋನೋವ್‌ಗೆ ರಾತ್ರಿ ನಿದ್ದೆ ಬರುತ್ತಿರಲಿಲ್ಲ; ಅವನ ಗೋಳು ಹೆಚ್ಚಿತು; ಏನು ಮಾಡ ಬೇಕೊ ತೋರದಾಯಿತು.

ಒಂದು ದಿನ ರಾತ್ರಿ ಸೆರೆಮನೆಯೊಳಗೆ ಅತ್ತಿತ್ತ ಸುತ್ತಾಡುತ್ತಿದ್ದಾಗ ಬಂದಿಗಳು ಮಲಗಿದ್ದ ಹಲಗೆಯೊಂದರ ಕೆಳಗಿನಿಂದ ಸ್ವಲ್ಪ ಮಣ್ಣು ಹೊರಕ್ಕೆ ಉರುಳಿಕೊಂಡು ಬರುತ್ತಿದ್ದದ್ದು ಅವನ ಕಣ್ಣಿಗೆ ಬಿದ್ದಿತು. ಅದೇನೋ ನೋಡಬೇಕೆಂದು ಅಲ್ಲಿ ನಿಂತುಕೊಂಡನು. ತಕ್ಷಣವೇ ಮಕಾರ್ ಸೆಮ್ಯೋನಿಕ್ ಹಲಗೆಯ ಕೆಳಗಿನಿಂದ ತೆವಳಿಕೊಂಡು ಹೊರಗೆ ಬಂದನು; ಹೊರಗೆ ಬಂದು ಕತ್ತೆತ್ತಿ ಅಕ್ಸ್ಯೋನೋವನನ್ನು ಕಂಡು ಬೆದರಿ, ಅವನ ಮುಖ

ವನ್ನೇ ನೋಡತೊಡಗಿದನು. ಅಕ್ಸ್ಯೋನೋವ್ ಅವನನ್ನು ನೋಡದೆ ಮುಂದೆ ಹೋಗಲು ಯತ್ನಿಸಿದನು. ಆದರೆ ಮಕಾರ್ ಅವನ ಕೈಯನ್ನು ಭದ್ರವಾಗಿ ಹಿಡಿದುಕೊಂಡು ತಾನು ಗೋಡೆಯ ಕೆಳಗೆ ಒಂದು ಸುರಂಗ ವನ್ನು ಕೊರೆದಿರುವುದಾಗಿಯೂ, ಅಗೆದ ಮಣ್ಣನ್ನು ತನ್ನ ಬೂಟುಗಳೊಳಗೆ ತುಂಬಿಕೊಂಡಿದ್ದು ಪ್ರತಿದಿನವೂ ಬಂದಿಗಳನ್ನು ಕೆಲಸಕ್ಕೆ ಕರೆದುಕೊಂಡು ಹೋದಾಗ ದಾರಿಯಲ್ಲಿ ಅದನ್ನು ಚೆಲ್ಲುತ್ತಿರುವುದಾಗಿಯೂ ಹೇಳಿದನು

'ಮುದುಕಾ, ನಿನ್ನ ಹಾಳತಕ್ಕೆ ನೀನು ಸುಮ್ಮನಿರು, ನೀನೂ ತಪ್ಪಿಸಿ ಕೊಳ್ಳಬಹುದು. ನೀನೇನಾದರೂ ಹರಟಿದರೆ ನನಗೆ ಛಡಿ ಹೊಡೆದು ಸಾಯಿಸಿಬಿಡುತ್ತಾರೆ. ಆದರೆ ಮೊದಲು ನಿನ್ನನ್ನು ಕೂಂದುಬಿಡುತ್ತೇನೆ.'

ತನ್ನ ಶತ್ರುವನ್ನು ನೋಡುತ್ತಿದ್ದಾಗ ಅಕ್ಸ್ಯೋನೋವ್ ಕೋಪ ದಿಂದ ನಡುಗುತ್ತಿದ್ದನು. 'ನನಗೆ ತಪ್ಪಿಸಿಕೊಳ್ಳುವ ಇಷ್ಟವಿಲ್ಲ, ನೀನು ನನ್ನನ್ನು ಕೊಲ್ಲಬೇಕಾದ ಅಗತ್ಯವಿಲ್ಲ. ನೀನು ಬಹಳ ಹಿಂದೆಯೇ ನನ್ನನ್ನು ಕೊಂದು ಬಿಟ್ಟಿದ್ದೀಯೆ! ನಿನ್ನ ವಿಚಾರವನ್ನು ಹೇಳುವುದರಲ್ಲಿ,—ನಾನು ಹಾಗೆಮಾಡಿದರೂ ಮಾಡಬಹುದು, ಬಿಟ್ಟರೂ ಬಿಡಬಹುದು, ದೇವರು ಹೇಗೆ ಪ್ರೇರಿಸಿದರೆ ಹಾಗೆ ಮಾಡುತ್ತೇನೆ' ಎಂದು ಹೇಳುತ್ತ ತನ್ನ ಕೈಯನ್ನು ಹಿಂದಕ್ಕೆ ಎಳೆದುಕೊಂಡನು.

ಮರುದಿನ ಬಂದಿಗಳನ್ನು ಕೆಲಸಕ್ಕೆ ಕರೆದುಕೊಂಡು ಹೋಗುತ್ತಿದ್ದಾಗ ಯಾವನೋ ಒಬ್ಬ ಬಂದಿಯು ತನ್ನ ಬೂಟುಗಳಿಂದ ಸ್ವಲ್ಪ ಮಣ್ಣನ್ನು ಹೊರಕ್ಕೆ ಚಲ್ಲುತ್ತಿದ್ದಂತೆ ಕಾವಲಿನ ಸಿಪಾಯಿಗಳಿಗೆ ಕಂಡಿತು. ಸೆರೆಮನೆಯನ್ನೆಲ್ಲ ಶೋಧಿಸಿ ದರು. ಕೊರೆದಿದ್ದ ಸುರಂಗ ಸಿಕ್ಕಿತು. ಸೆರೆಮನೆಯ ಸರ್ವಾಧಿಕಾರಿ ಬಂದು ಸುರಂಗವನ್ನು ಕೊರೆದವರು ಯಾರೆಂದು ತಿಳಿದುಕೊಳ್ಳುವುದಕ್ಕಾಗಿ ಪ್ರತಿ ಯೊಬ್ಬ ಬಂದಿಯನ್ನೂ ಪ್ರಶ್ನೆಮಾಡತೊಡಗಿದನು. ಎಲ್ಲರೂ ತಮಗೆ ಏನೇನೂ ತಿಳಿಯದೆಂದು ಹೇಳಿದರು. ಗೊತ್ತಿದ್ದವರು ಮಕಾರ್ ಸೆಮ್ಯೋನಿಕ್‌ನನ್ನು ಕೈಬಿಡುವುದಕ್ಕೆ ಇಷ್ಟಪಡಲಿಲ್ಲ; ಅವನೇ ಕೊರೆದವನೆಂದು ತಿಳಿದರೆ ಹೆಚ್ಚು

ಕಡವೆ ಸಾಯುವಂತಾಗುವವರೆಗೂ ಅವನಿಗೆ ಛಡಿ ಏಟು ಬೀಳುವುದೆಂದು ಅವರೆಲ್ಲರಿಗೂ ಗೊತ್ತಿದ್ದಿತು. ಕಟ್ಟಕಡೆಗೆ ಸರ್ವಾಧಿಕಾರಿಯು ಅಕ್ಸ್ಯೋನೋವನ ಕಡೆಗೆ ತಿರುಗಿದನು. ಅವನು ಸತ್ಯವಾದಿಯೆಂದು ಅವನಿಗೆ ಗೊತ್ತು.

'ಅಯ್ಯಾ ಮುದುಕ, ನೀನು ಸತ್ಯವಂತ. ಸುರಂಗವನ್ನು ಕೊರೆದವರು ಯಾರು? ದೇವರ ಸಾಕ್ಷಿಯಾಗಿ ಹೇಳಿಬಿಡು' ಎಂದು ಕೇಳಿದನು.

ಮಕಾರ್ ಸೆಮ್ಯೋನಿಕ್ ಸ್ವಲ್ಪವೂ ಕಳವಳವಿಲ್ಲದವನಂತೆ ಸರ್ವಾಧಿಕಾರಿಯನ್ನು ನೋಡುತ್ತ ನಿಂತನು, ಅಕ್ಸ್ಯೋನೋವನ ಕಡೆಗೆ ತಿರುಗಿಯೂ ನೋಡಲಿಲ್ಲ. ಅಕ್ಸ್ಯೋನೋವನ ತುಟಿಗಳೂ ಕೈಗಳೂ ನಡುಗಿದವು; ಬಹಳ ಹೊತ್ತಿನವರೆಗೂ ಮಾತಾಡುವುದಕ್ಕೇ ಆಗಲಿಲ್ಲ. ಆಗ ಅವನು, 'ನನ್ನ ಜೀವಮಾನವನ್ನೇ ಹಾಳುಮಾಡಿದ ಈ ಮನುಷ್ಯನ ತಪ್ಪನ್ನು ಮುಚ್ಚಿ ನಾನೇಕೆ ಇವನನ್ನು ಕಾಪಾಡಲಿ? ನಾನು ಪಟ್ಟ ಸಂಕಟಕ್ಕೆ ತಕ್ಕದ್ದನ್ನು ಅವನು ಅನುಭವಿಸಲಿ! ಆದರೆ, ನಾನು ಹೇಳಿದರೆ, ಬಹುಶಃ ಛಡಿ ಹೊಡೆದೇ ಅವನನ್ನು ಸಾಯಿಸಿಬಿಡುತ್ತಾರೆ. ಅವನ ಮೇಲೆ ನಾನು ಸಂಶಯಪಡುತ್ತಿರುವುದು ತಪ್ಪಾಗಿದ್ದರೂ ಇರಬಹುದು. ಇಷ್ಟರಮೇಲೆ, ಇದರಿಂದ ನನಗೇನು ಒಳ್ಳೆಯದಾದೀತು?' ಎಂದು ಯೋಚಿಸಿದನು

'ಒಳ್ಳೆಯದಯ್ಯಾ, ಮುದುಕ, ನಿಜವನ್ನು ಹೇಳಿಬಿಡು. ಗೋಡೆಯ ಕೆಳಗೆ ಸುರಂಗ ಕೊರೆಯುತ್ತಿದ್ದವರು ಯಾರು?' ಎಂದು ಸೆರೆಮನೆಯ ಸರ್ವಾಧಿಕಾರಿ ಮತ್ತೆ ಪ್ರಶ್ನೆ ಮಾಡಿದನು.

ಅಕ್ಸ್ಯೋನೋವ್ ಮಕಾರ್ ಸೆಮ್ಯೋನಿಕ್‌ನ ಕಡೆಗೆ ಒಂದುಸಲ ಓರೆನೋಟದಿಂದ ನೋಡಿ ಸರ್ವಾಧಿಕಾರಿಯನ್ನು ಕುರಿತು 'ನಾನು ಹೇಳಲಾರೆ, ಮಹಾಸ್ವಾಮಿ. ನಾನು ಹೇಳಬೇಕೆಂದು ದೇವರಿಗೆ ಇಷ್ಟವಿಲ್ಲ! ನನ್ನನ್ನು ನೀವು ಏನು ಬೇಕಾದರೂ ಮಾಡಬಹುದು; ನಾನು ನಿಮ್ಮ ಕೈಯಲ್ಲಿದ್ದೇನೆ' ಎಂದನು.

ಸರ್ವಾಧಿಕಾರಿ ಎಷ್ಟೆಷ್ಟು ಪ್ರಯತ್ನಪಟ್ಟರೂ ಅಕ್ಸ್ಯೋನೋವ್

ಹೆಚ್ಚಾಗಿ ಒಂದು ಮಾತನ್ನೂ ಆಡಲಿಲ್ಲ ಆದ್ದರಿಂದ ಅದನ್ನು ಅಷ್ಟಕ್ಕೇ ಕೈಬಿಡಬೇಕಾಯಿತು.

ಅವತ್ತು ರಾತ್ರಿ ಅಕ್ಸ್ಯೋನೋವ್ ತನ್ನ ಹಾಸಿಗೆಯಲ್ಲಿ ಮಲಗಿದ್ದನು ಆಗತಾನೇ ಜೋಂಪು ಹತ್ತುತ್ತಿದ್ದಿತು. ಆಗ ಯಾರೋ ಒಬ್ಬನು ಸ್ವಲ್ಪವೂ ಸದ್ದುಮಾಡದೆ ಅವನ ಹತ್ತಿರ ಬಂದು ಹಾಸಿಗೆಯ ಮೇಲೆ ಕುಳಿತುಕೊಂಡನು. ಅಕ್ಸ್ಯೋನೋವ್ ಕತ್ತಲೆಯಲ್ಲಿ ದೃಷ್ಟಿಸಿ ನೋಡಿ ಮಕಾರ್‌ನನ್ನು ಗುರುತಿಸಿದನು.

'ನನ್ನಿಂದ ನಿನಗೆ ಇನ್ನೇನಾಗಬೇಕಾಗಿದೆ? ಇಲ್ಲಿಗೇಕೆ ಬಂದೆ?' ಎಂದು ಅಕ್ಸ್ಯೋನೋವ್ ಕೇಳಿದನು.

ಮಕಾರ್ ಸೆಮ್ಯೋನಿಕ್ ಮೌನವಾಗಿದ್ದನು. ಆಗ ಅಕ್ಸ್ಯೋನೋವ್ ಎದ್ದು ಕುಳಿತುಕೂಂಡು 'ನಿನಗೇನು ಬೇಕು? ಹೊರಟುಹೋಗು. ಇಲ್ಲದಿದ್ದರೆ ಕಾವಲುಗಾರನನ್ನು ಕೂಗಿಬಿಡುತ್ತೇನೆ' ಎಂದನು.

ಮಕಾರ್ ಸೆಮ್ಯೋನಿಕ್ ಅಕ್ಸ್ಯೋನೋವನ ಮೈಮೇಲೆ ಬಹು ಹತ್ತಿರವಾಗಿ ಬಗ್ಗಿ 'ಇವ್ಯಾನ್ ಡ್ಮಿಟ್ರಿಕ್, ನನ್ನನ್ನು ಕ್ಷಮಿಸು' ಎಂದು ಪಿಸುಗುಟ್ಟಿದನು.

'ಏತಕ್ಕೆ ಕ್ಷಮಿಸಬೇಕು?' ಎಂದು ಅಕ್ಸ್ಯೋನೋವ್ ಕೇಳಿದನು.

'ಆ ವರ್ತಕನನ್ನು ಕೊಂದು ಚೂರಿಯನ್ನು ನಿನ್ನ ಸಾಮಾನುಗಳಲ್ಲಿ ಮುಚ್ಚಿಟ್ಟವನು ನಾನೇ. ನಿನ್ನನ್ನೂ ಕೊಲ್ಲಬೇಕೆಂದಿದ್ದೆ, ಆದರೆ ಆಗ ಹೊರಗಡೆ ಒಹಳ ಸದ್ದು ಕೇಳಿಸಿತು. ಆದ್ದರಿಂದ ಚೂರಿಯನ್ನು ನಿನ್ನ ಚೀಲದೊಳಗೆ ಮುಚ್ಚಿಟ್ಟು ಕಿಟಿಕಿಯೊಳಗಿನಿಂದ ತಪ್ಪಿಸಿಕೊಂಡು ಓಡಿಹೋದೆ'

ಅಕ್ಸ್ಯೋನೋವ್‌ಗೆ ಏನು ಹೇಳಬೇಕೆಂಬುದೇ ತೋರಲಿಲ್ಲ, ಸುಮ್ಮನೆ ಕುಳಿತಿದ್ದನು. ಮಕಾರ್ ಸೆಮ್ಯೋನಿಕ್ ಹಾಸಿಗೆಯ ಮೇಲಿನಿಂದ ಎದ್ದು ಹೋಗಿ ನೆಲದ ಮೇಲೆ ಕುಳಿತುಕೊಂಡನು 'ಇವ್ಯಾನ್ ಡ್ಮಿಟ್ರಿಕ್, ನನ್ನನ್ನು ಕ್ಷಮಿಸು! ದೇವರ ದಯವನ್ನು ಸ್ಮರಿಸಿ ನನ್ನನ್ನು ಕ್ಷಮಿಸು! ವರ್ತಕನನ್ನು

ಕೊಂದವನು ನಾನೇ ಎಂದು ಹೇಳಿಬಿಡುತ್ತೇನೆ. ನಿನಗೆ ಬಿಡುಗಡೆಯಾಗುತ್ತದೆ, ಆಮೇಲೆ ಮನೆಗೆ ಹೋಗುವೆಯಂತೆ' ಎಂದನು.

'ಮಾತಾಡುವುದು ನಿನಗೆ ಸುಲಭ. ಈ ಇಪ್ಪತ್ತಾರು ವರ್ಷಗಳೂ ನಿನಗೋಸ್ಕರ ನಾನು ಬಹಳ ಸಂಕಟವನ್ನು ಅನುಭವಿಸಿದೇನೆ. ಈಗ ನಾನೆಲ್ಲಿಗೆ ಹೋಗಲಿ? . .ನನ್ನ ಹೆಂಡತಿ ಸತ್ತಳು, ಮಕ್ಕಳು ನನ್ನನ್ನು ಮರೆತಿದಾರೆ. ಹೋಗುವುದಕ್ಕೆ ನನಗೆ ಸ್ಥಳವೇ ಇಲ್ಲ.... .' ಎಂದನು.

ಮಕಾರ್ ಸೆಮ್ಯೋನಿಕ್ ಮೇಲಕ್ಕೇಳಲಿಲ್ಲ, ತನ್ನ ಗಡ್ಡದಿಂದ ನೆಲವನ್ನು ಗುಡಿಸತೊಡಗಿದನು. 'ಇವ್ಯಾನ್ ಡ್ಮಿಟ್ರಿಕ್, ನನ್ನನ್ನು ಕ್ಷಮಿಸು. ಅವರು ಛಡಿಯಿಂದ ನನ್ನನ್ನು ಹೊಡೆದಾಗ, ಈಗ ನಿನ್ನನ್ನು ನೋಡುವಾಗ ಆಗುತ್ತಿರುವಷ್ಟು ಸಂಕಟವಾಗಿರಲಿಲ್ಲ........ಆದರೂ ನೀನು ನನ್ನ ಮೇಲೆ ಕರುಣೆಯಿಟ್ಟು ಅವರಿಗೆ ಹೇಳಲಿಲ್ಲ ನಾನೇನೋ ನೀಚ ಪಾಪಿ, ಆದರೂ ಆ ಕ್ರಿಸ್ತನನ್ನು ನೆನೆದು ನನ್ನನ್ನು ಮನ್ನಿಸಿಬಿಡು' ಎಂದು ಕೇಳಿಕೊಂಡನು. ಹಾಗೆ ಹೇಳುತ್ತ ಹೇಳುತ್ತ ಬಿಕ್ಕಳಿಸಿ ಅತ್ತುಬಿಟ್ಟನು.

ಅವನು ಬಿಕ್ಕಳಿಸಿ ಅಳುವುದನ್ನು ಕೇಳಿ ಅಕ್ಸ್ಯೋನೋವ್‌ಗೂ ಅಳು ಬಂದಿತು. ಅವನು—

'ದೇವರು ನಿನ್ನನ್ನು ಕ್ಷಮಿಸುತ್ತಾನೆ, ನಿನಗಿಂತ ನಾನು ನೂರು ಪಾಲು ಹೆಚ್ಚು ನೀಚನಾಗಿರುವೆನೋ ಏನೋ!' ಎಂದನು.

ಈ ಮಾತು ಅವನ ಬಾಯಿಂದ ಬಂದಕೂಡಲೆ ಅವನ ಹೃದಯ ಹಗುರವಾಯಿತು, ಮನೆಯ ಗೀಳು ತಪ್ಪಿಹೋಯಿತು. ಅಲ್ಲಿಂದ ಮುಂದೆ ಸೆರೆಮನೆಯನ್ನು ಬಿಟ್ಟು ಹೋಗಬೇಕೆಂಬ ಆಸೆಯೇ ಅವನಿಗೆ ಉಂಟಾಗಲಿಲ್ಲ ತನ್ನ ಕೊನೆಗಾಲ ಬಂದೀತೇ ಎಂದು ನಿರೀಕ್ಷಿಸುತ್ತಿದ್ದನು.

ಅಕ್ಸ್ಯೋನೋವ್ ಹಾಗೆ ಹೇಳಿದ್ದರೂ ಮಕಾರ್ ಸೆಮ್ಯೋನಿಕ್ ತನ್ನ ಅಪರಾಧವನ್ನು ಅಧಿಕಾರಿಗಳಲ್ಲಿ ಹೇಳಿಕೊಂಡನು. ಆದರೆ ಅಕ್ಸ್ಯೋನೋವನ್ನು ಬಿಡುಗಡೆ ಮಾಡಬೇಕೆಂಬ ಆಜ್ಞೆ ಬರುವ ಹೊತ್ತಿಗೆ ಅವನಾಗಲೇ ಸತ್ತುಹೋಗಿದ್ದನು.

---

# ಜನರು ಜೀವಿಸುವುದೇತರಿಂದ?



'ಸಾವಿಂದ ಜೀವನಕೆ ನುಸುಳಿ ಬಂದಿಹೆವೆಂದು ಬಲ್ಲೆವಯ್ಯ ಹೇಗೆನಲು ನಾವೆಲ್ಲ ಸೋದರರ ಪ್ರೀತಿಸುವೆವು ಯಾವಾತ ಪ್ರೀತಿಸನೊ ಆತ ಸಾವಿನಲೆ ಇಹನು '— ಸೆಂಟ್‌ಜಾನನ ೧ ನೆಯ ಪತ್ರ ೩ ೧೪

'ಜಗದ ಸಂಪದ ತನ್ನಲಿದ್ದರೂ, ಸೋದರನ ಬಡತನವ ಕಂಡು, ಕರುಣೆಯನು ಹರಿಸದೆಯೆ ತನ್ನೊಳಗೆ ಅಡಗಿಸುವನಾವನೋ ಆತನಲಿ ದೇವಭಕ್ತಿಯು ಬಂದು ನೆಲಸುವುದದೆಂತು? ನನ್ನೆಳೆಯ ಮಕ್ಕಳಿರ, ಮಾತಿನಲಿ ಪ್ರೀತಿಸದೆ, ನಾಲಗೆಯ ಪ್ರೀತಿಯನು ತೋರಿಸದೆ, ಕಾರ್ಯದಲಿ, ಸತ್ಯದಲಿ ಪ್ರೀತಿಸುವ ನಾವು '—೩ ೧೭—೧೮

'ಪ್ರೇಮ ದೇವರ ಅಂಶ, ಪ್ರೀತಿಸುವರೆಲ್ಲರೂ ದೇವರಣುಗರು, ದೇವರನು ಬಲ್ಲರವರು ಯಾವಾತ ಪ್ರೀತಿಸನೊ ಅವನರಿಯ ದೇವರನು, ಏಕೆನಲು ದೇವರೇ ಪ್ರೇಮವಯ್ಯ '—೪ ೭—೮

'ಯಾವನೂ ಎಂದೂ ದೇವರನು ಕಂಡಿಲ್ಲ, ಒಬ್ಬರೊಬ್ಬರ ನಾವು ಪ್ರೀತಿಸಲು ನಮ್ಮಲ್ಲಿ ದೇವರೇ ನೆಲಸುವನು ಬಂದು '—೪ ೧೨

'ದೇವರೇ ಪ್ರೇಮ, ಯಾರು ಪ್ರೇಮದಲಿಹನೊ ಅವನು ದೇವರಲಿಹನು, ದೇವರೂ ಅವನಲಿಹನು?—೪ ೧೬ '

'ದೇವರನು ಪ್ರೀತಿಸುವೆನೆಂದಾಡಿ ಸೋದರರ ಹಗೆಗೊಂಬ ಮಾನವನು ಸುಳ್ಳನಯ್ಯ, ಏಕೆನಲು ತಾ ಕಂಡ ಸೋದರನ ಪ್ರೀತಿಸದೆ ಬಿಟ್ಟವನು ಕಾಣದಿಹ ದೇವರನು ಪ್ರೀತಿಸುವನೆಂತು?'—೪ ೨೦

## ೧

ಸೈಮನ್ ಎಂಬ ಒಬ್ಬ ಮೋಚಿಯಿದ್ದನು. ಅವನಿಗೆ ಸ್ವಂತ ಮನೆಯಾಗಲಿ ಭೂಮಿಯಾಗಲಿ ಇರಲಿಲ್ಲ. ಅವನು ಹೆಂಡತಿ ಮಕ್ಕಳೊಡನೆ ಒಬ್ಬ ರೈತನ ಗುಡಿಸಲ್ಲಿ ವಾಸಮಾಡುತ್ತ ಮೆಟ್ಟು ಹೊಲಿಯುವ ತನ್ನ ಕೆಲಸದಿಂದ ಹೊಟ್ಟೆ ಹೊರೆಯುತ್ತಿದ್ದನು. ಕೆಲಸ ಅಗ್ಗವಾಗಿದ್ದಿತು, ಆದರೆ ಅನ್ನ ತಗ್ಗಾಗಿದ್ದಿತು. ಅವನು ಸಂಪಾದಿಸಿದ್ದೆಲ್ಲ ಆಹಾರಕ್ಕೇ ಖರ್ಚಾಗುತ್ತಿದ್ದಿತು. ಚಳಿ

ಗಾಲದಲ್ಲಿ ತೊಟ್ಟುಕೊಳ್ಳುವುದಕ್ಕೆ ಅವನು, ಅವನ ಹೆಂಡತಿ ಇಬ್ಬರಿಗೂ ಒಟ್ಟು ಕುರಿಯ ಚಕ್ಕಳದ ಅಂಗಿ ಒಂದೇ ಒಂದಿದ್ದಿತು. ಅದು ಕೂಡ ಹಳೆಯದಾಗಿ ಚಿಂದಿಚಿಂದಿಯಾಗಿದ್ದಿತು. ಹೊಸ ಅಂಗಿಗೋಸ್ಕರವಾಗಿ ಕುರಿಯ ಚಕ್ಕಳ ವನ್ನು ಕೊಂಡುಕೊಳ್ಳಬೇಕೆಂದು ಎರಡು ವರ್ಷಗಳಿಂದಲೂ ಪ್ರಯತ್ನ ಪಡುತ್ತಿದ್ದನು. ಚಳಿಗಾಲಕ್ಕ ಮೊದಲೇ ಸೈಮನ್ನನು ಸ್ವಲ್ಪ ಹಣವನ್ನು ಕೂಡಿಸಿದ್ದನು. ಮೂರು ರೂಬಲ್ಲಿನ ನೋಟನ್ನು ತನ್ನ ಹೆಂಡತಿಯ ಪೆಟ್ಟಿಗೆಯಲ್ಲಿ ಮುಚ್ಚಿಟ್ಟಿದ್ದನು, ಐದು ರೂಬಲ್ ಮೇಲೆ ಇಪ್ಪತ್ತು ಕೋಪೆಕ್ *ಗಳು ಹಳ್ಳಿಯಲ್ಲಿದ್ದ ಗಿರಾಕಿಗಳಿಂದ ಬರಬೇಕಾಗಿದ್ದಿತು.

ಒಂದು ದಿನ ಬೆಳಗ್ಗೆ ಕುರಿಯ ಚಕ್ಕಳವನ್ನು ಕೊಳ್ಳುವುದಕ್ಕೋಸ್ಕರ ಹಳ್ಳಿಗೆ ಹೋಗಬೇಕೆಂದು ಅವನು ಸಿದ್ಧಮಾಡಿಕೊಂಡನು. ತನ್ನ ಷರಟಿನ ಮೇಲೆ ತನ್ನ ಹೆಂಡತಿಯ ಜಾಕಟ್ಟನ್ನು ತೊಟ್ಟುಕೊಂಡು ಅದರ ಮೇಲೆ ತನ್ನ ಬಟ್ಟೆಯ ಅಂಗಿಯನ್ನು ತೊಟ್ಟುಕೊಂಡನು. ಮೂರು ರೂಬಲ್ಲಿನ ನೋಟನ್ನು ತೆಗೆದು ಜೇಬಿನಲ್ಲಿಟ್ಟುಕೊಂಡನು. ಒಂದು ಕೋಲನ್ನು ಕತ್ತರಿಸಿಕೊಂಡು ಅದನ್ನು ಊರುಗೋಲು ಮಾಡಿಕೊಂಡನು. ಆಮೇಲೆ ಸ್ವಲ್ಪ ತಿಂಡಿ ತಿಂದು ಹೊರಟನು. "ನನಗೆ ಬರಬೇಕಾದ ಐದು ರೂಬಲ್‌ಗಳನ್ನು ವಸೂಲು ಮಾಡಿಕೊಂಡು ಅದಕ್ಕೆ ನನ್ನ ಹತ್ತಿರ ಇರುವ ಮೂರು ರೂಬಲ್‌ಗಳನ್ನು ಸೇರಿಸುತ್ತೇನೆ. ಚಳಿಗಾಲಕ್ಕೆ ತಕ್ಕ ಅಂಗಿಗೆ ಬೇಕಾಗುವಷ್ಟು ಕುರಿಯ ಚಕ್ಕಳವನ್ನು ಕೊಂಡುಕೊಳ್ಳುವುದಕ್ಕೆ ಅಷ್ಟು ಹಣ ಸಾಕಾಗುತ್ತದೆ" ಎಂದು ಅವನು ಯೋಚಿಸಿದನು.

ಅವನು ಹಳ್ಳಿಗೆ ಬಂದು ರೈತನ ಮನೆಯಲ್ಲಿ ವಿಚಾರಿಸಿದನು ಆದರೆ ಅವನು ಮನೆಯಲ್ಲಿರಲಿಲ್ಲ. ರೈತನ ಹೆಂಡತಿಯು ಹಣವನ್ನು ಮುಂದಿನ ವಾರ ಕೊಡುವುದಾಗಿ ಹೇಳಿದಳು. ಆದರೆ ತಾನೇ ಅದನ್ನು ಕೊಟ್ಟುಬಿಡುವುದಕ್ಕೆ

* ಒಂದು ರೂಬಲ್‌ಗೆ ನೂರು ಕೋಪೆಕ್‌ಗಳು. ಒಂದು ಕೋಪೆಕ್‌ಗೆ ಸುಮಾರು ಮೂರು ಕಾಸು.

ಒಪ್ಪಲಿಲ್ಲ. ಆಮೇಲೆ ಸೈಮನ್ನನು ಮತ್ತೊಬ್ಬ ರೈತನ ಬಳಿಗೆ ಹೋದನು. ಆದರೆ ಈ ಮನುಷ್ಯನು ತನ್ನ ಹತ್ತಿರ ದುಡ್ಡು ಇಲ್ಲವೇ ಇಲ್ಲವೆಂದು ಆಣೆ ಇಟ್ಟುಕೊಂಡು ಸೈಮನ್ನನು ತನಗೆ ಸರಿಮಾಡಿಕೊಟ್ಟಿದ್ದ ಒಂದು ಜೊತೆ ಬೂಟುಗಳಿಗೆ ಕೊಡಬೇಕಾಗಿದ್ದ ಇಪ್ಪತ್ತು ಕೋಪೆಕ್‌ಗಳನ್ನು ಮಾತ್ರ ಕೊಟ್ಟನು. ಸೈಮನ್ನನು, ಆಮೇಲೆ, ಕುರಿಯ ಚಕ್ಕಳವನ್ನು ಸಾಲವಾಗಿ ಕೊಳ್ಳುವುದಕ್ಕೆ ಪ್ರಯತ್ನಪಟ್ಟನು. ಆದರೆ ವರ್ತಕನು ಅವನನ್ನು ನಂಬಲಿಲ್ಲ. ಅವನು 'ದುಡ್ಡು ತೆಗೆದುಕೊಂಡು ಬಾ. ಆಗ ನಿನ್ನ ಕಣ್ಣಿಗೆ ಬೇಕಾದಂಥ ಚಕ್ಕಳಗಳನ್ನು ಆರಿಸಿಕೊಳ್ಳುವೆಯಂತೆ. ಸಾಲವನ್ನು ವಸೂಲು ಮಾಡುವುದು ಏನೆಂಬುದು ನಮಗೆ ಚೆನ್ನಾಗಿ ಗೊತ್ತು' ಎಂದನು.

ಆದ್ದರಿಂದ ಆ ಮೋಚಿಯು ತಾನು ಬೂಟುಗಳನ್ನು ಸರಿಮಾಡಿ ಕೊಟ್ಟದ್ದಕ್ಕಾಗಿ ಬರಬೇಕಾಗಿದ್ದ ಇಪ್ಪತ್ತು ಕೋಪೆಕ್‌ಗಳನ್ನು ತೆಗೆದುಕೊಂಡನು. ರೈತನೊಬ್ಬನು ಚಕ್ಕಳದಿಂದ ಅಟ್ಟೆ ಕಟ್ಟುವುದಕ್ಕಾಗಿ ಕೊಟ್ಟ ಒಂದು ಜೊತೆ ಫೆಲ್ಟ್ ಬೂಟುಗಳನ್ನು ತೆಗೆದುಕೊಂಡನು. ಇದಿಷ್ಟೇ ಅವನು ಮಾಡಿದ ಕೆಲಸ.

ಸೈಮನ್ನನಿಗೆ ಮನಸ್ಸಮಾಧಾನವಾಗಲಿಲ್ಲ. ಅವನು ಇಪ್ಪತ್ತು ಕೋಪೆಕ್‌ಗಳನ್ನು ಹೆಂಡಕ್ಕೆ (ಓಡ್ಕ) ಖರ್ಚುಮಾಡಿ ಚಕ್ಕಳವನ್ನು ಕೊಂಡುಕೊಳ್ಳದೆ ಹಾಗೆಯೇ ಮನೆಯ ಕಡೆಗೆ ಹೊರಟನು. ಬೆಳಗ್ಗೆ ಅವನಿಗೆ ಮಂಜು ತಣ್ಣಗೆ ಕಾಣಿಸಿತ್ತು, ಆದರೆ ಈಗ, ಓಡ್ಕ ಕುಡಿದ ಮೇಲೆ ಕುರಿ ಚಕ್ಕಳದ ಅಂಗಿ ಇಲ್ಲದಿದ್ದರೂ ಅವನಿಗೆ ಬೆಚ್ಚಗಾಯಿತು. ಅವನು ಮೆಲ್ಲಮೆಲ್ಲಗೆ ಮುಂದಕ್ಕೆ ನಡೆಯುತ್ತಿದ್ದನು. ಒಂದು ಕೈಯಲಿದ್ದ ದೊಣ್ಣೆಯಿಂದ ಮಂಜಿನಿಂದ ಗೆಡ್ಡೆ ಕಟ್ಟಿದ ನೆಲದ ಮೇಲೆ ಕುಟ್ಟುತ್ತ, ಇನ್ನೊಂದು ಕೈಯಲ್ಲಿ ಫೆಲ್ಟ್ ಬೂಟುಗಳನ್ನು ತೂಗಾಡಿಸುತ್ತ ತನ್ನಷ್ಟಕ್ಕೆ ತಾನೇ ಮಾತಾಡಿ ಕೊಳ್ಳುತ್ತಿದ್ದನು.

'ಕುರಿಯ ಚಕ್ಕಳದ ಅಂಗಿಯಿಲ್ಲದಿದ್ದರೂ ನಾನು ಬೆಚ್ಚಗೇ ಇದೇನೆ.

ನಾನು ಒಂದು ತೊಟ್ಟು ಕುಡಿದೆ, ಅದು ನನ್ನ ಮೈಯ ರಕ್ತನಾಳಗಳಲ್ಲೆಲ್ಲ ಹರಿಯುತ್ತಿದೆ. ನನಗೆ ಕುರಿಯ ಚಕ್ಕಳದ ಅಗತ್ಯವೇ ಇಲ್ಲ. ನೆಟ್ಟಗೆ ನಡೆದುಬಿಡುತ್ತೇನೆ; ಯಾವುದನ್ನೂ ಮನಸ್ಸಿಗೆ ಹಚ್ಚಿಕೊಂಡು ಕೊರಗುವುದಿಲ್ಲ. ನಾನಂಥ ಸ್ವಭಾವದ ಮನುಷ್ಯ. ಏನಾದರೇನು ನನಗೆ? ಕುರಿಯ ಚಕ್ಕಳ ಇಲ್ಲದಿದ್ದರೂ ನಾನು ಜೀವಿಸಿರಬಲ್ಲೆ. ನನಗೆ ಬೇಕೇ ಇಲ್ಲ. ನನ್ನ ಹೆಂಡತಿ ಗೊಣಗುತ್ತಾಳೆ, ನನಗೆ ಗೊತ್ತು. ಅಲ್ಲ ಮತ್ತೆ, ಹಗಲೆಲ್ಲ ಕೆಲಸ ಮಾಡುವುದು, ಆದರೂ ಕೂಲಿ ಕೈಗೆ ಕೊಡುವುದಿಲ್ಲ, ನಿಜ, ಇದು ಶುದ್ಧ ಅವಮಾನ ಸ್ವಲ್ಪ ನಿಲ್ಲು, ನೀನು ಬರುವಾಗ ಆ ಹಣ ತರದೆ ಇದ್ದರೆ, ಖಂಡಿತವಾಗಿಯೂ ನಿನ್ನ ಚರ್ಮ ಸುಲಿದುಬಿಡುತ್ತೇನೆ, ಸುಲಿಯದೆ ಇದ್ದರೆ ಆಗ ನೋಡುವೆಯಂತೆ. ಅದು ಹೇಗಪ್ಪಾ ಅದು? ಅವನು ಒಂದೊಂದು ಸಲಕ್ಕೆ ಇಪ್ಪತ್ತಿಪ್ಪತ್ತು ಕೋಪೆಕ್ ಕೊಡುತಾನಲ್ಲ! ಇಪ್ಪತ್ತು ಕೋಪೆಕ್ಕಿನಲ್ಲಿ ನಾನೇನು ತಾನೇ ಮಾಡಲಿ? ಕುಡಿಯುವುದು ತಾನೇ—ಅದೊಂದೇ ನಾವು ಮಾಡಬಹುದಾದದ್ದು! ದುಡ್ಡಿಲ್ಲ ಅಂತಾನೆ! ಇರಬಹುದು—ಆದರೆ ನನ್ನ ಗತಿಯೇನು? ನಿನಗೆ ಮನೆಯಿದೆ ದನಕರುಗಳಿವೆ, ಎಲ್ಲ ಇದೆ, ನನಗೆ, ನನ್ನ ಮೈಮೇಲಿರುವುದೆಷ್ಟೋ ಅಷ್ಟೆ! ನಿನಗೆ, ನೀನೇ ಬೆಳೆದುಕೊಂಡ ಧಾನ್ಯವಿದೆ, ನಾನು ಒಂದೊಂದು ಕಾಳನ್ನೂ ಕೊಳ್ಳಬೇಕು. ಏನೇನು ಮಾಡಿದರೂ ಬರಿಯ ರೊಟ್ಟಿಗೇ ವಾರಕ್ಕೆ ಮೂರು ರೂಬಲ್ ನಾನು ಖರ್ಚು ಮಾಡಬೇಕಾಗಿದೆ ಮನೆಗೆ ಬಂದರೆ ರೊಟ್ಟಿಯೆಲ್ಲ ಮುಗಿದು ಹೋಗಿ ಮತ್ತೆ ಒಂದೂವರೆ ರೂಬಲ್ ಖರ್ಚು ಮಾಡಬೇಕಾಗಿ ಬರುತ್ತೆ. ಆದರಿಂದ ನೀನು ಕೊಡಬೇಕಾಗಿರುವುದನ್ನು ತೆತ್ತುಬಿಡು. ಸಲ್ಲದ ನೆವ ಗಿವ ಒಂದೂ ಹೇಳಬೇಡ!"

ಇಷ್ಟು ಹೊತ್ತಿಗೆ ದಾರಿ ಡೊಂಕಾಗಿ ತಿರುಗಿದ ಬಳಿಯಲ್ಲಿದ್ದ ಗುಡಿಯ ಹತ್ತಿರ ಹತ್ತಿರ ಬಂದಿದ್ದನು. ಕತ್ತೆತ್ತಿ ನೋಡಲಾಗಿ ಗುಡಿಯ ಹಿಂದೆ ಬೆಳ್ಳಗೆ ಏನೋ ಒಂದು ಅವನಿಗೆ ಕಾಣಿಸಿಕೊಂಡಿತು. ಹಗಲಿನ ಬೆಳಕು ಮಸಕಾಗುತ್ತಿದ್ದಿತು. ಮೋಚಿಯು ಅದರ ಕಡೆಗೆ ಬಗ್ಗಿ ನೋಡಿದನು.

ಆದರೆ ಅದೇನೆಂದು ಅವನಿಗೆ ತಿಳಿಯಲೇ ಇಲ್ಲ. 'ಮೊದಲು ಇಲ್ಲಿ ಬಿಳಿಯ ಕಲ್ಲು ಒಂದೂ ಇರಲಿಲ್ಲ, ಅದೊಂದು ಎತ್ತಿರಬಹುದೆ? ಎತ್ತಿನ ಹಾಗೆ ಕಾಣು ವುದಿಲ್ಲ, ಆದರ ತಲೆ ಮನುಷ್ಯನ ಹಾಗೇ ಇದೆ, ಆದರೆ ಅದು ತೀರ ಬಿಳಿಚಿ ಕೊಂಡಿದೆ, ಮನುಷ್ಯನಾದರೆ ಅಲ್ಲವನೇನು ಮಾಡುತ್ತಿರಬಹುದು?'

ಅವನು ಇನ್ನೂ ಹತ್ತಿರ ಬಂದನು. ಅದು ಚೆನ್ನಾಗಿ ಕಾಣಿಸ ತೊಡ ಗಿತು. ನೋಡಿ ಅವನಿಗೆ ಆಶ್ಚರ್ಯವಾಯಿತು. ಅಲ್ಲಿ ನಿಜವಾಗಿಯೂ ಒಬ್ಬ ಮನುಷ್ಯನು ಬದುಕಿದ್ದನೋ ಸತ್ತಿದ್ದನೋ, ಅಲುಗಾಡದೆ ಗುಡಿಗೆ ಒರಗಿ ಕೊಂಡು ಬೆತ್ತಲೆ ಕುಳಿತಿದ್ದನು. ಇದನ್ನು ಕಂಡು ಮೋಚಿಗೆ ಬಹಳ ಭಯ ವಾಯಿತು. "ಯಾರೋ ಅವನನ್ನು ಕೊಂದು ಎಲ್ಲವನ್ನೂ ಕಸಿದುಕೊಂಡು ಅಲ್ಲಿ ಬಿಟ್ಟುಬಿಟ್ಟಿದ್ದಾರೆ. ನಾನು ಅವನ ತಂಟೆಗೆ ಹೋದರೆ ಖಂಡಿತವಾಗಿಯೂ ತೊಂದರೆಗೆ ಸಿಕ್ಕಿಕೊಳ್ಳುತ್ತೇನೆ" ಎಂದು ಯೋಚಿಸಿದನು.

ಹಾಗೆ ಯೋಚಿಸಿ ಮೋಚಿಯು ಮುಂದುಮುಂದಕ್ಕೆ ನಡೆದನು. ಆ ಮನುಷ್ಯನು ಕಣ್ಣಿಗೆ ಬೀಳದಿರಲೆಂದು ಗುಡಿಯ ಮುಂದುಗಡೆಯಲ್ಲಿ ಹೋದನು. ಸ್ವಲ್ಪದೂರ ಹೋದಮೇಲೆ ಹಿಂತಿರುಗಿ ನೋಡಿದನು. ಆಗ ಆ ಮನುಷ್ಯನು ಗುಡಿಗೆ ಒರಗಿಕೊಂಡಿರಲಿಲ್ಲ, ತನ್ನ ಕಡೆಗೇ ನೋಡುತ್ತಿ ರುವ ಹಾಗೆ ಅಲುಗಾಡುತ್ತಿದ್ದನು ಮೋಚಿಗೆ ಮೊದಲಿಗಿಂತಲೂ ಹೆಚ್ಚು ದಿಗಿಲಾಯಿತು. 'ನಾನು ಹಿಂದಿರುಗಿ ಅವನ ಹತ್ತಿರಕ್ಕೆ ಹೋಗಲೋ, ಅಥವಾ ಮುಂದೆ ನಡೆಯಲೋ? ಅವನ ಹತ್ತಿರಕ್ಕೆ ಹೋದರೆ ಏನಾದರೂ ಭಯಂಕರವಾದ ಅನಾಹುತವಾಗಬಹುದು. ಅವನು ಯಾರೋ ಏನೋ ಯಾರಿಗೆ ಗೊತ್ತು. ಅವನು ಇಲ್ಲಿ ಬಂದಿರುವುದೇನು ಒಳ್ಳೆಯದಕ್ಕಲ್ಲ; ಅವನ ಹತ್ತಿರಕ್ಕೆ ಹೋದರೆ ನೆಗೆದು ಬಂದು ಕುತ್ತಿಗೆ ಹಿಸುಕಿಬಿಡಬಹುದು, ಆಗ ತಪ್ಪಿಸಿಕೊಳ್ಳುವುದಕ್ಕೆ ಸಾಧ್ಯವೇ ಇಲ್ಲ. ಅಥವಾ ಹಾಗಿಲ್ಲದೇ ಇದ್ದರೆ ಆಗಲೂ ಅವನೊಂದು ಭಾರವೇ. ಬೆತ್ತಲೆ ಮನುಷ್ಯನನ್ನು ಕಟ್ಟಿಕೊಂಡು ನಾನೇನು ಮಾಡೇನು? ನನ್ನ ಹತ್ತಿರ ಉಳಿದಿರುವ ಬಟ್ಟೆಗಳನ್ನು ಅವನಿಗೆ

ಕೊಟ್ಟು ಬಿಡುವುದಕ್ಕಾಗುವುದಿಲ್ಲ. ತಪ್ಪಿಸಿಕೊಂಡು ಹೋಗುವುದಕ್ಕೆ ದೇವರೇ ಸಹಾಯ ಮಾಡಬೇಕು ' ಎಂದು ಯೋಚಿಸಿಕೊಂಡನು.

ಹೀಗೆ ಯೋಚಿಸಿ ಮೋಚಿಯು ಗುಡಿಯನ್ನು ಹಿಂದೆ ಬಿಟ್ಟು ಅವಸರ ಅವಸರವಾಗಿ ಮುಂದೆ ನಡೆದನು. ಹೋಗುವಾಗ ಥಟ್ಟನೆ ಅವನ ಅಂತಃಕರಣ ಕರಗಿಹೋಯಿತು. ಅವನು ರಸ್ತೆಯಲ್ಲಿ ನಿಂತನು.

' ನೀನು ಮಾಡುತ್ತಿರುವುದೇನು ಸೈಮನ್ ? ಈ ಮನುಷ್ಯ ಹೊಟ್ಟೆಗಿಲ್ಲದೆ ಸಾಯುತ್ತಿದಾನೋ ಏನೋ, ನೀನು ಹೆದರಿ ನುಣುಚಿಕೊಂಡು ಹೋಗುತ್ತಿದೀಯ, ಕಳ್ಳರಿಗೆ ಹೆದರುವಷ್ಟು ಧನಿಕನಾಗಿ ಬಿಟ್ಟೆಯೋ ? ಅಯ್ಯೋ ಸೈಮನ್, ನಿನಗೆ ನಾಚಿಕೆಯಾಗುವುದಿಲ್ಲವೆ ? ' ಎಂದುಕೊಂಡನು.

ಆಗ ಅವನು ಹಿಂದಿರುಗಿ ಆ ಮನುಷ್ಯನ ಹತ್ತಿರ ಹೋದನು

೨

ಸೈಮನ್ ಆ ಅಪರಿಚಿತನ ಹತ್ತಿರಕ್ಕೆ ಹೋಗಿ ಅವನನ್ನು ದೃಷ್ಟಿಸಿ ನೋಡಿದನು. ಅವನಿನ್ನೂ ಪ್ರಾಯದವನು ಮೈಮೇಲೆ ಗಾಯಗಳೇನೂ ಇರಲಿಲ್ಲ. ಕೊರೆಯುವ ಮಂಜಿನಿಂದ ಮೈಯಲ್ಲ ಸೆಡೆತುಕೊಂಡಿದ್ದಿತು. ಬಹಳ ಹೆದರಿದ್ದಂತೆ ಕಾಣುತ್ತಿದ್ದನು. ಹಿಂದುಗಡೆಗೆ ಒರಗಿಕೊಂಡು ಕುಳಿತಿದ್ದನು. ಸೈಮನನ ಕಡೆಗೆ ನೋಡುತ್ತಲೂ ಇರಲಿಲ್ಲ, ಕಣ್ಣೆತ್ತಿ ನೋಡುವುದಕ್ಕೂ ಚೈತನ್ಯವಿಲ್ಲದೆ ಮೈಮರೆತಿದ್ದವನಂತೆ ಕಾಣಿಸಿದನು. ಸೈಮನ್ನನು ತೀರ ಸಮೀಪಕ್ಕೆ ಹೋದನು, ಆಗ ಆ ಮನುಷ್ಯನಿಗೆ ಎಚ್ಚರವಾಗುತ್ತಿರುವ ಹಾಗೆ ತೋರಿತು. ತನ್ನ ತಲೆಯನ್ನು ತಿರುಗಿಸಿ, ಕಣ್ಣುಬಿಟ್ಟು, ಸೈಮನನ ಮುಖದಲ್ಲಿ ನೋಟವನ್ನು ನೆಟ್ಟನು. ಅವನ ಆ ಒಂದು ನೋಟವೇ ಸಾಕಾಯಿತು, ಸೈಮನನಿಗೆ ಆ ಮನುಷ್ಯನಲ್ಲಿ ಮಿತಿಮೀರಿದ ವಾತ್ಸಲ್ಯ ವುಂಟಾಗುವಂತೆ ಮಾಡುವುದಕ್ಕೆ. ಅವನು ಫೆಲ್ಟ್ ಬೂಟುಗಳನ್ನು ನೆಲದ ಮೇಲೆಸೆದು ನಡುಕಟ್ಟನ್ನು ಬಿಚ್ಚಿ, ಅದನ್ನು ಬೂಟುಗಳ ಮೇಲಿಟ್ಟು ತಾನು ತೊಟ್ಟಿದ್ದ ಬಟ್ಟೆಯ ಅಂಗಿಯನ್ನು ಬಿಚ್ಚಿ ಹಿಡಿದುಕೊಂಡನು.

'ಮಾತಾಡುವುದಕ್ಕೆ ಇದು ಹೊತ್ತಲ್ಲ. ಬಾ, ಬೇಗ. ಈ ಕೂಡಲೇ, ಈ ಅಂಗಿಯನ್ನು ತೊಟ್ಟುಕೋ' ಎಂದನು. ಸೈಮನಸು ಅವನ ಮೊಳ ಕೈಗಳನ್ನು ಹಿಡಿದುಕೊಂಡು ಅವನನ್ನು ಮೇಲಕ್ಕೆ ಎಬ್ಬಿಸಿದನು. ಅವನು ಎದ್ದು ನಿಂತುಕೊಂಡಮೇಲೆ ಸೈಮನನು ಅವನ ಮೈಕಟ್ಟನ್ನು ನೋಡಿದನು. ಅವನ ಮೈ ಶುಭ್ರವಾಗಿದ್ದಿತು, ಯಾವ ಬಗೆಯ ಅಸ್ವಸ್ಥತೆಯೂ ಇಲ್ಲದೆ ಉತ್ತಮಸ್ಥಿತಿಯಲ್ಲಿದ್ದಿತು, ಕೈಕಾಲುಗಳ ಆಕಾರ ಸುಂದರವಾಗಿದ್ದಿತು; ಮುಖ ಲಕ್ಷಣವಾಗಿಯೂ ಕರುಣಾಪೂರ್ಣವಾಗಿಯೂ ಇದ್ದಿತು. ಸೈಮನನು ತನ್ನ ಅಂಗಿಯನ್ನು ಆ ಮನುಷ್ಯನ ಹೆಗಲ ಮೇಲಕ್ಕೆ ಎಸೆದನು. ಆದರೆ ಅವನಿಗೆ ತೋಳುಗಳೇ ಸಿಕ್ಕಲಿಲ್ಲ. ಸೈಮನನು ಅವನ ತೋಳುಗಳನ್ನು ಅಂಗಿಯ ತೋಳುಗಳೊಳಗೆ ಹಾಕಿ, ಅಂಗಿಯನ್ನು ತೊಡಿಸಿ, ಅದನ್ನು ಸರಿಯಾಗಿ ಎಳೆದು ಚೆನ್ನಾಗಿ ಮೈಮುಚ್ಚಿ ಸೊಂಟಕ್ಕೆ ನಡುಕಟ್ಟನ್ನು ಬಿಗಿದನು.

ಸೈಮನನು ತನ್ನ ಹರಕಲು ಟೋಪಿಯನ್ನೂ ಅವನ ತಲೆಯ ಮೇಲೆ ಇಡಬೇಕೆಂದು ಅದನ್ನು ಕೈಗೆ ತೆಗೆದುಕೊಂಡನು. ಆದರೆ ಟೋಪಿಯನ್ನು ತೆಗೆದಕೂಡಲೆ ಅವನ ತಲೆಗೂ ತಣ್ಣಗಾಯಿತು. ಆಗ 'ನನ್ನದು ಬುರುಡು ತಲೆ, ಸ್ವಲ್ಪವೂ ಕೂದಲಿಲ್ಲ, ಅವನಿಗೆ ಗುಂಗುರುಗುಂಗುರಾದ ಉದ್ದನೆಯ ಕೂದಲಿದೆ' ಎಂದುಕೊಂಡು ಸ್ವಲ್ಪ ಯೋಚಿಸಿ ಟೋಪಿಯನ್ನು ಪುನಃ ತನ್ನ ತಲೆಯಮೇಲೆಯೇ ಇಟ್ಟುಕೊಂಡನು. 'ಅವನ ಕಾಲಿಗೆ ಏನನ್ನಾದರೂ ಕೊಡುವುದೊಳ್ಳೆಯದು' ಅನ್ನಿಸಿತು. ಕೂಡಲೇ ಆ ಮನುಷ್ಯನನ್ನು ನೆಲದ ಮೇಲೆ ಕೂರಿಸಿ ಫೆಲ್ಟ್ ಬೂಟುಗಳನ್ನು ಅವನ ಕಾಲಿಗೆ ತೊಡಿಸಿದನು. ತೊಡಿಸುತ್ತ 'ಇಲ್ಲಿ ನೋಡಣ್ಣಾ, ಈಗ ಅತ್ತ ಇತ್ತ ಸ್ವಲ್ಪ ಸುತ್ತಾಡಿ ಮೈ ಬೆಚ್ಚಗೆ ಮಾಡಿಕೊ. ಉಳಿದ ವಿಚಾರಗಳನ್ನು ಆ ಮೇಲೆ ತೀರ್ಮಾನಿಸಬಹುದು. ನೀನು ನಡೆಯಬಲ್ಲೆಯೋ?' ಎಂದನು.

ಆತನು ಎದ್ದು ನಿಂತು ಕರುಣಾದೃಷ್ಟಿಯಿಂದ ಸೈಮನನ ಕಡೆಗೆ ನೋಡಿದನು. ಆದರೆ ಒಂದು ಮಾತನ್ನೂ ಆಡಲಾರದೆ ಹೋದನು.

ಅದನ್ನು ಕಂಡು ಸೈಮನನು ' ಅದೇಕೆ ನೀನು ಮಾತಾಡುವುದಿಲ್ಲ ? ಇಲ್ಲಿ ನಿಲ್ಲುವುದಕ್ಕೆ ಸಾಧ್ಯವಿಲ್ಲ, ತುಂಬ ಚಳಿ, ಮನೆಗೆ ಹೋಗ ಬೇಕು. ಅಲ್ಲಿ ನೋಡು, ಈ ನನ್ನ ಕೋಲನ್ನು ತೆಗೆದುಕೊ. ನಿನಗೆ ಶಕ್ತಿ ಯಿಲ್ಲವಾದರೆ, ಅದನ್ನು ಊರಿಕೊ. ಎಲ್ಲಿ, ಈಗ ಹೆಜ್ಜೆ ಹಾಕಣ್ಣಾ ! ' ಎಂದನು.

ಆ ಮನುಷ್ಯನು ನಡೆಯಲು ಪ್ರಾರಂಭಿಸಿದನು. ಯಾವ ತೊಂದ ರೆಯೂ ಇಲ್ಲದೆ ಸುಖವಾಗಿ ನಡೆಯುತ್ತಿದ್ದನು. ಹಿಂದೆ ಬೀಳಲಿಲ್ಲ.

ಅವರು ನೆಡೆದುಹೋಗುತ್ತಿದ್ದಾಗ ಸೈಮನನು 'ಅದು ಸರಿ, ನಿಮ್ಮ ಸ್ಥಳ ಯಾವುದು ?' ಎಂದು ಕೇಳಿದನು

' ನಾನು ಈ ಕಡೆಯವನಲ್ಲ '

' ನಾನೂ ಹಾಗೇ ಅಂದುಕೊಂಡೆ, ನನಗೆ ಈ ಸುತ್ತ ಮುತ್ತಿನ ಜನ ರೆಲ್ಲ ಚೆನ್ನಾಗಿ ಗೊತ್ತು. ಆದರೆ ನೀನು ಆ ಗುಡಿಯ ಹತ್ತಿರ ಇದ್ದೆಯಲ್ಲ, ಅಲ್ಲಿಗೆ ಹೇಗೆ ಬಂದೆ ?'

' ನಾನು ಹೇಳಲಾರೆ '

' ಯಾರಾದರೂ ನಿನಗೆ ತೊಂದರೆ ಮಾಡಿದರೋ ?'

' ಯಾರೂ ನನಗೆ ತೊಂದರೆ ಮಾಡಿಲ್ಲ, ದೇವರು ನನಗೆ ಶಿಕ್ಷೆ ಮಾಡಿ ದಾನೆ .'

' ಅದು ಸರಿ, ಎಲ್ಲವನ್ನೂ ನಡೆಸುವವನು ದೇವರೇ. ಆದರೂ ಹೊಟ್ಟೆಗೆ ಆಹಾರ, ಇರುವುದಕ್ಕೆ ಒಂದು ಆಶ್ರಯ—ಇವನನ್ನು ಎಲ್ಲಿಯಾ ದರೂ ಒಂದು ಕಡೆ ಹೊಂದಿಸಿಕೊಳ್ಳಬೇಕಲ್ಲ. ಎಲ್ಲಿಗೆ ಹೋಗಬೇಕೆಂದು ನಿನ್ನಿಷ್ಟ ? '

' ನನಗೆ ಎಲ್ಲ ಒಂದೇ.'

ಸೈಮನನಿಗೆ ಆಶ್ಚರ್ಯವಾಯಿತು. ಆ ಮನುಷ್ಯ ಠಕ್ಕನ ಹಾಗೆ ಕಾಣಲಿಲ್ಲ, ಮೃದುವಾಗಿ ಮಾತಾಡುತ್ತಿದ್ದನು ; ಆದರೂ ತನ್ನ ವಿಷಯದಲ್ಲಿ ಏನನ್ನೂ ಹೇಳಿಕೊಳ್ಳಲಿಲ್ಲ. ಅವನು ಕೆಟ್ಟವನ ಹಾಗೆ ಕಾಣಿಸದಿದ್ದರೂ

'ಏನಾಗಿದೆಯೋ ಏನೋ, ಯಾರಿಗೆ ಗೊತ್ತು?' ಎಂದು ಸೈಮನನಿಗೆ ಇನ್ನೂ ಯೋಚನೆ ಕಡೆಗೆ ಆ ಅಪರಿಚಿತನನ್ನು ಕುರಿತು 'ಒಳ್ಳೆಯದು, ನನ್ನ ಸಂಗಡ ನಮ್ಮ ಮನೆಗೆ ಬಂದುಬಿಡು ಕಡೆಗೆ ಮೈ ಕಾಯಿಸಿಕೊಂಡು ಬೆಚ್ಚಗಾದರೂ ಮಾಡಿಕೊಳ್ಳುವೆಯಂತೆ' ಎಂದನು.

ಆಮೇಲೆ ಸೈಮನನು ತನ್ನ ಮನೆಯ ಕಡೆ ಹೊರಟನು. ಅಪರಿಚಿತನೂ ಅವನ ಜೊತೆಗೆ ಸರಿಸಮವಾಗಿ ಹೆಜ್ಜೆಯಿಡುತ್ತ ಪಕ್ಕದಲ್ಲಿಯೇ ನಡೆದನು. ಅಷ್ಟು ಹೊತ್ತಿಗೆ ಗಾಳಿ ಎದ್ದಿದ್ದಿತು, ಸೈಮನನು ಪರಟು ತೊಟ್ಟು ಕೊಂಡಿದ್ದರೂ ಚಳಿ ಕಾಣಿಸಿತು ಇಷ್ಟು ಹೊತ್ತಿಗೆ ಅಮಲು ಇಳಿಯುತ್ತ ಬಂದದ್ದರಿಂದ ಮಂಜು ಸುರಿಯುತ್ತಿರುವುದು ಅವನಿಗೆ ಗೊತ್ತಾಯಿತು. ಮೂಗನ್ನು ಮುಂದಕ್ಕೆ ಚಾಚಿ ಮೂಸುತ್ತ, ತನ್ನ ಹೆಂಡತಿಯ ಅಂಗಿಯನ್ನು ಮೈಗೆ ಭದ್ರವಾಗಿ ಮುಚ್ಚಿಕೊಳ್ಳುತ್ತ ಮುಂದೆ ನಡೆದನು. ಹೋಗುವಾಗ ತನ್ನಲ್ಲಿ ತಾನು ಹೀಗೆ ಯೋಚಿಸಿದನು 'ಈಗ ನೋಡಿಲ್ಲಿ, ಕುರಿಯ ಚಕ್ಕಳದ ಮಾತು! ಕುರಿಯ ಚಕ್ಕಳಗಳನ್ನು ತರುವುದಕ್ಕೆಂದು ಮನೆ ಬಿಟ್ಟು ಹೊರಟೆ, ಬೆನ್ನ ಮೇಲೆ ಅಂಗಿಯೂ ಇಲ್ಲದೆ ಹಿಂದಿರುಗುತ್ತಿದೇನೆ. ಇದರ ಜೊತೆಗೆ ಮೈಮೇಲೆ ಏನೇನೂ ಇಲ್ಲದ ಒಬ್ಬ ಮನುಷ್ಯನನ್ನು ಸಂಗಡ ಕರೆದುಕೊಂಡು ಬರುತ್ತಿದೇನೆ ಮ್ಯಾಟ್ರೋನಾ ಅಸಮಾಧಾನಪಟ್ಟು ಕೊಳ್ಳುತ್ತಾಳೆ!' ಹೀಗೆ ಹೆಂಡತಿಯನ್ನು ಜ್ಞಾಪಿಸಿಕೊಂಡನೋ ಇಲ್ಲವೋ ಕೂಡಲೆ ಅವನಿಗೆ ದುಃಖವಾಯಿತು ಆದರೆ ಆ ಅಪರಿಚಿತನನ್ನು ನೋಡಿ ಆತನು ಗುಡಿಯ ಹತ್ತಿರ ತನ್ನನ್ನು ಹಾಗೆ ದೃಷ್ಟಿಸಿ ನೋಡಿದ್ದನ್ನು ನೆನಸಿ ಕೊಂಡ ಕೂಡಲೆ ಅವನ ಹೃದಯ ಸಂತೋಷದಿಂದ ತುಂಬಿತು.

೩

ಸೈಮನನ ಹೆಂಡತಿ ಅವತ್ತು ಹೊತ್ತಿಗೆ ಮುಂಚೆ ಎಲ್ಲವನ್ನೂ ಅಣಿ ಮಾಡಿದ್ದಳು. ಸೌದೆಯನ್ನು ಕಡಿದು, ನೀರು ತಂದು, ಮಕ್ಕಳಿಗೆ ಇಕ್ಕಿ, ತಾನೂ ಉಂಡು, ಈಗ ಯೋಚಿಸುತ್ತ ಕುಳಿತಿದ್ದಳು. ಈಗಲೇ ರೊಟ್ಟಿ

ಮಾಡಬೇಕೋ ಇಲ್ಲ ನಾಳೆ ಮಾಡಬೇಕಾಗುತ್ತದೆಯೋ ಅವಳಿಗೆ ತಿಳಿಯ ಲೊಲ್ಲದು. ಇನ್ನೂ ಒಂದು ದೊಡ್ಡ ಚೂರು ಉಳಿದಿದ್ದಿತು.

'ಸೈಮನ್ ಪಟ್ಟಣದಲ್ಲಿ ಉಂಡಿದ್ದು ಈ ರಾತ್ರಿ ಹೆಚ್ಚಾಗಿ ತಿನ್ನದೆ ಇದ್ದರೆ, ಈ ರೊಟ್ಟಿ ಇನ್ನೂ ಒಂದು ದಿನಕ್ಕೆ ಸಾಕಾಗುತ್ತದೆ' ಎಂದು ಯೋಚಿಸಿದಳು.

ಅವಳು ಆ ರೊಟ್ಟಿಯ ಚೂರನ್ನು ಕೈಗೆ ತೆಗೆದುಕೊಂಡು ಮತ್ತೆ ಮತ್ತೆ ತೂಗಿ ನೋಡುತ್ತ 'ಇವತ್ತು ಇನ್ನು ಹೆಚ್ಚು ರೊಟ್ಟಿ ಸುಡುವುದಿಲ್ಲ ಉಳಿದಿರುವ ಹಿಟ್ಟು ಒಂದು ಬಚ್ಚೆ ಸುಡುವುದಕ್ಕೆ ಮಾತ್ರ ಸಾಕಾಗುವಷ್ಟಿದೆ. ಹಾಗೂ ಹೀಗೂ ಇದು ಶುಕ್ರವಾರದವರೆಗೂ ಆಗುವ ಹಾಗೆ ಮಾಡಬೇಕು' ಎಂದು ಯೋಚಿಸಿಕೊಂಡಳು.

ಮಾಟ್ರ್ಯೋನಾ ರೊಟ್ಟಿಯನ್ನು ತೆಗೆದಿಟ್ಟು ತನ್ನ ಗಂಡನ ಷರಟನ್ನು ತೆಗೆದುಕೊಂಡು ಮೇಜದ ಹತ್ತಿರ ತೇಪೆ ಹಾಕುತ್ತ ಕುಳಿತಳು. ಹಾಗೆ ಹೊಲಿದು ತೇಪೆ ಹಾಕುತ್ತಿರುವಾಗ ತನ್ನ ಗಂಡನು ಚಳಿಗಾಲದಲ್ಲಿ ಉಪಯೋಗಿಸುವ ಅಂಗಿಗಾಗಿ ಚಕ್ಕಳಗಳನ್ನು ಕೊಳ್ಳುವ ವಿಚಾರವನ್ನೇ ಯೋಚಿಸುತ್ತಿದ್ದಳು.

'ವರ್ತಕನು ಅವನನ್ನು ಮೋಸಗೊಳಿಸದೆ ಬಿಟ್ಟರೆ ಸಾಕು. ಇವನು ತೀರ ಒಳ್ಳೆಯ ಮನುಷ್ಯ, ತುಂಬ ಸರಳ ಸ್ವಭಾವ, ಯಾರೊಬ್ಬರಿಗೂ ಅವನು ಮೋಸಮಾಡುವುದಿಲ್ಲ, ಆದರೆ ಒಂದು ಮಗು ಬೇಕಾದರೂ ಅವನನ್ನು ಹಳ್ಳಕ್ಕೆ ಕೆಡವಿ ಬಿಡಬಹುದು. ಎಂಟು ರೂಬಲ್ ಅಂದರೆ ಅದೇನು ಸ್ವಲ್ಪ ಗಂಟಲ್ಲ—ಅಷ್ಟು ಬೆಲೆ ಕೊಟ್ಟರೆ ಒಂದು ಸೊಗಸಾದ ಅಂಗಿ ಬರಬೇಕು. ಹದಮಾಡಿದ ತೊಗಲೇನೋ ಸಿಕ್ಕುವುದಿಲ್ಲ, ಆದರೂ ಚಳಿಗಾಲಕ್ಕೆ ತಕ್ಕದ್ದಾದ ಒಂದು ಒಳ್ಳೆಯ ಅಂಗಿಯಂತೂ ಆಗುತ್ತದೆ. ಹೋದ ವರ್ಷ ಚಳಿಗಾಲದಲ್ಲಿ ಬೆಚ್ಚನೆಯ ಅಂಗಿಯಿಲ್ಲದೆ ಕಾಲ ಕಳೆಯು ವುದಕ್ಕೆ ಎಷ್ಟೊಂದು ಕಷ್ಟವಾಯಿತು! ಹೊಳೆಗೆ ಹೋಗುವುದಕ್ಕಾಗಲಿ

ಮತ್ತೆಲ್ಲಿಗಾದರೂ ಹೋಗಿ ಬರುವುದಕ್ಕಾಗಲೀ ನನಗೆ ಸಾಧ್ಯವಾಗುತ್ತಲೇ ಇರಲಿಲ್ಲ. ಅವನು ಎಲ್ಲಿಯಾದರೂ ಹೋಗಬೇಕಾದರೆ ಮನೆಯಲ್ಲಿದ್ದದ್ದನ್ನೆಲ್ಲ ಹೊದ್ದುಕೊಂಡು ಹೋಗಿಬಿಡುತ್ತಿದ್ದನು, ನನಗೇನೂ ಉಳಿಯುತ್ತಲೇ ಇರಲಿಲ್ಲ ಇವತ್ತು ಅವನು ಅಷ್ಟೇನು ಮುಂಚಿತವಾಗಿ ಹೊರಡಲಿಲ್ಲ, ಆದರೂ ಇಷ್ಟು ಹೊತ್ತಿಗೆ ಹಿಂದಿರುಗಿ ಬಂದಿರಬೇಕಾಗಿದ್ದಿತು. ಕುಡಿದು ಖುಷಿಮಾಡದೆ ಬಂದರೆ ಸಾಕಾಗಿದೆ!'

ಮಾಟ್ರ್ಯೋನಾ ಹೀಗೆ ಯೋಚಿಸುವುದೇ ತಡ ಹೊರಬಾಗಿಲಲ್ಲಿ ಹೆಜ್ಜೆಯ ಸದ್ದು ಕೇಳಿಸಿತು, ಯಾರೋ ಒಬ್ಬರು ಒಳಕ್ಕೆ ಬಂದರು. ಮಾಟ್ರ್ಯೋನಾ ಸೂಜಿಯನ್ನು ಬಟ್ಟೆಗೆ ಚುಚ್ಚಿ ಎದ್ದು ಹೊರಗಿನ ಕೈಸಾಲೆಗೆ ಬಂದಳು. ಅಲ್ಲಿ ಇಬ್ಬರು ಕಾಣಿಸಿದರು, ಸೈಮನ್ ಒಬ್ಬ, ಅವನ ಜೊತೆಯಲ್ಲಿ ತಲೆಗೆ ಟೋಪಿಯಿಲ್ಲದೆ ಫೆಲ್ಟ್ ಬೂಟುಗಳನ್ನು ಮೆಟ್ಟಿಕೊಂಡಿದ್ದ ಒಬ್ಬ ಹೊಸಬ.

ತನ್ನ ಗಂಡ ಕುಡಿದಿದ್ದನೆಂಬುದನ್ನು ಕೂಡಲೇ ಮಾಟ್ರ್ಯೋನಾ ವಾಸನೆಯಿಂದ ತಿಳಿದುಕೊಂಡಳು. 'ನಾನಂದುಕೊಂಡಂತೆಯೇ ಆಯಿತು, ಕುಡಿದುಬಿಟ್ಟು ಬಂದಿದಾನೆ' ಎಂದು ಯೋಚಿಸಿದಳು ಆಮೇಲೆ ಅವನಕಡೆ ನೋಡಿದಳು. ಅವನ ಮೈಮೇಲೆ ಅಂಗಿಯಿರಲಿಲ್ಲ, ತನ್ನ ಜಾಕೆಟ್ಟೊಂದನ್ನೇ ತೊಟ್ಟಿದ್ದನು; ಸಾಮಾನಿನ ಗಂಟನ್ನೇನೂ ತಂದಿರಲಿಲ್ಲ, ಮಾತಾಡದೆ ಸುಮ್ಮನೆ ನಿಂತುಕೊಂಡಿದ್ದನು, ಹೀನಾಯಪಟ್ಟುಕೊಂಡಂತೆ ಕಾಣುತ್ತಿದ್ದನು ಇದನ್ನೆಲ್ಲ ನೋಡಿ ಅವಳ ಆಸೆಯೆಲ್ಲ ಹಾಳಾಯಿತು, ನಿರಾಸೆಯಿಂದ ತಡೆಯಲಾರದಷ್ಟು ದುಃಖವಾಯಿತು. 'ದುಡ್ಡನ್ನೆಲ್ಲ ಕುಡಿತಕ್ಕೆ ಚೆಲ್ಲಿಬಿಟ್ಟಿದಾನೆ. ಕೆಲಸಕ್ಕೆ ಬಾರದ ದಾರಿಹೋಕನೊಬ್ಬನ ಸಂಗಡ ಸೇರಿ ಕುಡಿದು ಖುಷಿಮಾಡಿಬಿಟ್ಟಿದಾನೆ. ಸಾಲದ್ದಕ್ಕೆ ಅವನನ್ನೂ ಜೊತೆಯಲ್ಲೇ ಮನೆಗೆ ಕರೆದುಕೊಂಡು ಬಂದಿದಾನೆ' ಎಂದು ಯೋಚಿಸಿಕೊಂಡಳು.

ಮಾಟ್ರ್ಯೋನಾ ಅವರಿಬ್ಬರೂ ಗುಡಸಲಿನ ಒಳಕ್ಕೆ ಹೋದಮೇಲೆ ತಾನೂ ಅವರ ಹಿಂದೆ ಒಳಕ್ಕೆ ಬಂದಳು. ಒಳಕ್ಕೆ ಬಂದಬಳಿಕ ಆ ಹೊಸಬನ

ಕಡೆಗೆ ನೋಡಿದಳು. ಅವನೊಬ್ಬ ತರುಣ, ತೆಳ್ಳನೆಯ ಆಳು. ಅವನು ತನ್ನ ಗಂಡನ ಅಂಗಿಯನ್ನು ತೊಟ್ಟುಕೊಂಡಿರುವುದು ಅವಳ ಕಣ್ಣಿಗೆ ಬಿದ್ದಿತು. ಆ ಅಂಗಿಯ ಕೆಳಗಡೆ ಷರಟಿರುವಂತೆ ಕಾಣಲಿಲ್ಲ. ಅವನ ತಲೆಯಮೇಲೆ ಟೋಪಿಯೂ ಇರ ಲಿಲ್ಲ. ಅವನು ಒಳಕ್ಕೆ ಬಂದು ಸುಮ್ಮನೆ ನಿಂತುಬಿಟ್ಟನು ಅಲುಗಾಡಲಿಲ್ಲ, ಕಣ್ಣೆತ್ತಿ ನೋಡಲೂ ಇಲ್ಲ. 'ಇವನೊಬ್ಬ ದುಷ್ಟನಾಗಿರಬೇಕು—ಅದಕ್ಕೇ ಅವನು ಹದರಿದಾನೆ' ಎಂದು ಮಾಟ್ರ್ಯೋನಾ ಯೋಚಿಸಿಕೊಂಡಳು.

ಮಾಟ್ರ್ಯೋನಾ ಹುಬ್ಬು ಗಂಟುಹಾಕಿಕೊಂಡು ಅವರು ಏನು ಮಾಡುತ್ತಾರೋ ನೋಡಬೇಕೆಂದು ಒಲೆಯ ಹತ್ತಿರ ನಿಂತುಕೊಂಡಳು.

ಸೈಮನ್ ತಲೆಯ ಮೇಲಿನ ಟೋಪಿಯನ್ನು ತೆಗೆದು ಹಾಕಿ ಎಲ್ಲ ಸರಿಯಾಗಿದ್ದರೆ ಹೇಗೋ ಹಾಗೆ ನಿಶ್ಚಿಂತನಾಗಿ ಬೆಂಚಿನ ಮೇಲೆ ಕುಳಿತು ಕೊಂಡನು

'ಬಾ, ಬಾ, ಮಾಟ್ರ್ಯೋನಾ, ಊಟಕ್ಕೆ ಸಿದ್ಧವಾಗಿದ್ದರೆ ನಮಗೆ ಸ್ವಲ್ಪ ಬಡಿಸು'

ಮಾಟ್ರ್ಯೋನಾ ತನ್ನಲ್ಲಿ ತಾನೇ ಏನೋ ಗೊಣಗಿಕೊಂಡಳು; ಆ ಸ್ಥಳ ಬಿಟ್ಟು ಕದಲಲಿಲ್ಲ. ಒಲೆಯ ಹತ್ತಿರ ಎಲ್ಲಿದ್ದಳೋ ಅಲ್ಲೇ ನಿಂತಳು. ಮೊದಲು ಒಬ್ಬನ ಕಡೆಗೆ ಆಮೇಲೆ ಮತ್ತೊಬ್ಬನ ಕಡೆಗೆ ನೋಡುತ್ತ ಕತ್ತ ಲ್ಲಾಡಿಸಿಬಿಟ್ಟಳು ಹೆಂಡತಿ ರೇಗಿರುವಳೆಂದು ಸೈಮನ್ನನಿಗೆ ಗೊತ್ತಾಯಿತು ಆದರೆ ಅದನ್ನು ಲಕ್ಷ್ಯಮಾಡಬಾರದೆಂದು ಪ್ರಯತ್ನಮಾಡಿದನು. ಏನೂ ಅರಿಯದವನ ಹಾಗೆ ನಟಿಸುತ್ತ ಆ ಹೊಸಬನ ಕೈಹಿಡಿದುಕೊಂಡು,

'ಕೂತುಕೊಳ್ಳಣ್ಣ, ಕೂತುಕೊ. ಸ್ವಲ್ಪ ಊಟಮಾಡೋಣ' ಎಂದನು.

ಹೊಸಬನು ಬೆಂಚಿನಮೇಲೆ ಕುಳಿತುಕೊಂಡನು.

'ನಮಗೆ ಏನಾದರೂ ಅಡಿಗೆ ಮಾಡಿಲ್ಲವೇ ?' ಎಂದು ಸೈಮನ್ ಕೇಳಿದನು.

ಮಾಟ್ರ್ಯೋನಳ ಕೋಪ ಕುದಿಯತೊಡಗಿತು. 'ಅಡಿಗೆ ಬೇಸಿದ್ದೇನೆ, ಆದರೆ ನಿಮಗಲ್ಲ. ಕುಡಿದು ನಿಮ್ಮ ಬುದ್ಧಿಯನ್ನೆಲ್ಲ ಹಾಳುಮಾಡಿಕೊಂಡಿರುವ ಹಾಗೆ ಕಾಣುತ್ತದೆ. ನೀನು ಹೊರಟದ್ದು ಕುರಿಯ ಚಕ್ಕಳದ ಅಂಗಿಯನ್ನು ಕೊಳ್ಳುವುದಕ್ಕೆ. ಬಂದದ್ದು ನೋಡಿದರೆ ತೊಟ್ಟುಕೊಂಡು ಹೋಗಿದ್ದ ಅಂಗಿಯೂ ಮೈಮೇಲಿಲ್ಲ. ಇಷ್ಟೇ ಅಲ್ಲದೆ ಮೈಗೆ ಬಟ್ಟೆ ಕಾಣದೆ ಬೆತ್ತಲೆ ಅಲೆಯುವ ಪುಂಡನೊಬ್ಬನನ್ನು ಸಂಗಡ ಕರೆದುಕೊಂಡು ಬಂದಿದೀಯ. ನಿಮ್ಮಂಥ ಕುಡುಕರಿಗೆ ನಾನೇನೂ ಬೇಸಿಟ್ಟಿಲ್ಲ.'

'ಸಾಕು, ಮಾಟ್ರ್ಯೋನಾ, ಸಾಕು ನಿಷ್ಕಾರಣವಾಗಿ ನಾಲಗೆಯನ್ನು ಸಡಿಲಬಿಡಬೇಡ! ಕೇಳಬಾರದೆ, ಎಂಥ ಮನುಷ್ಯನ್ನ....'

'ತೆಗೆದುಕೊಂಡು ಹೋದ ದುಡ್ಡನ್ನೆಲ್ಲ ಏನುಮಾಡಿದೆ? ಹೇಳು.'

ಸೈಮನ್ ಜಾಕೆಟ್ಟಿನ ಜೇಬಿನಲ್ಲಿದ್ದ ಮೂರು ರೂಬಲ್ ನೋಟನ್ನು ಹೊರಕ್ಕೆ ತೆಗೆದು ಅದನ್ನು ಬಿಚ್ಚಿ ಹಿಡಿದನು.

'ಇಲ್ಲಿದೆ, ನೋಡು. ಟ್ರಿಫೋನೇವ್ ಕೊಡಲಿಲ್ಲ, ಬೇಗ ಕೊಡುವುದಾಗಿ ಹೇಳಿದ'

ಮಾಟ್ರ್ಯೋನಳಿಗೆ ಸಿಟ್ಟು ಇನ್ನೂ ಹೆಚ್ಚಾಯಿತು, ಅವನು ಕುರಿಯ ಚಕ್ಕಳವನ್ನು ಕೊಳ್ಳದೆ, ತೊಟ್ಟಿದ್ದ ಒಂದೇ ಒಂದು ಅಂಗಿಯನ್ನೂ ಯಾವನೋ ಒಬ್ಬ ಬೆತ್ತಲೆ ತಿರುಗುವ ಪೋಲಿಗೆ ಕೊಟ್ಟು ಅವನನ್ನೂ ಸಂಗಡ ಮನೆಗೆ ಕರೆದುಕೊಂಡು ಬಂದಿದ್ದನು.

ಮೇಜದ ಮೇಲಿನಿಂದ ನೋಟನ್ನು ಸರಕ್ಕನೆ ಎಳೆದುಕೊಂಡು, ಅದನ್ನು ಭದ್ರಪಡಿಸುವುದಕ್ಕೆ ಕೈಗೆ ತೆಗೆದುಕೊಂಡಳು. ತೆಗೆದುಕೊಂಡು, 'ನಿನಗೆ ಇಕ್ಕುವುದಿಲ್ಲ. ಈ ಪ್ರಪಂಚದಲ್ಲಿ ಬೆತ್ತಲೆ ಅಲೆಯುವ ಕುಡುಕರಿಗೆಲ್ಲ ಅನ್ನ ಹಾಕುವುದಕ್ಕಾಗುವುದಿಲ್ಲ' ಎಂದಳು.

'ಇಲ್ಲಿ ನೋಡು, ಮಾಟ್ರ್ಯೋನಾ, ನಾಲಗೆಯನ್ನು ಸ್ವಲ್ಪ ಬಿಗಿಹಿಡಿ. ನಾನು ಹೇಳುತ್ತಿರುವುದನ್ನು ಮೊದಲು ಕೇಳು'

ಕುಡಿದು ಬಂದಿರುವ ದಡ್ಡ ಮುಂಡ್ಕನ ಬಾಯಲ್ಲಿ ಒಳ್ಳೆಯ ವಿವೇಕದ ಮಾತುಗಳನ್ನೇ ಕೇಳಬಹುದು! ನಿನ್ನಂಥ ಕುಡುಕನನ್ನು ಮದುವೆಯಾಗ ಬಾರದೆಂದುಕೊಂಡಿದ್ದೆ, ಅದೇ ನ್ಯಾಯವಾಗಿತ್ತು. ನಮ್ಮಮ್ಮ ನನಗೆ ಕೊಟ್ಟಿದ್ದ ಬಟ್ಟೆಯನ್ನೆಲ್ಲ ನೀನು ಕುಡಿತಕ್ಕೆ ಹಾಳುಮಾಡಿದೆ, ಈಗ ಅಂಗಿ ಯನ್ನು ಕೊಳ್ಳುವುದಕ್ಕೆಂದು ಹೋಗಿದ್ದವನು—ಆ ಹಣವನ್ನೂ ಕುಡಿತಕ್ಕೇ ಹಾಕಿ ಬಂದಿದೀಯ!'

ಸೈಮನ್ ತಾನು ಇಪ್ಪತ್ತು ಕೋಪೆಕ್‌ಗಳನ್ನು ಮಾತ್ರವೇ ಕುಡಿ ತಕ್ಕೆ ಖರ್ಚುಮಾಡಿರುವುದಾಗಿ ಹೇಳಿ ಆ ಮನುಷ್ಯನನ್ನು ಎಲ್ಲಿ ಯಾವ ಸ್ಥಿತಿಯಲ್ಲಿ ಕಂಡು ಕರೆತಂದನೆಂಬುದನ್ನು ವಿವರಿಸಲು ಯತ್ನಿಸಿದನು ಆದರೆ ಅವನು ಒಂದು ಮಾತಾಡುವುದಕ್ಕೂ ಮಾಟ್ರ್ಯೋನಾ ಅವಕಾಶಕೊಡಲಿಲ್ಲ. ಇವನು ಹನ್ನೆರಡು ಮಾತಾಡಿದರೆ ಅವಳು ಹತ್ತೊಂಬತ್ತಾಡಿಬಿಡುತ್ತಿದ್ದಳು, ಹತ್ತು ವರ್ಷದ ಹಿಂದೆ ನಡೆದಿದ್ದ ಸಂಗತಿಗಳನ್ನೂ ಮಾತಿಗೆ ಎಳೆದು ಬಿಡು ತ್ತಿದ್ದಳು.

ಮಾಟ್ರ್ಯೋನಾ ಮಾತಾಡಿ ಮಾತಾಡಿ ಕಟ್ಟಕಡೆಗೆ ಸೈಮನ್ನನ ಮೈಮೇಲೆ ನುಗ್ಗಿ ಅವನ ಅಂಗಿಯ ತೋಳನ್ನು ಎಳೆದು ಭದ್ರವಾಗಿ ಹಿಡಿದು ಕೊಂಡಳು

'ನನ್ನ ಜಾಕೆಟ್ ನನಗೆ ಕೊಟ್ಟುಬಿಡು. ನನಗಿರುವುದು ಅದೊಂದೇ ಒಂದು ಅದನ್ನೂ ಕಸಿದುಕೊಂಡು ನೀನೇ ತೊಟ್ಟುಕೊಳ್ಳಬೇಕಲ್ಲವೇ! ಆಸೆಬುರುಕನಾಯಿ, ಅದನ್ನಿಲ್ಲಿ ಒಗೆದುಬಿಡು, ಆದದ್ದನುಭವಿಸು, ನಿನ್ನ ಪಾಡು'

ಸೈಮನ್ ಜಾಕೆಟ್ಟನ್ನು ಬಿಚ್ಚತೊಡಗಿದನು, ಬಿಚ್ಚುವಾಗ ಒಂದು ಕಡೆಯ ತೋಳಿನ ಒಳಭಾಗ ಹೊರಗಡೆಗೆ ಬಂದಿತು ಮಾಟ್ರ್ಯೋನಾ ಜಾಕೆಟ್ಟನ್ನು ಭದ್ರವಾಗಿ ಹಿಡಿದುಕೊಂಡಳು; ಆಗ ಅದರ ಹೊಲಿಗೆ ಒಂದು ಕಡೆ ಬಿಚ್ಚಿಹೋಯಿತು. ಅವಳು ಅದನ್ನು ಸರಕ್ಕನೆ ಎಳೆದು ತಲೆಯಮೇಲೆ

ಎಸೆದುಕೊಂಡು ಬಾಗಿಲ ಬಳಿಗೆ ಹೋದಳು. ಅವಳಿಗೆ ಹೊರಕ್ಕೆ ಹೋಗಿ ಬಿಡಬೇಕೆಂದು ಇಷ್ಟ, ಆದರೆ ಏನನ್ನೂ ನಿರ್ಧರಿಸಲಾರದೆ ಅಲ್ಲಿಯೇ ನಿಂತಳು. ಬಂದ ಸಿಟ್ಟನ್ನೆಲ್ಲ ಚೆನ್ನಾಗಿ ತೋರಿಸಿಬಿಡಬೇಕೆಂಬ ಮನಸ್ಸು, ಅದರ ಜೊತೆಯಲ್ಲೇ ಆ ಹೊಸಬನು ಎಂಥ ಮನುಷ್ಯನೋ ಅದನ್ನು ತಿಳಿಯಬೇಕೆಂಬ ಕುತೂಹಲ ಬೇರೆ, ಹೀಗಾಗಿ ಅವಳು ಬಾಗಿಲ ಹತ್ತಿರವೇ ನಿಂತು ಕೊಂಡಳು.

೪

ಮಾಟ್ರ್ಯೋನಾ ಅಲ್ಲಿ ನಿಂತುಕೊಂಡು, 'ಅವನು ಒಳ್ಳೆಯವನಾಗಿದ್ದರೆ ಬೆತ್ತಲೆ ಇರುತ್ತಿರಲಿಲ್ಲ. ನೋಡು, ಅವನ ಮೈಮೇಲೆ ಒಂದು ಷರಟು ಕೂಡ ಇಲ್ಲ. ಅವನು ಸರಿಯಾದ ಮನುಷ್ಯನಾಗಿದ್ದರೆ ನಿನಗೆ ಅವನೆಲ್ಲಿ ಸಿಕ್ಕಿದನೋ ಹೇಳುತ್ತಲೇ ಇದ್ದೆ' ಎಂದಳು.

'ಈಗ ನಿನಗೆ ನಾನು ಹೇಳಬೇಕಂದು ಪ್ರಯತ್ನಮಾಡುತ್ತಿದ್ದದ್ದೂ ಅದೇ. ನಾನು ಗುಡಿಯ ಹತ್ತಿರಕ್ಕೆ ಬಂದಾಗ ಇವನು ಅಲ್ಲಿ ಬೆತ್ತಲೆ ಕೂತಿದ್ದನು, ಮೈಯೆಲ್ಲ ಚಳಿಯಿಂದ ಸೆಡೆದುಕೊಂಡಿದ್ದಿತು. ಬಯಲಿನಲ್ಲಿ ಬೆತ್ತಲೆ ಕುಳಿತಿರುವಂಥ ಕಾಲವೇ ಇದು? ದೇವರೇ ನನ್ನನ್ನು ಅಲ್ಲಿಗೆ ಕಳುಹಿಸಿದ ನೆನ್ನಬೇಕು. ಇಲ್ಲದಿದ್ದರೆ ಅವನು ಸತ್ತು ಹೋಗುತ್ತಿದ್ದನು ನಾನೇನು ಮಾಡಬೇಕು? ಅವನಿಗೇನೇನಾಗಿದ್ದಿತೋ ಅದು ನಮಗೆ ಹೇಗೆ ಗೊತ್ತಾಗಬೇಕು? ಆದ್ದರಿಂದ ಅವನನ್ನು ಕೈ ಹಿಡಿದೆಬ್ಬಿಸಿ, ಬಟ್ಟೆಯನ್ನು ಕೊಟ್ಟು ನಂಗಡ ಮನೆಗೆ ಕರೆದುಕೊಂಡು ಬಂದೆ. ಅಷ್ಟು ಸಿಟ್ಟು ಮಾಡಿಕೊಳ್ಳಬೇಡ, ಮಾಟ್ರ್ಯೋನಾ. ಅದು ಪಾಪ, ನಾವೂ ಎಲ್ಲ ಒಂದು ದಿನ ಸಾಯಬೇಕು. ಅದನ್ನೂ ಜ್ಞಾಪಿಸಿಕೊ' ಎಂದು ಸೈಮನ್ ಹೇಳಿದನು.

ಕೋಪದ ಮಾತುಗಳು ಅವಳ ತುಟಿಯವರೆಗೂ ಬಂದವು. ಆದರೆ ಆ ಹೊಸಬನ ಕಡೆಗೆ ಒಂದು ಸಲ ನೋಡಿ ಮಾತಾಡದೆ ಸುಮ್ಮನೆ ನಿಂತಳು. ಅವನು ಬೆಂಚಿನ ತುದಿಯಲ್ಲಿ, ಕೈಗಳೆರಡನ್ನೂ ಮಂಡಿಯ ಮೇಲೆ ಮಡಿಸಿ

ಕೊಂಡು ಅಲುಗಾಡದೆ ಕೂತುಕೊಂಡಿದ್ದನು, ತಲೆಯನ್ನು ಎದೆಯವರೆಗೂ ಬಗ್ಗಿಸಿದ್ದನು; ಕಣ್ಣು ಮುಚ್ಚಿದ್ದನು; ಏನೋ ನೋವಾಗುತ್ತಿರುವಂತೆ ಹುಬ್ಬುಗಳನ್ನು ಗಂಟುಹಾಕಿದ್ದನು. ಮಾಟ್ರ್ಯೋನಾ ಮೌನವಾಗಿದ್ದಳು 'ಮಾಟ್ರ್ಯೋನಾ, ನಿನಗೆ ದೇವರಲ್ಲಿ ಭಕ್ತಿಯಿಲ್ಲವೆ?' ಎಂದು ಸೈಮನ್ ಕೇಳಿದನು.

ಈ ಮಾತುಗಳನ್ನು ಕೇಳಿ ಮಾಟ್ರ್ಯೋನಾ ಹೊಸಬನ ಕಡೆಗೆ ನೋಡಿದಳು. ಅವನ ಕಡೆ ನೋಡಿದಾಗ ಅವಳ ಮನಸ್ಸು ಮೃದುವಾಯಿತು.

ಅವನ ಮೇಲೆ ಮರುಕ ಹುಟ್ಟಿತು. ಅವಳು ಬಾಗಿಲ ಬಳಿಯಿಂದ ಹಿಂದಕ್ಕೆ ಬಂದಳು ಒಲೆಯ ಹತ್ತಿರ ಹೋಗಿ ಊಟಕ್ಕೆ ತಂದಳು. ಮೇಜಿನ ಮೇಲೆ ಒಂದು ಬಟ್ಟಲನ್ನಿಟ್ಟು ಅದರೊಳಕ್ಕೆ ಸ್ವಲ್ಪ 'ಕ್ವಾಸ್' ಸುರಿದಳು. ಆಮೇಲೆ ಮನೆಯಲ್ಲಿ ಉಳಿದಿದ್ದ ಒಂದೇ ಒಂದು ಚೂರು ರೊಟ್ಟಿಯನ್ನು ಹೊರಕ್ಕೆ ತೆಗೆದಳು ಚಾಕು ಚಮಚಗಳನ್ನೂ ಮೇಜಿನ ಮೇಲಿಟ್ಟು, 'ಊಟಮಾಡಿ' ಎಂದಳು.

ಸೈಮನ್ ಹೊಸಬನನ್ನು ಮೇಜಿನ ಹತ್ತಿರ ಕರೆದು ಕೂರಿಸಿದನು. 'ಬಾರಯ್ಯಾ, ಊಟಕ್ಕೆ ಕೂತುಕೋ' ಎಂದನು.

ಸೈಮನ್ ರೊಟ್ಟಿಯನ್ನು ಕತ್ತರಿಸಿ ಚೂರು ಚೂರು ಮಾಡಿ ಗಂಜಿಯೊಳಕ್ಕೆ ಹಾಕಿದನು. ಇಬ್ಬರೂ ಊಟಕ್ಕೆ ಪ್ರಾರಂಭಿಸಿದರು. ಮಾಟ್ರ್ಯೋನಾ ಮೇಜಿನ ಒಂದು ಕಡೆಯ ಮೂಲೆಯಲ್ಲಿ ಗಲ್ಲದ ಮೇಲೆ ಕೈಯಿಟ್ಟುಕೊಂಡು ಹೊಸಬನನ್ನೇ ನೋಡುತ್ತ ಕುಳಿತಿದ್ದಳು.

ನೋಡ ನೋಡುತ್ತ ಅವಳಿಗೆ ಆ ಅಪರಿಚಿತನ ಮೇಲೆ ಕನಿಕರ ಹುಟ್ಟಿತು; ಅವನಲ್ಲಿ ವಾತ್ಸಲ್ಯ ಹೆಚ್ಚುತ್ತ ಬಂದಿತು ಅವಳ ಮನಸ್ಸಿನಲ್ಲಿ ವಾತ್ಸಲ್ಯ ತಲೆದೋರಿದ ಕೂಡಲೆ ಹೊಸಬನ ಮುಖ ಕಳೆಗೂಡಿ ಹೊಳೆಯ ತೊಡಗಿತು; ಅವನ ಹುಬ್ಬುಗಂಟು ಸಡಲಿಹೋಯಿತು, ಅವನು ಕಣ್ಣೆತ್ತಿ ಮಾಟ್ರ್ಯೋನಳ ಕಡೆಗೆ ನೋಡಿ ಮುಗುಳುನಗೆ ನಕ್ಕನು.

ಅವರ ಊಟ ಮುಗಿದ ಬಳಿಕ ಅವಳು ಪದಾರ್ಥಗಳನ್ನೆಲ್ಲ ತೆಗೆದಿಟ್ಟು ಹೊಸಬನನ್ನು ಪ್ರಶ್ನೆಮಾಡಲು ಪ್ರಾರಂಭಿಸಿದಳು 'ನೀನು ಎಲ್ಲಿಂದ ಬಂದೆ?' ಎಂದು ಕೇಳಿದಳು.

'ನಾನು ಈ ಕಡೆಯವನಲ್ಲ.'

'ಆದರೆ ದಾರಿಯಲ್ಲಿ ಸಿಕ್ಕಿದೆಯಂತಲ್ಲ, ಅಲ್ಲಿಗೆ ಹೇಗೆ ಬಂದೆ?'

ನಾನು ಹೇಳಲಾರೆ.

'ಯಾರಾದರೂ ನಿನ್ನ ಮೇಲೆ ಬಿದ್ದು ಇದ್ದದ್ದನ್ನು ದೋಚಿಕೊಂಡರೇ?'

'ದೇವರು ನನಗೆ ಶಿಕ್ಷೆ ಮಾಡಿದನು.'

'ಅಲ್ಲಿ ನೀನು ಬಟ್ಟೆಯಿಲ್ಲದೆ ಬೆತ್ತಲೆ ಮಲಗಿದ್ದೆಯೋ?'

'ಹೌದು, ಮೈಮೇಲೆ ಬಟ್ಟೆಯಿಲ್ಲದೆ ಶೀತದಿಂದ ಮೈಕೊರೆತುಕೊಂಡು ಬಿದ್ದಿದ್ದೆ. ಸೈಮನ್ ನನ್ನನ್ನು ನೋಡಿ ಕನಿಕರಪಟ್ಟು ಇಲ್ಲಿಗೆ ಕರೆದುಕೊಂಡು ಬಂದನು. ನೀನು ನನಗೆ ಊಟಕ್ಕಿಕ್ಕಿ ಕುಡಿಯುವುದಕ್ಕೆ ಕೊಟ್ಟು ನನ್ನ ಮೇಲೆ ಕನಿಕರವನ್ನು ತೋರಿಸಿದ್ದೀಯೆ. ದೇವರು ಮೆಚ್ಚಿ ನಿಮಗೆ ತಕ್ಕಂತೆ ಒಳ್ಳೆಯ ಫಲಕೊಡುತ್ತಾನೆ'

ಮಾಟ್ರ್ಯೋನಾ ಎದ್ದು ತಾನು ತೇಪೆ ಹಾಕುತ್ತಿದ್ದ ಸೈಮನ್ನನ ಹಳೆಯ ಷರಟನ್ನು ಕಿಟಿಕಿಯ ಬಳಿಯಿಂದ ತೆಗೆದುಕೊಂಡು ಬಂದು ಅದನ್ನು ಆ ಹೊಸಬನಿಗೆ ಕೊಟ್ಟಳು. ಅವನಿಗೆ ಒಂದು ಷರಾಯಿಯನ್ನೂ ಅವಳು ತಂದುಕೊಟ್ಟಳು.

'ಅಗೋ ಅಲ್ಲಿ, ನಿನಗೆ ಷರಟೇ ಇಲ್ಲ. ಇದನ್ನು ತೊಟ್ಟುಕೊ. ತೊಟ್ಟುಕೊಂಡು, ಒಲೆಯಮೇಲೋ ಅಟ್ಟದ ಮೇಲೋ, ಎಲ್ಲಿ ನಿನಗಿಷ್ಟವೋ ಅಲ್ಲಿ ಮಲಗಿಕೊ' ಎಂದಳು.

ಹೊಸಬನು ಅಂಗಿಯನ್ನು ಬಿಚ್ಚಿ ಷರಟು ತೊಟ್ಟುಕೊಂಡು ಅಟ್ಟದ ಮೇಲೆ ಮಲಗಿಕೊಂಡನು. ಮಾಟ್ರ್ಯೋನಾ ದೀಪವನ್ನಾರಿಸಿ, ಅಂಗಿಯನ್ನು ತೆಗೆದುಕೊಂಡು ಒಲೆಯಮೇಲೆ ತನ್ನ ಗಂಡ ಮಲಗಿದ್ದ ಬಳಿಗೆ ಹತ್ತಿ ಹೋದಳು.

ಮಾಟ್ರ್ಯೋನಾ ಅಂಗಿಯನ್ನು ಮೈಮೇಲೆ ಹೊದ್ದು ಮಲಗಿ ಕೊಂಡಳು. ಆದರೆ ನಿದ್ದೆಮಾಡುವುದಕ್ಕ ಮಾತ್ರ ಆಗಲಿಲ್ಲ, ಆ ಹೊಸಬನ ಯೋಚನೆಯೇ ಮನಸ್ಸನ್ನು ತುಂಬಿಕೊಂಡು ಅವನನ್ನು ಮರೆಯುವುದು ಅವಳಿಗೆ ಅಸಾಧ್ಯವಾಯಿತು

ಮನೆಯಲ್ಲಿ ಉಳಿದಿದ್ದ ಒಂದೇ ಒಂದು ಚೂರು ರೊಟ್ಟಿಯನ್ನು ಅವನು ತಿಂದುಬಿಟ್ಟನೆಂಬುದನ್ನೂ, ಅದರಿಂದ ಮರುದಿನಕ್ಕೆ ಏನೂ ಉಳಿದಿಲ್ಲವೆಂಬುದನ್ನೂ, ತಾನು ಅವನಿಗೆ ಷರಟು ಷರಾಯಿಗಳನ್ನು ಕೊಟ್ಟುಬಿಟ್ಟದ್ದನ್ನೂ ನೆನೆದುಕೊಂಡಾಗ ಅವಳಿಗೆ ತುಂಬ ಸಂಕಟವಾಯಿತು. ಆದರೆ ಅವನು ನಸುನಕ್ಕದ್ದನ್ನು ಜ್ಞಾಪಿಸಿಕೊಂಡಾಗ ಅವಳ ಹೃದಯ ಆನಂದದಿಂದ ತುಂಬಿಹೋಯಿತು.

ಮಾಟ್ರ್ಯೋನಾ ಬಹಳ ಹೊತ್ತು ಎಚ್ಚರವಾಗಿಯೇ ಮಲಗಿದ್ದಳು. ಸೈಮನ್ನನೂ ಎಚ್ಚರವಾಗಿಯೇ ಮಲಗಿದ್ದನು,—ಅವನು ಅಂಗಿಯನ್ನು ತನ್ನ ಕಡೆಗೆ ಎಳೆದುಕೊಂಡನು.

'ಸೈಮನ್ !'

'ಏನು ?'

'ಮನೆಯಲ್ಲಿದ್ದ ರೊಟ್ಟಿಯಲ್ಲಿ ಕಟ್ಟಕಡೆಯ ಚೂರು ಮುಗಿದು ಹೋಯಿತು ಸ್ವಲ್ಪವನ್ನೂ ಮಿಗಿಸಿಟ್ಟಿಲ್ಲ. ನಾಳೆ ಏನು ಮಾಡಬೇಕೋ ಕಾಣೆ. ನೆರೆಮನೆಯ ಮಾರ್ಥಳ ಹತ್ತಿರ ಸ್ವಲ್ಪ ಸಾಲ ತರಬಹುದು'

'ನಾವು ಬದುಕಿದ್ದರೆ ತಿನ್ನುವುದಕ್ಕೆ ಏನಾದರೂ ಸಿಕ್ಕಿಯೇ ಸಿಕ್ಕುತ್ತದೆ'

ಹೆಂಗಸು ಸ್ವಲ್ಪ ಹೊತ್ತು ಸುಮ್ಮನೆ ಮಲಗಿದ್ದು ಆಮೇಲೆ 'ಅವನು ಒಳ್ಳೆಯವನ ಹಾಗೆ ಕಾಣುತ್ತಾನೆ. ಆದರೆ ತಾನು ಯಾರು ಎನ್ನುವುದನ್ನು ಅದೇಕೆ ಹೇಳುವುದಿಲ್ಲ ?' ಎಂದಳು

'ಅದಕ್ಕೆ ಕಾರಣಗಳಿರಬಹುದು.'

'ಸೈಮನ್ !'

'ಏನು ?'

'ನಾವು ಕೊಡುತ್ತೇವೆ ; ಆದರೆ ನಮಗೇಕೆ ಯಾರೂ ಏನೂ ಕೊಡುವುದಿಲ್ಲ ?'

ಸೈಮನ್ನನಿಗೆ ಏನು ಹೇಳುವುದಕ್ಕೂ ತೋರಲಿಲ್ಲ, ಆದ್ದರಿಂದ 'ಇನ್ನು ಮಾತು ನಿಲ್ಲಿಸೋಣ' ಎಂದಿಷ್ಟೇ ಹೇಳಿ, ಬೇರೆ ಮಗ್ಗುಲಿಗೆ ಹೊರಳಿ ನಿದ್ರೆ ಮಾಡಿದನು

೫

ಬೆಳಿಗ್ಗೆ ಸೈಮನ್ ಎದ್ದನು. ಮಕ್ಕಳಿನ್ನೂ ಮಲಗಿದ್ದವು, ಅವನ ಹೆಂಡತಿ ಸ್ವಲ್ಪ ಬ್ರೆಡ್ಡನ್ನು ಸಾಲ ತರುವುದಕ್ಕೆಂದು ನೆರೆಮನೆಗೆ ಹೋಗಿದ್ದಳು. ಹೊಸಬನು ಹಳೆಯ ಷರಟು ಷರಾಯಿಗಳನ್ನು ಹಾಕಿಕೊಂಡು ಮೇಲಕ್ಕೆ ನೋಡುತ್ತಾ ಬೆಂಚಿನ ಮೇಲೆ ಒಂಟಿಯಾಗಿ ಕುಳಿತಿದ್ದನು. ಅವನ ಮುಖ ಹಿಂದಿನ ದಿನಕ್ಕಿಂತಲೂ ಹೆಚ್ಚು ಕಾಂತಿಗೂಡಿದ್ದಿತು.

ಸೈಮನ್ 'ಒಳ್ಳೆಯದಣ್ಣಾ, ಹೊಟ್ಟೆಗೆ ರೊಟ್ಟಿಬೇಕು, ಮೈಗೆ ಬಟ್ಟೆ ಬೇಕು. ಹೊಟ್ಟೆ ಹೊರೆಯುವುದಕ್ಕೆ ಕೆಲಸ ಮಾಡಬೇಕಾಗುತ್ತದೆ. ನಿನಗೆ ಯಾವ ಕೆಲಸ ಬರುತ್ತದೆ ?' ಎಂದು ಅವನನ್ನು ಕೇಳಿದನು.

'ನನಗೆ ಏನೂ ಬರುವುದಿಲ್ಲ.'

ಇದನ್ನು ಕೇಳಿ ಸೈಮನ್ನನಿಗೆ ಆಶ್ಚರ್ಯವಾಯಿತು. ಆದರೆ 'ಮನಸ್ಸಿದ್ದರೆ ಏನನ್ನು ಬೇಕಾದರೂ ಕಲಿಯಬಹುದು ಎಂದನು.

'ಜನರೆಲ್ಲ ಕಲಸಮಾಡುತ್ತಾರೆ, ಆದ್ದರಿಂದ ನಾನೂ ಮಾಡುತ್ತೇನೆ.'

'ನಿನ್ನ ಹೆಸರೇನು ?'

'ಮೈಕೇಲ್'

'ಆಗಲಿ, ಮೈಕೇಲ್, ನಿನ್ನ ವಿಚಾರದಲ್ಲಿ ಏನನ್ನೂ ಹೇಳುವುದಕ್ಕೆ ನಿನಗಿಷ್ಟವಿಲ್ಲದಿದ್ದರೆ ಹಾಗೆಯೇ ಮಾಡು, ಅದು ನಿನ್ನ ಸ್ವಂತ ವಿಷಯ ;

(ಅದಕ್ಕೂ ನನಗೂ ಸಂಬಂಧವಿಲ್ಲ) ಆದರೆ ನೀನು ಹೊಟ್ಟೆ ಹೊರೆದುಕೊಳ್ಳು ವುದಕ್ಕೆ ಏನಾದರೂ ಕೆಲಸ ಮಾಡಲೇ ಬೇಕಾಗುತ್ತದೆ. ನಾನು ಹೇಳುವ ಹಾಗೆ ಕೆಲಸ ಮಾಡುವುದಾದರೆ ನಿನಗೆ ಅನ್ನ ಬಟ್ಟೆ ಕೊಟ್ಟು ಇಟ್ಟು ಕೊಳ್ಳುತ್ತೇನೆ'

'ದೇವರು ನಿನಗೆ ಒಳ್ಳೆಯದು ಮಾಡಲಿ! ನಾನು ಕಲಿತುಕೊಳ್ಳು ತ್ತೇನೆ. ಏನು ಮಾಡಬೇಕೋ ತೋರಿಸಿಕೊಡು.'

ಸೈಮನ್ ದಾರವನ್ನು ತೆಗೆದುಕೊಂಡು ತನ್ನ ಹೆಬ್ಬೆಟ್ಟಿಗೆ ಸುತ್ತಿ ಕೊಂಡು ಅದನ್ನು ಹೊಸೆಯ ತೊಡಗಿದನು. ಹೊಸೆಯುತ್ತ 'ನೋಡು ಇದು ಬಹು ಸುಲಭ' ಎಂದನು.

ಮೈಕೇಲ್ ಅವನು ಮಾಡುವುದನ್ನು ಗಮನವಿಟ್ಟು ನೋಡುತ್ತಿದ್ದು ತನ್ನ ಹೆಬ್ಬೆರಳಿಗೂ ಸ್ವಲ್ಪ ದಾರವನ್ನು ಸುತ್ತಿಕೊಂಡು, ಕೆಲಸದ ಮರ್ಮ ವನ್ನು ತಿಳಿದು ದಾರವನ್ನು ಹೊಸೆದು ಹುರಿಮಾಡಿದನು.

ಆಮೇಲೆ ಸೈಮನ್ ದಾರಕ್ಕೆ ಮೇಣ ಬಳಿಯುವುದು ಹೇಗೆಂದು ತೋರಿಸಿಕೊಟ್ಟನು. ಇದನ್ನೂ ಮೈಕೇಲ್ ಚೆನ್ನಾಗಿ ಕಲಿತುಕೊಂಡನು. ಅದಾದ ಮೇಲೆ ದಾರವನ್ನು ಪೋಣಿಸುವುದನ್ನೂ ಹೊಲಿಯುವುದನ್ನೂ ತೋರಿಸಿಕೊಟ್ಟನು. ಇದನ್ನೂ ಮೈಕೇಲ್ ತಕ್ಷಣವೇ ಕಲಿತನು.

ಸೈಮನ್ ಏನೇನು ತೋರಿಸಿಕೊಟ್ಟನೋ ಅದನ್ನೆಲ್ಲ ಮೈಕೇಲ್ ಕೂಡಲೆ ತಿಳಿದುಕೊಳ್ಳುತ್ತಿದ್ದನು. ಮೂರುದಿನ ಕಳೆದ ಮೇಲೆ ತಾನು ಹುಟ್ಟಿದಾಗಿನಿಂದಲೂ ಬೂಟುಗಳನ್ನು ಹೊಲಿಯುತ್ತಿದ್ದರೆ ಹೇಗೋ ಹಾಗೆ ಕೆಲಸಮಾಡುತ್ತಿದ್ದನು. ಅವನು ಬಿಡದೆ ಕೆಲಸ ಮಾಡುತ್ತಿದ್ದನು, ಅವನು ತಿನ್ನುತ್ತಿದ್ದದ್ದು ಬಹು ಸ್ವಲ್ಪ. ಕೆಲಸ ಮುಗಿದ ಮೇಲೆ ಮೇಲುಗಡೆ ನೋಡುತ್ತ ಮೌನವಾಗಿ ಕುಳಿತಿರುತ್ತಿದ್ದನು. ಅವನು ಬೀದಿಗೆ ಹೋಗು ತ್ತಿದ್ದದ್ದು ಬಹಳ ಅಪರೂಪ, ಅಗತ್ಯವಿದ್ದಾಗ ಮಾತ್ರ ಎಷ್ಟೋ ಅಷ್ಟು ಮಾತಾಡುತ್ತಿದ್ದನು; ಹಾಸ್ಯ ಮಾಡುತ್ತಲೂ ಇರಲಿಲ್ಲ, ನಗು

ತ್ತಲೂ ಇರಲಿಲ್ಲ. ಮಾಟ್ರ್ಯೋನಾ ಅವನಿಗೆ ಊಟಕ್ಕಿಕ್ಕಿದ ಆ ಒಂದು ರಾತ್ರಿ ಹೊರತಾಗಿ ಮತ್ತೆ ಎಂದೂ ಅವನು ಮುಗುಳುನಗೆ ನಕ್ಕದ್ದನ್ನು ಅವರು ಕಂಡಿರಲಿಲ್ಲ.

ದಿನದಿನಗಳುರುಳಿ, ವಾರವಾರಗಳು ಕಳೆದು, ಒಂದು ವರ್ಷ ಮುಗಿಯಿತು. ಮೈಕೇಲನು ಸೈಮನ್ನನ ಸಂಗಡ ಉಳಿದುಕೊಂಡು ಅವನ ಕೈ ಕೆಳಗೆ ಕೆಲಸಮಾಡುತ್ತ ಬಂದನು. ಅವನ ಖ್ಯಾತಿ ಎಲ್ಲ ಕಡೆಗೂ ಹರಡಿತು. ಜನರೆಲ್ಲರೂ ಸೈಮನ್ನನ ಹತ್ತಿರ ಕಲಸಕ್ಕಿರುವ ಮೈಕೇಲನ ಹಾಗೆ ಸೊಗಸಾಗಿಯೂ ಗಟ್ಟಿಯಾಗಿಯೂ ಬೂಟುಗಳನ್ನು ಹೊಲಿಯುವವರು ಬೇರೆ ಯಾರೂ ಇಲ್ಲವೆಂದು ಹೇಳತೊಡಗಿದರು, ಆ ಡಿಸ್ಟ್ರಿಕ್ಟಿನ ಎಲ್ಲ ಕಡೆಗಳಿಂದಲೂ ಜನರು ತಮ್ಮ ಬೂಟುಗಳನ್ನು ಹೊಲಿಸಿಕೊಳ್ಳುವುದಕ್ಕಾ ಸೈಮನ್ನನ ಬಳಿಗೇ ಬರುವುದಕ್ಕೆ ಮೊದಲು ಮಾಡಿದರು. ಸೈಮನ್ ದಿನದಿನಕ್ಕೆ ಅನುಕೂಲವಂತನಾದನು.

ಚಳಿಗಾಲದಲ್ಲಿ ಒಂದು ದಿನ ಸೈಮನ್ ಮೈಕೇಲ್ ಇಬ್ಬರೂ ಕೆಲಸ ಮಾಡುತ್ತ ಕುಳಿತಿದ್ದಾಗ ಝುಣಗುಟ್ಟುವ ಕಿರುಗಂಟೆಗಳನ್ನು ಕಟ್ಟಿ ಮೂರು ಕುದುರೆಗಳನ್ನು ಹೂಡಿದ್ದ ಒಂದು ಸಾರೋಟು ಗುಡಿಸಲ ಕಡೆಗೆ ಬಂದಿತು. ಅವರಿಬ್ಬರೂ ಕಿಟಕಿಯಿಂದ ಹೊರಕ್ಕೆ ನೋಡಿದರು ಸಾರೋಟು ಗುಡಿಸಲಿನ ಬಾಗಿಲಿನಲ್ಲಿ ನಿಂತುಕೊಂಡಿತು. ಸೊಗಸಾಗಿ ಅಲಂಕರಿಸಿಕೊಂಡಿದ್ದ ಒಬ್ಬ ಸೇವಕನು ಕೆಳಕ್ಕೆ ಧುಮುಕಿ ಸಾರೋಟಿನ ಬಾಗಿಲನ್ನು ತೆರೆದನು ತುಪ್ಪಟದ ಅಂಗಿಯನ್ನು ತೊಟ್ಟಿದ್ದ ಶ್ರೀಮಂತನೊಬ್ಬನು ಸಾರೋಟಿನಿಂದ ಇಳಿದು ಬಂದು ಸೈಮನ್ನನ ಗುಡಿಸಲ ಬಳಿಗೆ ನಡೆದುಹೋದನು. ಮಾಟ್ರ್ಯೋನಾ ನಡಗರಪಟ್ಟುಕೊಂಡು ಎದ್ದುಬಂದು ಕದವನ್ನು ಪೂರ್ತಿಯಾಗಿ ಹಿಂದಕ್ಕೆ ತೆರೆದಳು. ಬಂದಾತನು ಬಾಗಿಲ ಹತ್ತಿರ ಬಗ್ಗಿ ಒಳಕ್ಕೆ ಪ್ರವೇಶಿಸಿದನು. ಒಳಗೆ ಬಂದು ನೆಟ್ಟಗೆ ನಿಂತಾಗ ಆತನ ತಲೆ ಛಾವಣಿಗೆ ಸೋಕುವ ಹಾಗಾ

ಯಿತು : ಆ ಕಡೆಯ ಭಾಗವನ್ನೆಲ್ಲ ತಾನೊಬ್ಬನೇ ತುಂಬಿಬಿಡುವಂತೆ ಕಾಣು ತ್ತಿದ್ದನು.

ಸೈಮನ್ ಎದ್ದು ಆತನಿಗೆ ತಲೆಬಗ್ಗಿ ನಮಸ್ಕರಿಸಿ ಅವನ ಮುಖ ವನ್ನೇ ಆಶ್ಚರ್ಯದಿಂದ ನೋಡುತ್ತಾ ನಿಂತುಬಿಟ್ಟನು. ಅವನಂಥ ಮನುಷ್ಯ ನನ್ನು ಎಂದೂ ಅವನು ಕಂಡೇ ಇರಲಿಲ್ಲ. ಸೈಮನ್ ಶಣಕೆಯಾಗಿದ್ದನು, ಮೈಕೇಲ್ ಸಣ್ಣಗಿದ್ದನು ; ಮಾಟ್ರ್ಯೋನಾ ಮೂಳೆಯಹಾಗೆ ಒಣಗಿಕೊಂ ಡಿದ್ದಳು. ಆದರೆ ಈ ಮನುಷ್ಯ ಬೇರೆ ಯಾವುದಾದರೂ ಒಂದು ಹೊಸ ಪ್ರಪಂಚದಿಂದ ಬಂದವನಂತೆ ಕಾಣುತ್ತಿದ್ದನು, ಅವನ ಮುಖ ಕೆಂಚಗಿದ್ದಿತು. ಆಳು ಬಹು ದಪ್ಪ, ಗೂಳಿಯ ಕತ್ತಿನ ಹಾಗೆ ಕತ್ತು, ನೋಡಿದರೆ ಕಬ್ಬಿಣ ದಿಂದ ಎರಕ ಹುಯ್ದು ಮಾಡಿದ್ದರೆ ಹೇಗೋ ಹಾಗೆ ಕಾಣುತ್ತಿದ್ದನು.

ಶ್ರೀಮಂತನು ಒಂದು ಸಲ ಹೊಗೆಬತ್ತಿಯನ್ನು ಸೇದಿ ಹೊಗೆಯ ನ್ನೂದಿ ತುಪ್ಪಟದ ಅಂಗಿಯನ್ನು ಬಿಚ್ಚಿ ಎಸೆದು, ಬೆಂಚಿನ ಮೇಲೆ ಕುಳಿತು ಕೊಂಡು, 'ನಿಮ್ಮಲ್ಲಿ ಯಜಮಾನ ಯಾರು ?' ಎಂದು ಕೇಳಿದನು.

'ನಾನು, ಮಹಾಸ್ವಾಮಿ' ಎನ್ನುತ್ತಾ ಸೈಮನ್ ಮುಂದಕ್ಕೆ ಬಂದನು.

ಆಗ ಆತನು 'ಲೋ, ಫೇಡ್ಕಾ, ಚಕ್ಕಳವನ್ನು ತೆಗೆದುಕೊಂಡು ಬಾರೋ' ಎಂದು ತನ್ನ ಆಳಿಗೆ ಗಟ್ಟಿಯಾಗಿ ಕೂಗಿಹೇಳಿದನು.

ಆ ಸೇವಕನು ಒಂದು ಗಂಟನ್ನು ತೆಗೆದುಕೊಂಡು ಒಳಕ್ಕೆ ಓಡಿ ಬಂದನು. ಶ್ರೀಮಂತನು ಆ ಗಂಟನ್ನು ಕೈಗೆ ತೆಗೆದುಕೊಂಡು ಮೇಜಿನ ಮೇಲಿಟ್ಟನು.

ಇಟ್ಟು, 'ಬಿಚ್ಚು ಇದನ್ನ' ಎಂದನು ಆಳು ಬಿಚ್ಚಿದನು.

'ಮೋಚಿ, ನೋಡಿಲ್ಲಿ. ಈ ತೊಗಲನ್ನು ನೋಡಿದೆಯೋ' ಎಂದನು.

'ನೋಡಿದೆ, ಮಹಾಸ್ವಾಮಿ.'

'ಆದರೆ, ಇದೆಂಥ ತೊಗಲು, ಗೊತ್ತೋ ನಿನಗೆ ?'

ಸೈಮನ್ ತೊಗಲನ್ನು ಮುಟ್ಟಿ ನೋಡಿ 'ಇದು ಒಳ್ಳೆಯ ತೊಗಲು' ಎಂದನು.

'ಒಳ್ಳೆಯದು! ಒಳ್ಳೆಯದಲ್ಲದೆ ಇನ್ನೇನಾದೀತು! ಅಯ್ಯೋ ದಡ್ಡ, ನಿನ್ನ ಜೀವಮಾನದಲ್ಲಿ ಇದಕ್ಕ ಮುಂಚೆ ಇಂಥ ತೊಗಲನ್ನು ನೀನು ಕಂಡೇ ಇರಲಿಲ್ಲ. ಇದು ಜರ್ಮನ್ ತೊಗಲು; ಬೆಲೆ ಇಪ್ಪತ್ತು ರೂಬಲ್'

ಸೈಮನ್ ಹೆದರಿದನು. ಹೆದರಿ, 'ಅಂಥ ತೊಗಲನ್ನು ನಾನೆಲ್ಲಿ ಕಾಣ ಬೇಕು?' ಎಂದನು

'ಹಾಗೆ ಹೇಳು! ಅದಿರಲಿ, ಈಗ ಈ ತೊಗಲಿನಲ್ಲಿ ನನಗೆ ಬೂಟು ಗಳನ್ನು ಮಾಡಿಕೊಡಬಲ್ಲೆಯೋ?'

'ಆಗಲಿ, ಮಹಾಸ್ವಾಮಿ, ಮಾಡಿಕೊಡಬಲ್ಲೆ?'

ಆತನು ಸೈಮನ್ನನನ್ನು ಕುರಿತು ಹೀಗೆ ಅಬ್ಬರಿಸಿದನು. 'ಏನಂದೆ? ನಿಜವಾಗಿಯೂ ಮಾಡಬಲ್ಲೆಯೋ? ಒಳ್ಳೆಯದು ಆದರೆ, ಜೋಕೆ, ಯಾರಿಗೆ ಹೊಲಿದುಕೊಡಬೇಕು, ಆ ತೊಗಲಿಗೆ ಬೆಲೆಯೇನು, ಎನ್ನುವುದು ಚೆನ್ನಾಗಿ ನೆನಪಿರಲಿ ಒಂದು ವರ್ಷದವರೆಗೂ ಆಕಾರ ಕಡಬಾರದು, ಹೊಲಿಗೆ ಬಿಚ್ಚ ಬಾರದು, ಅಂಥ ಬೂಟುಗಳನ್ನು ಹೊಲಿದುಕೊಡಬೇಕು. ಜೋಕೆ, ಈಗಲೇ ಹೇಳಿರುತ್ತೇನೆ ಒಂದು ವರ್ಷಕ್ಕೆ ಮುಂಚೆ ಬೂಟುಗಳ ಆಕಾರ ಕಟ್ಟು ಹೋದರೆ, ಅಥವಾ ಹೊಲಿಗೆ ಬಿಚ್ಚಿಹೋದರೆ ನಿನ್ನನ್ನು ಸೆರೆಮನೆಗೆ ದೂಡಿಸಿ ಬಿಡುತ್ತೇನೆ, ಜೋಕೆ. ಹಾಗಲ್ಲದೆ ಒಂದು ವರ್ಷದವರೆಗೂ ಹೊಲಿಗೆ ಬಿಚ್ಚದೆ ಆಕಾರ ಕೆಡದೆ ಅವು ಚೆನ್ನಾಗಿದ್ದರೆ, ನಿನ್ನ ಕಲಸಕ್ಕೆ ಹತ್ತು ರೂಬಲ್ ಕೊಡುತ್ತೇನೆ.'

ಸೈಮನ್ನನಿಗೆ ಭಯವಾಯಿತು, ಏನು ಹೇಳಬೇಕೋ ತಿಳಿಯಲಿಲ್ಲ. ಮೈಕೇಲನ ಕಡೆಗೆ ದೃಷ್ಟಿಯನ್ನು ಹೊರಳಿಸಿ, ಮೊಳಕೈಯಲ್ಲಿ ಅವನನ್ನು ಮೆಲ್ಲಗೆ ತಿವಿಯುತ್ತ 'ಈ ಕೆಲಸವನ್ನು ಒಪ್ಪಿಕೊಳ್ಳಲೆ?' ಎಂದು ಪಿಸು ಗುಟ್ಟಿದನು.

'ಆಗಲಿ, ಒಪ್ಪಿಕೊ' ಎಂದು ಹೇಳುವಂತೆ ಮೈಕೇಲ್ ತಲೆಯನ್ನು ಅಲ್ಲಾಡಿಸಿದನು.

ಸೈಮನ್ ಮೈಕೇಲ್ ಹೇಳಿದಂತೆಯೇ ಮಾಡಿದನು. ಒಂದು ವರ್ಷದ ವರೆಗೂ ಹೊಲಿಗೆ ಬಿಚ್ಚದೆಯೂ ಆಕಾರ ಕೆಡದೆಯೂ ಚೆನ್ನಾಗಿರುವಂಥ ಬೂಟುಗಳನ್ನು ಹೊಲಿದುಕೊಡುವುದಾಗಿ ಒಪ್ಪಿಕೊಂಡನು

ಶ್ರೀಮಂತನು ಸೇವಕನನ್ನು ಹತ್ತಿರ ಕರೆದು ತನ್ನ ಎಡಗಾಲಿನ ಬೂಟನ್ನು ತೆಗೆಯುವಂತೆ ಹೇಳಿದನು.

ಆಮೇಲೆ ಅದನ್ನು ಮುಂದಕ್ಕೆ ನೀಡಿ 'ನನ್ನ ಅಳತೆಯನ್ನು ತೆಗೆದುಕೊ' ಎಂದನು

ಸೈಮನ್ ಕಾಗದದ ತುಂಡುಗಳನ್ನು ಅಂಟಿಸಿ ಹದಿನೇಳು ಅಂಗುಲ ಉದ್ದವಾಗಿ ಮಾಡಿಕೊಂಡು, ಕೆಳಗೆ ಒಗ್ಗಿ ಕುಳಿತು, ತಾನು ಮುಟ್ಟಿದಾಗ ಆತನ ಕಾಲುಚೀಲ ಕೊಳೆಯಾದೀತೆಂದು ತನ್ನ ಕೈಯನ್ನು ತಾನು ಹೊದೆದಿದ್ದ ಒಟ್ಟೆಯಿಂದ ಚೆನ್ನಾಗಿ ಒರೆಸಿಕೊಂಡು ಅಳತೆ ಮಾಡುವುದಕ್ಕೆ ಪ್ರಾರಂಭ ಮಾಡಿದನು ಹೆಜ್ಜೆಯನ್ನು ಅಳೆದು ಹರಡಿನಿಂದ ಹೆಬ್ಬೆಟ್ಟಿನ ವರೆಗೆ ಮುಂಗಾಲಿನ ಅಳತೆಯನ್ನು ತೆಗೆದುಕೊಂಡನು. ಆಮೇಲೆ ಮೀನಖಂಡದ ಸುತ್ತಲೂ ಅಳೆಯುವುದಕ್ಕೆ ಪ್ರಾರಂಭಿಸಿದನು. ಅಷ್ಟರಲ್ಲಿ ಕಾಗದ ಸಾಲದೆ ಬಂದಿತು. ಮೀನಖಂಡದ ಬಳಿ ಕಾಲು ಒಂದು ತೊಲೆಯಷ್ಟು ದಪ್ಪವಾಗಿದ್ದಿತು.

'ತುಂಬ ಬಿಗಿಯಾಗಿ ಮಾಡೀಯೆ ಜೋಕೆ.'

ಸೈಮನ್ ಮತ್ತೊಂದು ತುಂಡು ಕಾಗದವನ್ನು ಅಂಟಿಸಿಕೊಂಡನು. ಶ್ರೀಮಂತನು ಕಾಲುಚೀಲದೊಳಗೇ ಬೆರಳುಗಳನ್ನು ಅಲುಗಾಡಿಸುತ್ತಾ ಗುಡಿಸಲಿನಲ್ಲಿ ಯಾರು ಯಾರು ಇರುವರೆಂದು ನೋಡುವುದಕ್ಕಾಗಿ ಸುತ್ತಲೂ ದೃಷ್ಟಿಯನ್ನು ಹೊರಳಿಸಿದನು. ಹಾಗೆ ಸುತ್ತಲೂ ನೋಡುತ್ತಿದ್ದಾಗ ಮೈಕೇಲ್ ಅವನ ಕಣ್ಣಿಗೆ ಬಿದ್ದನು.

'ಅದು ಯಾರು, ಅಲ್ಲಿರುವವನು ?' ಎಂದು ಕೇಳಿದನು.

'ಅವನು ನನ್ನ ಜೊತೆಯ ಕೆಲಸಗಾರ. ಅವನೇ ಬೂಟುಗಳನ್ನು ಹೊಲಿಯುತ್ತಾನೆ ?'

ಆಗ ಆತನು ಮೈಕೇಲನ ಕಡೆಗೆ ತಿರುಗಿ 'ಜೋಕೆ! ಎಚ್ಚರ ಒಂದು ವರ್ಷದ ವರೆಗೂ ಬಾಳಿಕೆ ಬರುವಂಥ ಬೂಟುಗಳನ್ನು ತಯಾರಿ ಬೇಕು, ಮರೆತೀಯೆ' ಎಂದನು.

ಸೈಮನ್ನನೂ ಮೈಕೇಲನ ಕಡೆಗೆ ನೋಡಿದನು. ಮೈಕೇಲನು ಶ್ರೀಮಂತನನ್ನು ನೋಡುತ್ತಲೇ ಇರಲಿಲ್ಲ. ಅವನ ಹಿಂಭಾಗದ ಮೂ ಯನ್ನು ಅಲ್ಲಿ ಯಾರನ್ನೋ ಕಾಣುತ್ತಿರುವವನ ಹಾಗೆ ನೆಟ್ಟ ದೃಷ್ಟಿಯಿಂ ನೋಡುತ್ತಿದ್ದನು. ಮೈಕೇಲ್ ಸ್ವಲ್ಪ ಹೊತ್ತು ಅಲ್ಲಿ ದುರುಗುಟ್ಟಿಕೊಂಡ ನೋಡುತ್ತಿದ್ದು, ತಟಕ್ಕನೆ ಮುಗುಳು ನಗೆ ನಕ್ಕನು, ಆಗ ಅವನ ಮು ಮೊದಲಿಗಿಂತ ಹೆಚ್ಚು ಕಳೆಗೂಡಿಕೊಂಡಿತು.

'ಲೋ, ಬೆಪ್ಪ, ಅಲ್ಲೇನು ನೋಡಿ ಹಲ್ಲುಗಿರಿಯುತ್ತಿದಿಯೋ ? ಹಾ ಹಲ್ಲುಗಿರಿಯುವುದಕ್ಕೆ ಬದಲಾಗಿ ಹೊತ್ತಿಗೆ ಸರಿಯಾಗಿ ಬೂಟುಗಳನ್ನು ಸಿದ್ಧ ಮಾಡುವುದಕ್ಕೆ ಮನಸ್ಸು ಕೊಡು' ಎಂದು ಆತ ಗುಡುಗಿದನು. ಮೈಕೇಲ 'ಹೊತ್ತಿಗೆ ಸರಿಯಾಗಿ ಸ್ವಲ್ಪವೂ ತಪ್ಪದೆ ಅವು ಸಿದ್ಧವಾಗಿರುತ್ತವೆ.' ಎಂದನು

ಶ್ರೀಮಂತನು 'ಹಾಗೆ ಮಾಡು, ಎಚ್ಚರವಿರಲಿ' ಎಂದು ಹೇ ತನ್ನ ಬೂಟುಗಳನ್ನು ಹಾಕಿಕೊಂಡು, ತುಪಟದ ಅಂಗಿಯನ್ನು ತೊಟ್ಟು ಕೊಂಡು, ಬಾಗಿಲ ಹತ್ತಿರಕ್ಕೆ ಹೋದನು. ಆದರೆ ಅಲ್ಲಿ ಬಗ್ಗಿ ನಡೆಯಬೇ ಕೆಂಬುದನ್ನು ಮರೆತು ಮುಂದೆ ನುಗ್ಗಿ ತಲೆಯನ್ನು ದಾರಂದಕ್ಕೆ ತಾಕಿ ಕೊಂಡನು.

ತಲೆ ತಾಕಿದಾಗ ಬೈದು ಗೊಣಗುತ್ತ ತಲೆಯನ್ನು ತಿಕ್ಕಿಕೊಂಡನು ಆಮೇಲೆ ಸಾರೋಟಿನೊಳಗೆ ಹೋಗಿ ಕುಳಿತುಕೊಂಡು ಹೊರಟ ಹೋದನು.

ಆತನು ಹೊರಟುಹೋದ ಬಳಿಕ ಸೈಮನ್ 'ಅಬ್ಬಬ್ಬ ಅವನೆಂಥ ಆಳಪ್ಪ! ಕೊಡತಿಯಿಂದಂತೂ ಅವನನ್ನು ಕೊಲ್ಲುವುದಸಾಧ್ಯ. ದಾರಂದವೇ ಮುರಿದು ಹೋಗುವ ಹಾಗಾಗಿದ್ದಿತು. ಆದರೆ ಅವನಿಗೆ ಮಾತ್ರ ಆದ ತೊಂದರೆ ತೀರಾ ಸ್ವಲ್ಪ' ಎಂದನು.

ಮಾಟ್ರ್ಯೋನಾ 'ಅವನು ಹಾಗೆ ಜೀವಿಸುತ್ತಿದ್ದರೆ ಅದು ಹೇಗೆ ಗಟ್ಟಿಯಾಗದೆ ಇದ್ದಾನು? ಅಂಥ ಕಲ್ಲುಬಂಡೆಯನ್ನು ಆ ಮೃತ್ಯುವೇ ಪ್ರತ್ಯಕ್ಷವಾಗಿ ಬಂದರೂ ಮುಟ್ಟಲಾರನು' ಎಂದಳು

೭

ಆಮೇಲೆ ಸೈಮನ್ ಮೈಕೇಲನಿಗೆ ಹೀಗೆ ಹೇಳಿದನು 'ಒಳ್ಳೆಯುದಪ್ಪಾ, ನಾವೇನೋ ಕೆಲಸವನ್ನು ಒಪ್ಪಿಕೊಂಡುಬಿಟ್ಟೆವು. ಆದರೆ ಇದರಿಂದ ನಾವು ತೊಂದರೆಗೆ ಸಿಕ್ಕಿಕೊಳ್ಳದಹಾಗೆ ನೋಡಿಕೊಳ್ಳಬೇಕು. ತೊಗಲು ಬಹು ಬೆಲೆಯುಳ್ಳದ್ದು, ಆತನೋ ಮುಂಗೋಪಿ, ನಾವು ಸ್ವಲ್ಪವೂ ತಪ್ಪು ಮಾಡಬಾರದು ಬಾರಣ್ಣಾ, ನಿನ್ನ ಕಣ್ಣು ನನಗಿಂತ ಬಹು ಚುರುಕು, ಕೈಯೂ ಹಾಗೆಯೇ, ನಿನ್ನ ಕೆಲಸ ತಪ್ಪಾಗುವುದಿಲ್ಲ. ಆದ್ದರಿಂದ ನೀನೇ ಈ ಅಳತೆಯನ್ನು ತೆಗೆದುಕೊಂಡು ತೊಗಲನ್ನು ಕತ್ತರಿಸಿ ಬೂಟುಗಳನ್ನು ಹೊಲಿ. ಮೇಲುಗಡೆಯ ಭಾಗವನ್ನು ನಾನೇ ಹೊಲಿದು ಎಲ್ಲವನ್ನೂ ಸರಿ ಮಾಡಿಡುತ್ತೇನೆ.'

ಮೈಕೇಲ್ ತನಗೆ ಹೇಳಿದಂತೆಯೇ ಮಾಡಿದನು. ತೊಗಲನ್ನು ತೆಗೆದುಕೊಂಡು ಮೇಜಿನ ಮೇಲೆ ಅದನ್ನು ಹರವಿ, ಮಧ್ಯಕ್ಕೆ ಎರಡು ಮಡಿಕೆಯಾಗಿ ಮಡಿಸಿ ಒಂದು ಚೂರಿಯನ್ನು ತೆಗೆದುಕೊಂಡು ಕತ್ತರಿಸಲು ಪ್ರಾರಂಭಿಸಿದನು.

ಮಾಟ್ರ್ಯೋನಾ ಬಂದು ಅವನು ಕತ್ತರಿಸುವುದನ್ನೇ ನೋಡುತ್ತಿದ್ದಳು. ಅವನು ಕತ್ತರಿಸುವ ರೀತಿಯನ್ನು ಕಂಡು ಅವಳಿಗೆ ಆಶ್ಚರ್ಯವಾಯಿತು. ಬೂಟುಗಳನ್ನು ಮಾಡುವಾಗ ನೋಡಿ ನೋಡಿ ಅವನ್ನು ಮಾಡುವುದು ಹೇಗೆಂಬುದು ಅವಳಿಗೆ ಚೆನ್ನಾಗಿ ಗೊತ್ತಾಗಿದ್ದಿತು. ಈಗ ಅವಳು

ನೋಡಲಾಗಿ ಮೈಕೇಲ್ ತೊಗಲನ್ನು ಬೂಟುಗಳಿಗೆ ಕತ್ತರಿಸುವ ಹಾಗೆ ಕತ್ತರಿಸುತ್ತಿರಲಿಲ್ಲ, ದುಂಡಗೆ ಕತ್ತರಿಸುತ್ತಿದ್ದನು.

ಅವನಿಗೆ ಏನೋ ಹೇಳಬೇಕೆಂದು ಅವಳಿಗೆ ಮನಸ್ಸಾಯಿತು; ಆದರೂ ತನ್ನಲ್ಲಿ ತಾನೇ 'ಇಂಥ ದೊಡ್ಡ ಮನುಷ್ಯರ ಬೂಟುಗಳನ್ನು ಮಾಡುವುದು ಹೇಗೆಂದು ನನಗೆ ಗೊತ್ತಿಲ್ಲದೆ ಇರಬಹುದು. ಅದರ ವಿಚಾರ ವನ್ನೆಲ್ಲ ಮೈಕೇಲ್ ಚೆನ್ನಾಗಿ ಬಲ್ಲ.—ನಾನೇಕ ಆ ತಂಟೆಗೆ ಹೋಗಲಿ?" ಎಂದು ಯೋಚಿಸಿಕೊಂಡಳು.

ತೊಗಲನ್ನು ಕತ್ತರಿಸಿದಮೇಲೆ ಮೈಕೇಲ್ ದಾರವನ್ನು ತೆಗೆದು ಕೊಂಡು ಹೊಲಿಯ ತೊಡಗಿದನು ಬೂಟುಗಳನ್ನು ಹೊಲಿಯುವಂತೆ ಎರಡು ತುದಿಗಳಿಂದಲೂ ಹೊಲಿಯಲಿಲ್ಲ, ಮೃದುವಾದ ಸ್ಲಿಪ್ಪರ್‌ಗಳಿಗೆ ಹೇಗೋ ಹಾಗೆ ಒಂದೇ ತುದಿಯಿಂದ ಹೊಲಿಯುತ್ತಿದ್ದನು.

ಮಾಟ್ರೋನ್ಯಳಿಗೆ ಮತ್ತೆ ಆಶ್ಚರ್ಯವಾಯಿತು; ಆದರೆ ಆಗಲೂ ಅವಳು ಆ ತಂಟೆಗೆ ಹೋಗಲಿಲ್ಲ. ಮೈಕೇಲ್ ಮಧ್ಯಾಹ್ನದ ವರೆಗೂ ಕೈ ನಿಲ್ಲಿಸದೆ ಒಂದೇ ಸಮನಾಗಿ ಹೊಲಿಯುತ್ತಿದ್ದನು. ಸೈಮನ್ ಊಟಕ್ಕೆಂದು ಕೆಲಸವನ್ನು ಬಿಟ್ಟಿದ್ದನು. ಎದ್ದು ಸುತ್ತ ತಿರುಗಿ ನೋಡಲಾಗಿ, ಮೈಕೇಲನು ಆ ಶ್ರೀಮಂತನು ಕೊಟ್ಟಿದ್ದ ತೊಗಲಿನಲ್ಲಿ 'ಸ್ಲಿಪ್ಪರ್' ಮಾಡಿದ್ದದ್ದು ಕಾಣಿಸಿತು.

ಅದನ್ನು ಕಂಡು ಸೈಮನ್ 'ಅಯ್ಯೋ' ಎಂದು ಸಂಕಟಪಟ್ಟನು. 'ಮೈಕೇಲ್ ನನ್ನ ಜೊತೆಯಲ್ಲಿ ಪೂರ್ತಿಯಾಗಿ ಒಂದು ವರ್ಷದಿಂದಲೂ ಕೆಲಸ ಮಾಡುತ್ತಿದಾನೆ. ಇದುವರೆಗೆ ಎಂದಾದರೂ ಒಂದು ತಪ್ಪನ್ನೂ ಮಾಡಿದವ ನಲ್ಲ. ಅಂಥವನು ಈಗೇಕೆ ಇಂಥ ಅನ್ಯಾಯಮಾಡಿಬಿಟ್ಟ! ಆತನು ಎತ್ತರವಾದ ಬೂಟುಗಳನ್ನು ಮಾಡುವಂತೆ ಹೇಳಿ ಹೋದನು. ಮೈಕೇಲನು ಒಂದೊಂದೇ ಅಟ್ಟೆಯನ್ನು ಕಟ್ಟಿದ ಮೃದುವಾದ ಸ್ಲಿಪ್ಪರ್‌ಗಳನ್ನು ಮಾಡಿಟ್ಟು ತೊಗಲನ್ನೆಲ್ಲ ಹಾಳುಮಾಡಿಬಿಟ್ಟಿದಾನೆ. ಆತನಿಗೆ ನಾನೇನು ಹೇಳಲಿ? ಇಂಥ ತೊಗಲನ್ನು ತಂದುಕೊಡುವುದಕ್ಕೆ ನನ್ನ ಕೈಯಲ್ಲಿ ಬೇರೆ ಸಾಧ್ಯವಿಲ್ಲ' ಎಂದು ಯೋಚಿಸಿದನು.

ಹೀಗೆ ಯೋಚಿಸಿ ಮೈಕೇಲನನ್ನು ಕುರಿತು 'ಏನು ಮಾಡುತ್ತಿದೀಯಪ್ಪಾ ? ನನ್ನ ಮುಳುಗಿಸಿದೆಯಲ್ಲ ! ಆತ ಎತ್ತರವಾದ ಬೂಟುಗಳನ್ನು ಮಾಡುವಂತೆ ಹೇಳಿದ್ದು ನಿನಗೂ ಗೊತ್ತು. ಆದರೂ ನೀನೇನು ಮಾಡಿಬಿಟ್ಟೆ, ನೋಡು !' ಎಂದನು.

ಅವನು ಮೈಕೇಲನನ್ನು ಹೀಗನ್ನುವುದೇ ತಡ ಬಾಗಿಲಲ್ಲಿ ನೇತು ಹಾಕಿದ್ದ ಕಬ್ಬಿಣದ ಬಳೆ ಟಕಟಕನೆ ಸದ್ದಾಯಿತು. ಯಾರೋ ಬಾಗಿಲನ್ನು ತಟ್ಟುತ್ತಿದ್ದರು. ಅವರು ಕಿಟಿಕಿಯಿಂದ ಹೊರಕ್ಕೆ ನೋಡಿದರು. ಒಬ್ಬ ಮನುಷ್ಯ ಕುದುರೆಯ ಮೇಲೆ ಸವಾರಿ ಮಾಡಿಕೊಂಡು ಬಂದು, ಕುದುರೆಯನ್ನು ಕಟ್ಟಿಹಾಕುತ್ತಿದ್ದನು. ಅವರು ಬಾಗಿಲನ್ನು ತೆರೆದರು. ಹಿಂದೆ ಬಂದಿದ್ದ ಶ್ರೀಮಂತನ ಸಂಗಡ ಇದ್ದ ಸೇವಕನು ಒಳಗೆ ಬಂದು

'ನಮಸ್ಕಾರ' ಎಂದನು.

ಸೈಮನ್ ಕೂಡ, 'ನಮಸ್ಕಾರ, ನಮ್ಮಿಂದ ನಿಮಗೆ ಏನಾಗಬೇಕು ?' ಎಂದು ಕೇಳಿದನು.

'ನಮ್ಮ ಒಡತಿ ಬೂಟುಗಳ ವಿಚಾರವಾಗಿ ಹೇಳಿ ಕಳುಹಿಸಿದಾರೆ.'

'ಏನು, ಬೂಟುಗಳ ವಿಚಾರ ?'

'ನಮ್ಮ ಯಜಮಾನರಿಗೆ ಇನ್ನು ಅವು ಬೇಕಿಲ್ಲ. ಅವರು ಸತ್ತು ಹೋದರು'

'ಅದು ಸಾಧ್ಯವೇ ?'

'ನಿಮ್ಮನ್ನು ಬಿಟ್ಟು ಇಲ್ಲಿಂದ ಹೊರಟ ಮೇಲೆ ಮನೆ ಸೇರುವವರೆಗೂ ಅವರು ಬದುಕಿರಲಿಲ್ಲ, ಸಾರೋಟಿನಲ್ಲೇ ಸತ್ತುಹೋದರು. ಮನೆಗೆ ತಲಪಿದ ಮೇಲೆ ಸೇವಕರು ಕಳಕ್ಕಿಳಿಸಿಕೊಳ್ಳುವುದಕ್ಕೆ ಹೋದಾಗ ಅವರು ಮೂಟೆಯಂತೆ ಉರುಳಿ ಬಿದ್ದುಬಿಟ್ಟರು. ಅವರು ಆಗಲೇ ಸತ್ತುಹೋಗಿದ್ದರು. ಸಾರೋಟಿನಿಂದ ಹೊರಕ್ಕೆ ತೆಗೆಯುವುದೇ ಕಷ್ಟವಾಯಿತು; ಮೈಯೆಲ್ಲ ಅಷ್ಟು ಸೆಡೆದುಕೊಂಡಿದ್ದಿತು. ಅಮ್ಮಾವರು "ಹೋಗಿ ಬೂಟುಮಾಡುವವರಿಗೆ ಹೇಳು.

ತನಗೆ ಬೂಟುಗಳನ್ನು ಹೊಲಿಯುವಂತೆ ಹೇಳಿ ತೊಗಲು ಕೊಟ್ಟು ಹೋದಾತನಿಗೆ ಬೂಟುಗಳು ಬೇಕಿಲ್ಲವಂತೆ. ಅದಕ್ಕೆ ಬದಲು ಹೆಣಕ್ಕೆ ಹಾಕುವುದಕ್ಕೆ ಬಹು ಜಾಗ್ರತೆ ಮೃದುವಾದ ಸ್ಲಿಪ್ಪರ್‌ಗಳನ್ನು ಮಾಡಿಕೊಡಬೇಕಂತೆ. ಅವರು ಮಾಡಿ ಕೊಡುವವರೆಗೂ ಅಲ್ಲೇ ಇದ್ದು ಸ್ಲಿಪ್ಪರ್‌ಗಳನ್ನು ತೆಗೆದುಕೊಂಡು ಬೇಗ ಬಾ" ಎಂದು ಹೇಳಿದರು. ಅದಕ್ಕೇ ನಾನು ಬಂದದ್ದು.'

ಮೈಕೇಲ್ ಉಳಿದಿದ್ದ ತೊಗಲನ್ನೆಲ್ಲ ಆರಿಸಿ ಒಟ್ಟಿಗೆ ಸೇರಿಸಿ ಸುರುಳಿ ಸುತ್ತಿ ತಾನು ಹೊಲಿದಿದ್ದ ಮೃದುವಾದ ಸ್ಲಿಪ್ಪರ್‌ಗಳನ್ನು ಕೈಗೆ ತೆಗೆದು ಕೊಂಡು, ಅವೆರಡನ್ನೂ ಸೇರಿಸಿ ಕುಟ್ಟಿ, ತನ್ನ ಅಂಗವಸ್ತ್ರದಿಂದ ಉಜ್ಜಿ, ಆ ಸ್ಲಿಪ್ಪರ್‌ಗಳನ್ನೂ ಮಿಕ್ಕ ತೊಗಲಿನ ಸುರುಳಿಯನ್ನೂ ಸೇವಕನ ಕೈಗೆ ಕೊಟ್ಟನು. ಅವನು ಅದನ್ನು ತೆಗೆದುಕೊಂಡು 'ಹೋಗಿಬರುತ್ತೇನೆ ಸ್ವಾಮಿಗಳೇ ನಮಸ್ಕಾರ' ಎಂದನು.

೮

ಮತ್ತೊಂದು ವರ್ಷ ಕಳೆಯಿತು, ಇನ್ನೂ ಒಂದು ಕಳೆಯಿತು, ಹೀಗೆಯೇ ಕಾಲ ಕಳೆಯುತ್ತಾ ಇದ್ದಿತು. ಮೈಕೇಲ್ ಸೈಮನ್ನನ ಸಂಗಡ ವಾಸಮಾಡುವುದಕ್ಕೆ ಬಂದು ಇದು ಆರನೆಯ ವರ್ಷ. ಈಗಲೂ ಅವನು ಮೊದಲಿನ ಹಾಗೆಯೇ ಇರುತ್ತಿದ್ದನು. ಅವನು ಎಲ್ಲಿಗೂ ಹೋಗುತ್ತಿರಲಿಲ್ಲ, ಅಗತ್ಯವಿದ್ದಾಗ ಮಾತ್ರ ಮಾತಾಡುತ್ತಿದ್ದನು ಅಷ್ಟು ವರ್ಷಗಳ ಅವಧಿಯಲ್ಲಿ ಎರಡೇ ಎರಡು ಸಲ ಮೆಲ್ಲಗೆ ನಕ್ಕಿದ್ದನು—ಮಾಟ್ರ್ಯೋನಾ ತನಗೆ ಆಹಾರ ಕೊಟ್ಟಾಗ ಒಂದು ಸಲ, ಮತ್ತು ಆ ಶ್ರೀಮಂತ ಗುಡಿಸಲಿಗೆ ಬಂದಿದ್ದಾಗ ಎರಡನೆಯ ಸಲ. ಸೈಮನ್ನನಿಗೆ ತನ್ನ ಈ ಕೆಲಸಗಾರರನ್ನು ಕಂಡರೆ ಹಿಡಿಸಲಾರದಷ್ಟು ವಿಶ್ವಾಸ. ಈಗ 'ನೀನೆಲ್ಲಿಂದ ಬಂದೆ?' ಎಂದು ಅವನನ್ನು ಕೇಳುತ್ತಲೇ ಇರಲಿಲ್ಲ. ಆದರೆ ಅವನಿಗೊಂದೇ ಹೆದರಿಕೆ, ಮೈಕೇಲ್ ತನ್ನ ಮನೆಯನ್ನು ಬಿಟ್ಟು ಹೋದಾನೋ ಏನೋ ಎಂದು.

ಒಂದು ದಿನ ಅವರೆಲ್ಲರೂ ಮನೆಯಲ್ಲೇ ಇದ್ದರು. ಮಾಟ್ರ್ಯೋನಾ ಒಲೆಯೊಳಗೆ ಕಬ್ಬಿಣದ ಗಡಿಗೆಗಳನ್ನಿಡುತ್ತಿದ್ದಳು, ಮಕ್ಕಳು ಬೆಂಚುಗಳ ಉದ್ದಕ್ಕು ಓಡಾಡುತ್ತಲೂ ಕಿಟಿಕಿಯಿಂದ ಹೊರಕ್ಕೆ ನೋಡುತ್ತಲೂ ಇದ್ದವು. ಸೈಮನ್ ಒಂದು ಕಿಟಕಿಯ ಹತ್ತಿರ ಹೊಲಿಯುತ್ತ ಕುಳಿತಿದ್ದನು, ಮೈಕೇಲ್ ಮತ್ತೊಂದು ಕಿಟಿಕಿಯ ಹತ್ತಿರ ಕುಳಿತುಕೊಂಡು ಹಿಮ್ಮಡಿಯನ್ನು ಸೇರಿಸಿ ಭದ್ರಮಾಡಿ ಹೊಲಿಯುತ್ತಿದ್ದನು.

ಹುಡುಗರಲ್ಲೊಬ್ಬನು ಬೆಂಚಿನ ಬಳಿಯಿಂದ ಮೈಕೇಲನ ಹತ್ತಿರಕ್ಕೆ ಓಡಿಹೋಗಿ, ಅವನ ಹೆಗಲ ಮೇಲೆ ಬಗ್ಗಿ, ಕಿಟಿಕಿಯಿಂದ ಹೊರಕ್ಕೆ ನೋಡಿದನು.

'ಮೈಕೇಲ್ ಮಾವಾ, ನೋಡು, ನೋಡು! ಒಬ್ಬ ಹೆಂಗಸು ಪುಟ್ಟ ಹುಡುಗಿಯರನ್ನು ಕರೆದುಕೊಂಡು ಬಂದಿದಾಳೆ! ಅವಳು ಇಲ್ಲಿಗೇ ಬರುತ್ತಿರುವಂತೆ ಕಾಣುತ್ತದೆ. ಅವರಲ್ಲೊಬ್ಬ ಹುಡುಗಿ ಕುಂಟಿ!'

ಹುಡುಗನು ಹಾಗೆಂದ ಕೂಡಲೆ, ಮೈಕೇಲ್ ಕೈಯಲ್ಲಿದ್ದದ್ದನ್ನು ಕೆಳಕ್ಕೆ ಎತ್ತಿ ಹಾಕಿ, ಕಿಟಿಕಿಯ ಕಡೆಗೆ ತಿರುಗಿ, ಹೊರಗೆ ಬೀದಿಯಲ್ಲಿ ನೋಡಿದನು.

ಸೈಮನ್ನನಿಗೆ ತುಂಬ ಆಶ್ಚರ್ಯವಾಯಿತು. ಮೈಕೇಲ್ ಯಾವಾಗಲೂ ಕಿಟಿಕಿಯಿಂದ ಬೀದಿಯ ಕಡೆಗೆ ನೋಡುತ್ತಿರಲಿಲ್ಲ, ಅಂಥವನು ಈಗ ಕಿಟಿಕಿಗೆ ಮುಖವನ್ನು ಒತ್ತಿಕೊಂಡು ಏನನ್ನೋ ದುರುದುರನೆ ದೃಷ್ಟಿಸಿ ನೋಡುತ್ತಿದ್ದನು. ಸೈಮನ್ನನೂ ಹೊರಗೆ ನೋಡಿದನು. ಒಳ್ಳೆಯ ಬೆಲೆಯುಳ್ಳ ಉಡುಪು ತೊಟ್ಟ ಹೆಂಗಸೊಬ್ಬಳು ತನ್ನ ಗುಡಿಸಿಲ ಕಡೆಗೇ ಬರುತ್ತಿದ್ದದ್ದು ಕಾಣಿಸಿತು. ತುಪ್ಪಟದ ಅಂಗಿಗಳನ್ನು ತೊಟ್ಟು ಶಾಲುಗಳನ್ನು ಹೊದೆದಿದ್ದ ಇಬ್ಬರು ಪುಟ್ಟ ಹುಡುಗಿಯರನ್ನು ಆಕೆ ಕೈ ಹಿಡಿದು ಕರೆದುಕೊಂಡು ಬರುತ್ತಿದ್ದಳು. ಆ ಹುಡುಗಿಯರಿಬ್ಬರಲ್ಲಿ ಒಬ್ಬೊಬ್ಬರನ್ನೂ ಬೇರೆ ಬೇರೆಯಾಗಿ ಗುರುತಿಸಿ ಹೇಳುವುದೇ ಕಷ್ಟವಾಗುತ್ತಿದ್ದಿತು. ಒಬ್ಬಳಿಗೆ ಮಾತ್ರ ಎಡಗಾಲು ಕುಂಟಾಗಿ ಅವಳು ಊರಿಗೋಲಿನ ಸಹಾಯ

ದಿಂದ ನಡೆಯುತ್ತಿದ್ದಳು. ಇದೊಂದನ್ನು ಬಿಟ್ಟರೆ ಮಿಕ್ಕ ಎಲ್ಲ ವಿಷಯದಲ್ಲಿಯೂ ಅವರಿಗೆ ಅಷ್ಟು ಸಾಮ್ಯವಿದ್ದಿತು.

ಆ ಹೆಂಗಸು ಮುಂದುಗಡೆ ಅಂಗಳದಲ್ಲಿ ಬಗ್ಗಿಸಿದ ಒಪ್ಪಾರಿಗೆ ಬಂದು ಜಗುಲಿಯನ್ನು ಹತ್ತಿದಳು. ಬಾಗಿಲನ್ನು ತಡಕಿ, ಅಗುಳಿ ಕೈಗೆ ಸಿಕ್ಕಲು ಅದನ್ನು ಮೇಲಕ್ಕೆತ್ತಿ ಕದವನ್ನು ತೆರೆದಳು. ಮೊದಲು ಹುಡುಗಿಯರನ್ನು ಒಳಕ್ಕೆ ಕಳುಹಿಸಿ, ಆಮೇಲೆ, ಅವರ ಹಿಂದೆ ತಾನೂ ಒಳಕ್ಕೆ ಬಂದಳು.

'ನಮಸ್ಕಾರ '

'ದಯವಿಟ್ಟು ಒಳಗೆ ಬನ್ನಿ. ನಿಮಗೆ ನಮ್ಮಿಂದ ಯಾವ ಕೆಲಸವಾಗಬೇಕು ?' ಎಂದು ಸೈಮನ್ ಕೇಳಿದನು

ಆಕೆ ಮೇಜಿನ ಹತ್ತಿರ ಕುಳಿತುಕೊಂಡಳು. ಪುಟ್ಟ ಹುಡುಗಿಯರಿಬ್ಬರೂ ಆ ಗುಡಿಸಲಿನಲ್ಲಿದ್ದ ಜನರಿಗೆ ಹೆದರಿ ಅವಳ ಮೊಳಕಾಲುಗಳನ್ನು ಭದ್ರವಾಗಿ ಒರಗಿಕೊಂಡು ಅವಳ ಹತ್ತಿರ ನಿಂತುಕೊಂಡರು. 'ಈ ಪುಟ್ಟ ಹುಡುಗಿಯರಿಬ್ಬರಿಗೂ ವಸಂತಕಾಲಕ್ಕೆ ತಕ್ಕಂಥ ಪಾಪಾಸುಗಳನ್ನು ಹೊಲಿಸಬೇಕೆಂದಿದೇನೆ '

'ನಾವು ಅದನ್ನು ಮಾಡಬಲ್ಲೆವು. ಇದಕ್ಕೆ ಮೊದಲು ಇಷ್ಟು ಸಣ್ಣ ಪಾಪಾಸುಗಳನ್ನು ಹೊಲಿದಿಲ್ಲ, ಆದರೂ ಅವನ್ನು ಮಾಡಿಕೊಡಬಲ್ಲೆವು. ಒಳಗಡೆಗೆ ಬಟ್ಟೆಯನ್ನು ಹಾಕಿ, ಹೇಗೆ ಬೇಕಾದರೆ ಹಾಗೆ ಹೊಲಿದುಕೊಡುತ್ತೇವೆ. ನಮ್ಮ ಕೆಲಸಗಾರ, ಮೈಕೇಲ್ ಈ ಕೆಲಸದಲ್ಲಿ ಬಹಳ ನಿಪುಣ !'

ಹೀಗೆಂದು ಸೈಮನ್ ಮೈಕೇಲನ ಕಡೆಗೆ ದೃಷ್ಟಿಯನ್ನು ಹೊರಳಿಸಿದನು. ಅವನು ಕೆಲಸ ಮಾಡುತ್ತಿರಲಿಲ್ಲ. 'ಆ ಪುಟ್ಟ ಹುಡುಗಿಯರ ಮೇಲೆ ನೋಟವನ್ನು ನೆಟ್ಟು ಸುಮ್ಮನೆ ಕುಳಿತುಕೊಂಡಿದ್ದನು. ಸೈಮನ್ನನಿಗೆ ಆಶ್ಚರ್ಯವಾಯಿತು. ಹುಡುಗಿಯರೇನೋ ಚೆನ್ನಾಗಿದ್ದರು, ನಿಜ ; ಅವರ ಕಣ್ಣು ಕಪ್ಪಾಗಿದ್ದವು, ಮೈ ಕೈಯೆಲ್ಲ ತುಂಬಿಕೊಂಡಿದ್ದಿತು, ಕೆನ್ನೆ ಗುಲಾಬಿಯಂತಿದ್ದವು ; ಇದರ ಜೊತೆಗೆ ಅವರು ಸೊಗಸಾದ ಕರವಸ್ತ್ರಗಳನ್ನು ಹಿಡಿದು

ಒಳ್ಳೆಯ ತುಬಟದ ಅಂಗಿಗಳನ್ನು ತೊಟ್ಟಿದ್ದರು. ಇಷ್ಟಾದರೂ ಮೈಕೇಲಸು ಅವರನ್ನು ಆರೀತಿ—ಹಿಂದೆ ನೋಡಿ ಗುರುತು ಕಂಡವನಂತೆ—ನೋಡುವುದು ಸೈಮನ್ನನಿಗೆ ಅರ್ಥವಾಗಲಿಲ್ಲ. ಅವನಿಗೆ ಏನೊಂದೂ ಗೊತ್ತಾಗಲಿಲ್ಲ. ಆದರೂ ಆ ಹೆಂಗಸಿನ ಸಂಗಡ ಕೂಲಿ ಮುಂತಾದ್ದರ ವಿಚಾರವಾಗಿ ಮಾತಾಡುತ್ತಲೇ ಇದ್ದನು. ಕೂಲಿಯನ್ನು ಗೊತ್ತುಮಾಡಿ ಹುಡುಗಿಯರ ಅಳತೆಯನ್ನು ತೆಗೆದುಕೊಳ್ಳುವುದಕ್ಕೆ ಸಿದ್ಧಮಾಡಿಕೊಂಡನು. ಆ ಹೆಂಗಸು ಕುಂಟ ಹುಡುಗಿಯನ್ನು ಎತ್ತಿ ತನ್ನ ತೊಡೆಯಮೇಲೆ ಕೂರಿಸಿಕೊಂಡು 'ಈ ಹುಡುಗಿಯ ಕಾಲಿನಲ್ಲಿ ಎರಡು ಅಳತೆಗಳನ್ನು ತೆಗೆದುಕೊ. ಕುಂಟ ಕಾಲಿಗೆ ಒಂದು ಪಾಪಾಸು ಮಾಡು, ಸರಿಯಾಗಿರುವುದಕ್ಕೆ ಮೂರು ಹೊಲಿ ಇವರಿಬ್ಬರ ಕಾಲುಗಳೂ ಒಂದೇ ಅಳತೆ. ಇವರು ಅವಳಿ ಮಕ್ಕಳು' ಎಂದಳು.

ಸೈಮನ್ ಅಳತೆಯನ್ನು ತೆಗೆದುಕೊಂಡನು. ಕುಂಟ ಹುಡುಗಿಯ ವಿಚಾರವಾಗಿ ಮಾತಾಡುತ್ತ 'ಅದೇಕೆ ಹೀಗಾಯಿತು? ಎಂಥ ಸೊಗಸಾದ ಹುಡುಗಿ! ಹುಟ್ಟುವಾಗಲೇ ಹೀಗಿತ್ತೇ?' ಎಂದು ಕೇಳಿದನು.

'ಇಲ್ಲ, ಅವರಮ್ಮ ಕಾಲನ್ನು ಜಜ್ಜಿಬಿಟ್ಟಳು'

ಮಾಟ್ರ್ಯೋನಾ ಮಾತಿಗೆ ಸೇರಿದಳು ಈ ಹೆಂಗಸು ಯಾರು? ಇವು ಯಾರ ಮಕ್ಕಳು? ಎಂದು ಅವಳಿಗೆ ಆಶ್ಚರ್ಯವುಂಟಾಯಿತು. ಆದ್ದರಿಂದ ಅವಳು, 'ಹಾಗಾದರೆ, ನೀನು ಅವರ ತಾಯಿ ಅಲ್ಲವೇ?' ಎಂದು ಕೇಳಿದಳು.

'ಅಲ್ಲವಮ್ಮಾ, ಅಲ್ಲ. ನಾನು ಅವರಿಗೆ ತಾಯಿಯೂ ಅಲ್ಲ, ಮತ್ತೆ ಯಾವ ನೆಂಟಿತ್ತಿಯೂ ಅಲ್ಲ. ಅವರಿಗೂ ನನಗೂ ಯಾವ ಸಂಬಂಧವೂ ಇಲ್ಲ, ನನಗೆ ತೀರ ಹೊರಗಿನವೇ ಆಗಿದ್ದರು. ಆದರೆ ಅವರನ್ನು ಮಕ್ಕಳೆಂದು ಸಾಕಿಕೊಂಡೆ.'

'ಅವರು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಲ್ಲ. ಆದರೂ ಅವರನ್ನು ಕಂಡರೆ ನಿನಗೆ ಎಷ್ಟೊಂದು ಪ್ರೀತಿಯಮ್ಮಾ!'

'ಅದು ಹೇಗೆ ಪ್ರೀತಿಸದೆ ಇರಲಮ್ಮಾ? ಈ ಎರಡು ಮಕ್ಕಳಿಗೂ ನಾನೇ ಸ್ವಂತವಾಗಿ ಮೊಲೆ ಕೊಟ್ಟು ಸಾಕಿದೆ. ನನಗೂ ಒಂದು ಮಗು ಇದ್ದಿತು. ಆದರೆ ದೇವರು ಅವನನ್ನು ಕರೆದುಕೊಂಡುಬಿಟ್ಟನು. ಈಗ ಈ ಮಕ್ಕಳ ಮೇಲಿರುವಷ್ಟು ಪ್ರೀತಿ ಆ ನನ್ನ ಮಗುವಿನ ಮೇಲೂ ನನಗಿರಲಿಲ್ಲ'

'ಹಾಗಾದರೆ ಇವು ಯಾರ ಮಕ್ಕಳು?'

೯

ಆ ಹೆಂಗಸು ಮಾತಿಗೆ ಮೊದಲು ಮಾಡಿದ್ದವಳು, ಕಥೆಯನ್ನೆಲ್ಲ ಹೇಳಿದಳು.

'ಅವರ ತಂದೆತಾಯಿಗಳಿಬ್ಬರೂ ಸತ್ತು ಹೋಗಿ ಈಗ ಸುಮಾರು ಆರು ವರ್ಷಗಳಾದವು. ಅವರಿಬ್ಬರೂ ಒಂದೇ ವಾರ ಸತ್ತರು ಅವರಪ್ಪನನ್ನು ಮಂಗಳವಾರ ಸಮಾಧಿ ಮಾಡಿದರು. ಅವರಮ್ಮ ಶುಕ್ರವಾರ ಸತ್ತಳು. ಈ ತಬ್ಬಲಿಗಳು ಅಪ್ಪ ಸತ್ತ ಮೂರು ದಿನಗಳ ಮೇಲೆ ಹುಟ್ಟಿದವು, ಹುಟ್ಟಿದ ಮೇಲೆ ಅವರಮ್ಮ ಒಂದು ದಿನವೂ ಬದುಕಿರಲಿಲ್ಲ ಆಗ ನನ್ನ ಗಂಡನೂ ನಾನೂ ರೈತರಂತೆ ಆ ಹಳ್ಳಿಯಲ್ಲಿ ವಾಸಮಾಡುತ್ತಿದ್ದೆವು ಅವರೂ ನಾವೂ ನೆರೆಯವರಾಗಿದ್ದೆವು, ಅವರ ಅಂಗಳದ ಪಕ್ಕದ್ದೇ ನಮ್ಮ ಅಂಗಳ. ಅವರ ತಂದೆ ಯಾವಾಗಲೂ ಒಂಟಿಯಾಗಿರುತ್ತಿದ್ದನು, ಅವನು ಕಾಡಿನಲ್ಲಿ ಮರಗಳನ್ನು ಕಡಿದು ಜೀವಿಸುತ್ತಿದ್ದನು. ಒಂದು ದಿನ ಕಾಡಿನಲ್ಲಿ ಮರಗಳನ್ನು ಕಡಿಯುತ್ತಿದ್ದಾಗ ಒಂದು ಮರ ಅವನ ಮೈಮೇಲೆ ಬಿದ್ದು ಮೈಜಜ್ಜಿ ಅವನ ಕರುಳೆಲ್ಲ ಹೊರಕ್ಕೆ ಬಂದುಬಿಟ್ಟಿತು. ಅವನನ್ನು ಮನೆಗೆ ತಂದರೋ ಇಲ್ಲವೋ ಅಷ್ಟರಲ್ಲಿ ಅವನ ಆತ್ಮ ದೇವರ ಸಾನ್ನಿಧ್ಯವನ್ನು ಸೇರಿಬಿಟ್ಟಿದ್ದಿತು. ಆ ವಾರವೇ ಅವನ ಹೆಂಡತಿ ಅವಳಿ ಮಕ್ಕಳನ್ನು ಹಡೆದಳು, ಆ ಮಕ್ಕಳೇ ಈ ಹುಡುಗಿಯರು. ಅವಳು ಬಡವಿ, ಒಬ್ಬೊಂಟಿಗಿತ್ತಿ, ಚಿಕ್ಕವರಾಗಲಿ ದೊಡ್ಡವರಾಗಲಿ, ಅವಳ ಹತ್ತಿರ ಒಬ್ಬರೂ ಇರಲಿಲ್ಲ. ಒಂಟಿಯಾಗಿಯೇ ಹಡೆದಳು, ಒಂಟಿಯಾಗಿಯೇ ಮೃತ್ಯುವಿನ ಹಿಂದೆ ನಡೆದಳು.

ಮರುದಿನ ಬೆಳಿಗ್ಗೆ ಅವಳನ್ನು ನೋಡಬೇಕೆಂದು ನಾನು ಹೋದೆ. ಆದರೆ ನಾನು ಗುಡಿಸಿಲಿನೊಳಕ್ಕೆ ಹೋದಾಗ ಪಾಪ, ಆ ಬಡಪಿ, ತಣ್ಣಗೆ ಕೊರಡಾಗಿ ಹೋಗಿದ್ದಳು. ಸಾಯುವಾಗ ಈ ಮಗುವಿನ ಮೇಲೆ ಹೊರಳಿ ಇವಳ ಕಾಲನ್ನು ಜಜ್ಜಿಬಿಟ್ಟಿದ್ದಳು. ಹಳ್ಳಿಯ ಜನರೆಲ್ಲ ಗುಡಿಸಿಲಿಗೆ ಬಂದರು ಒಂದು ಅವಳ ಶರೀರವನ್ನು ತೊಳೆದು, ಹೊರಕ್ಕೆ ತಂದು, ಪೆಟ್ಟಿಗೆಯನ್ನು ಮಾಡಿ, ಅವಳನ್ನು ಸಮಾಧಿ ಮಾಡಿದರು ಅವರು ಒಳ್ಳೆಯ ಜನ. ಆದರೆ ಮಕ್ಕಳು ಮಾತ್ರ ಉಳಿದವು. ಅವಕ್ಕೆ ಏನು ಮಾಡಬೇಕು ? ಅಲ್ಲಿ ಆ ಕಾಲದಲ್ಲಿ ಎಳೆಯ ಮಗುವಿದ್ದ ಹೆಂಗಸು ನಾನೊಬ್ಬಳೇ. ಆಗ ನಾನು ನನ್ನ ಚಚ್ಚಲು ಮಗುವಿನ ಬಾಣಂತಿ ಹಡೆದು ಇನ್ನೂ ಎಂಟು ವಾರ ಕಳೆದಿದ್ದಿತು. ಆದ್ದರಿಂದ ಸ್ವಲ್ಪ ಕಾಲದವರೆಗೆ ಆ ಮಕ್ಕಳನ್ನು ನಾನು ತೆಗೆದುಕೊಂಡೆನು. ಹಳ್ಳಿಯ ರೈತರೆಲ್ಲ ಒಟ್ಟುಗೂಡಿ ಆ ಮಕ್ಕಳಿಗೆ ಏನು ಮಾಡಬೇಕೆಂದು ಯೋಚಿಸಿ ಯೋಚಿಸಿ ಸಾಕಾದರು. ಕಡೆಗೆ ನನ್ನ ಹತ್ತಿರ ಬಂದು, 'ಮೇರಿ, ಸದ್ಯಕ್ಕೆ ಹುಡುಗಿಯರನ್ನು ನೀನೇ ಇಟ್ಟುಕೊಂಡಿರು. ಆಮೇಲೆ ಸ್ವಲ್ಪ ನಿದಾನವಾಗಿ, ಅವರಿಗೆ ಏರ್ಪಾಡು ಮಾಡುತ್ತೇವೆ' ಎಂದರು ನಾನು ಮಕ್ಕಳನ್ನು ತೆಗೆದುಕೊಂಡೆ. ಸರಿಯಾಗಿದ್ದ ಮಗುವಿಗೆ ಮೊಲೆಕೊಡುತ್ತಿದ್ದೆ. ಆದರೆ ಮೊದಮೊದಲು ಈ ಅಂಗಹೀನ ಮಗುವಿಗೆ ಹೊಟ್ಟೆಗೆ ಕೊಡುತ್ತಿರಲಿಲ್ಲ ಅದು ಬದುಕುವುದೆಂದು ನಾನು ಯೋಚಿಸಿರಲಿಲ್ಲ. ಆದರೆ ಆಗ ನನಗೆ ಒಂದು ಯೋಚನೆ ಬಂತು, 'ಪಾಪ, ಏನೂ ಅರಿಯದ ಹಸುಳೆ, ಇದೇಕೆ ಕಷ್ಟಪಡಬೇಕು' ಅಂದುಕೊಂಡೆ ಆದ್ದರಿಂದ ನನ್ನ ಹುಡುಗ, ಈ ಎರಡು—ಮೂರು ಮಕ್ಕಳಿಗೂ—ನಾನೇ ಸ್ವಂತವಾಗಿ ಮೊಲೆ ಕೊಟ್ಟು ಸಾಕುತ್ತ ಬಂದೆ ಆಗ ನಾನು ಪ್ರಾಯದವಳು, ಒಳ್ಳೆಯ ಶಕ್ತಳಾಗಿದ್ದೆ, ತಿನ್ನುವುದಕ್ಕೆ ಒಳ್ಳೆಯ ಆಹಾರ ಸಮೃದ್ಧಿಯಾಗಿತ್ತು, ದೇವರು ನನಗೆ ಹಾಲು ಹೆಚ್ಚಿಸಿಬಿಟ್ಟ; ಒಂದೊಂದು ಸಲ ಮೂರು ಮಕ್ಕಳಿಗೂ ಸಾಕಾಗಿ ಹರಿಯುತ್ತಿತ್ತು. ಒಂದೊಂದು ಸಲ ಎರಡೆರಡು ಮಕ್ಕಳಿಗೆ ಒಟ್ಟೊಟ್ಟಿಗೆ ಮೊಲೆ

ಕೊಡುತ್ತಿದ್ದೆ, ಮೂರನೆಯದು ಕಾದುಕೊಂಡಿರುತ್ತಿತ್ತು. ಎರಡರಲ್ಲೊಂದಕ್ಕೆ ಹೊಟ್ಟೆ ತುಂಬಿದ ಮೇಲೆ ಅದನ್ನಿಳಿಸಿ ಮೂರನೆಯದನ್ನು ಸಂಬಿಸುತ್ತಿದ್ದೆ. ಈ ಎರಡು ಮಕ್ಕಳೂ ಚೆನ್ನಾಗಿ ಬೆಳೆದವು, ನನ್ನ ಮಗ ಎರಡು ವರ್ಷ ತುಂಬುವುದರೊಳಗಾಗಿ ಸಮಾಧಿಯಲ್ಲಿ ಅಡಗಿಬಿಟ್ಟ; ದೇವರಿಚ್ಛೆ ಹೀಗಿತ್ತು. ಬೇರೆ ಮಕ್ಕಳಿರಲಿಲ್ಲ. ನಮಗೆ ತಕ್ಕಷ್ಟು ಅನುಕೂಲವಿತ್ತು. ಈಗ ನನ್ನ ಗಂಡ 'ಮಿಲ್ಲಿನಲ್ಲಿ' ಧಾನ್ಯದ ವ್ಯಾಪಾರಿಯ ಹತ್ತಿರ ಕೆಲಸಕ್ಕಿದ್ದಾನೆ. ಸಂಬಳ ಕೈತುಂಬ ಬರುತ್ತೆ, ನಾವು ಅನುಕೂಲವಾಗಿಯೇ ಇದೇವೆ. ಆದರೆ ನನಗೆ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಿಲ್ಲ, ಈ ಪುಟ್ಟ ಹುಡುಗಿಯರಿಲ್ಲದಿದ್ದರೆ ಒಂಟಿಯಾಗಿ ಎಷ್ಟು ದುಃಖದಿಂದ ಕಾಲಕಳೆಯಬೇಕಾಗುತ್ತಿತ್ತೋ! ಈ ಮಕ್ಕಳನ್ನು ಹೇಗೆ ತಾನೇ ಪ್ರೀತಿಸದೆ ಇದ್ದೇನು! ನನ್ನ ಬಾಳಿನಲ್ಲಿ ಇವೇ ಆನಂದದ ಊಟೆಗಳು!"

ಒಂದು ಕೈಯಿಂದ ಅವಳು ಆ ಕುಂಟ ಹುಡುಗಿಯನ್ನು ತಬ್ಬಿಕೊಂಡು, ಇನ್ನೊಂದು ಕೈಯಿಂದ ತನ್ನ ಕೆನ್ನೆಗಳ ಮೇಲೆ ಸುರಿಯುತ್ತಿದ್ದ ಕಣ್ಣೀರನ್ನು ಒರೆಸಿಕೊಂಡಳು.

ಮಾಟ್ರ್ಯೋನಾ ದೊಡ್ಡದಾಗಿ ಉಸಿರುಬಿಟ್ಟು, '"ತಂದೆಯಿಲ್ಲದಿದ್ದರೆ ತಾಯಿಯಿಲ್ಲದಿದ್ದರೆ ಬದುಕಬಹುದು, ದೇವರಿಲ್ಲದಿದ್ದರೆ ಬದುಕಲಾದೀತೇ?" ಎನ್ನುವ ಗಾದೆ ಸತ್ಯವಾದದ್ದು ಎಂದಳು.'

ಹೀಗೆ ಅವರೆಲ್ಲ ಪರಸ್ಪರವಾಗಿ ಮಾತಾಡುತ್ತಿದ್ದರು. ಆಗ ಮೈಕೇಲ್ ಕುಳಿತಿದ್ದ ಮೂಲೆಯಿಂದ ಬೇಸಿಗೆಯ ಮಿಂಚು ಬಂದರೆ ಹೇಗೋ ಹಾಗೆ ತಟ್ಟನೆ ಒಂದು ಬೆಳಕು ಬಂದು ಗುಡಿಸಲನ್ನೆಲ್ಲ ತುಂಬಿಕೊಂಡಿತು ಎಲ್ಲರೂ ಅವನ ಕಡೆಗೆ ನೋಡಿದರು. ಅವನು ಕೈಗಳನ್ನು ಮಂಡಿಯ ಮೇಲೆ ಮಡಿಸಿಕೊಂಡು, ಮುಗುಳುನಗೆ ನಗುತ್ತಾ ಮೇಲುಗಡೆ ದೃಷ್ಟಿಸಿ ನೋಡುತ್ತಾ ಕುಳಿತಿದ್ದನು.

## ೧೦

ಆ ಹೆಂಗಸು ಹುಡುಗಿಯರನ್ನು ಕರೆದುಕೊಂಡು ಹೊರಟುಹೋದಳು. ಮೈಕೇಲ್ ಬೆಂಚನ್ನು ಬಿಟ್ಟೆದ್ದು, ಕೈಯಲ್ಲಿದ್ದ ಕಲಸದ ಸಲಕರಣೆಗಳನ್ನು

ಕಳಗಿಟ್ಟು ಮೇಲೆ ಹೊದೆದಿದ್ದ ಬಟ್ಟೆಯನ್ನು ತೆಗೆದುಹಾಕಿದನು. ಆಮೇಲೆ ಸೈಮನ್ನನಿಗೂ ಅವನ ಹೆಂಡತಿಗೂ ಬಗ್ಗಿ ಸಮಸ್ಕರಿಸಿ, 'ಯಜಮಾನರೇ, ಇನ್ನು ನಾನು ಹೋಗಿಬರುತ್ತೇನೆ. ದೇವರು ನನ್ನನ್ನು ಕ್ಷಮಿಸಿದಾನೆ. ಏನಾದರೂ ತಪ್ಪು ಮಾಡಿದ್ದರೆ ನೀವೂ ಕ್ಷಮಿಸಬೇಕೆಂದು ಕೇಳಿಕೊಳ್ಳುತ್ತೇನೆ' ಎಂದನು.

ಮೈಕೇಲನ ಶರೀರದಿಂದ ಒಂದು ಬೆಳಕು ಹೊರಹೊಮ್ಮಿ ಪ್ರಕಾಶಿಸುತ್ತಿರುವಂತೆ ಅವರಿಗೆ ಕಾಣಿಸಿತು ಸೈಮನ್ ಎದ್ದು ನಿಂತು ತಲೆ ಬಗ್ಗಿ ಸಮಸ್ಕರಿಸಿ ಮೈಕೇಲನನ್ನು ಕುರಿತು ಹೀಗೆ ಹೇಳಿದನು. 'ಮೈಕೇಲ್ ನೀನು ಎಲ್ಲರ ಹಾಗೆ ಸಾಧಾರಣ ಮನುಷ್ಯನಲ್ಲ ನೀನು ಇಲ್ಲೇ ನಿಲ್ಲಬೇಕೆಂದು ನಾನು ನಿರ್ಬಂಧಿಸಲೂ ಆರೆ, ಏಕೆ ಹೋಗುತ್ತೀಯೆಂದು ಕೇಳಲೂ ಆರೆ ಇಷ್ಟನ್ನು ಮಾತ್ರ ನನಗೆ ಹೇಳಿಬಿಡು ನಾನು ನಿನ್ನನ್ನು ಕಂಡು ಮನೆಗೆ ಕರೆದುಕೊಂಡು ಬಂದಾಗ ನೀನು ಜೋಲುಮುಖ ಹಾಕಿಕೊಂಡು ಕೊರಗುತ್ತಿದ್ದೆ, ನನ್ನ ಹೆಂಡತಿ ನಿನಗೆ ಊಟಕ್ಕೆ ಬಡಿಸಿದಾಗ ಅವಳನ್ನು ನೋಡಿ ಮುಗುಳುನಗೆ ನಕ್ಕು ಮೊದಲಿಗಿಂತ ಹೆಚ್ಚು ಕಳೆಗೂಡಿ ಹೊಳೆಯಲು ಪ್ರಾರಂಭಿಸಿದೆ, ಇದು ಏಕೆ ? ಆಮೇಲೆ ಆ ಶ್ರೀಮಂತನು ಬೂಟುಗಳನ್ನು ಹೊಲಿಯಹಾಕುವುದಕ್ಕೆ ಬಂದಾಗ ನೀನು ಮತ್ತೆ ನಸುನಕ್ಕು ಇನ್ನೂ ಹೆಚ್ಚು ಕಾಂತಿಯಿಂದ ಹೊಳೆಯಲು ಪ್ರಾರಂಭಿಸಿದೆ, ಅದು ಏಕೆ ? ಈಗ, ಈ ಹೆಂಗಸು ಪುಟ್ಟ ಹುಡುಗಿಯರನ್ನು ಕರೆದುಕೊಂಡು ಬಂದಾಗ, ನೀನು ಮೂರನೆಯ ಸಲ ನಸುನಕ್ಕು ಹಗಲಿನ ಹಾಗೆ ಕಳೆಗೂಡಿ ಪ್ರಕಾಶಿಸುತ್ತಿರುವೆ. ಇದಕ್ಕೆ ಕಾರಣವೇನು ? ಮೈಕೇಲ್, ನಿನ್ನ ಮುಖ ಹೀಗೇಕೆ ಹೊಳೆಯುತ್ತಿದೆ ? ಹೇಳು, ಮೂರು ಸಲ ಹಾಗೆ ನಸುನಕ್ಕದ್ದೇಕೆ ?'

ಮೈಕೇಲ್ ಉತ್ತರ ಕೊಟ್ಟನು. 'ದೇವರು ನನಗೆ ಶಿಕ್ಷೆಯನ್ನು ವಿಧಿಸಿದ್ದನು ; ಈಗ ಕ್ಷಮಿಸಿದಾನೆ, ಅದರಿಂದ ನನ್ನ ಶರೀರದಿಂದ ಬೆಳಕು ಹೊರಹೊಮ್ಮುತ್ತಿದೆ. ದೇವರು ಮೂರು ಸತ್ಯಗಳನ್ನು ಕಲಿತು ಬರುವು

ದಕ್ಕೆ ನನ್ನನ್ನು ಕಳುಹಿಸಿದ್ದನು, ಅವನ್ನು ನಾನು ಕಲಿತುಕೊಂಡೆ, ಆದ್ದರಿಂದ ಹಾಗೆ ಮೂರು ಸಲ ನಸುನಕ್ಕೆನು ನಿನ್ನ ಹೆಂಡತಿ ನನ್ನ ಮೇಲೆ ಮರುಕವನ್ನು ತೋರಿಸಿದಾಗ ಒಂದು ಸತ್ಯವನ್ನು ತಿಳಿದುಕೊಂಡೆ, ಅದಕ್ಕೇ ನಾನು ಮೊದಲ ಸಲ ನಕ್ಕದ್ದು ಎರಡನೆಯದನ್ನು ಶ್ರೀಮಂತನು ಬೂಟುಗಳನ್ನು ಹೊಲಿಯಹಾಕಿದಾಗ ಕಲಿತುಕೊಂಡೆನು, ಆಗ ಎರಡನೆಯ ಸಲ ಮುಗುಳುನಗೆ ನಕ್ಕನು ಮತ್ತು ಈಗ, ಆ ಚಿಕ್ಕ ಹುಡುಗಿಯರನ್ನು ನೋಡಿದಾಗ, ಕೊನೆಯದಾದ ಮೂರನೆಯ ಸತ್ಯವನ್ನು ಕಲಿತುಕೊಂಡೆನು; ಅದರಿಂದಲೇ ಮೂರನೆಯ ಸಲ ನಕ್ಕದ್ದು.'

ಸೈಮನ್ 'ಮ್ಯೈಕೇಲ್ ದೇವರು ನಿನ್ನನ್ನು ಏಕೆ ಶಿಕ್ಷಿಸಿದನು? ಆ ಮೂರು ಸತ್ಯಗಳು ಯಾವುವು? ನನಗೂ ಸ್ವಲ್ಪ ತಿಳಿದಿರಲಿ, ಹೇಳು' ಎಂದು ಕೇಳಿದನು.'

ಮ್ಯೈಕೇಲ್ ಉತ್ತರಕೊಟ್ಟನು, 'ದೇವರಿಗೆ ನಾನು ಅವಿಧೇಯನಾದೆ, ಅದರಿಂದ ಅವನು ನನ್ನನ್ನು ಶಿಕ್ಷಿಸಿದನು ನಾನು ಸ್ವರ್ಗದಲ್ಲಿ ಒಬ್ಬ ದೇವದೂತನಾಗಿದ್ದೆನು, ಹಾಗಿದ್ದೂ ದೇವರು ಹೇಳಿದಂತೆ ಕೇಳಲಿಲ್ಲ. ಒಬ್ಬ ಹೆಂಗಸಿನ ಆತ್ಮವನ್ನು ತರುವಂತೆ ಹೇಳಿ ದೇವರು ನನ್ನನ್ನು ಕಳುಹಿಸಿದನು ನಾನು ಭೂಮಿಗೆ ಹಾರಿ ಬಂದು, ಒಂಟಿಯಾಗಿ ನರಳುತ್ತ ಮಲಗಿದ್ದ ಒಬ್ಬ ರೋಗಿ ಹೆಂಗಸನ್ನು ಕಂಡೆನು ಅವಳು ಆಗಿನ್ನೂ ಅವಳಿ ಹೆಣ್ಣು ಮಕ್ಕಳನ್ನು ಹಡೆದಿದ್ದಳು. ಅವು ತಾಯಿಯ ಪಕ್ಕದಲ್ಲಿ ಸ್ವಲ್ಪ ಸ್ವಲ್ಪ ಅಲುಗಾಡುತ್ತಿದ್ದವು, ಆದರೆ ಆ ಮಕ್ಕಳನ್ನು ಮೇಲಕ್ಕೆತ್ತಿಕೊಂಡು ಮೊಲೆ ಕೊಡುವುದಕ್ಕ ತಾಯಿಗೆ ಶಕ್ತಿಯಿರಲಿಲ್ಲ ನನ್ನನ್ನು ಕಂಡಕೂಡಲೇ ದೇವರು ತನ್ನ ಜೀವವನ್ನು ತರುವುದಕ್ಕಾಗಿ ನನ್ನನ್ನು ಕಳುಹಿಸಿರುವನೆಂದು ತಿಳಿದುಕೊಂಡಳು. ಆಗ ಅವಳು ಅಳುತ್ತ "ಅಯ್ಯಾ ದೇವದೂತ! ನನ್ನ ಗಂಡನಿಗೆ ಈಗತಾನೇ ಸಮಾಧಿಯಾಯಿತು; ಮೈ ಮೇಲೆ ಒಂದು ಮರ ಬಿದ್ದು ಅವನು ಸತ್ತುಹೋದನು ನನಗೆ ಅಕ್ಕತಂಗಿಯರಿಲ್ಲ, ಚಿಕ್ಕಮ್ಮ

ದೊಡ್ಡವ್ಮಂದಿರಿಲ್ಲ, ತಾಯಿಯೂ ಇಲ್ಲ , ಈ ತಬ್ಬಲಿ ಮಕ್ಕಳ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕ ಯಾರೂ ಇಲ್ಲ. ನನ್ನ ಜೀವವನ್ನು ತೆಗೆದುಕೊಂಡು ಹೋಗಬೇಡ! ಸಾಯುವುದಕ್ಕೆ ಮುಂಚೆ ನನ್ನ ಈ ಮಕ್ಕಳಿಗೆ ಹಾಲುಕೊಟ್ಟು, ಹೊಟ್ಟೆಗೆ ಹಾಕಿ ಬೆಳೆಸಿ ತಮ್ಮ ಕಾಲಮೇಲೆ ತಾವು ನಿಲ್ಲುವಂತೆ ಮಾಡುವುದಕ್ಕ ಅವಕಾಶಕೊಡು. ತಂದೆಯಾಗಲಿ ತಾಯಿಯಾಗಲಿ ಇಲ್ಲದಿದ್ದರೆ ಮಕ್ಕಳು ಬದುಕಲಾರವು" ಎಂದು ಕೇಳಿಕೊಂಡಳು. ಅದನ್ನು ಕೇಳಿ, ಅವಳು ಹೇಳಿದ್ದಕ್ಕೆ ನಾನೂ ಒಪ್ಪಿಕೊಂಡ ಒಂದು ಮಗುವನ್ನು ಅವಳ ಮೊಲೆಯ ಒಳಿ ಇಟ್ಟು ಇನ್ನೊಂದನ್ನು ಅವಳ ಕಂಕುಳಿಗೆ ಕೊಟ್ಟೆ. ಸ್ವರ್ಗದಲ್ಲಿ ಒಡೆಯನ ಬಳಿಗೆ ಹಿಂದಿರುಗಿದೆ. ಒಡೆಯನ ಒಳಿಗೆ ಹಾರಿಹೋಗಿ, 'ತಾಯಿಯ ಆತ್ಮವನ್ನು ತರಲಾರದೆ ಹೋದೆನು ಅವಳ ಗಂಡ ಒಂದು ಮರ ಮೇಲೆ ಬಿದ್ದು ಸತ್ತುಹೋದನು, ಅವಳು ಅವಳಿ ಮಕ್ಕಳನ್ನು ಹಡೆದಿದಾಳೆ, ತನ್ನ ಜೀವವನ್ನು ತೆಗೆದುಕೊಂಡು ಹೋಗಬೇಡವೆಂದು ಕೇಳಿಕೊಳ್ಳುತ್ತಾಳೆ. "ನನ್ನ ಮಕ್ಕಳಿಗೆ ಹಾಲು ಕೊಟ್ಟು ಹೊಟ್ಟೆಗೆ ಹಾಕಿ ತಮ್ಮ ಕಾಲಮೇಲೆ ತಾವು ನಿಲ್ಲುವಂತೆ ಮಾಡುವುದಕ್ಕೆ ಅವಕಾಶಕೊಡು. ತಂದೆಯಾಗಲಿ ತಾಯಿಯಾಗಲಿ ಇಲ್ಲದೆ ಮಕ್ಕಳು ಬದುಕುವುದಿಲ್ಲ" ಎಂದು ಪ್ರಾರ್ಥಿಸುತ್ತಾಳೆ. ಆದ್ದರಿಂದ ಅವಳ ಜೀವವನ್ನು ನಾನು ತರಲಿಲ್ಲ' ಎಂದು ವಿಜ್ಞಾಪಿಸಿದೆನು. ಆಗ ದೇವರು "ಹೋಗು— ತಾಯಿಯ ಜೀವವನ್ನು ತೆಗೆದುಕೊ. ಆಮೇಲೆ ಮೂರು ಸತ್ಯಗಳನ್ನು ಕಲಿತುಕೊಂಡು ಬಾ, **ಮನುಷ್ಯನಲ್ಲಿರುವುದೇನು? ಮನುಷ್ಯನಿಗೆ ಗೊತ್ತಿಲ್ಲದ್ದು ಯಾವುದು? ಮನುಷ್ಯರು ಬದುಕುವುದೇತರಿಂದ?** ಈ ಮೂರು ಸತ್ಯಗಳನ್ನು ಕಲಿತುಕೊಂಡು ಬಾ. ಇವನ್ನು ಕಲಿತುಕೊಂಡ ಮೇಲೆ ನೀನು ತಿರುಗಿ ಸ್ವರ್ಗಕ್ಕೆ ಬರುವೆಯಂತೆ" ಎಂದು ಅಪ್ಪಣೆ ಮಾಡಿದನು. ಆದ್ದರಿಂದ ನಾನು ಪುನಃ ಭೂಮಿಗೆ ಹಾರಿ ಬಂದು ತಾಯಿಯ ಜೀವವನ್ನು ತೆಗೆದುಕೊಂಡೆನು. ಮಕ್ಕಳು ಎದೆಯಮೇಲಿನಿಂದ ಕೆಳಕ್ಕುರುಳಿ

ದವು. ಅವಳ ಮೈ ಹಾಸಿಗೆಯ ಮೇಲೆ ಒಂದು ಕಡೆಗೆ ಉರುಳಿತು, ಹಾಗೆ ಉರುಳುವಾಗ ಒಂದು ಮಗುವನ್ನು ಜಜ್ಜಿ ಅದರ ಕಾಲನ್ನು ತಿರಿಚಿಬಿಟ್ಟಳು. ಅವಳ ಜೀವವನ್ನು ದೇವರ ಸನ್ನಿಧಿಗೆ ತೆಗೆದುಕೊಂಡು ಹೋಗಬೇಕೆಂದು ನಾನು ಹಳ್ಳಿಯ ಮೇಲುಗಡೆ ಆಕಾಶಕ್ಕೆ ಹಾರಿದೆನು. ಆದರೆ ಆಗ ಒಂದು ಗಾಳಿಗೆ ಸಿಕ್ಕಿಕೊಂಡೆನು, ನನ್ನ ರೆಕ್ಕೆಗಳು ಮುದುರಿಕೊಂಡು ಉದುರಿ ಹೋದವು; ಅವಳ ಜೀವವೊಂದೇ ಒಂಟಿಯಾಗಿ ದೇವರ ಸನ್ನಿಧಿಗೆ ಏರಿ ಹೋಯಿತು. ನಾನು ರಸ್ತೆಯ ಪಕ್ಕದಲ್ಲಿ ಭೂಮಿಯಮೇಲೆ ಬಿದ್ದೆನು.'

ಸೈಮನ್ನನಿಗೂ ಮಾಟ್ರ್ಯೋನಳಿಗೂ ಇಷ್ಟು ದಿನವೂ ತಮ್ಮ ಜೊತೆಯಲ್ಲಿ ವಾಸಿಸುತ್ತಿದ್ದವನು, ತಾವು ಅನ್ನಬಟ್ಟೆ ಕೊಟ್ಟು ಸಹಾಯಮಾಡಿದ್ದವನು ಯಾರೆಂದು ಆಗ ಚೆನ್ನಾಗಿ ಗೊತ್ತಾಯಿತು. ಅವರು ಭಯದಿಂದಲೂ ಆನಂದದಿಂದಲೂ ಅತ್ತುಬಿಟ್ಟರು. ದೇವದೂತನು ಮತ್ತೆ ಹೇಳತೊಡಗಿದನು: 'ನಾನು ಬಯಲಿನಲ್ಲಿ ಒಂಟಿಯಾಗಿದ್ದೆ, ಬೆತ್ತಲೆಯಾಗಿದ್ದೆ. ಮನುಷ್ಯನಾಗುವವರೆಗೂ ಮನುಷ್ಯರಿಗೆ ಏನೇನು ಬೇಕೆಂಬುದೂ, ಶೀತವೂ ಹಸಿವೂ ಒಂದೂ ನನಗೆ ಗೊತ್ತಿರಲಿಲ್ಲ. ನನಗೆ ಬಹು ಹಸಿವಾಗಿದ್ದಿತು, ಮೈಯೆಲ್ಲ ಚಳಿಯಿಂದ ಕೊರಡಾಗಿದ್ದಿತು, ಏನು ಮಾಡುವುದಕ್ಕೂ ತೋರಲಿಲ್ಲ. ನಾನು ಬಿದ್ದ ಬಯಲಿನ ಹತ್ತಿರದಲ್ಲೇ ದೇವರಿಗಾಗಿ ಕಟ್ಟಿದ್ದ ಒಂದು ಗುಡಿ ಕಾಣಿಸಿತು. ಅಲ್ಲಿ ಆಶ್ರಯ ಸಿಕ್ಕೀತೆಂದು ಭಾವಿಸಿ ಅಲ್ಲಿಗೆ ಹೋದೆನು. ಆದರೆ ಗುಡಿಗೆ ಬೀಗಹಾಕಿದ್ದಿತು, ಒಳಗೆ ಹೋಗುವುದಕ್ಕಾಗಲಿಲ್ಲ. ಆದ್ದರಿಂದ ಕಡೆಗೆ ಗಾಳಿಯನ್ನಾದರೂ ತಪ್ಪಿಸಿಕೊಳ್ಳೋಣವೆಂದು ಗುಡಿಯ ಹಿಂದುಗಡೆ ಹೋಗಿ ಕುಳಿತುಕೊಂಡೆನು. ಸಂಜೆಯಾಗುತ್ತ ಬಂತು; ನನಗೆ ಹಸಿವು; ಮೈ ಚಳಿಗೆ ಕೊರಡಾಗಿ ಗೆಡ್ಡೆ ಕಟ್ಟುತ್ತಿದ್ದಿತು, ಬಹು ನೋವಾಗುತ್ತಿದ್ದಿತು. ಆಗ ಅಕಸ್ಮಾತ್ತಾಗಿ ಆ ದಾರಿಯಲ್ಲಿ ಒಬ್ಬ ಮನುಷ್ಯ ಬರುತ್ತಿರುವಂತೆ ಕೇಳಿಸಿತು. ಅವನು ಕೈಯಲ್ಲಿ ಒಂದು ಜೊತೆ ಬೂಟುಗಳನ್ನು ಹಿಡಿದುಕೊಂಡು ತನ್ನಷ್ಟಕ್ಕೆ ತಾನೇ ಮಾತಾಡಿಕೊಳ್ಳುತ್ತಿದ್ದನು. ನಾನು ಮನುಷ್ಯ

ನಾಗಿ ಮಾರ್ಪಟ್ಟಮೇಲೆ ಮೊಟ್ಟಮೊದಲನೆಯ ಸಲ ಮರ್ತ್ಯನಾದ ಮನು ಷ್ಯನ ಮುಖವನ್ನು ನೋಡಿದೆನು, ಅವನ ಮುಖ ನನಗೆ ಭಯಂಕರವಾಗಿ ಕಂಡಿತು, ಅದನ್ನು ನೋಡಲಾರದೆ ಬೇರೆ ಕಡೆಗೆ ತಿರುಗಿಕೊಂಡೆನು. ಆ ಮನುಷ್ಯ ಚಳಿಗಾಲದಲ್ಲಿ ತನ್ನ ಮೈ ಮುಚ್ಚಿಕೊಳ್ಳುವುದಕ್ಕೇನುಮಾಡ ಬೇಕು, ತನ್ನ ಹೆಂಡತಿ ಮಕ್ಕಳಿಗ ಆಹಾರ ಒದಗಿಸುವುದು ಹೇಗೆ, ಎಂದು ಮುಂತಾಗಿ ತನ್ನಷ್ಟಕ್ಕೆ ತಾನೇ ಹೇಳಿಕೊಳ್ಳುತ್ತಿದ್ದನು ಅದನ್ನು ಕೇಳಿ "ನಾನು ಚಳಿಯಿಂದಲೂ ಹಸಿವಿನಿಂದಲೂ ಸಾಯುತ್ತ ಬಿದ್ದಿದ್ದೇನೆ ಆದರೆ ಈ ಮನುಷ್ಯ ತನಗೂ ತನ್ನ ಹೆಂಡತಿಗೂ ಒಟ್ಟೆಗಳನ್ನು ಹೊಂದಿಸಿಕೊಳ್ಳುವುದು ಹೇಗೆ ? ತಮಗೆ ಆಹಾರವನ್ನು ಒದಗಿಸಿಕೊಳ್ಳುವುದು ಹೇಗೆ ಎಂದು ಮಾತ್ರ ಯೋಚಿಸಿಕೊಳ್ಳುತ್ತಿದಾನೆ. ಅವನು ನನಗೆ ಸಹಾಯಮಾಡುವುದಿಲ್ಲ" ಎಂದು ಯೋಚಿಸಿದೆನು. ಆ ಮನುಷ್ಯ ನನ್ನನ್ನು ಕಂಡಾಗ ಹುಬ್ಬು ಗಂಟು ಹಾಕಿ ಮೊದಲಿಗಿಂತ ಹೆಚ್ಚು ರೌದ್ರವಾಗಿ ತೋರಿದನು, ಗುಡಿಯ ಮತ್ತೊಂದು ಪಕ್ಕದಲ್ಲಿ ನನ್ನನ್ನು ದಾಟಿ ಮುಂದಕ್ಕೆ ಹೋದನು. ನನಗೆ ನಿರಾಶೆಯಾಯಿತು. ಆದರೆ ಕೂಡಲೆ, ಅವನು ಹಿಂದಕ್ಕೆ ಬರುತ್ತಿರುವಹಾಗೆ ಕೇಳಿತು ನಾನು ಕತ್ತೆತ್ತಿ ನೋಡಿದೆನು, ಅದೇ ಮನುಷ್ಯನೆಂದು ಗುರುತಿಸುವುದಕ್ಕಾಗಲಿಲ್ಲ: ಮೊದಲು ಅವನ ಮುಖದಲ್ಲಿ ಮೃತ್ಯುವನ್ನು ಕಂಡಿದ್ದೆನು, ಆದರೆ ಈಗ ಅವನು ಜೀವಂತನಾಗಿದ್ದನು, ಅವನಲ್ಲಿ ದೇವರು ಇರುವುದು ನನಗೆ ಗೋಚರ ವಾಯಿತು. ಅವನು ನನ್ನ ಹತ್ತಿರ ಬಂದನು ಬಂದು ನನಗೆ ಒಟ್ಟೆಯುಡಿಸಿ, ಜೊತೆಯಲ್ಲಿ ತನ್ನ ಮನೆಗೆ ಕರೆದುಕೊಂಡು ಹೋದನು. ನಾನು ಮನೆಯೊಳಕ್ಕೆ ಹೋದೆನು, ನಮ್ಮನ್ನು ನೋಡುವುದಕ್ಕೆ ಒಬ್ಬ ಹೆಂಗಸು ಬಂದು ಮಾತಾಡು ವುದಕ್ಕೆ ಪ್ರಾರಂಭಿಸಿದಳು. ಆ ಹೆಂಗಸು ಗಂಡಸಿಗಿಂತಲೂ ಬಹಳ ಹೆಚ್ಚು ಭಯಂಕರವಾಗಿ ಕಂಡಳು, ಮೃತ್ಯು ಅವಳ ಬಾಯಿಂದ ಹೊರಕ್ಕೆ ಬಂದನು, ಅವಳ ಸುತ್ತಮುತ್ತಲೂ ವ್ಯಾಪಿಸಿದ ಮೃತ್ಯುವಿನ ದುರ್ವಾಸನೆಯಿಂದ ನನಗೆ ಉಸಿರಾಡುವುದೇ ಅಸಾಧ್ಯವಾಯಿತು. ಅವಳು ನನ್ನನ್ನು ಹೊರಗಿನ ಚಳಿಗೆ

ಓಡಿಸಿಬಿಡಬೇಕೆಂದಿದ್ದಳು, ಅವಳೇನಾದರೂ ಹಾಗೆ ಮಾಡಿದರೆ ಅವಳು ಸಾಯುವಳೆಂದು ನನಗೆ ಗೊತ್ತಿದ್ದಿತು. ಆಗ ಫಕ್ಕನೆ ಅವಳ ಗಂಡ ದೇವರ ವಿಚಾರವಾಗಿ ಅವಳಿಗೆ ತಿಳಿಯ ಹೇಳಿದನು, ಕೂಡಲೆ ಹೆಂಗಸು ಬದಲಾಯಿಸಿದಳು. ಅವಳು ನನಗೆ ಆಹಾರವನ್ನು ತಂದು ಬಡಿಸಿ ನನ್ನನ್ನು ನೋಡಿದಾಗ ಒಂದು ಸಲ ಅವಳ ಕಡೆಗೆ ನೋಡಿದೆನು, ಆಗ ಅವಳಲ್ಲಿ ಮೃತ್ಯು ಇರಲಿಲ್ಲ; ಅವಳು ಜೀವಂತಳಾಗಿದ್ದಳು, ಅವಳಲ್ಲಿಯೂ ನನಗೆ ದೇವರು ಗೋಚರಿಸಿದನು.

'ಆಗ ದೇವರು ನಾನು ಕಲಿಯಬೇಕೆಂದು ಹೇಳಿದ್ದ ಮೊದಲನೆಯ ಪಾಠ,—"**ಮನುಷ್ಯನಲ್ಲಿ ಇರುವುದೇನೆಂಬುದನ್ನು ಕಲಿತುಕೊ**" ಎಂಬುದು ನೆನಪಾಯಿತು. ಮನುಷ್ಯನಲ್ಲಿ ಪ್ರೇಮ ಇದೆ ಎಂದು ತಿಳಿದುಕೊಂಡೆನು. ದೇವರು ತಾನು ತೋರಿಸಿಕೊಡುವುದಾಗಿ ಮಾತು ಕೊಟ್ಟಿದ್ದದ್ದನ್ನು ಇಷ್ಟು ಬೇಗ ತೋರಿಸಲು ಪ್ರಾರಂಭಿಸಿದನೆಂದು ನನಗೆ ಸಂತೋಷವಾಯಿತು, ಆಗ ನಾನು ಮೊದಲನೆಯ ಸಲ ಮುಗುಳುನಗೆ ನಕ್ಕನು. ಆದರೆ ನಾನಿನ್ನೂ ಎಲ್ಲವನ್ನೂ ಕಲಿತುಕೊಂಡಿರಲಿಲ್ಲ. **ಮನುಷ್ಯನಿಗೆ ಯಾವುದು ಗೊತ್ತಿಲ್ಲ?** ಮತ್ತು **ಮನುಷ್ಯರು ಬದುಕುವುದೇತರಿಂದ?** ಎಂಬ ಎರಡು ಸತ್ಯಗಳು ಇನ್ನೂ ನನಗೆ ತಿಳಿದಿರಲಿಲ್ಲ.

'ನಾನು ನಿಮ್ಮ ಜೊತೆಯಲ್ಲೇ ವಾಸಮಾಡುತ್ತಿದ್ದೆನು. ಒಂದು ವರ್ಷ ಕಳೆಯಿತು. ಒಂದು ವರ್ಷದ ವರೆಗೂ ಹೊಲಿಗೆ ಬಿಚ್ಚದೆಯೂ ಬಿರುಕು ಬಿಡದೆಯೂ ಸರಿಯಾಗಿರುವಂತೆ ಬೂಟುಗಳನ್ನು ಹೊಲಿಸುವುದಕ್ಕೆಂದು ಒಬ್ಬ ಮನುಷ್ಯನು ಬಂದನು. ಅವನ ಕಡೆ ನೋಡಿದೆನು; ಅವನ ಬೆನ್ನ ಹಿಂದೆ ನನ್ನ ಜೊತೆಗಾರ, ಸಾವಿನ ದೇವದೂತ, ಇದ್ದದ್ದನ್ನು ಗುರುತಿಸಿದೆನು. ನಾನೊಬ್ಬ ಹೊರತು ಮತ್ತೆ ಯಾರೂ ಆ ದೇವದೂತನನ್ನು ನೋಡಲಿಲ್ಲ; ಆದರೆ ಅವನು ಯಾರೆಂಬುದು ನನಗೆ ಗೊತ್ತಿದ್ದಿತು; ಅವನು ಆವತ್ತು ಸೂರ್ಯ ಮುಳುಗುವುದರೊಳಗಾಗಿ ಆ ಶ್ರೀಮಂತನ ಜೀವವನ್ನು ತೆಗೆದುಕೊಳ್ಳುವನೆಂದು ನನಗೆ ಗೊತ್ತಿದ್ದಿತು. ಆಗ ನನ್ನ ಮನಸ್ಸಿನಲ್ಲಿಯೇ "ಈ

ಮನುಷ್ಯ ಒಂದು ವರ್ಷಕ್ಕೆ ತಕ್ಕಷ್ಟನ್ನು ಒದಗಿಸಿಕೊಳ್ಳುವುದಕ್ಕೆ ಹವಣಿಸುತ್ತಿದ್ದಾನೆ. ಇವತ್ತು ಸಂಜೆಯೊಳಗಾಗಿ ತಾನು ಸಾಯುವ ವಿಷಯ ಇವನಿಗೆ ತಿಳಿಯದು '' ಎಂದುಕೊಂಡೆನು. ದೇವರ ಎರಡನೆಯ ಹೇಳಿಕೆ—'' ಮನುಷ್ಯನಿಗೆ ಯಾವುದು ಗೊತ್ತಿಲ್ಲವೆಂಬುದನ್ನು ತಿಳಿದುಕೊ '' ಎಂಬುದು— ನೆನಪಿಗೆ ಬಂದಿತು.

' ಮನುಷ್ಯನಲ್ಲಿರುವುದೇನೆಂದು ಆಗಲೇ ನನಗೆ ಗೊತ್ತಾಗಿದ್ದಿತು ಅವನಿಗೆ ಗೊತ್ತಿಲ್ಲದಿರುವುದು ಏನೆಂಬುದನ್ನು ಈಗ ತಿಳಿದುಕೊಂಡೆನು. ತನಗೆ ಅವಶ್ಯವಾಗಿ ಬೇಕಾಗಿರುವುದೇನೆಂಬುದು ಅವನಿಗೆ ತಿಳಿಯದು. ಇದನ್ನು ಅರಿತುಕೊಂಡು ನಾನು ಎರಡನೆಯ ಸಲ ಮುಗುಳುನಗೆ ನಕ್ಕೆನು. ನನ್ನ ಜೊತೆಯ ದೇವದೂತನನ್ನು ನೋಡಿದ್ದರಿಂದಲೂ ದೇವರು ತನ್ನ ಎರಡನೆಯ ಹೇಳಿಕೆಯ ಸತ್ಯವನ್ನೂ ನನಗೆ ತೋರಿಸಿಕೊಟ್ಟದ್ದರಿಂದಲೂ ನನಗೆ ಬಹಳ ಸಂತೋಷವಾಯಿತು.

' ಆದರೆ ಆಗಲೂ ನನಗೆ ಎಲ್ಲವೂ ತಿಳಿದಿರಲಿಲ್ಲ. **ಮನುಷ್ಯರು ಬದುಕುವುದೇತರಿಂದ ?** ಎಂಬುದು ನನಗೆ ಗೊತ್ತಿರಲಿಲ್ಲ. ದೇವರು ಕಟ್ಟಕಡೆಯದಾದ ಈ ಪಾಠವನ್ನೂ ಎಂದಿಗೆ ತಿಳಿಸಿಕೊಡುವನೋ ಎಂದು ಅದನ್ನೇ ಕಾದುಕೊಂಡು ನಿಮ್ಮ ಜೊತೆಯಲ್ಲಿ ವಾಸಮಾಡುತ್ತಿದ್ದೆನು. ಆರನೆಯ ವರ್ಷ ಆ ಹೆಂಗಸಿನ ಸಂಗಡ ಅವಳಿ ಹುಡುಗಿಯರು ಬಂದರು, ನನಗೆ ಆ ಹುಡುಗಿಯರ ಗುರುತು ಸಿಕ್ಕಿತು, ಅವರು ಹೇಗೆ ಜೀವಸಹಿತ ಬದುಕಿದ್ದರೆಂಬುದನ್ನು ಕೇಳಿದೆನು. ಆ ಕಥೆಯನ್ನು ಕೇಳಿ ನನಗೆ ಹೀಗನ್ನಿಸಿತು, '' ಅವರ ತಾಯಿ ಮಕ್ಕಳಿಗಾಗಿ ನನ್ನನ್ನು ಪ್ರಾರ್ಥಿಸಿಕೊಂಡಳು. ತಂದೆಯಾಗಲಿ ತಾಯಿಯಾಗಲಿ ಇಲ್ಲದೆ ಮಕ್ಕಳು ಬದುಕಲಾರರೆಂದು ಅವಳು ಹೇಳಿದ ಮಾತನ್ನು ನಾನು ನಂಬಿದೆನು. ಆದರೆ ಅಪರಿಚಿತಳಾದವಳೊಬ್ಬಳು ಅವಕ್ಕೆ ಮೊಲೆಯೂಡಿ ಸಾಕಿ ದೊಡ್ಡವರಾಗಿ ಮಾಡಿದಾಳೆ, ಆ ಹೆಂಗಸು ತನ್ನವಲ್ಲದ ಆ ಮಕ್ಕಳಮೇಲೆ ಅಷ್ಟು ಪ್ರೀತಿಯನ್ನು ತೋರಿಸಿ, ಹಾಗೆ

ಅತ್ತದ್ದನ್ನು ಕಂಡಾಗ, ಅವಳಲ್ಲಿ ಜೀವಸ್ವರೂಪನಾದ ಭಗವಂತನು ಗೋಚರಿಸಿದನು, ಮನುಷ್ಯರು ಯಾವುದರಿಂದ ಬದುಕುತ್ತಾರೋ ಅದನ್ನು ಕಂಡೆನು.'' ದೇವರು ಮೂರನೆಯ ಸತ್ಯವನ್ನೂ ತೋರಿಸಿಕೊಟ್ಟು, ನನ್ನ ಪಾಪಗಳನ್ನು ಮನ್ನಿಸಿರುವನೆಂದು ತಿಳಿದುಕೊಂಡೆನು. ಅದರಿಂದ ಮೂರನೆಯ ಸಲ ನಾನು ಮುಗುಳುನಗೆ ನಕ್ಕೆನು.'

೧೨

ದೇವದೂತನ ಮೈಮೇಲಿನ ಬಟ್ಟೆ ಕಳಚಿ ಬಿದ್ದುಹೋಯಿತು; ಅದ್ಭುತವಾದ ಒಂದು ತೇಜಸ್ಸು ಅವನನ್ನು ಆವರಿಸಿಕೊಂಡಿತು, ಅವನನ್ನು ಕಣ್ಣುಬಿಟ್ಟು ನೋಡುವುದೇ ಅಸಾಧ್ಯವಾಯಿತು. ಅವನ ದನಿ ದೊಡ್ಡದಾಯಿತು, ಬಾಯಿಂದ ಬರದೆ ಮೇಲುಗಡೆ ಆಕಾಶದಿಂದ ಬರುತ್ತಿರುವುದೆಂಬಂತೆ ಬಹು ಗಟ್ಟಿಯಾಗಿ ಕೇಳಿಸಿತು ಆ ದೇವದೂತನು ತಾನು ಹೇಳುತ್ತಿದ್ದದ್ದನ್ನು ಹೀಗೆ ಮುಂದುವರಿಸಿದನು.

'ಜನರೆಲ್ಲರೂ ತಾವು ತಮ್ಮ ವಿಷಯದಲ್ಲಿ ಕಳವಳಪಟ್ಟು ಎಚ್ಚರಿಕೆ ತೆಗೆದುಕೊಳ್ಳುವುದರಿಂದ ಬದುಕುತ್ತಿಲ್ಲವೆಂದೂ, ಪ್ರೇಮದಿಂದಲೇ ಅವರು ಬದುಕುತ್ತಿರುವರೆಂದೂ ಈಗ ನಾನು ಕಲಿತುಕೊಂಡೆನು.

'ತನ್ನ ಮಕ್ಕಳು ಬದುಕಬೇಕಾದರೆ ಅವಕ್ಕೆ ಅವಶ್ಯವಾಗಿ ಬೇಕಾಗಿದ್ದದ್ದೇನೆಂದು ತಾಯಿಗೆ ಗೊತ್ತಿರಲಿಲ್ಲ. ತನಗೇ ಏನೇನು ಬೇಕಾಗಿದೆಯೆಂಬುದು ಆ ಶ್ರೀಮಂತನಿಗೆ ಗೊತ್ತಿರಲಿಲ್ಲ. ಸಂಜೆಯ ಹೊತ್ತಿಗೆ ತನ್ನ ಶರೀರಕ್ಕೆ ಬೂಟುಗಳು ಬೇಕಾಗುವುದೋ ಇಲ್ಲ, ತನ್ನ ಹೆಣಕ್ಕೆ ಸ್ಲಿಪ್ಪರ್‌ಗಳು ಬೇಕಾಗುವುದೋ ಯಾವ ಮನುಷ್ಯನಿಗೂ ಗೊತ್ತಾಗುವ ಹಾಗಿಲ್ಲ.

'ಮನುಷ್ಯನಾಗಿದ್ದಾಗ ನಾನು ಬದುಕಿದ್ದದ್ದು ನನ್ನ ವಿಚಾರದಲ್ಲಿ ನಾನು ತೆಗೆದುಕೊಳ್ಳುತ್ತಿದ್ದ ಎಚ್ಚರಿಕೆಯಿಂದಲ್ಲ, ಒಬ್ಬ ದಾರಿಹೋಕನಲ್ಲಿ ಪ್ರೇಮವಿದ್ದದ್ದರಿಂದ, ಅವನೂ ಅವನ ಹೆಂಡತಿಯೂ ನನ್ನಲ್ಲಿ ಮರುಕವಿಟ್ಟು ನನ್ನನ್ನು ಪ್ರೀತಿಸಿದ್ದರಿಂದ. ಆ ಅನಾಥಮಕ್ಕಳು ಬದುಕಿದ್ದಕ್ಕೆ ಅವರ

ತಾಯಿಯು ಅವರ ವಿಷಯದಲ್ಲಿ ಎಚ್ಚರಿಕೆ ತೆಗೆದುಕೊಂಡದ್ದು ಕಾರಣವಲ್ಲ; ಅವರಿಗೆ ಏನೂ ಸಂಬಂಧವಿಲ್ಲದ ಅಪರಿಚಿತಳಾದ ಒಬ್ಬ ಹೆಂಗಸಿನಲ್ಲಿ ಪ್ರೇಮ ವಿದ್ದುದ್ದರಿಂದ, ಅವಳು ಆ ಮಕ್ಕಳಲ್ಲಿ ಮರುಕಗೊಂಡು ಅವನ್ನು ಪ್ರೀತಿಸಿದ್ದರಿಂದ. ಎಲ್ಲ ಮನುಷ್ಯರೂ ಬದುಕುವುದು ಅವರು ತಮ್ಮ ಯೋಗಕ್ಷೇಮ ಕ್ಕಾಗಿ ಮುಂದು ಮುಂದಾಗಿಯೇ ಆಲೋಚನೆ ಮಾಡಿಕೊಳ್ಳುತ್ತಿರುವು ದರಿಂದಲ್ಲ, ಮನುಷ್ಯರಲ್ಲಿ ಪ್ರೇಮ ನೆಲಸಿರುವುದರಿಂದ.

'ದೇವರು ಮನುಷ್ಯರಿಗೆ ಜೀವವನ್ನು ಕೊಟ್ಟನೆಂದೂ ಅವರು ಜೀವಿಸುತ್ತಿರಲೆಂದು ಆತನು ಇಷ್ಟಪಡುವನೆಂದೂ ಮೊದಲೇ ನನಗೆ ಗೊತ್ತಿದ್ದಿತು, ಈಗ ನನಗೆ ಅದಕ್ಕಿಂತಲೂ ಹೆಚ್ಚು ತಿಳಿವುಂಟಾಯಿತು.

'ಮನುಷ್ಯರು ಒಬ್ಬೊಬ್ಬರೂ ಬೇರೆಬೇರೆಯಾಗಿ ಜೀವಿಸಬೇಕೆಂಬುದು ದೇವರ ಇಷ್ಟವಲ್ಲ. ಆದ್ದರಿಂದಲೇ ಅವರಲ್ಲಿ ಪ್ರತಿಯೊಬ್ಬನಿಗೂ ತನತನಗೆ ಅವಶ್ಯವಾಗಿ ಬೇಕಾಗಿರುವುದೇನೆಂಬುದನ್ನು ದೇವರು ತಿಳಿಯಗೊಡುವುದಿಲ್ಲ. ಅವರೆಲ್ಲರೂ ಒಂದುಗೂಡಿ ಬಾಳಲೆಂಬುದು ಅವನ ಅಪೇಕ್ಷೆಯಾದ್ದರಿಂದ ಎಲ್ಲರಿಗೂ ಅಗತ್ಯವಾಗಿರುವುದೇನೆಂಬುದನ್ನು ಪ್ರತಿಯೊಬ್ಬರಿಗೂ ತಿಳಿಯಪಡಿಸುತ್ತಾನೆ.

'ತಮ್ಮ ಯೋಗಕ್ಷೇಮ ವಿಚಾರದಲ್ಲಿ ತಾವೇ ಜಾಗರೂಕರಾಗಿರುವುದರಿಂದ ತಾವು ಬದುಕುತ್ತಿರುವುದಾಗಿ ಜನರಿಗೆ ತೋರುವುದಾದರೂ, ನಿಜವಾಗಿ ನೋಡಿದರೆ ಅವರು ಬದುಕುತ್ತಿರುವುದಕ್ಕೆ ಪ್ರೇಮವೊಂದೇ ಕಾರಣವೆಂದು ಈಗ ನಾನು ಕಂಡುಕೊಂಡಿದೇನೆ. ಯಾರಿಗೆ ಪ್ರೇಮವಿದೆಯೋ ಅವನು ದೇವರಲ್ಲಿದಾನೆ, ದೇವರು ಅವನಲ್ಲಿದಾನೆ, ಏಕೆಂದರೆ ದೇವರು ಪ್ರೇಮಸ್ವರೂಪಿ.'

ದೇವದೂತನು ದೇವರ ಮಹಿಮೆಗಳನ್ನು ಹಾಡಿದನು, ಅವನ ಧ್ವನಿಗೆ ಗುಡಿಸಲು ಗಡಗಡನೆ ನಡುಗಿತು. ಮೇಲ್ಛಾವಣಿ ಭಾಗವಾಗಿ ತೆರೆದುಕೊಂಡಿತು, ಬೆಂಕಿಯ ಕಂಬವೊಂದು ಭೂಮಿಯಿಂದ ಆಕಾಶದವರೆಗೂ

ಎದ್ದು ನಿಂತಿತು. ಸೈಮನ್ನನೂ ಅವನ ಹೆಂಡತಿಯೂ ಮಕ್ಕಳೂ ನೆಲದ ಮೇಲೆ ಅಡ್ಡಬಿದ್ದರು. ದೇವದೂತನ ಭುಜಗಳಲ್ಲಿ ರೆಕ್ಕೆಗಳು ಕಾಣಿಸಿಕೊಂಡವು; ಅವನು ಸ್ವರ್ಗಕ್ಕೆ ಏರಿಹೋದನು.

ಸೈಮನ್ನನಿಗೆ ಎಚ್ಚರವಾಗಿ ತಿಳಿವು ಮರಳಿದಾಗ ಗುಡಿಸಲು ಮೊದಲಿನಂತೆಯೇ ಇದ್ದಿತು, ತನ್ನ ಮನೆಯವರು ಹೊರತಾಗಿ ಮತ್ತೆ ಯಾರೂ ಅಲ್ಲಿರಲಿಲ್ಲ

# ಮೂವರು ಯತಿಗಳು

## ವೊಲ್ಗಾ ಡಿಸ್ಟ್ರಿಕ್ಟಿನಲ್ಲಿ ಪ್ರಚಾರದಲ್ಲಿರುವ ಒಂದು ಹಳೆಯ ಐತಿಹ್ಯ.

'ಪ್ರಾರ್ಥನೆಯ ಗೈವಲ್ಲಿ, ಉತ್ತಮರು ತಾವೆಂಬ ಜನರಂತೆ (Gentiles)ಬರಿಯ ಪುನರುಕ್ತಿಗಳ ಹೇಳದಿರು ಏಕೆನಲು ಬಹಳ ಮಾತಾಡಿದರೆ, ಕೇಳಿ ದೇವರು ತಮ್ಮ ಮೆಚ್ಚುವನು ಎಂದವರು ತಿಳಿಯುವರು ಅದರಿಂದ ಅವರಂತೆ ನೀನು ಇರಬೇಡ, ಏಕೆನಲು ಆ ನಿನ್ನ ಪರಮಪಿತ, ನೀನು ಕೇಳುವ ಮೊದಲೆ, ನಿನಗಾವ ವಸ್ತುಗಳು ಬೇಕೆಂಬ ಸಂಗತಿಯ ತಿಳಿದಿರುವನಯ್ಯಾ '—ಮ್ಯಾಥ್ಯೂ ೬ ೭, ೮

ಒಬ್ಬ ಬಿಷಪ್ ಆರ್ಕೇಂಜಲಿಸಿಂದ ಸಾಲೋವೆಟ್ಸ್ಕ್ ವಿಹಾರಕ್ಕೆ ಹೊರಟು ಹಡಗಿನಲ್ಲಿ ಪ್ರಯಾಣಮಾಡುತ್ತಿದ್ದನು. ಅಲ್ಲಿನ ಗುಡಿಗಳಿಗೆ ಹೋಗಿ ನೋಡಿಕೊಂಡು ಬರಬೇಕಂದು ಹೊರಟಿದ್ದ ಅನೇಕ ಯಾತ್ರಿಕರೂ ಆ ಹಡಗಿನಲ್ಲಿದ್ದರು. ಹಡಗಿನ ಪ್ರಯಾಣ ಸುಖಕರವಾಗಿದ್ದಿತು ಗಾಳಿ ಅನುಕೂಲವಾಗಿ ಬೀಸುತ್ತಿದ್ದಿತು, ಹವವೂ ಚೆನ್ನಾಗಿದ್ದಿತು. ಯಾತ್ರಿಕರು ಡೆಕ್ಕಿನ* ಮೇಲೆ ಊಟಮಾಡುತ್ತಲೂ ಅಲ್ಲಲ್ಲೇ ಗುಂಪು ಸೇರಿ ಪರಸ್ಪರವಾಗಿ ಮಾತಾಡುತ್ತಲೂ ಕುಳಿತಿದ್ದರು. ಬಿಷಪ್ ಕೂಡ ಡೆಕ್ಕಿನ ಮೇಲಕ್ಕೆ ಬಂದನು ಅವನು ಅಲ್ಲಿ ಅತ್ತ ಇತ್ತ ಅಡ್ಡಾಡುತ್ತಿದ್ದಾಗ ಹಡಗಿನ ಮುಂಭಾಗದಲ್ಲಿ ಕಂಬದ ಹತ್ತಿರ ಕಲವು ಜನ ಗುಂಪು ಸೇರಿ ಒಬ್ಬ ಬೆಸ್ತನ ಮಾತನ್ನು ಕೇಳುತ್ತ ನಿಂತಿದ್ದುದನ್ನು ಕಂಡನು ಆ ಬೆಸ್ತನು ಸಮುದ್ರದ ಕಡೆಗೆ ಕೈ ತೋರಿಸುತ್ತ ಏನನ್ನೋ ಹೇಳುತ್ತಿದ್ದನು. ಬಿಷಪ್ ಅಲ್ಲಿ ನಿಂತು ಬೆಸ್ತನು ತೋರಿಸುತ್ತಿದ್ದ ಕಡೆಗೆ ನೋಡಿದನು. ಅಲ್ಲಿ ಸೂರ್ಯನ ಪ್ರಕಾಶ ದಲ್ಲಿ ಸಮುದ್ರವು ಹೊಳೆಯುತ್ತಿದ್ದಿತು, ಇದು ಹೊರತು ಮತ್ತೇನೂ ಕಾಣಿಸಲಿಲ್ಲ. ಬೆಸ್ತನ ಮಾತನ್ನು ಕೇಳುವುದಕ್ಕೆ ಮೆಲ್ಲನೆ ಅವನ ಹತ್ತಿರ ಹೋದನು ; ಆದರೆ ಬಿಷಪ್‌ನನ್ನು ಕಂಡಕೂಡಲೆ ಅವನು ಟೋಪಿಯನ್ನು

---

* ಹಡಗಿನ ಮೇಲುಗಡೆಯ ಛಾವಣಿ ಇಲ್ಲಿ ಕಡೆಯ ದರ್ಜೆಯ ಜನರು ಪ್ರಯಾಣ ಮಾಡುತ್ತಾರೆ

ತೆಗೆದು ಸುಮ್ಮನೆ ನಿಂತುಕೊಂಡನು. ಉಳಿದ ಜನರೂ ತಮ್ಮ ಟೋಪಿಗಳನ್ನು ತೆಗೆದು ಬಗ್ಗಿ ನಮಸ್ಕಾರ ಮಾಡಿದರು.

ಬಿಷಪ್ 'ಸ್ನೇಹಿತರೇ, ನಾನು ಬಂದದ್ದರಿಂದ ನೀವೇನೂ ತೊಂದರೆ ಪಟ್ಟುಕೊಳ್ಳುವ ಅಗತ್ಯವಿಲ್ಲ. ಈತ ಹೇಳುತ್ತಿದ್ದದ್ದನ್ನು ಕೇಳೋಣವೆಂದು ಬಂದೆ' ಎಂದು ಹೇಳಿದನು.

ಅಲ್ಲಿದ್ದವರಲ್ಲೆಲ್ಲ ಹೆಚ್ಚು ಧೈರ್ಯಶಾಲಿಯಾದವನೊಬ್ಬನು, ಒಬ್ಬ ವರ್ತಕ, 'ಬೆಸ್ತರವನು ನಮಗೆ ಯತಿಗಳ ವಿಚಾರವನ್ನು ಹೇಳುತ್ತಿದ್ದನು' ಎಂದು ಹೇಳಿದನು.

ಆಗ ಬಿಷಪ್, ಹಡಗಿನ ಅಂಚಿಗೆ ಹೋಗಿ ಒಂದು ಪೆಟ್ಟಿಗೆಯ ಮೇಲೆ ಕುಳಿತುಕೊಂಡು 'ಯಾವ ಯತಿಗಳು? ಅವರ ವಿಚಾರವೇನು? ನನಗೆ ಹೇಳು. ನನಗೂ ಅದನ್ನು ಕೇಳಬೇಕೆಂದು ಇಷ್ಟ. ನೀನು ತೋರಿಸು ತ್ತಿದ್ದದ್ದೇನು?' ಎಂದು ಕೇಳಿದನು.

ಆ ಮನುಷ್ಯನು ಸ್ವಲ್ಪ ಬಲಗಡೆಗೆ ಮುಂಭಾಗದಲ್ಲಿ ಒಂದು ಸ್ಥಳ ವನ್ನು ಕೈಯಿಂದ ತೋರಿಸುತ್ತ 'ಅಗೋ, ಅಲ್ಲಿ ಕಾಣುತ್ತದೆಯಲ್ಲಾ, ಆ ದ್ವೀಪ. ತಮ್ಮ ಆತ್ಮಗಳ ಮೋಕ್ಷಕ್ಕಾಗಿ ಆ ಯತಿಗಳು ವಾಸಮಾಡು ತ್ತಿರುವುದು ಆ ದ್ವೀಪದಲ್ಲಿಯೇ' ಎಂದು ಹೇಳಿದನು.

ಅದನ್ನು ಕೇಳಿ ಬಿಷಪ್ 'ಎಲ್ಲಿ, ಆ ದ್ವೀಪವೆಲ್ಲಿದೆ? ನನಗೇನೂ ಕಾಣು ವುದಿಲ್ಲ.' ಎಂದನು.

'ಅಲ್ಲಿ, ದೂರದಲ್ಲಿ, ಸ್ವಾಮಿಯವರು ದಯವಿಟ್ಟು ನನ್ನ ಕೈಯಿನ ನೇರಕ್ಕೇ ನೋಡಬೇಕು. ಆ ಚಿಕ್ಕ ಮೋಡ ಕಾಣಿಸುವುದಲ್ಲಾ, ಅದರ ಕೆಳಗೆ, ಸ್ವಲ್ಪ ಎಡಗಡೆಗೆ, ಮುಸಕು ಮುಸಕಾಗಿ ಒಂದು ಸಣ್ಣ ಗೆರೆ ಕಾಣು ವುದಿಲ್ಲವೇ? ಅದೇ ಆ ದ್ವೀಪ.'

ಬಿಷಪ್ ಲಕ್ಷ್ಯವಿಟ್ಟು ನೋಡಿದನು. ಆದರೆ ಹಾಗೆ ನೋಡಿ ಅಭ್ಯಾಸವಿಲ್ಲದ ಅವನ ಕಣ್ಣುಗಳಿಗೆ ಬಿಸಿಲಿನ ಝಳದಲ್ಲಿ ನೀರು ಅಲುಗಾಡಿ

ವಂತೆ ಧಳಧಳನೆ ಹೊಳೆಯುತ್ತಿರುವುದು ಕಾಣಿಸಿತೇ ಹೊರತು ಮತ್ತೆ ಏನೂ ಕಾಣಿಸಲಿಲ್ಲ

'ನನಗೆ ಅದು ಕಾಣುವುದಿಲ್ಲ. ಅದಿರಲಿ, ಅಲ್ಲಿರುವ ಆ ಯತಿಗಳು ಯಾರು?' ಎಂದು ಕೇಳಿದನು.

ಬೆಸ್ತರವನು 'ಅವರು ಬಹಳ ಪವಿತ್ರ ಪುರುಷರು. ಅವರ ವಿಚಾರ ವಾಗಿ ಹೇಳುತ್ತಿದ್ದದ್ದನ್ನು ಬಹಳ ಹಿಂದಿನಿಂದಲೂ ಕೇಳಿದ್ದೆ. ನಾನು ಮಾತ್ರ ಅವರನ್ನು ನೋಡಿರಲಿಲ್ಲ. ಕಳೆದ ವರ್ಷದ ಹಿಂದಿನ ವರುಷ ಅಕಸ್ಮಾತ್ ಅವರನ್ನು ಕಂಡೆ' ಎಂದು ಉತ್ತರಕೊಟ್ಟನು.

ಆ ಬೆಸ್ತನು ತಾನು ಅವರನ್ನು ಕಂಡದ್ದು ಹೇಗೆಂಬುದನ್ನು ಹೇಳ ತೊಡಗಿದನು. ಒಂದು ಸಲ ಅವನು ಮೀನು ಹಿಡಿಯುವುದಕ್ಕೆಂದು ಸಮುದ್ರದಲ್ಲಿ ಹೊರಟಿದ್ದಾಗ ದೋಣಿ ಕೆಟ್ಟು ಹೋದದ್ದರಿಂದ ರಾತ್ರಿ ಹೊತ್ತು ಆ ದ್ವೀಪದಲ್ಲಿ ನಿಂತುಬಿಡಬೇಕಾಯಿತು. ತಾನೆಲ್ಲಿರುವೆನೆಂದು ಅವನಿಗೇ ಗೊತ್ತಿರಲಿಲ್ಲ. ಮರುದಿನ ಬೆಳಗ್ಗೆ ಆ ದ್ವೀಪದಲ್ಲಿ ಅತ್ತಿತ್ತ ಸುತ್ತಾ ಡುತ್ತಿದ್ದಾಗ ಅವನಿಗೆ ಒಂದು ಮಣ್ಣು ಜೋಪಡಿ ಸಿಕ್ಕಿತು. ಅದರ ಹತ್ತಿರ ಒಬ್ಬ ಮುದುಕ ನಿಂತಿದ್ದನು. ತಕ್ಷಣವೇ ಇನ್ನಿಬ್ಬರು ಹೊರಕ್ಕೆ ಬಂದರು. ಅವರು ಅವನಿಗೆ ಊಟಕ್ಕಿಕ್ಕಿ, ನೀರಿನಲ್ಲಿ ನೆನೆದಿದ್ದ ಪದಾರ್ಥಗಳನ್ನೆಲ್ಲ ಒಣ ಗಿಸಿ, ಆಮೇಲೆ ದೋಣಿಯನ್ನು ಸರಿಮಾಡುವುದಕ್ಕೆ ಅವನಿಗೆ ಸಹಾಯ ಮಾಡಿದರು. ಇದನ್ನೆಲ್ಲ ಬೆಸ್ತನು ಹೇಳಲು, ಅದನ್ನು ಆಲಿಸುತ್ತಿದ್ದ ಬಿಷಪ್,

'ಅವರು ಯಾವ ರೀತಿ ಇದ್ದಾರೆ?' ಎಂದು ಕೇಳಿದನು.

'ಒಬ್ಬನು ಕುಳ್ಳ, ಬೆನ್ನು ಬಗ್ಗಿದೆ. ಅವನು ಪಾದ್ರಿಗಳು ತೊಡುವ ಕೊಸಾಕ್ ತೊಟ್ಟಿದ್ದಾನೆ. ಅವನು ಬಹಳ ಮುದುಕ, ನೂರು ವರ್ಷ ಕ್ಕಿಂತ ಹೆಚ್ಚು ವಯಸ್ಸಾಗಿದೆಯೆಂದು ಹೇಳಬಹುದು. ಅವನು ಎಷ್ಟು ಮುದುಕನೆಂದರೆ, ಅವನ ಗಡ್ಡದ ಬಿಳುಪು ಹಸುರು ಛಾಯಕ್ಕೆ ತಿರುಗುತ್ತಿದೆ. ಇಷ್ಟಾದರೂ ಯಾವಾಗಲೂ ಅವನು ನಗುನಗುತ್ತಲೇ ಇರುತ್ತಾನೆ; ಅವನ

ಮುಖ ಸ್ವರ್ಗದಿಂದ ಇಳಿದು ಬಂದ ದೇವದೂತನ ಮುಖದ ಹಾಗೆ ಥಳಥಳಿ ಸುತ್ತಿದೆ. ಎರಡನೆಯವನು ಅವನಿಗಿಂತ ಎತ್ತರ, ಅವನೂ ಬಹಳ ಮುದುಕ ನಾಗಿದಾನೆ. ಅವನು ಹರಿದು ಚಿಂದಿಯಾಗಿರುವ, ರೈತರು ತೊಡುವಂಥ ದೊಂದು ಅಂಗಿಯನ್ನು ತೊಟ್ಟಿದಾನೆ. ಅವನ ಗಡ್ಡ ಅಗಲವಾಗಿದೆ, ಹಳದಿ ಮಿಶ್ರವಾದ್ದ ಬೂದಿ ಒಣ್ಣವಾಗಿದೆ. ಅವನು ಬಲಶಾಲಿ. ನಾನು ಸಹಾಯಕ್ಕೆ ಹೋಗುವುದಕ್ಕೆ ಮುಂಚೆಯೇ ನನ್ನ ದೋಣಿಯನ್ನು, ಅದು ಒಂದು ಬಿಂದಿಗೆಯಾಗಿದ್ದರೆ ಹೇಗೋ ಹಾಗೆ, ಅಷ್ಟು ಸುಲಭವಾಗಿ ಮಗುಚಿಹಾಕಿ ಬಿಟ್ಟಿದ್ದನು. ಅವನೂ ದಯಾಶಾಲಿಯಾಗಿದಾನೆ, ಹರ್ಷಚಿತ್ತನಾಗಿದಾನೆ. ಮೂರನೆಯವನು ಎತ್ತರವಾಗಿದಾನೆ, ಅವನ ಗಡ್ಡ ಮಂಜಿನಷ್ಟು ಬೆಳ್ಳಗೆ, ಅವನ ಮೊಳಕಾಲಿಗೆ ಸೋಕುವಷ್ಟು ಉದ್ದವಾಗಿದೆ ಅವನು ಹುಬ್ಬುಗಳನ್ನು ಗಂಟುಹಾಕಿಕೊಂಡು ಸ್ಥಿರ ಪ್ರತಿಜ್ಞೆಯುಳ್ಳವನಂತೆ ಕಾಣುತ್ತಾನೆ. ಒಂದು ಚಾಪೆಯ ಚೂರನ್ನು ಸೊಂಟಕ್ಕೆ ಸುತ್ತಿಕೊಂಡಿದಾನೆ, ಇದನ್ನು ಬಿಟ್ಟರೆ ಅವನ ಮೈಮೇಲೆ ಬೇರೆ ಬಟ್ಟೆಯೇ ಇಲ್ಲ.'

'ಅವರು ನಿನ್ನ ಸಂಗಡ ಮಾತಾಡಿದರೇ?' ಎಂದು ಬಿಷಪ್ ಕೇಳಿದನು

'ಮುಕ್ಕಾಲು ಪಾಲೆಲ್ಲ ಅವರು ಮೌನವಾಗಿಯೇ ಕೆಲಸಮಾಡಿದರು; ತಮ್ಮ ತಮ್ಮಲ್ಲಿ ಮಾತಾಡಿಕೊಂಡದ್ದು ಕೂಡ ಬಹಳ ಸ್ವಲ್ಪ. ಒಬ್ಬ ಒಂದು ಸಲ ಕಡೆಗಣ್ಣಿನಲ್ಲಿ ನೋಡಿದರೆ ಸಾಕು, ಉಳಿದವರು ಅವನ ಮನಸ್ಸಿನಲ್ಲಿದ್ದ ದ್ದನ್ನು ತಿಳಿದುಕೊಳ್ಳುತ್ತಿದ್ದರು 'ನೀವು ಬಹಳ ಕಾಲದಿಂದ ಇಲ್ಲೇ ಇದ್ದೀರಾ?' ಎಂದು ಎಲ್ಲರಿಗಿಂತ ಹೆಚ್ಚು ಎತ್ತರವಾಗಿದ್ದಾತನನ್ನು ಕೇಳಿದೆ. ಅವನು ಹುಬ್ಬು ಗಂಟುಹಾಕಿಕೊಂಡು ಕೋಪ ಬಂದಿರುವವನಂತೆ ಏನೇನೋ ಗೊಣಗಿದನು, ಆದರೆ ಅವರಲ್ಲೆಲ್ಲ ಹಿರಿಯನಾದವನು ಅವನ ಕೈ ಹಿಡಿದು ಕೊಂಡು ಮುಗುಳುನಗೆ ನಕ್ಕನು, ಆಗ ಎತ್ತರವಾದಾತನು ಸುಮ್ಮನಾದನು. ಹಿರಿಯಾತನು "ನಮ್ಮ ಮೇಲೆ ದಯವಿರಲಿ" ಎಂದು ಮಾತ್ರ ಹೇಳಿ, ಮೆಲ್ಲಗೆ ನಕ್ಕನು.'

ಬಿಷಪ್ಪನು ಹೀಗೆ ಹೇಳುತ್ತಿರುವಷ್ಟರಲ್ಲಿ ಹಡಗು ಆ ದ್ವೀಪಕ್ಕೆ ಇನ್ನೂ ಹತ್ತಿರವಾಗಿ ಒಂದಿದ್ದಿತು.

ವರ್ತಕನು, 'ಸ್ವಾಮಿಯವರು ಪರಾಂಬರಿಸಿ ನೋಡಬೇಕು, ಅದು ಈಗ ಚೆನ್ನಾಗಿ ಕಾಣುತ್ತದೆ' ಎಂದು ಹೇಳುತ್ತ ಆ ಕಡೆಗೆ ತನ್ನ ಕೈ ತೋರಿಸಿದನು.

ಬಿಷಪ್ ನೋಡಿದನು. ಈಗ ನಿಜವಾಗಿಯೂ ಕಪ್ಪನೆಯ ಒಂದು ಸಾಲು ಚೆನ್ನಾಗಿ ಕಾಣಿಸಿತು,—ಅದೇ ಆ ದ್ವೀಪ. ಸ್ವಲ್ಪ ಹೊತ್ತು ಆ ಕಡೆಗೇ ನೋಡುತ್ತಿದ್ದು ಆಮೇಲೆ ಹಡಗಿನ ಮುಂದುಗಡೆಯಿಂದ ಎದ್ದು ಹಿಂಭಾಗಕ್ಕೆ ಅಮರದ ಹತ್ತಿರ ಹೋಗಿ ಚುಕ್ಕಾಣಿಯವನನ್ನು 'ಅದು ಯಾವ ದ್ವೀಪ?' ಎಂದು ಕೇಳಿದನು ಅವನು 'ಅದಕ್ಕೆ ಹೆಸರೇ ಇಲ್ಲ. ಈ ಸಮುದ್ರದಲ್ಲಿ ಅಂಥವು ಬಹಳ ಇವೆ ಎಂದನು.

'ತಮ್ಮ ಆತ್ಮಗಳಿಗೆ ಸದ್ಗತಿಯನ್ನು ಸಂಪಾದಿಸುವುದಕ್ಕೋಸ್ಕರ. ಮೂರು ಜನ ಯತಿಗಳು ಅಲ್ಲಿ ವಾಸಮಾಡುತ್ತಾರೆಂದು ಹೇಳುತ್ತಾರಲ್ಲಾ, ಆ ಮಾತು ನಿಜವೇ?'

'ಹಾಗೆ ಹೇಳುತ್ತಾರೆ, ಮಹಾಸ್ವಾಮಿ. ಆದರೆ ಅದು ನಿಜವೋ ಸುಳ್ಳೋ ನನಗೆ ಗೊತ್ತಿಲ್ಲ. ಮೀನು ಹಿಡಿಯುವವರು ತಾವು ಅವರನ್ನು ಕಂಡಿರುವುದಾಗಿ ಹೇಳಿರುತ್ತಾರೆ. ಆದರೆ ಅವರು ಸುಮ್ಮನೆ ಕೂಡಿಸಿ ಕೊಂಡು ಹೇಳುತ್ತಿರಬಹುದು.'

'ಆ ದ್ವೀಪದಲ್ಲಿ ಇಳಿದು ಈ ಜನರನ್ನು ನೋಡಬೇಕೆಂದು ನನಗೆ ಇಷ್ಟವಾಗಿದೆ. ಅಲ್ಲಿಗೆ ಹೋಗುವುದಕ್ಕೇನುಮಾಡಬೇಕು?' ಎಂದು ಬಿಷಪ್ ಕೇಳಿದನು.

'ಹಡಗು ಆ ದ್ವೀಪದ ಹತ್ತಿರ ಹೋಗುವುದಕ್ಕೆ ಸಾಧ್ಯವಿಲ್ಲ. ಆದರೆ, ತಾವು ದೋಣಿಯಲ್ಲಿ ಅಲ್ಲಿಗೆ ಹೋಗಬಹುದು. ತಾವು ನೌಕಾಧಿಪತಿಯ ಸಂಗಡ ಮಾತಾಡುವುದುತ್ತಮ' ಎಂದು ಚುಕ್ಕಾಣಿಯವನು ಹೇಳಿದನು.

ನೌಕಾಧಿಪತಿಗೆ ಹೇಳಿ ಕಳುಹಿಸಿದರು. ಅವನು ಬಂದನು.

'ಈ ಯತಿಗಳನ್ನು ನೋಡಬೇಕೆಂದು ನನಗೆ ಅಪೇಕ್ಷೆಯಿದೆ. ದೋಣಿಯಲ್ಲಿ ನನ್ನನ್ನು ದಡಕ್ಕೆ ಕರೆದುಕೊಂಡು ಹೋಗಿ ಬಿಡುವುದಕ್ಕಾಗುತ್ತದೆಯೇ?' ಎಂದು ಬಿಷಪ್ ಕೇಳಿದನು.

ನೌಕಾಧಿಪತಿಯು ಅವನನ್ನು ಆ ಕೆಲಸದಿಂದ ಹಿಂದಿರುಗಿಸಲು ಪ್ರಯತ್ನಪಟ್ಟನು.

'ಅದಕ್ಕೇನು, ಧಾರಾಳವಾಗಿ ಹಾಗೆ ಮಾಡಬಹುದು. ಆದರೆ ಬಹಳ ಕಾಲ ಕಳೆಯಬೇಕಾಗುತ್ತದೆ. ಮಹಾಸ್ವಾಮಿಯವರಿಗೆ ನಾನು ಅರಿಕೆಮಾಡಿಕೊಳ್ಳಬಹುದಾದರೆ, ಆ ಮುದುಕರಿಗಾಗಿ ತಾವು ಅಷ್ಟು ಶ್ರಮ ತೆಗೆದುಕೊಳ್ಳುವ ಅಗತ್ಯ ಕಾಣುವುದಿಲ್ಲ ; ತಾವು ತೊಂದರೆ ತೆಗೆದುಕೊಳ್ಳಲು ಅರ್ಹರಲ್ಲ ಆ ಮುದುಕರು. ಅವರು ಮುದಿ ಬೆಪ್ಪುಗಳಂತೆ, ಏನನ್ನೂ ತಿಳಿದುಕೊಳ್ಳಲಾರರಂತೆ, ಒಂದು ಮಾತನ್ನೂ ಆಡುವುದಿಲ್ಲವಂತೆ, ಸಮುದ್ರದಲ್ಲಿರುವ ಮೀನುಗಳ ಹಾಗೆ ಸುಮ್ಮನೆ ಇರುತ್ತಾರಂತೆ. ಹೀಗೆಂದು ನಾನು ಕೇಳಿದ್ದೇನೆ' ಎಂದನು.

'ಅವರನ್ನು ನೋಡಬೇಕೆಂದು ನನಗೆ ಇಷ್ಟ. ನಿನ್ನ ಶ್ರಮಕ್ಕೂ ಕಾಲನಷ್ಟಕ್ಕೂ ಸರಿತೂಗುವಂತೆ, ನಿನಗೆ ಹಣ ಕೊಡುತ್ತೇನೆ. ದಯವಿಟ್ಟು ನನಗೆ ದೋಣಿಯನ್ನು ಕೊಡಿಸು' ಎಂದು ಬಿಷಪ್ ಕೇಳಿದನು.

ಇಲ್ಲವೆನ್ನುವುದಕ್ಕೆ ಯತ್ನವಿಲ್ಲ ; ಆದ್ದರಿಂದ ನೌಕಾಧಿಪತಿ ಅದಕ್ಕನುಸಾರವಾಗಿ ಅಪ್ಪಣೆಮಾಡಿದನು. ನಾವಿಕರು ಗಾಳಿಯ ಪಟಗಳನ್ನು ಆಗ ಬೀಸುತ್ತಿದ್ದ ಗಾಳಿಗೆ ಸರಿಹೊಂದುವಂತೆ ಎತ್ತಿ ಕಟ್ಟಿದರು ; ಚುಕ್ಕಾಣಿಯವರು ಹಡಗನ್ನು ಆ ದ್ವೀಪದ ಕಡೆಗೆ ನಡೆಸಿದರು. ಮೇಲು ಭಾವಣೆಯ (ಡೆಕ್ಕಿನ) ಅಂಚಿನಲ್ಲಿ ಬಿಷಪ್ಪಿಗಾಗಿ ಒಂದು ಕುರ್ಚಿಯನ್ನು ತಂದಿಟ್ಟರು. ಅವನು ಅಲ್ಲಿ ಕುಳಿತುಕೊಂಡು ಮುಂದುಗಡೆಗೆ ನೋಡುತ್ತಿದ್ದನು ಪ್ರಯಾಣಿಕರೆಲ್ಲರೂ ಮುಂದುಗಡೆ ಒಂದು ಗುಂಪು ಸೇರಿ ಆ ದ್ವೀಪವನ್ನೇ ಎವೆಯಿಕ್ಕದೆ ನೋಡುತ್ತಿದ್ದರು. ಅವರಲ್ಲಿ ದೃಷ್ಟಿ ಚುರುಕಾಗಿದ್ದವರಿಗೆ ಸ್ವಲ್ಪ

ಹೊತ್ತಿನಲ್ಲಿಯೇ ಆ ದ್ವೀಪದಲ್ಲಿದ್ದ ಬಂಡೆಗಳು ಕಾಣಿಸಿದವು; ಆಮೇಲೆ ಒಂದು ಮಣ್ಣು ಗುಡಿಸಲು ಕಂಡಿತು. ಕಡೆಗೆ ಒಬ್ಬನು ಆ ಯತಿಗಳನ್ನೇ ಕಂಡುಬಿಟ್ಟನು. ನೌಕಾಧಿಪತಿಯು ಒಂದು ದುರ್ಬೀನನ್ನು ತಂದು ಅದರಲ್ಲಿ ನೋಡಿ ಆ ಬಳಿಕ ಅದನ್ನು ಬಿಷಪ್ಪಿನ ಕೈಗೆ ಕೊಟ್ಟನು.

'ಅದು ನಿಜವೇ ಆಯಿತು! ಸಮುದ್ರದ ಕರೆಯಲ್ಲಿ ಮೂರು ಜನ ನಿಂತುಕೊಂಡಿದಾರೆ. ಅಲ್ಲಿ, ಆ ದೊಡ್ಡ ಬಂಡೆಗೆ ಸ್ವಲ್ಪ ಬಲಗಡೆಗೆ'

ಬಿಷಪ್ ದುರ್ಬೀನನ್ನು ಕೈಗೆ ತೆಗೆದುಕೊಂಡು ತನ್ನ ಕಣ್ಣಿಗೆ ಹೊಂದುವಂತೆ ಅದರ ಅಳತೆಯನ್ನು ಸರಿಮಾಡಿಕೊಂಡು ನೋಡಿ ಆ ಮೂರು ಜನರನ್ನೂ ಕಂಡನು; ಒಬ್ಬನು ಎತ್ತರವಾದವನು, ಒಬ್ಬನು ಅವನಿಗಿಂತ ಕುಳ್ಳು, ಮತ್ತೊಬ್ಬ ಬಹಳ ಎತ್ತರವಾಗಿ ಬಗ್ಗಿದ್ದನು: ಈ ಮೂವರೂ ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಸಮುದ್ರದ ಕರೆಯಲ್ಲಿ ನಿಂತಿದ್ದರು.

ನೌಕಾಧಿಪತಿ ಬಿಷಪ್‌ನ ಕಡೆಗೆ ತಿರುಗಿದನು.

'ಮಹಾಸ್ವಾಮಿ, ಹಡಗು ಇನ್ನು ಮುಂದೆ ಹೋಗುವುದಕ್ಕೆ ಸಾಧ್ಯವಿಲ್ಲ. ತಾವು ದಡಕ್ಕೆ ಹೋಗಬೇಕಾದರೆ, ದೋಣಿಯಲ್ಲಿ ಹೋಗಬೇಕೆಂದು ಕೇಳಿಕೊಳ್ಳುತ್ತೇನೆ. ನಾವು ಇಲ್ಲಿ ಲಂಗರುಹಾಕಿ ನಿಲ್ಲಬೇಕು' ಎಂದನು.

ಕೂಡಲೆ ತಂತಿಯ ಹೊರಜೆಯನ್ನು ಎತ್ತಿ ನೀರಿಗೆ ಇಳಿಯಬಿಟ್ಟು ಲಂಗರು ಹಾಕಿ, ಪಟಗಳನ್ನೆಲ್ಲ ಮುದುರಿ ಕಟ್ಟಿದರು. ಲಂಗರು ಹಾಕಿದಾಗ ಹಡಗು ಕುಲುಕಿದಂತಾಗಿ ಸ್ವಲ್ಪ ಅಲ್ಲಾಡಿತು. ಆಮೇಲೆ ಒಂದು ದೋಣಿಯನ್ನು ಕೆಳಕ್ಕಿಳಿಸಿದರು. ಹುಟ್ಟುಹಾಕುವವರು ಅದರೊಳಕ್ಕೆ ಧುಮುಕಿದರು, ಬಿಷಪ್ ಏಣಿಯ ಮೆಟ್ಟಲಿಳಿದು ದೋಣಿಯಲ್ಲಿ ಕುಳಿತುಕೊಂಡನು. ದೋಣಿ ನಡೆಸುವವರು ಹುಟ್ಟುಗಳನ್ನು ಎಳೆಯ ತೊಡಗಿದರು, ದೋಣಿ ಆ ದ್ವೀಪದ ಕಡೆಗೆ ಬೇಗ ಬೇಗನೆ ಸಾಗಿಹೋಯಿತು. ದಡಕ್ಕೆ ಕಲ್ಲೆಸೆಯುವಷ್ಟು ಹತ್ತಿರ ಹೋದಾಗ ಮೂವರು ಮುದುಕರು ಕಾಣಿಸಿದರು. ಒಬ್ಬನು ಎತ್ತರವಾದವನು ಸೊಂಟಕ್ಕೆ ಒಂದು ಚಾಪೆಯ ಹರಕನ್ನು ಮಾತ್ರ ಸುತ್ತಿಕೊಂಡಿದ್ದನು

ಇನ್ನೊಬ್ಬನು ಅವನಿಗಿಂತ ಕುಳ್ಳು, ರೈತರು ತೊಟ್ಟುಕೊಳ್ಳುವಂಥ ಚಿಂದಿಚಿಂದಿಯಾದ ಒಂದು ಅಂಗಿಯನ್ನು ತೊಟ್ಟಿದ್ದನು. ಮತ್ತೊಬ್ಬ ಬಹಳ ವಯಸ್ಸಾಗಿ ಒಗ್ಗಿದ್ದ ಹಳೆಯ ಮುದುಕ, ಹಳೆಯದೊಂದು ನಿಲುವಂಗಿಯನ್ನು ತೊಟ್ಟಿದ್ದನು. ಮೂರು ಜನರೂ ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ನಿಂತಿದ್ದರು.

ಹುಟ್ಟುಹಾಕುತ್ತಿದ್ದವರು ದಡಕ್ಕೆ ಹೋಗಿ, ದೋಣಿಯ ಕೊಂಡಿಯನ್ನು ಭದ್ರವಾಗಿ ಹಿಡಿದು ನಿಂತರು, ಬಿಷಪ್ ದೋಣಿಯನ್ನಿಳಿದು ದಡಕ್ಕೆ ಬಂದನು.

ಮುದುಕರು ಅವನಿಗೆ ಬಗ್ಗಿ ನಮಸ್ಕಾರ ಮಾಡಿದರು. ಬಿಷಪ್ ಆಶೀರ್ವಾದಮಾಡಿದನು. ಆಶೀರ್ವಾದವನ್ನು ಮಾಡಿದಾಗ ಅವರು ಇನ್ನೂ ಕೆಳಕ್ಕೆ ಬಗ್ಗಿದರು. ಆಮೇಲೆ ಬಿಷಪ್ ಅವರ ಸಂಗಡ ಮಾತಾಡಲು ಪ್ರಾರಂಭಿಸಿದನು.

'ಅಯ್ಯಾ, ಭಗವದ್ಭಕ್ತರೇ, ನಿಮ್ಮ ಆತ್ಮೋದ್ಧಾರಕ್ಕಾಗಿಯೂ, ನಿಮ್ಮ ಸಂಗಡಿಗರಾದ ಸಮಸ್ತ ಜನಗಳ ಕ್ಷೇಮಕ್ಕಾಗಿಯೂ ಕ್ರಿಸ್ತಸ್ವಾಮಿಯನ್ನು ಪ್ರಾರ್ಥಿಸುತ್ತ ನೀವು ಇಲ್ಲಿ ವಾಸಮಾಡುತ್ತಿರುವಿರೆಂದು ನಾನು ಕೇಳಿದ್ದೇನೆ. ಕ್ರಿಸ್ತ ಸೇವಕರಲ್ಲಿ ಅಲ್ಪನಾದ ನಾನು, ಭಗವಂತನ ಕೃಪೆಯಿಂದ, ಅವನ ಭಕ್ತರ ಗುಂಪಿನ ಯೋಗಕ್ಷೇಮವನ್ನು ನೋಡಿಕೊಳ್ಳುತ್ತ ಅವರಿಗೆ ಉಪದೇಶಿಸುತ್ತಿರಲು ನಿಯಮಿತನಾಗಿದೇನೆ. ಭಗವತ್ಸೇವಕರೇ, ನಿಮ್ಮನ್ನೂ ನೋಡಿ ನಿಮಗೂ ನನ್ನ ಕೈಲಾದಮಟ್ಟಿಗೆ ಉಪದೇಶ ಮಾಡಬೇಕೆಂದು ಬಂದಿದೇನೆ' ಎಂದನು.

ಮುದುಕರು ನಸುನಗುತ್ತ ಒಬ್ಬರನ್ನೊಬ್ಬರು ನೋಡಿದರು, ಆದರೆ ಮೌನವಾಗಿ ನಿಂತರು.

'ನಿಮ್ಮ ಆತ್ಮೋದ್ಧಾರಕ್ಕಾಗಿ ನೀವು ಏನು ಮಾಡುತ್ತಿದ್ದೀರಿ? ಈ ದ್ವೀಪದಲ್ಲಿ ದೇವರನ್ನು ಹೇಗೆ ಸೇವಿಸುತ್ತಿದ್ದೀರಿ? ನನಗೆ ಹೇಳಿ' ಎಂದು ಬಿಷಪ್ ಕೇಳಿದನು.

ಎರಡನೆಯ ಯತಿ ನಿಟ್ಟುಸಿರುಬಿಟ್ಟು ಎಲ್ಲರಿಗಿಂತಲೂ ಹಿರಿಯನಾದ ಹಳೆಯ ಮುದುಕನ ಮುಖವನ್ನು ನೋಡಿದನು. ಅವನು ನಸುನಕ್ಕು,

' ದೇವರನ್ನು ಸೇವಿಸುವುದು ಹೇಗೋ ನಮಗೆ ತಿಳಿಯದು. ಅಯ್ಯಾ ಭಗವತ್ಸೇವಕನೇ, ಇಲ್ಲಿ ನಾವು ನಮ್ಮ ಯೋಗಕ್ಷೇಮವನ್ನು ಮಾತ್ರ ನೋಡಿಕೊಂಡು ಹೊಟ್ಟೆಹೊರೆದುಕೊಳ್ಳುತ್ತಿದೇವೆ ' ಎಂದನು.

'ಆದರೆ ನೀವು ಹೇಗೆ ಪ್ರಾರ್ಥನೆಮಾಡುತ್ತೀರಿ?' ಎಂದು ಬಿಷಪ್ ಕೇಳಿದನು.

' ನಾವು ಪ್ರಾರ್ಥಿಸುವುದು ಈ ರೀತಿ ನೀವು ಮೂವರು, ನಾವು ಮೂವರು, ನಮ್ಮ ಮೇಲೆ ಕರುಣವಿರಲಿ ' ಎಂದು ಯತಿ ಉತ್ತರ ಕೊಟ್ಟನು.

ಮುದುಕನು ಹೀಗೆ ಹೇಳಿದಾಗ ಆ ಮೂವರೂ ತಮ್ಮ ದೃಷ್ಟಿಯನ್ನು ಆಕಾಶದ ಕಡೆಗೆ ತಿರುಗಿಸಿ, ಎಲ್ಲರೂ ಒಟ್ಟಿಗೆ

' ನೀವು ಮೂವರು, ನಾವು ಮೂವರು, ನಮ್ಮ ಮೇಲೆ ಕರುಣವಿರಲಿ!' ಎಂದರು.

ಬಿಷಪ್ ನಸುನಕ್ಕನು.

' ಪವಿತ್ರ ತ್ರಿಯೈಕ್ಯದ ವಿಷಯದಲ್ಲಿ ನೀವು ಏನೋ ಸ್ವಲ್ಪ ಕೇಳಿರುವಂತಿದೆ ಆದರೆ ನೀವು ಪ್ರಾರ್ಥಿಸುವುದು ಸರಿಯಾಗಿಲ್ಲ. ಭಗವದ್ಭಕ್ತರೇ, ನಿಮ್ಮಲ್ಲಿ ನನಗೆ ವಾತ್ಸಲ್ಯವುಂಟಾಗಿದೆ ಆ ಸ್ವಾಮಿಯನ್ನು ತೃಪ್ತಿಪಡಿಸಬೇಕೆಂದು ನಿಮಗೆ ಆಸೆಯಿರುವುದಾದರೂ ಅವನನ್ನು ಸೇವಿಸುವ ರೀತಿ ನಿಮಗೆ ತಿಳಿಯದು ಪ್ರಾರ್ಥಿಸುವ ರೀತಿ ಅದಲ್ಲ, ಇಲ್ಲಿ ಕೇಳಿ, ನಾನು ಹೇಳಿಕೊಡುತ್ತೇನೆ. ನಾನು ನಿಮಗೆ ಹೇಳಿಕೊಡುವುದು ನಾನಾಗಿಯೇ ಕಲ್ಪಿಸಿಕೊಂಡ ಕ್ರಮವಲ್ಲ. ಭಗವಂತನೇ ಎಲ್ಲ ಜನರೂ ತನಗೆ ಹೇಗೆ ಪ್ರಾರ್ಥನೆಮಾಡಬೇಕೆಂಬುದನ್ನು ಪವಿತ್ರ ಗ್ರಂಥಗಳಲ್ಲಿ ತಾನೇ ಅಪ್ಪಣೆ ಮಾಡಿರುವನು. ಆ ಕ್ರಮವನ್ನೇ ನಿಮಗೆ ಹೇಳಿಕೊಡುತ್ತೇನೆ.'

ಹೀಗೆಂದು ದೇವರು ಮನುಷ್ಯರಿಗೆ ಪ್ರತ್ಯಕ್ಷನಾಗಿ ಬಂದು ತನ್ನ ನಿಜಸ್ವರೂಪವನ್ನು ಹೇಗೆ ತೋರಿಸಿಕೊಂಡನೆಂಬ ವಿಚಾರ, ತಂದೆ, ಮಗ,

ಪವಿತ್ರಾತ್ಮ ಎಂಬ ದೇವರ ಮೂರು ರೂಪಗಳ ವಿಚಾರ—ಇವನ್ನೆಲ್ಲ ಆ ಯತಿಗಳಿಗೆ ವಿವರಿಸಿ ಹೇಳಿದನು.

'ಮಾನವರನ್ನು ಉದ್ಧರಿಸುವುದಕ್ಕಾಗಿ ಪುತ್ರರೂಪಿಯಾದ ಭಗವಂತನು ಈ ಭೂಮಿಗೆ ಇಳಿದು ಬಂದನು ನಾವೆಲ್ಲರೂ ಹೇಗೆ ಪ್ರಾರ್ಥಿಸಬೇಕೆಂಬುದನ್ನು ಅವನೇ ಹೇಳಿಕೊಟ್ಟಿದಾನೆ ಇದೇ ಅವನು ಹೇಳಿಕೊಟ್ಟಿರುವದು. ನಾನು ಕೇಳುವುದನ್ನು ಆಲಿಸುತ್ತಿದ್ದು ನಾನು ಹೇಳಿ ಮುಗಿಸಿದ ಮೇಲೆ ನೀವೂ ಹಾಗೆಯೇ ಹೇಳಿ. "ನಮ್ಮ ತಂದೆಯೇ" '

ಬಿಷಪ್ ಹೇಳಿದ ಬಳಿಕ ಮೊದಲನೆಯ ಮುದುಕನು "ನಮ್ಮ ತಂದೆಯೇ" ಎಂದನು, ಎರಡನೆಯವನು "ನಮ್ಮ ತಂದೆಯೇ" ಎಂದನು; ಮೂರನೆಯವನೂ "ನಮ್ಮ ತಂದೆಯೇ" ಎಂದನು.

ಬಿಷಪ್ ಮುಂದುವರಿಸುತ್ತ "ಸ್ವರ್ಗದಲ್ಲಿರುವವನೇ" ಎಂದು ಹೇಳಿಕೊಟ್ಟನು.

ಮೊದಲನೆಯ ಯತಿ "ಸ್ವರ್ಗದಲ್ಲಿರುವವನೇ" ಎಂದು ಹೇಳಿಕೊಟ್ಟಂತೆಯೇ ಹೇಳಿದನು, ಎರಡನೆಯವನು ಶಬ್ದಗಳನ್ನು ತಪ್ಪುತಪ್ಪಾಗಿ ಉಚ್ಚರಿಸಿದನು, ಎತ್ತರವಾಗಿದ್ದವನಿಗೆ ಅದನ್ನು ಸರಿಯಾಗಿ ಹೇಳುವುದಕ್ಕಾಗಲೇ ಇಲ್ಲ. ಕೂದಲು ದಟ್ಟವಾಗಿ ಬೆಳೆದು ಅವನ ಬಾಯನ್ನು ಮುಚ್ಚಿಬಿಟ್ಟಿದ್ದಿತು. ಅವನು ಸ್ಪಷ್ಟವಾಗಿ ಮಾತಾಡುವುದಕ್ಕೆ ಆಗುತ್ತಿರಲಿಲ್ಲ. ಹಲ್ಲೆಲ್ಲ ಬಿದ್ದು ಹೋಗಿದ್ದ ಎಲ್ಲರಿಗಿಂತಲೂ ವಯಸ್ಸಾಗಿದ್ದ ಆ ಹಿರಿಯ ಯತಿಯೂ ಮಾತುಗಳನ್ನು ಅಸ್ಪಷ್ಟವಾಗಿ ಉಚ್ಚರಿಸಿದನು.

ಬಿಷಪ್ ಮತ್ತೆ ಆ ಮಾತುಗಳನ್ನು ಹೇಳಿಕೊಟ್ಟನು; ಮುದುಕರು ಮತ್ತೆ ಅದರಂತೆ ಹೇಳಿದರು. ಬಿಷಪ್ ಒಂದು ಕಲ್ಲಿನ ಮೇಲೆ ಕುಳಿತುಕೊಂಡನು; ಮುದುಕರು ನಿಂತುಕೊಂಡು ಅವನ ಬಾಯನ್ನೇ ನೋಡುತ್ತಿದ್ದು ಅವನು ಹೇಳಿ ಮುಗಿಸಿದ ಬಳಿಕ ತಾವೂ ಹಾಗೆಯೇ ಹೇಳುತ್ತಿದ್ದರು. ಬಿಷಪ್ ಒಂದೊಂದು ಶಬ್ದವನ್ನೂ ಇಪ್ಪತ್ತು, ಮೂವತ್ತು, ನೂರು

ಸಲ ಮತ್ತೆ ಮತ್ತೆ ಹೇಳಿಕೊಟ್ಟನು, ಮುದುಕರು ಅವನು ಹೇಳಿಕೊಟ್ಟ ಹಾಗೆಯೇ ಹೇಳುತ್ತಿದ್ದರು. ಪ್ರತಿಸಲವೂ ಅವರು ತಪ್ಪುತ್ತಿದ್ದರು, ಬಿಷಪ್ ತಿದ್ದಿ ತಿದ್ದಿ ಮತ್ತೆ ಮತ್ತೆ ಹೇಳಿಸುತ್ತಿದ್ದನು. ಹೀಗೆ ಹಗಲೆಲ್ಲ ಬಿಷಪ್ ಅವರಿಗೆ ಪ್ರಾರ್ಥನೆಯನ್ನು ಹೇಳಿಕೊಡುತ್ತಿದ್ದನು.

'ಲಾರ್ಡ್ಸ್ ಪ್ರೇಯರ್' ಎಂಬ ಭಗವತ್ಪ್ರಾರ್ಥನೆಯನ್ನು ಪೂರ್ತಿಯಾಗಿ ಅವರಿಗೆ ಕಲಿಸುವವರೆಗೂ ಬಿಷಪ್ ಸುಮ್ಮನಾಗಲಿಲ್ಲ. ತಾನು ಹೇಳಿಕೊಟ್ಟಮೇಲೆ ಅದರಂತೆಯೇ ಹೇಳುವುದಕ್ಕೂ, ತಾನು ಹೇಳಿಕೊಡದಿದ್ದರೂ ಪ್ರಾರ್ಥನೆಯನ್ನು ಮೊದಲಿಸಿಂದ ಕೊನೆಯವರೆಗೂ ತಾವು ತಾವೇ ಹೇಳಿಕೊಳ್ಳುವುದಕ್ಕೂ ಅವರಿಗೆ ಬರುವವರೆಗೂ ಮತ್ತೆ ಮತ್ತೆ ಹೇಳಿಕೊಡುತ್ತಲೇ ಇದ್ದನು ಅದನ್ನು ಎಲ್ಲರಿಗಿಂತ ಮುಂಚೆ ಕಲಿತುಕೊಂಡು ತಾನೊಬ್ಬನೇ ಮೊದಲಿನಿಂದ ಕೊನೆಯವರೆಗೂ ಹೇಳಿದವನು ನಡುಕಲವನು. ಮತ್ತೆ ಮತ್ತೆ ಅದನ್ನೇ ಆವೃತ್ತಿಮಾಡುವಂತೆ ಬಿಷಪ್ ಅವನಿಗೆ ಹೇಳಿದನು ಹೀಗೆ ಮಾಡುತ್ತಿರಲಾಗಿ ಕಡೆಗೆ ಉಳಿದವರೂ ಕಲಿತುಕೊಂಡರು.

ಕತ್ತಲಾಗುತ್ತ ಬಂದಿತು, ಚಂದ್ರಮಂಡಲವು ಮೇಲಕ್ಕೆ ಬರುತ್ತಿದ್ದಿತು. ಆಗ ಬಿಷಪ್ ಎದ್ದು ಹಡಗಿಗೆ ಹಿಂದಿರುವುದಕ್ಕೆಂದು ಹೊರಟನು. ಅವನನ್ನು ಕಳುಹಿಸುವಾಗ ಆ ಮುದುಕರು ಅವನೆದುರಿಗೆ ನೆಲದವರೆಗೂ ಬಗ್ಗಿ ನಮಸ್ಕಾರಮಾಡಿದರು. ಬಿಷಪ್ ಅವರನ್ನು ಕೈಹಿಡಿದು ಮೇಲಕ್ಕೆ ಎಬ್ಬಿಸಿ ಪ್ರತಿಯೊಬ್ಬರಿಗೂ ಮುತ್ತುಕೊಟ್ಟನು. ತಾನು ಕಲಿಸಿಕೊಟ್ಟಿದ್ದಂತೆಯೇ ಪ್ರಾರ್ಥನೆಮಾಡಬೇಕೆಂದು ಹೇಳಿದನು. ಆಮೇಲೆ ದೋಣಿಯನ್ನು ಹತ್ತಿ ಹಡಗಿಗೆ ಹಿಂದಿರುಗಿದನು.

ಅವನು ದೋಣಿಯಲ್ಲಿ ಕುಳಿತುಕೊಂಡಾಗಲೂ ದೋಣಿಯನ್ನು ಹಡಗಿನ ಕಡೆಗೆ ನಡೆಸುತ್ತಿದ್ದಾಗಲೂ ಆ ಯತಿಗಳು ಆ ಭಗವತ್ಪ್ರಾರ್ಥನೆಯನ್ನು ಗಟ್ಟಿಯಾಗಿ ಹೇಳಿಕೊಳ್ಳುತ್ತಿದ್ದರು, ಆ ಮೂರು ಜನಗಳ ದನಿಯೂ ಬಿಷಪ್ಪಿಗೆ ಕೇಳಿಸುತ್ತಿದ್ದಿತು. ದೋಣಿ ಹಡಗಿನ ಹತ್ತಿರಕ್ಕೆ ಹೋದಮೇಲೆ

ಅವರ ದನಿ ಕೇಳುತ್ತಿರಲಿಲ್ಲ ; ಆದರೆ ಸಮುದ್ರದ ಕರೆಯಲ್ಲಿ ಅವರು ನಿಂತಿದ್ದದ್ದು ಬೆಳದಿಂಗಳಿನಲ್ಲಿ ಚೆನ್ನಾಗಿ ಕಾಣಿಸುತ್ತಿದ್ದಿತು. ಬಿಷಪ್ ಅವರ ಬಳಿಯಿಂದ ಹೊರಟಾಗ ಹೇಗೆ ನಿಂತಿದ್ದರೋ ಈಗಲೂ ಹಾಗೆಯೇ ನಿಂತಿದ್ದರು ; ಎಲ್ಲರಿಗಿಂತ ಕುಳ್ಳಾದವನು ಮಧ್ಯದಲ್ಲಿಯೂ ಎಲ್ಲರಿಗಿಂತ ಎತ್ತರವಾದವನು ಬಲಗಡೆಯಲ್ಲಿಯೂ ನಡುಕಲವನು ಎಡಗಡೆಯಲ್ಲಿಯೂ ನಿಂತಿದ್ದರು. ಬಿಷಪ್ ಒಂದು ಹಡಗನ್ನು ಹತ್ತಿದ ಕೂಡಲೆ ಲಂಗರನ್ನು ಮೇಲಕ್ಕೆ ಎತ್ತಿಕೊಂಡು, ಗಾಳಿಯ ಪಟಗಳನ್ನು ಬಿಚ್ಚಿದರು. ಪಟಗಳಲ್ಲಿ ಗಾಳಿ ತುಂಬಿಕೊಂಡಿತು, ಹಡಗು ಮುಂದಕ್ಕೆ ಹೊರಟಿತು. ಬಿಷಪ್ ತಾವು ಬಿಟ್ಟುಬಂದ ದ್ವೀಪವನ್ನೇ ನೋಡುತ್ತ ಹಡಗಿನ ಹಿಂಭಾಗದಲ್ಲಿ ಕುಳಿತುಕೊಂಡನು. ಸ್ವಲ್ಪ ಹೊತ್ತಿನವರೆಗೂ ಯತಿಗಳಿನ್ನೂ ಕಾಣಿಸುತ್ತಲೇ ಇದ್ದರು, ಆದರೆ ಕೂಡಲೆ ಅವರು ಮರೆಯಾದರು, ದ್ವೀಪವೇನೋ ಇನ್ನೂ ಕಾಣುತ್ತಲೇ ಇದ್ದಿತು. ಕಡೆಗೆ ಆ ದ್ವೀಪವೂ ಮರೆಯಾಗಿ ಬೆಳದಿಂಗಳಿನಲ್ಲಿ ತೆರೆಗಳು ಮಿಂಚುತ್ತಿರುವ ಸಮುದ್ರವೊಂದೇ ಕಾಣಿಸತೊಡಗಿತು.

ಪ್ರಯಾಣಿಕರೆಲ್ಲರೂ ಮಲಗಿ ನಿದ್ದೆ ಮಾಡಿದರು. ಹಡಗಿನ ಛಾವಣಿಯೆಲ್ಲ ನಿಶ್ಶಬ್ದವಾಗಿದ್ದಿತು. ಬಿಷಪ್‌ಗೆ ನಿದ್ದೆ ಬೇಕಾಗಲಿಲ್ಲ, ಹಡಗಿನ ಹಿಂಭಾಗದಲ್ಲಿ ಕಣ್ಣಿಗೆ ಮರೆಯಾದ ಆ ದ್ವೀಪವಿದ್ದ ಕಡೆಯ ಸಮುದ್ರ ಭಾಗವನ್ನೇ ದೃಷ್ಟಿಸಿ ನೋಡುತ್ತ, ಸಾಧುಗಳಾದ ಆ ಮುದುಕರ ವಿಚಾರವನ್ನೇ ಯೋಚಿಸುತ್ತ ಒಂಟಿಯಾಗಿ ಕುಳಿತುಕೊಂಡಿದ್ದನು. ಅವರು ಭಗವತ್ಪ್ರಾರ್ಥನೆಯನ್ನು ಎಷ್ಟು ಸಂತೋಷದಿಂದ ಕಲಿತುಕೊಂಡರೆಂಬುದನ್ನು ಯೋಚಿಸಿಕೊಂಡು, ಅಂಥ ಭಗವದ್ಭಕ್ತರಿಗೆ ಪ್ರಾರ್ಥನೆಯನ್ನು ಹೇಳಿಕೊಟ್ಟು ಸಹಾಯ ಮಾಡಲು ಸಾಧ್ಯವಾಗುವಂತೆ ತನಗೆ ಅವಕಾಶವನ್ನು ಒದಗಿಸಿ ಕೊಟ್ಟದ್ದಕ್ಕಾಗಿ ದೇವರನ್ನು ಬಹುವಾಗಿ ಕೊಂಡಾಡಿದನು.

ಹೀಗೆ, ನಾನಾ ಬಗೆಯಾಗಿ ಯೋಚಿಸುತ್ತಲೂ, ಆ ದ್ವೀಪ ಮರೆಯಾಗಿದ್ದ ಕಡೆಯನ್ನೇ ದೃಷ್ಟಿಸಿ ನೋಡುತ್ತಲೂ ಬಿಷಪ್ ಅಲ್ಲೇ ಕುಳಿ

ತ್ತಿದ್ದನು. ಬೆಳದಿಂಗಳು ತೆರೆಗಳ ಮೇಲೆ ಇಲ್ಲೊಂದು ಸಲ, ಅಲ್ಲೊಂದು ಸಲ ಧಳಧಳನೆ ಹೊಳೆಯುತ್ತ ಅವನ ಕಣ್ಣ ಮುಂದೆ ನಲಿದಾಡುತ್ತಿದ್ದಿತು. ಹಾಗೆಯೇ ನೋಡುತ್ತಿದ್ದಾಗ ಸಮುದ್ರಮಧ್ಯದಲ್ಲಿ ಬೆಳದಿಂಗಳು ಬಿದ್ದು ಪ್ರಕಾಶಿಸುತ್ತಿದ್ದ ಒಂದು ಕಡೆಯಲ್ಲಿ ಬೆಳ್ಳಗೆ ಹೊಳೆಯುತ್ತಿದ್ದ ಏನೋ ಒಂದು ವಸ್ತು ಕಾಣಿಸಿಕೊಂಡಿತು. ಅದು 'ಸೀ ಗಲ್' ಎಂಬ ಸಮುದ್ರ ಪಕ್ಷಿಯಾಗಿರಬಹುದೇ? ಅಥವಾ ಯಾವುದಾದರೊಂದು ಸಣ್ಣ ದೋಣಿಯ ಗಾಳಿಪಟವೊಂದು ಹಾಗೆ ಹೊಳೆಯುತ್ತಿರಬಹುದೇ? ಬಿಷಪ್ ಅತ್ಯಾಶ್ಚರ್ಯ ದಿಂದ ಅದರ ಮೇಲೆ ನೋಟವನ್ನು ನೆಟ್ಟು ಕುಳಿತುಕೊಂಡನು

'ಅದು ನಮ್ಮ ಹಿಂದೆ ಬರುತ್ತಿರುವ ಒಂದು ದೋಣಿಯಿರಬೇಕು. ಆದರೆ ಅದು ಬಹು ವೇಗವಾಗಿ ಬರುತ್ತಿದೆ, ಬೇಗ ನಮ್ಮನ್ನು ಹಿಡಿದು ಬಿಡುವಂತೆ ಕಾಣುತ್ತದೆ ಒಂದು ನಿಮಿಷದ ಹಿಂದೆ ಅದು ದೂರದಲ್ಲಿ, ತುಂಬ ದೂರದಲ್ಲಿ, ಇತ್ತು. ಈಗ ಬಹಳ ಹತ್ತಿರಕ್ಕೆ ಬಂದುಬಿಟ್ಟಿದೆ ಅದು ದೋಣಿಯಾಗಿರಲಾರದು, ಗಾಳಿಪಟವೇ ಕಾಣುವುದಿಲ್ಲ ಏನಾದರೂ ಆಗಿರಲಿ ಅದು ನಮ್ಮನ್ನು ಹಿಂಬಾಲಿಸಿ ಬರುತ್ತಿರುವುದಂತೂ ಖಂಡಿತ, ಬೇಗ ಬೇಗ ಬಂದು ನಮ್ಮನ್ನು ಹಿಡಿದುಬಿಡುವುದು ಖಂಡಿತ.'

ಅದು ಎಂಥದೋ ಅವನಿಗೆ ಬೇರೆ ತಿಳಿಯಲಿಲ್ಲ. ದೋಣಿಯಲ್ಲ, ಹಕ್ಕಿಯಲ್ಲ, ಮೀನೂ ಅಲ್ಲ! ಮನುಷ್ಯನೆಂದು ಹೇಳುವ ಹಾಗೂ ಇಲ್ಲ, ತುಂಬ ದೊಡ್ಡದು. ಅಲ್ಲದೆ ಸಮುದ್ರಮಧ್ಯದಲ್ಲಿ ಅಲ್ಲಿಗೆ ಮನುಷ್ಯರು ಬರುವುದು ಸಾಧ್ಯವಿಲ್ಲ. ಬಿಷಪ್ ಎದ್ದು ನಿಂತು, ಚುಕ್ಕಾಣಿಯವನನ್ನು ಕರೆತು,

'ನೋಡಣ್ಣಾ ಅಲ್ಲಿ, ಅದೇನು? ಅದೇನಪ್ಪಾ ಅದು?' ಎಂದು ಕೇಳಿದನು ಇಷ್ಟು ಹೊತ್ತಿಗೆ ಅದೇನೆಂಬುದು ಅವನಿಗೆ ಸ್ಪಷ್ಟವಾಗಿ ಕಾಣುತ್ತಿದ್ದಿತು—ಆ ಮೂವರು ಯತಿಗಳೂ, ಬೆಳ್ಳಗೆ ಬೆಳಗುತ್ತ, ನರೆತ ಗಡ್ಡಗಳು ಹೊಳೆಯುತ್ತಿರಲು ನೀರಿನ ಮೇಲೆ ಓಡಿ ಬರುತ್ತಿದ್ದರು, ಹಡಗು

ಚಲಿಸದೆ ಒಂದೇ ಕಡೆ ನಿಂತಿದ್ದರೆ ಹೇಗೋ ಹಾಗೆ ಅದರ ಕಡೆಗೆ ವೇಗವಾಗಿ ಓಡುತ್ತ ಹತ್ತಿರ ಹತ್ತಿರಕ್ಕೆ ಬರುತ್ತಿದ್ದರು. ಇದೆಲ್ಲ ಸ್ಪಷ್ಟವಾಗಿ ಕಾಣಿಸಿದರೂ ಬಿಷಪ್ ಚುಕ್ಕಾಣಿಯವನನ್ನು ಅದೇನೆಂದು ನೋಡುವಂತೆ ಹೇಳಿದನು.

ಚುಕ್ಕಾಣಿಯವನು ಎದ್ದು ನೋಡಿದನು. ನೋಡಿ ಭಯದಿಂದ ಚುಕ್ಕಾಣಿಯನ್ನು ಕೈಬಿಟ್ಟು 'ಅಯ್ಯೋ ದೇವರೇ! ಯತಿಗಳು ನೀರಿನ ಮೇಲೆ, ನಮ್ಮ ಹಿಂದೆ ಓಡಿಬರುತ್ತಿದ್ದಾರೆ! ಅದು ನೆಲವಾಗಿದ್ದರೆ ಹೇಗೋ ಹಾಗೆ ಓಡಿ ಓಡಿ ಬರುತ್ತಿದಾರೆ!' ಎಂದು ಕೂಗಿಕೊಂಡನು.

ಅವನ ಕೂಗನ್ನು ಕೇಳಿ, ಪ್ರಯಾಣಿಕರೆಲ್ಲರೂ ಥಿಗ್ಗನೆದ್ದು ಹಾರಿ ಒಂದು ಹಡಗಿನ ಹಿಂಭಾಗದಲ್ಲಿ ಗುಂಪುಕೂಡಿದರು ಯತಿಗಳು ಒಬ್ಬರ ಕೈಯನ್ನೊಬ್ಬರು ಹಿಡಿದುಕೊಂಡು ಬರುವುದು ಅವರಿಗೆ ಕಾಣಿಸಿತು ಆಚೆ ಈಚೆ ಕಡೆಗಳಲ್ಲಿದ್ದವರಿಬ್ಬರೂ ಹಡಗನ್ನು ನಿಲ್ಲಿಸಬೇಕೆಂದು ಸಂಜ್ಞೆಮಾಡು ತ್ತಿದ್ದರು. ಆ ಮೂವರೂ ತಮ್ಮ ಹೆಜ್ಜೆಗಳನ್ನು ಮೇಲಕ್ಕೆತ್ತದೆ ನೀರಿನ ಮೇಲೆ ಮೆತ್ತಗೆ ಜಾರಿಕೊಂಡು ಬರುತ್ತಿದ್ದರು. ಹಡಗನ್ನು ನಿಲ್ಲಿಸುವುದ ರೊಳಗಾಗಿ ಯತಿಗಳು ಹಡಗಿನ ಹತ್ತಿರಕ್ಕೆ ಬಂದುಬಿಟ್ಟರು. ಒಂದು ತಲೆಯನ್ನು ಮೇಲಕ್ಕೆತ್ತಿಕೊಂಡು ಮೂರು ಜನರೂ ಒಟ್ಟಿಗೆ, ಒಂದೇ ದನಿ ಯಿಂದ ಹೇಳತೊಡಗಿದರು

'ಭಗವತ್ಸೇವಕರೇ, ನಿಮ್ಮ ಉಪದೇಶವನ್ನು ಮರೆತುಬಿಟ್ಟೆವು ಆವೃತ್ತಿ ಮಾಡುತ್ತಿದ್ದಷ್ಟು ಹೊತ್ತೂ ಅದು ನಮಗೆ ಜ್ಞಾಪಕವಿದ್ದಿತು ಆದರೆ ಸ್ವಲ್ಪ ಹೊತ್ತು ಅದನ್ನು ಹೇಳಿಕೊಳ್ಳದೆ ಸುಮ್ಮನಾದೆವೋ ಇಲ್ಲವೋ ಒಂದೊಂದು ಶಬ್ದವಾಗಿ ಮರೆಯುತ್ತ ಬಂದಿತು. ಈಗ ಎಲ್ಲ ಚೂರುಚೂರಾಗಿದೆ. ಅದರಲ್ಲಿ ಏನೇನೂ ನಮಗೆ ಜ್ಞಾಪಕವಿಲ್ಲ. ಮತ್ತೆ ಹೇಳಿಕೊಡಿ.'

ಬಿಷಪ್ ಶಿಲುಬೆಯ ರಕ್ಷೆ ಹಾಕಿಕೊಂಡು ಆಮೇಲೆ ಹಡಗಿನ ಅಂಚಿನ ಮೇಲೆ ಬಾಗಿ, ಆ ಯತಿಗಳನ್ನು ಕುರಿತು,

'ಭಗವದ್ಭಕ್ತರೇ, ನಿಮ್ಮ ಪ್ರಾರ್ಥನೆಯೇ ಭಗವಂತನಿಗೆ ತಲಪುತ್ತದೆ. ನಿಮಗೆ ಕಲಿಸಿಕೊಡುವುದಕ್ಕೆ ನಾನು ಶಕ್ತನಲ್ಲ ನನ್ನಂಥ ಪಾಪಿಗಳ ಉದ್ಧಾರಕ್ಕಾಗಿ ಪ್ರಾರ್ಥನೆ ಮಾಡಿರಿ' ಎಂದನು

ಹೀಗೆ ಹೇಳುತ್ತ ಬಿಷಪ್ ಆ ಮುದುಕರಿಗೆ ಬಗ್ಗಿ ನಮಸ್ಕಾರ ಮಾಡಿದನು. ಅವರು ಹಿಂದಿರುಗಿ ಸಮುದ್ರದ ಮೇಲೆ ಹೊರಟುಹೋದರು. ಅವರು ಕಣ್ಮರೆಯಾದ ಜಾಗದಲ್ಲಿ ಬೆಳಗಿನವರೆಗೂ ಒಂದು ಬೆಳಕು ಧಳಧಳನೆ ಹೊಳೆಯುತ್ತಲೇ ಇದ್ದಿತು

---

# ಬರಿಯ ಭೇರಿ



## (ವೋಲ್ಗಾ ಪ್ರಾಂತದಲ್ಲಿ ಬಹು ಕಾಲದಿಂದಲೂ ಪ್ರಚಾರದಲ್ಲಿರುವ ಒಂದು ಕಥೆ.)

ಎಮಿಲ್ಯಾನ್ ಒಬ್ಬ ಕೂಲಿಯವನು. ಅವನು ಒಬ್ಬ ದಣಿಯ ಹತ್ತಿರ ಕೆಲಸಮಾಡುತ್ತಿದ್ದನು. ಒಂದು ದಿನ ಕೆಲಸಕ್ಕೆ ಮೈದಾನದಲ್ಲಿ ಹಾದು ಹೋಗುತ್ತಿದ್ದಾಗ ಅವನ ಎದುರಿಗೆ ನೇರವಾಗಿ ಒಂದು ಕಪ್ಪೆ ದಾರಿಯ ಮೇಲೆ ಕುಪ್ಪಳಿಸಿತು ಎಮಿಲ್ಯಾನ್ ಅದನ್ನು ತುಳಿದುಬಿಡುತ್ತಿದ್ದನು, ಆದರೆ ಹಾಗೆಯೇ ಅದನ್ನು ತಪ್ಪಿಸಿಕೊಂಡನು. ಆಗ ತಟಕ್ಕನೆ ಹಿಂದುಗಡೆಯಿಂದ ಯಾರೋ ತನ್ನನ್ನು ಕರೆಯುತ್ತಿರುವಂತೆ ಕೇಳಿಸಿತು

ಎಮಿಲ್ಯಾನ್ ಸುತ್ತಲೂ ತಿರುಗಿ ನೋಡಲು ಒಬ್ಬ ಸುಂದರಿಯಾದ ಹುಡುಗಿಯನ್ನು ಕಂಡನು ಅವಳು 'ಎಮಿಲ್ಯಾನ್, ನೀನೇಕೆ ಮದುವೆ ಮಾಡಿಕೊಳ್ಳಬಾರದು' ಎಂದು ಕೇಳಿದಳು

ಅವನು 'ಅಮ್ಮ ಹುಡುಗಿ, ನಾನು ಹೇಗೆ ಮದುವೆಮಾಡಿಕೊಳ್ಳಲಿ? ನನಗಿರುವುದೆಲ್ಲ ಮೈಮೇಲಿರುವ ಬಟ್ಟೆಗಳು ಮಾತ್ರ ಇನ್ನೇನೂ ಇಲ್ಲ. ನನ್ನನ್ನು ಮದುವೆಮಾಡಿಕೊಳ್ಳುವುದಕ್ಕೆ ಯಾರೂ ಇಷ್ಟಪಡುವುದಿಲ್ಲ' ಎಂದನು.

'ನನ್ನನ್ನೇ ಮದುವೆಯಾಗು' ಎಂದು ಅವಳು ಹೇಳಿದಳು

ಎಮಿಲ್ಯಾನ್ ಆ ಹುಡುಗಿಯನ್ನು ಮೆಚ್ಚಿದನು 'ನನಗೇನೋ ಇಷ್ಟ. ಆದರೆ ಎಲ್ಲಿ, ಹೇಗೆ ನಾವು ಜೀವನ ಮಾಡುವುದು?' ಎಂದನು.

'ಅದಕ್ಕೇಕೆ ಯೋಚನೆ? ನಿದ್ದೆಯನ್ನು ಕಡಿಮೆಮಾಡಿ ಹೆಚ್ಚಾಗಿ ಕೆಲಸ ಮಾಡಿದರಾಯಿತು, ಎಲ್ಲಿದ್ದರೂ ಅನ್ನಬಟ್ಟೆಗಳನ್ನು ದುಡಿದುಕೊಳ್ಳಬಹುದು' ಎಂದು ಹುಡುಗಿ ಹೇಳಿದಳು.

ಎಮಿಲ್ಯನ್ 'ಒಳ್ಳೆಯದು, ಹಾಗಾದರೆ ಮದುವೆಮಾಡಿಕೊಳ್ಳೋಣ ಆದರೆ ನಾವು ಹೋಗುವುದೆಲ್ಲಿಗೆ?' ಎಂದನು.

'ಪಟ್ಟಣಕ್ಕೆ ಹೋಗೋಣ'

ಆಮೇಲೆ ಎಮಿಲ್ಯನ್ನನೂ ಆ ಹುಡುಗಿಯೂ ಪಟ್ಟಣಕ್ಕೆ ಹೋದರು. ಅವಳು ಪಟ್ಟಣದ ಕಟ್ಟಕಡೆಯ ತುದಿಯಲ್ಲಿದ್ದ ಒಂದು ಸಣ್ಣ ಗುಡಿಸಲಿಗೆ ಅವನನ್ನು ಕರೆದುಕೊಂಡು ಹೋದಳು ಅಲ್ಲಿ ಅವರು ಮದುವೆಮಾಡಿಕೊಂಡು ಸಂಸಾರ ಮಾಡತೊಡಗಿದರು.

ಒಂದು ದಿನ ರಾಜನು ಪಟ್ಟಣದಲ್ಲಿ ಸವಾರಿ ಮಾಡಿಕೊಂಡು ಹೋಗುತ್ತಿರುವಾಗ ಎಮಿಲ್ಯನ್ನನ ಗುಡಿಸಲಿನ ಮುಂದೆ ಹೋದನು ಎಮಿಲ್ಯನ್ನನ ಹಂಡತಿ ದೊರೆಯನ್ನು ನೋಡುವುದಕ್ಕೆಂದು ಹೊರಕ್ಕೆ ಬಂದಳು. ದೊರ ಅವಳನ್ನು ಕಂಡನು, ಕಂಡು ಅವನಿಗೆ ಬಹಳ ಆಶ್ಚರ್ಯವಾಯಿತು.

'ಇಂಥ ಸುಂದರಿ ಎಲ್ಲಿಂದ ಬಂದಳು!' ಎಂದುಕೊಂಡು ರಥವನ್ನು ನಿಲ್ಲಿಸಿ, ಎಮಿಲ್ಯನ್ನನ ಹೆಂಡತಿಯನ್ನು ಕರೆದು 'ನೀನು ಯಾರು?' ಎಂದು ಕೇಳಿದನು.

'ಎಮಿಲ್ಯನ್ ಎಂಬ ರೈತನ ಹೆಂಡತಿ' ಎಂದು ಅವಳು ಹೇಳಿದಳು.

'ಇಷ್ಟು ಸುಂದರಿಯಾಗಿರುವ ನೀನು ಒಬ್ಬ ರೈತನನ್ನೇಕೆ ಮದುವೆ ಮಾಡಿಕೊಂಡೆ? ನೀನೊಬ್ಬ ರಾಣಿಯಾಗಿರಬೇಕು' ಎಂದು ದೊರ ಹೇಳಿದನು ಅವಳು, 'ಇಷ್ಟು ಒಳ್ಳೆಯ ಮಾತಾಡಿದ್ದಕ್ಕೆ ನಿಮಗೆ ವಂದನೆ. ಆದರೆ ನನಗೆ ರೈತಗಂಡನೇ ಸಾಕು' ಎಂದಳು

ದೊರೆ ಸ್ವಲ್ಪ ಹೊತ್ತು ಅವಳ ಹತ್ತಿರ ಮಾತಾಡುತ್ತಿದ್ದು ರಥವನ್ನು ನಡೆಸಿಕೊಂಡು ಮುಂದೆ ಹೋದನು. ಅವನು ಅರಮನೆಗೆ ಹಿಂದಿರುಗಿದನು. ಆದರೆ ಎಮಿಲ್ಯನ್ನನ ಹೆಂಡತಿಯನ್ನು ಮರೆಯುವುದಕ್ಕೆ ಸಾಧ್ಯವಾಗಲಿಲ್ಲ. ರಾತ್ರಿಯೆಲ್ಲ ಅವನಿಗೆ ನಿದ್ದೆ ಹತ್ತಲಿಲ್ಲ, ಅವಳನ್ನು ವಶಪಡಿಸಿಕೊಳ್ಳುವುದು ಹೇಗೆಂಬ ಯೋಚನೆಯಲ್ಲೇ ರಾತ್ರಿಯನ್ನು ಕಳೆದನು. ಅವಳನ್ನು

ವಶಪಡಿಸಿಕೊಳ್ಳಲು ಯಾವ ದಾರಿಯೂ ಅವನಿಗೆ ಹೊಳೆಯಲಿಲ್ಲ. ಆದ್ದರಿಂದ ಅವನು ತನ್ನ ಸೇವಕರನ್ನು ಕರೆದು ಅದಕ್ಕೆ ಒಂದು ದಾರಿಯನ್ನು ಹುಡುಕಬೇಕೆಂದು ಅವರಿಗೆ ಹೇಳಿದನು

ದೊರೆಯ ಸೇವಕರು 'ಎಮಿಲ್ಯನ್ ಅರಮನೆಗೆ ಬಂದು ಕೆಲಸ ಮಾಡಬೇಕೆಂದು ಅಪ್ಪಣೆ ಮಾಡಿ ಇಲ್ಲಿ ಅವನಿಗೆ ಬಹಳ ಕಷ್ಟವಾದ ಕೆಲಸಗಳನ್ನು ಕೊಟ್ಟು, ಅವನು ಕಲಸ ಮಾಡಿ ಮಾಡಿ ಸಾಯುವಂತೆ ಮಾಡುತ್ತೇವೆ. ಅವನ ಹೆಂಡತಿ ವಿಧವೆಯಾಗುತ್ತಾಳೆ, ಆಗ ಅವಳನ್ನು ನೀವೇ ತೆಗೆದುಕೊಂಡು ಬಿಡಬಹುದು' ಎಂದರು

ದೊರೆ ಅವರ ಸಲಹೆಯಂತೆಯೇ ಮಾಡಿದನು. ಎಮಿಲ್ಯನ್ನನು ಕೂಲಿ ಕೆಲಸ ಮಾಡುವುದಕ್ಕೆ ಅರಮನೆಗೆ ಬರಬೇಕೆಂದೂ, ಅವನ ಹೆಂಡತಿಯೂ ಸಂಗಡಲೇ ಬರಬೇಕೆಂದೂ ಅಪ್ಪಣೆಮಾಡಿ ಹೇಳಿ ಕಳುಹಿಸಿದನು

ಪ್ರತೀಹಾರಿಗಳು ಎಮಿಲ್ಯನ್ನನ ಹತ್ತಿರ ಬಂದು ದೊರೆಯ ಅಪ್ಪಣೆಯನ್ನು ತಿಳಿಸಿದರು. ಅವನ ಹೆಂಡತಿ 'ಹೋಗು, ಎಮಿಲ್ಯನ್ ಹಗಲೆಲ್ಲ ಕೆಲಸಮಾಡು ಆದರೆ ರಾತ್ರಿ ಹಿಂದಿರುಗಿ ಮನೆಗೆ ಬಂದುಬಿಡು' ಎಂದಳು.

ಅದರಂತೆಯೇ ಎಮಿಲ್ಯನ್ ಹೊರಟನು. ಅವನು ಅರಮನೆಗೆ ಹೋಗಿ ತಲಪಿದಾಗ ಅರಮನೆಯ ಸರ್ವಾಧಿಕಾರಿಯು ಅವನನ್ನು 'ಹೆಂಡತಿಯನ್ನೂ ಜೊತೆಯಲ್ಲಿ ಕರೆದುಕೊಂಡು ಬರದೆ ಒಂಟಿಯಾಗಿ ಏಕೆ ಬಂದೆ?' ಎಂದು ಕೇಳಿದನು

'ಅವಳನ್ನೇಕೆ ಎಲ್ಲೆಲ್ಲಿಯೂ ಎಳೆದಾಡಲಿ? ಇರುವುದಕ್ಕೆ ಅವಳಿಗೊಂದು ಮನೆಯಿದೆ' ಎಂದು ಎಮಿಲ್ಯನ್ ಉತ್ತರಕೊಟ್ಟನು

ದೊರೆಯ ಅರಮನೆಯಲ್ಲಿ ಎಮಿಲ್ಯನ್ನನಿಗೆ ಎರಡಾಳಿನ ಕೆಲಸವನ್ನು ಕೊಟ್ಟರು. ಮುಗಿಸುವುದಕ್ಕಾಗುವುದಿಲ್ಲವೆಂದೇ ಯೋಚಿಸುತ್ತ ಅವನು ಕೆಲಸಕ್ಕೆ ಕೈಹಾಕಿದನು. ಆದರೆ ಸಂಜೆಯಾದಾಗ ನೋಡುತ್ತಾನೆ ಕೆಲಸವೆಲ್ಲ ಮುಗಿದೇ ಹೋಗಿದ್ದಿತು! ಸರ್ವಾಧಿಕಾರಿ ಕೆಲಸ ಮುಗಿದದ್ದನ್ನು

ಕಂಡು ಮರುದಿನ ಮಾಡುವುದಕ್ಕೆ ಅದರ ನಾಲ್ಕರಷ್ಟು ಕೆಲಸವನ್ನು ಗೊತ್ತುಮಾಡಿದನು.

ಎಮಿಲ್ಯನ್ ಮನೆಗೆ ಹೋದನು. ಮನೆಯನ್ನು ಗುಡಿಸಿ ಎಲ್ಲವನ್ನೂ ಅಚ್ಚುಕಟ್ಟಾಗಿ ಅಣಿಮಾಡಿದ್ದಿತು, ಒಲೆ ಶಾಖವಾಗಿ ಉರಿಯುತ್ತಿದ್ದಿತು, ಅಡಿಗೆಯಾಗಿ ಊಟಕ್ಕೆ ಎಲ್ಲ ಸಿದ್ಧವಾಗಿದ್ದಿತು, ಅವನ ಹೆಂಡತಿ ಮೇಜಿನ ಹತ್ತಿರ ಕಸೂತಿ ಹಾಕುತ್ತ ಅವನು ಮನೆಗೆ ಹಿಂದಿರುಗುವುದನ್ನೇ ನಿರೀಕ್ಷಿಸಿಕೊಂಡು ಕುಳಿತಿದ್ದಳು. ಬಂದವನನ್ನು ಎದುರುಗೊಂಡು ಒಳ್ಳೆಯ ಮಾತಾಡಿ, ಮೇಜದ ಮೇಲೆ ಅಣಿಮಾಡಿ ಊಟಕ್ಕ ಬಡಿಸಿ, ಕುಡಿಯುವುದಕ್ಕ ಕೊಟ್ಟು, ಆಮೇಲೆ ಅವತ್ತಿನ ಕೆಲಸದ ವಿಚಾರವಾಗಿ ಕೇಳ ತೊಡಗಿದಳು.

'ಆ! ಅದೊಂದು ಹಾಳುಕಲಸ, ಅವರು ನನ್ನ ಶಕ್ತಿಗೆ ಮೀರಿದ ಕೆಲಸಗಳನ್ನು ಕೂಡುತ್ತಾರೆ, ಕಲಸ ಮಾಡಿಸಿ ಮಾಡಿಸಿ ಸಾಯಿಸ ಬೇಕಂದಿದಾರೆ' ಎಂದನು.

'ಕೆಲಸದ ವಿಚಾರವಾಗಿ ಸ್ವಲ್ಪವೂ ಪೇಚಾಡಬೇಡ ಎಷ್ಟು ಕೆಲಸ ಮಾಡಿದೆನೆಂದಾಗಲಿ, ಇನ್ನೂ ಎಷ್ಟು ಉಳಿದಿದೆಯೆಂದಾಗಲಿ ತಿಳಿದುಕೊಳ್ಳುವುದಕ್ಕಂದು ಹಿಂದೂ ಮುಂದೂ ಎಲ್ಲೂ ನೋಡಬೇಡ ನಿನ್ನ ಹಾಳತಕ್ಕೆ ನೀನು ಸುಮ್ಮನೆ ಕೆಲಸಮಾಡುತ್ತಿರು, ಎಲ್ಲ ಸರಿಯಾಗುತ್ತದೆ' ಎಂದು ಅವಳು ಹೇಳಿದಳು.

ಆಮೇಲೆ ಎಮಿಲ್ಯನ್ನನು ಮಲಗಿ ನಿದ್ದೆಮಾಡಿದನು. ಮರುದಿನ ಬೆಳಗ್ಗೆ ಮತ್ತೆ ಕಲಸಕ್ಕೆ ಹೋದನು, ಹೋಗಿ ಒಂದು ಸಲವೂ ಅತ್ತಿತ್ತ ನೋಡದೆ ಕೆಲಸಮಾಡಿದನು. ಸಂಜೆಯ ಹೊತ್ತಿಗೆ ನೋಡಿದರೆ ಎಲ್ಲ ಮುಗಿದ್ದಿತು, ಕತ್ತಲೆಗೆ ಮುಂಚೆ ಅವನು ಮನೆಗೆ ಹೋದನು

ಎಮಿಲ್ಯನ್ನನಿಗೆ ಮತ್ತೆ ಮತ್ತೆ ಕೆಲಸವನ್ನು ಹೆಚ್ಚಿಸುತ್ತಲೇ ಬಂದರು. ಆದರೂ ಪ್ರತಿಸಲವೂ ಹೊತ್ತಿಗೆ ಸರಿಯಾಗಿ ಕೆಲಸವನ್ನು ಮಾಡಿ ಮುಗಿಸಿ

ಮಲಗುವುದಕ್ಕೆ ತನ್ನ ಗುಡಿಸಲಿಗೆ ಹಿಂದಿರುಗಿ ಹೋಗುತ್ತಿದ್ದನು. ಒಂದು ವಾರ ಕಳೆಯಿತು. ಒರಟು ಕೆಲಸದಿಂದ ಅವನನ್ನು ದಣಿಸುವುದಕ್ಕೆ ಸಾಧ್ಯವಿಲ್ಲವೆಂದು ದೊರೆಯ ಸೇವಕರಿಗೆ ನಿರ್ಧರವಾಯಿತು ಆದ್ದರಿಂದ ಚಾತುರ್ಯದಿಂದ ಮಾಡಬೇಕಾದ ಕೆಲಸಗಳನ್ನು ಕೊಟ್ಟು ಪರೀಕ್ಷಿಸ ತೊಡಗಿದರು. ಇದರಿಂದಲೂ ಏನೂ ಉಪಯೋಗವಾಗಲಿಲ್ಲ ಮರಗೆಲಸ, ಗಾರೆಕೆಲಸ, ಛಾವಣಿ ಹಾಕುವುದು, ಮುಂತಾಗಿ ಯಾವ ಕೆಲಸವನ್ನು ಕೊಟ್ಟರೂ ಎಮಿಲ್ಯನನು ಅದನ್ನೆಲ್ಲ ಹೊತ್ತಿಗೆ ಸರಿಯಾಗಿ ಮಾಡಿ ಮುಗಿಸಿ ರಾತ್ರಿ ಮನೆಗೆ ಹೆಂಡತಿಯ ಬಳಿಗೆ ಹೋಗಿಬಿಡುತ್ತಿದ್ದನು ಹೀಗೆ ಎರಡನೆಯ ವಾರವೂ ಕಳೆಯಿತು.

ಆಮೇಲೆ ದೊರೆ ಸೇವಕರನ್ನು ಹತ್ತಿರ ಕರಸಿ ‘ ನಾನು ನಿಮಗೆ ಅನ್ನ ಹಾಕುವುದು ವ್ಯರ್ಥ ? ಎರಡು ವಾರ ಕಳೆಯಿತು , ಆದರೂ ನೀವು ಏನನ್ನೂ ಮಾಡಿದಂತೆ ಕಾಣುವುದಿಲ್ಲ ಕಲಸದಿಂದ ಎಮಿಲ್ಯನನ್ನು ದಣಿಸುವೆವೆಂದಿದ್ದರಿ. ಆದರೆ ಪ್ರತಿದಿನವೂ ಸಂಜೆಯ ಹೊತ್ತು ಆನಂದದಿಂದ ಹಾಡುತ್ತಾ ಅವನು ತನ್ನ ಮನೆಗೆ ಹಿಂದಿರುಗಿ ಹೋಗುತ್ತಿರುವುದನ್ನು ನಾನು ಕಿಟಿಕಿಯಿಂದ ನೋಡುತ್ತಿದೇನೆ, ನನ್ನನ್ನೇನು ಮಂಕುಮಾಡುತ್ತಿದೀರೋ ” ಎಂದನು.

ರಾಜಸೇವಕರು ತಮ್ಮಿಂದ ತಪ್ಪಿಲ್ಲವೆಂದು ಹೇಳಿಕೊಳ್ಳಲು ಮೊದಲು ಮಾಡಿದರು. ‘ ಒರಟು ಕೆಲಸಕೊಟ್ಟು ಅವನನ್ನು ಹಣ್ಣುಮಾಡಬೇಕೆಂದು ನಮ್ಮ ಕೈಲಾದದ್ದನ್ನೆಲ್ಲ ಮಾಡಿದೆವು ಆದರೆ ಯಾವುದೂ ಅವನಿಗೆ ಏನಾರಿದಷ್ಟು ಕಷ್ಟವಾಗುತ್ತಿರಲಿಲ್ಲ. ಪರಕೆಯಿಂದ ಗುಡಿಸಿ ಬಿಸಾಡುವನೋ ಎಂಬಂತೆ ಎಲ್ಲ ಕೆಲಸಗಳನ್ನೂ ಬಹು ಸುಲಭವಾಗಿ ಮುಗಿಸಿಬಿಡುತ್ತಿದ್ದನು. ಅವನನ್ನು ದಣಿಸುವುದು ಆಗುವ ಮಾತಲ್ಲ. ಆಗ ಚಾತುರ್ಯದಿಂದ ಮಾಡಬೇಕಾದ ಕೆಲಸಗಳನ್ನು ಕೊಡುತ್ತ ಬಂದೆವು. ಆ ಕೆಲಸಗಳನ್ನು ಮಾಡುವಷ್ಟು ಚಾತುರ್ಯ ಅವನಿಗೆ ಇಲ್ಲವೆಂದು ತಿಳಿದಿದ್ದೆವು ಆದರೆ ಅವನ್ನೂ

ಅವನು ಮಾಡಿಬಿಟ್ಟನು. ಯಾವ ಕೆಲಸವನ್ನೇ ಕೊಡಲಿ, ಎಲ್ಲವನ್ನೂ ಅವನು ಮಾಡಿಬಿಡುತ್ತಾನೆ. ಹೇಗೆ ಮಾಡುತ್ತಾನೋ ಒಬ್ಬರಿಗೂ ಗೊತ್ತಿಲ್ಲ ಅವನಿಗೋ ಅವನ ಹೆಂಡತಿಗೋ ಯಾವುದಾದರೂ ಮಂತ್ರತಂತ್ರ ಗೊತ್ತಿರಬಹುದು, ಅದರಿಂದಲೇ ಅವರಿಗೆ ಸಹಾಯವಾಗುತ್ತಿರಬಹುದು. ಅವನನ್ನು ಕಂಡರೆ ನಮಗೇ ಬಹಳ ಬೇಸರವಾಗಿದೆ, ಅವನು ಮಾಡಲಾರದ ಕೆಲಸವೊಂದು ಸಿಕ್ಕೀತೇ ಎಂದು ಕಾದಿದೇವೆ. ಒಂದೇ ಒಂದು ದಿನದಲ್ಲಿ ಒಂದು ದೇವಸ್ಥಾನವನ್ನು ಕಟ್ಟಿ ಮುಗಿಸುವಂತೆ ಅವನಿಗೆ ನಿಯಮಿಸೋಣವೆಂದುಕೊಂಡಿದೇವೆ. ಎಮಿಲ್ಯನ್ನನ್ನು ಕರಸಿ, ಅರಮನೆಯ ಎದುರಿಗೆ ದೇವಸ್ಥಾನವೊಂದನ್ನು ಒಂದೇ ದಿನದಲ್ಲಿ ಕಟ್ಟಬೇಕೆಂದು ಅಪ್ಪಣೆ ಮಾಡೋಣವಾಗಲಿ. ಅವನು ಆ ಕೆಲಸವನ್ನು ಮಾಡದಿದ್ದರೆ ಅವಿಧೇಯನೆಂದು ಮಹಾಸ್ವಾಮಿಯವರು ಅವನ ತಲೆಯನ್ನು ಕತ್ತರಿಸಿಬಿಡಬಹುದು' ಎಂದರು.

ದೊರೆ ಎಮಿಲ್ಯನ್ನನ್ನು ಕರೆಸಿದನು. 'ಎಮಿಲ್ಯನ್,' ನನ್ನ ಅಪ್ಪಣೆಯನ್ನು ಮನಸ್ಸಿಟ್ಟು ಕೇಳು. ನಮ್ಮ ಅರಮನೆಯ ಎದುರಿನ ಚೌಕದಲ್ಲಿ ಒಂದು ಹೊಸ ದೇವಸ್ಥಾನವನ್ನು ಕಟ್ಟಬೇಕು. ನಾಳೆ ಸಂಜೆಯೊಳಗಾಗಿ ಅದು ಸಿದ್ಧವಾಗಿರಬೇಕು. ಅದನ್ನು ಕಟ್ಟಿ ಮುಗಿಸಿದ್ದರೆ ನಿನಗೆ ಬಹುಮಾನ ಕೊಡುತ್ತೇನೆ. ಕಟ್ಟದಿದ್ದರೆ ನಿನ್ನ ತಲೆ ಹುಯ್ಯುತ್ತೇನೆ' ಎಂದನು.

ದೊರೆಯ ಅಪ್ಪಣೆಯನ್ನು ಕೇಳಿದಾಗ ಎಮಿಲ್ಯನ್ ಮುಖ ತಿರುವಿಕೊಂಡು ಮನೆಗೆ ಹೋದನು. ಅವನು 'ನನ್ನ ಕಡೆಗಾಲ ಹತ್ತಿರ ಬಂತು' ಎಂದು ಯೋಚಿಸಿಕೊಂಡನು. ಹೆಂಡತಿಯ ಹತ್ತಿರ ಬಂದು 'ಎಲ್ಲವನ್ನೂ ಸಿದ್ಧಮಾಡಿಕೊ. ನಾವು ಇಲ್ಲಿಂದ ಓಡಿಹೋಗಬೇಕು. ಇಲ್ಲವಾದರೆ ನನ್ನ ತಪ್ಪಿಲ್ಲದಿದ್ದರೂ ನಾನು ಹಾಳಾಗಬೇಕಾಗುತ್ತದೆ' ಎಂದು ಹೇಳಿದನು.

'ಅದೇಕೆ ಅಷ್ಟು ಹೆದರಿಕೆ ನಿನಗೆ? ಅದೇಕೆ ನಾವು ಓಡಿಹೋಗಬೇಕು?' ಎಂದು ಅವಳು ಕೇಳಿದಳು.

'ಹೆದರದೆ ಇನ್ನೇನು ಮಾಡಲಿ ? ನಾಳೆ, ಒಂದೇ ದಿನದಲ್ಲಿ ಒಂದು ಗುಡಿಯನ್ನು ಕಟ್ಟಿ ಮುಗಿಸಬೇಕೆಂದು ದೊರೆ ನನಗೆ ಅಪ್ಪಣೆ ಮಾಡಿದಾನೆ. ನಾನೇನಾದರೂ ಕಟ್ಟದೆ ತಪ್ಪಿದರೆ ನನ್ನ ತಲೆ ಹುಯ್ಸುತ್ತಾನೆ. ಈಗ ಮಾಡಬೇಕಾಗಿರುವುದು ಒಂದೇ ಕೆಲಸ, ಇನ್ನೂ ತಕ್ಕಷ್ಟು ಕಾಲ ಉಳಿದಿರುವಾಗಲೇ ನಾವು ಎಲ್ಲಿಗಾದರೂ ಓಡಿಹೋಗಬೇಕು.'

ಆದರೆ ಅವನ ಹೆಂಡತಿ ಅದೊಂದನ್ನೂ ಕೇಳಲೇ ಇಲ್ಲ 'ರಾಜನಿಗೆ ಬಹು ಜನ ಸಿಪಾಯಿಗಳಿದಾರೆ. ಎಲ್ಲಿ ಹೋದರೂ ಅವರು ಬಂದು ನಮ್ಮನ್ನು ಹಿಡಿದುಕೊಳ್ಳುತ್ತಾರೆ. ಅವನ ಕೈಗೆ ಸಿಕ್ಕದಂತೆ ತಪ್ಪಿಸಿಕೊಂಡು ಹೋಗುವುದು ಸಾಧ್ಯವಲ್ಲ. ಶಕ್ತಿ ಇರುವವರೆಗೂ ಅವನು ಹೇಳಿದ ಹಾಗೆ ಕೇಳುತ್ತಲೇ ಇರಬೇಕು' ಎಂದಳು.

'ಆ ಕೆಲಸ ನನ್ನ ಶಕ್ತಿಗೆ ಮೀರಿದ್ದಾಗಿರುವಾಗ ನಾನು ಹೇಗೆ ಅವನು ಹೇಳಿದಂತೆ ಕೇಳುವುದು ?'

'ಹೀಗೆ ನೀನು ಧೈರ್ಯಗೆಡಬೇಡ ಈಗ ಉಂಡು ಮಲಗು. ಬೆಳಿಗ್ಗೆ ಹೊತ್ತಿಗೆ ಮುಂಚೆ ಏಳು. ಎಲ್ಲವೂ ಆಗುತ್ತದೆ'

ಅವಳು ಹಾಗೆ ಹೇಳಿದ್ದರಿಂದ ಎಮಿಲ್ಯನ್ ಮಲಗಿ ನಿದ್ದೆ ಮಾಡಿದನು. ಅವನ ಹೆಂಡತಿ ಮರುದಿನ ಬೆಳಿಗ್ಗೆ ಹೊತ್ತಿಗೆ ಮುಂಚೆ ಅವನನ್ನು ಎಬ್ಬಿಸಿದಳು. ಎಬ್ಬಿಸಿ 'ಬೇಗ ಹೋಗಿ ದೇವಸ್ಥಾನದ ಕೆಲಸವನ್ನು ಪೂರ್ತಿಮಾಡು ಇಗೋ ಈ ಮೊಳೆಗಳನ್ನೂ ಕೊಡತಿಯನ್ನೂ ತೆಗೆದುಕೊ. ಒಂದು ದಿನವೆಲ್ಲ ಮಾಡುವಷ್ಟು ಕಲಸ ಇನ್ನೂ ಉಳಿದಿದೆ' ಎಂದಳು.

ಎಮಿಲ್ಯನ್ ಪಟ್ಟಣದೊಳಕ್ಕೆ ಹೋದನು, ಅರಮನೆಯ ಎದುರಿನ ಚೌಕಕ್ಕೆ ತಲಪಿದನು. ಅಲ್ಲಿ ಒಂದು ದೊಡ್ಡ ದೇವಸ್ಥಾನವಿದ್ದಿತು, ಅದರ ಕೆಲಸ ಇನ್ನೂ ಪೂರ್ತಿಯಾಗಿ ಮುಗಿದಿರಲಿಲ್ಲ ಎಮಿಲ್ಯನ್ ಅವಶ್ಯವಾದ ಕೆಲಸಗಳನ್ನು ಮಾಡತೊಡಗಿದನು. ಸಂಜೆಯ ಹೊತ್ತಿಗೆ ಎಲ್ಲ ಮುಗಿಯಿತು.

ದೊರೆ ಎದ್ದ ಮೇಲೆ ಅರಮನೆಯ ಕಿಟಕಿಯಿಂದ ಹೊರಕ್ಕೆ ನೋಡಿದನು. ನೋಡಿದರೆ, ದೇವಸ್ಥಾನವನ್ನೂ ಅಲ್ಲಿ ಮೋಳೆಗಳನ್ನು ಹೊಡೆಯುತ್ತ ಅಲ್ಲಿ ಇಲ್ಲಿ ಓಡಾಡುತ್ತಿದ್ದ ಎಮಿಲ್ಯಾನ್ನನ್ನೂ ಕಂಡನು ದೇವಸ್ಥಾನವನ್ನು ಕಟ್ಟಿದ್ದರಿಂದ ದೊರೆಗೆ ತೃಪ್ತಿಯಾಗಲಿಲ್ಲ, ಅದಕ್ಕೆ ಬದಲಾಗಿ ಎಮಿಲ್ಯಾನ್ನನ್ನು ಕೊಲ್ಲಿಸಿ ಅವನ ಹೆಂಡತಿಯನ್ನು ತೆಗೆದುಕೊಳ್ಳುವುದಕ್ಕೆ ಅವಕಾಶ ಸಿಕ್ಕಲಿಲ್ಲವಲ್ಲಾ ಎಂದು ಬಹಳ ಸಂಕಟವಾಯಿತು. ಮತ್ತೆ ತನ್ನ ಸೇವಕರನ್ನು ಕರೆಸಿದನು. 'ಎಮಿಲ್ಯಾನ್ ಈ ಕೆಲಸವನ್ನೂ ಮಾಡಿಬಿಟ್ಟನು. ಅವನಿಗೆ ಮರಣ ದಂಡನೆಯನ್ನು ವಿಧಿಸುವುದಕ್ಕೆ ಯಾವ ನೆವವೂ ಸಿಕ್ಕಲಿಲ್ಲ. ಈ ಕೆಲಸ ಕೂಡ ಅವನ ಶಕ್ತಿಗೆ ಮೀರಿದಷ್ಟು ಕಷ್ಟವಾಗಲಿಲ್ಲ. ಇದಕ್ಕಿಂತ ಹೆಚ್ಚು ತಂತ್ರವುಳ್ಳ ಉಪಾಯವೊಂದನ್ನು ಹುಡುಕಬೇಕು. ಇಲ್ಲವಾದರೆ ಅವನ ಜೊತೆಯಲ್ಲಿಯೇ ನಿಮ್ಮ ತಲೆಗಳನ್ನೂ ಕಡಿಸಿಬಿಡುತ್ತೇನೆ' ಎಂದು ಹೇಳಿದನು.

ಆಗ ಅವನ ಸೇವಕರು ಅರಮನೆಯ ಸುತ್ತಲೂ ಒಂದು ಹೊಳೆ ಹರಿಯುತ್ತಿರುವಂತೆಯೂ ಅದರಲ್ಲಿ ಹಡಗುಗಳು ಓಡಾಡುತ್ತಿರುವಂತೆಯೂ ಮಾಡಬೇಕೆಂದು ಎಮಿಲ್ಯಾನ್ನನಿಗೆ ಅಪ್ಪಣೆ ಮಾಡಬೇಕೆಂದು ಹೇಳಿಕೊಟ್ಟರು. ದೊರೆ ಎಮಿಲ್ಯಾನ್ನನ್ನು ಕರೆಸಿ ಈ ಹೊಸ ಕೆಲಸವನ್ನು ಮಾಡುವಂತೆ ಅವನಿಗೆ ಕಟ್ಟು ಮಾಡಿದನು.

'ಒಂದು ದಿನದಲ್ಲಿ ದೇವಸ್ಥಾನವನ್ನು ಕಟ್ಟುವ ಸಾಮರ್ಥ್ಯ ನಿನಗಿದ್ದ ಮೇಲೆ ಇದನ್ನೂ ನೀನು ಮಾಡಬಲ್ಲೆ. ನಾಳೆ ಎಲ್ಲ ಸಿದ್ಧವಾಗಿರಬೇಕು ಇಲ್ಲವಾದರೆ ನಿನ್ನ ತಲೆಯನ್ನು ಹಾರಿಸಿಬಿಡುತ್ತೇನೆ' ಎಂದನು.

ಎಮಿಲ್ಯಾನ್ನನಿಗೆ ಮೊದಲಿಗಿಂತಲೂ ಹೆಚ್ಚು ನಿರುತ್ಸಾಹವಾಯಿತು. ಹೃದಯದಲ್ಲಿ ದುಃಖವನ್ನು ತುಂಬಿಕೊಂಡು ಹೆಂಡತಿಯ ಬಳಿಗೆ ಹಿಂದಿರುಗಿದನು.

'ಅದೇಕೆ, ಇಷ್ಟು ದುಃಖಪಡುತ್ತಿರುವುದು? ದೊರೆಯೇನಾದರೂ ಹೊಸ ಕಲಸವನ್ನು ಕೊಟ್ಟನೋ' ಎಂದು ಅವಳು ಕೇಳಿದಳು

ಎಮಿಲ್ಯಾನ್ ಕೆಲಸದ ವಿಚಾರವನ್ನೆಲ್ಲ ಅವಳಿಗೆ ಹೇಳಿದನು. 'ನಾವು ಓಡಿಹೋಗಬೇಕು' ಎಂದನು.

ಆದರೆ ಅವನ ಹೆಂಡತಿ 'ಸಿಪಾಯಿಗಳ ಕೈಯಿಂದ ತಪ್ಪಿಸಿಕೊಳ್ಳುವುದಕ್ಕಾಗುವುದಿಲ್ಲ, ನಾವು ಎಲ್ಲಿಗೆ ಹೋದರೂ ಅಲ್ಲಿಗೆ ಬಂದು ಅವರು ನಮ್ಮನ್ನು ಹಿಡಿದುಕೊಳ್ಳುತ್ತಾರೆ. ಹೇಳಿದ ಹಾಗೆ ಕೇಳುವುದರ ಹೊರತು ಬೇರೆ ದಾರಿಯೇ ಇಲ್ಲ' ಎಂದಳು.

ಎಮಿಲ್ಯಾನ್ 'ಇದನ್ನು ಹೇಗೆ ಮಾಡಲಿ?' ಎಂದು ಸರಳವಾದ ದನಿಯಿಂದ ಹೇಳಿದನು.

ಅವಳು, 'ಎದೆಗೆಡಬೇಡ. ಈಗ ಊಟಮಾಡಿ ಮಲಗಿಕೊ. ಬೆಳಿಗ್ಗೆ ಮುಂಚೆ ಏಳು. ಹೊತ್ತಿಗೆ ಸರಿಯಾಗಿ ಎಲ್ಲ ಮುಗಿದಿರುತ್ತದೆ' ಎಂದಳು

ಆ ಮಾತು ಕೇಳಿ ಎಮಿಲ್ಯಾನ್ ಮಲಗಿ ನಿದ್ದೆ ಮಾಡಿದನು. ಬೆಳಿಗ್ಗೆ ಅವನ ಹೆಂಡತಿ ಅವನನ್ನೆಬ್ಬಿಸಿದಳು 'ಅರಮನೆಗೆ ಹೋಗು, ಎಲ್ಲ ಸಿದ್ಧವಾಗಿದೆ ಅರಮನೆಯ ಎದುರಿಗೆ ಹಡಗು ನಿಲ್ಲುವ ಸ್ಥಳದಲ್ಲಿ ಒಂದು ಮಣ್ಣು ದಿಬ್ಬ ಮಾತ್ರ ಉಳಿದಿದೆ ಒಂದು ಗುದ್ದಲಿಯನ್ನು ತೆಗೆದುಕೊಂಡು ಹೋಗಿ ಅದನ್ನು ಅಗೆದು ನೆಲವನ್ನು ಮಟ್ಟವಾಗುವಂತೆ ಮಾಡು' ಎಂದಳು

ದೊರೆ ಎದ್ದು ನೋಡಿದನು ಹಿಂದೆ ಏನೂ ಇಲ್ಲದಿದ್ದರೂ ಅಲ್ಲಿ ಈಗ ಒಂದು ಹೊಳೆ ಹರಿಯುತ್ತಿದ್ದಿತು ಹಡಗುಗಳು ಕೆಳಕ್ಕೂ ಮೇಲಕ್ಕೂ ಓಡಾಡುತ್ತಿದ್ದವು ಎಮಿಲ್ಯಾನ್ ಒಂದು ಗುದ್ದಲಿಯನ್ನು ಹಿಡಿದುಕೊಂಡು ಒಂದು ಮಣ್ಣಿನ ದಿಬ್ಬವನ್ನು ಅಗೆಯುತ್ತಿದ್ದನು. ದೊರೆಗೆ ಬಹಳ ಆಶ್ಚರ್ಯವಾಯಿತು. ಆದರೆ ಹೊಳೆಯಿಂದಲಾಗಲಿ, ಅದರಲ್ಲಿ ಓಡಾಡುತ್ತಿದ್ದ ಹಡಗುಗಳಿಂದಲಾಗಲಿ, ಅವನಿಗೆ ಸ್ವಲ್ಪವೂ ಸಮಾಧಾನವಾಗಲಿಲ್ಲ ಎಮಿಲ್ಯಾನ್ನನ್ನು ಕೊಲ್ಲಿಸಲು ಆಗಲಿಲ್ಲವಲ್ಲಾ ಎಂದು ಬಹಳ ಜುಗುಪ್ಸೆಯುಂಟಾಯಿತು. 'ಅವನು ಮಾಡಲಾರದ ಕೆಲಸ ಒಂದೂ ಇಲ್ಲ ಇದಕ್ಕೇನು ಮಾಡೋಣ?'

ಎಂದು ಯೋಚಿಸತೊಡಗಿದನು ಮತ್ತು ತನ್ನ ಸೇವಕರನ್ನು ಕರಸಿಕೊಂಡು ಅವರ ಸಲಹೆಯನ್ನು ಕೇಳಿದನು

'ಎಮಿಲ್ಯನ್ನನಿಗೆ ಮಾಡುವುದಕ್ಕೆ ಸಾಧ್ಯವಾಗದಂಥ ಒಂದು ಕೆಲಸವನ್ನು ಹುಡುಕಿ. ನಾವು ಏನೇನು ಹೇಳಿದರೂ ಅದನ್ನೆಲ್ಲ ಮಾಡುತ್ತಿದಾನೆ. ಅವನ ಹೆಂಡತಿಯನ್ನು ನಾನು ಕಿತ್ತುಕೊಳ್ಳುವುದಕ್ಕ ಆಗಲೇ ಇಲ್ಲ' ಎಂದನು.

ರಾಜಸೇವಕರು ಯೋಚಿಸಿ ಯೋಚಿಸಿ ಕಡೆಗೆ ಒಂದು ಉಪಾಯವನ್ನು ಗೊತ್ತುಮಾಡಿಕೊಂಡರು ಆಮೇಲೆ ಅವರು ದೊರೆಯ ಹತ್ತಿರ ಬಂದು ಹೀಗೆ ಹೇಳಿದರು 'ಎಮಿಲ್ಯನ್ನನ್ನು ಕರಸಿ "ಎಲ್ಲೋ ಗೊತ್ತಿಲ್ಲ" ಅಲ್ಲಿಗೆ ಹೋಗಿ, "ಏನೋ ಗೊತ್ತಿಲ್ಲ" ಅದನ್ನು ತೆಗೆದುಕೊಂಡು ಬಾ!' ಎಂದು ಅವನಿಗೆ ತಾವು ಅಪ್ಪಣೆ ಮಾಡಿಬಿಡಿ ಆಗ ನಿಮ್ಮ ಕೈಯಿಂದ ತಪ್ಪಿಸಿಕೊಳ್ಳುವುದಕ್ಕೆ ಅವನಿಗೆ ಸಾಧ್ಯವಾಗುವುದಿಲ್ಲ ಅವನು ಎಲ್ಲಿಗೆ ಹೋಗಿ ಬಂದರೂ ಸರಿಯಾದ ಸ್ಥಳಕ್ಕೆ ಹೋಗಿ ಬರಲಿಲ್ಲವೆಂದೂ ಏನನ್ನು ತಂದರೂ ಸರಿಯಾದ ವಸ್ತುವನ್ನು ತರಲಿಲ್ಲವೆಂದೂ ತಾವು ಹೇಳಬಹುದು ಆಮೇಲೆ ಅವನ ತಲೆ ಹುಯ್ಸಿ ಅವನ ಹೆಂಡತಿಯನ್ನು ವಶಪಡಿಸಿಕೊಳ್ಳಬಹುದು'

ದೊರೆಗೆ ಸಂತೋಷವಾಯಿತು 'ಇದು ಚೆನ್ನಾಗಿ ಯೋಚಿಸಿ ಹೇಳಿದ ಮಾತು' ಎಂದನು ದೊರ ಎಮಿಲ್ಯನ್ನನಿಗೆ ಹೇಳಿಕಳುಹಿಸಿ ಕರಸಿಕೊಂಡು "ಎಲ್ಲೋ ಗೊತ್ತಿಲ್ಲ" ಅಲ್ಲಿಗೆ ಹೋಗಿ, "ಏನೋ ಗೊತ್ತಿಲ್ಲ" ಅದನ್ನು ತೆಗೆದುಕೊಂಡು ಬಾ ತರದೆ ತಪ್ಪಿದರೆ ನಿನ್ನ ತಲೆ ಹುಯ್ಸುತ್ತೇನೆ' ಎಂದು ಅವನಿಗೆ ಹೇಳಿದನು.

ಎಮಿಲ್ಯನ್ ಹಿಂದಿರುಗಿ ಬಂದು ದೊರೆ ಹೇಳಿದ್ದನ್ನೆಲ್ಲ ಅವಳಿಗೆ ತಿಳಿಸಿದನು ಅವನ ಹೆಂಡತಿ ಆಲೋಚಿಸತೊಡಗಿದಳು.

'ನಿನ್ನನ್ನು ಸಿಕ್ಕಿಸಿಕೊಳ್ಳುವುದು ಹೇಗೆಂದು ಅವರು ದೊರೆಗೆ ಹೇಳಿಕೊಟ್ಟಿದಾರೆ. ಈಗ ನಾವು ಬಹು ಎಚ್ಚರಿಕೆಯಿಂದ ಕೆಲಸಮಾಡಬೇಕು' ಎಂದಳು. ಆದ್ದರಿಂದ ಅವಳು ಕುಳಿತು ತುಂಬ ಯೋಚಿಸಿದಳು. ಕಡೆಗೆ

ಗಂಡನನ್ನು ಕುರಿತು ಹೀಗೆ ಹೇಳಿದಳು 'ನೀನು ಬಹಳ ದೂರ ಹೋಗ ಬೇಕು, ನಮ್ಮ ಅಜ್ಜಿಯ ಬಳಿಗೆ ಹೋಗಬೇಕು, ನೀನು ಹೋಗಿ ಅವಳ ಸಹಾಯವನ್ನು ಕೇಳಬೇಕು. ಅವಳು ಏನನ್ನಾದರೂ ನಿನಗೆ ಕೊಟ್ಟರೆ ಅದನ್ನು ತೆಗೆದುಕೊಂಡು ನೇರವಾಗಿ ಅರಮನೆಗೆ ಹೋಗು, ಅಲ್ಲಿ ನಾನಿರು ತ್ತೇನೆ. ಈ ಸಲ ಇವರ ಕೈಯಿಂದ ನಾನು ತಪ್ಪಿಸಿಕೊಳ್ಳುವುದಕ್ಕಾಗುವು ದಿಲ್ಲ. ಅವರು ಬಲಾತ್ಕಾರದಿಂದ ನನ್ನನ್ನು ಹಿಡಿದುಕೊಂಡು ಹೋಗು ತ್ತಾರೆ. ಆದರೆ ಕಷ್ಟ ಹೆಚ್ಚು ಕಾಲ ಇರುವುದಿಲ್ಲ. ನೀನು ಅಜ್ಜಿ ಹೇಳಿ ದಂತೆಯೇ ಎಲ್ಲವನ್ನೂ ಮಾಡಿದರೆ ನನ್ನನ್ನು ಬಿಡಿಸಿ ಕಾಪಾಡಬಹುದು' ಎಂದಳು.

ಹೀಗೆ ಹೇಳಿ ಹೆಂಡತಿ ಗಂಡನ ಪ್ರಯಾಣಕ್ಕೆ ಎಲ್ಲವನ್ನೂ ಸಿದ್ಧಪಡಿ ಸಿದಳು. ಒಂದು ಊರುಗೋಲನ್ನೂ ಒಂದು ನೂಲುವ ಕದರನ್ನೂ ಅವನ ಕೈಗೆ ಕೊಟ್ಟು 'ಇದನ್ನು ಅವಳಿಗೆ ಕೊಡು. ಈ ಗುರುತಿನಿಂದ ನೀನು ನನ್ನ ಗಂಡನೆಂದು ಅವಳು ತಿಳಿದುಕೊಳ್ಳುತ್ತಾಳೆ' ಎಂದು ಹೇಳಿದಳು. ಆಮೇಲೆ ಅವನು ಹೋಗಬೇಕಾದ ದಾರಿಯನ್ನೂ ತೋರಿಸಿದಳು.

ಎಮಿಲ್ಯನ್ ಹೊರಟನು. ಅವನು ಪಟ್ಟಣವನ್ನು ಹಿಂದೆ ಬಿಟ್ಟು, ಕೆಲವು ಸಿಪಾಯಿಗಳು ಕವಾತುಮಾಡುತ್ತಿದ್ದ ಒಂದು ಸ್ಥಳಕ್ಕೆ ಬಂದನು. ಎಮಿಲ್ಯನ್ ಅಲ್ಲಿ ನಿಂತು ಅವರನ್ನೇ ನೋಡುತ್ತಿದ್ದನು. ಕವಾತು ಮುಗಿದ ಮೇಲೆ ಸಿಪಾಯಿಗಳು ವಿಶ್ರಾಂತಿಗಾಗಿ ಕೂತುಕೊಂಡರು. ಆಗ ಎಮಿ ಲ್ಯನ್ ಅವರ ಬಳಿಗೆ ಹೋಗಿ, 'ಅಣ್ಣಗಳಿರಾ, "ಎಲ್ಲೋ ಗೊತ್ತಿಲ್ಲ" ಅಲ್ಲಿಗೆ ಹೋಗುವ ದಾರಿ ನಿಮಗೆ ಗೊತ್ತಿದೆಯೇ? "ಏನೋ ಗೊತ್ತಿಲ್ಲ" ಅದನ್ನು ನಾನು ಹೇಗೆ ತರಬಹುದೋ ಬಲ್ಲಿರಾ?' ಎಂದು ಕೇಳಿದನು.

ಸಿಪಾಯಿಗಳು ಬಹಳ ಆಶ್ಚರ್ಯದಿಂದ ಅವನ ಮಾತುಗಳನ್ನು ಕೇಳಿದರು. "ಈ ಕೆಲಸದಮೇಲೆ ನಿನ್ನನ್ನು ಕಳುಹಿಸಿದವರು ಯಾರು?" ಎಂದು ಕೇಳಿದರು.

'ದೊರೆ' ಎಂದು ಎಮಿಲ್ಯಾನ್ ಹೇಳಿದನು

'ನಾವು ಸಿಪಾಯಿಗಳಾದಂದಿನಿಂದಲೂ "ಎಲ್ಲೋ ಗೊತ್ತಿಲ್ಲ ಅಲ್ಲಿಗೆ" ನಾವೇ ಹೋಗುತ್ತಿದೇವೆ, ಆದರೂ ಇನ್ನೂ ಅಲ್ಲಿಗೆ ನಾವು ಹೋಗಿ ಸೇರಲೇ ಇಲ್ಲ. ಆಗಿನಿಂದ "ಏನೋ ಗೊತ್ತಿಲ್ಲ ಅದನ್ನು" ಹುಡುಕುತ್ತಲೇ ಇದೇವೆ, ಅದು ನಮಗೆ ಸಿಕ್ಕಿಲ್ಲ. ನಾವು ನಿನಗೆ ಸಹಾಯಮಾಡಲಾರೆವು' ಎಂದು ಆ ಸಿಪಾಯಿಗಳು ಹೇಳಿದರು.

ಎಮಿಲ್ಯಾನ್ ಸಿಪಾಯಿಗಳ ಜೊತೆಯಲ್ಲಿ ಸ್ವಲ್ಪ ಹೊತ್ತು ಕುಳಿತಿದ್ದು ಮುಂದಕ್ಕೆ ಹೊರಟನು ಅನೇಕ ಮೈಲಿಗಳ ದೂರ ನಡೆದು ನಡೆದು ಕಡೆಗೆ ಒಂದು ಕಾಡಿಗೆ ಬಂದನು ಆ ಕಾಡಿನಲ್ಲಿ ಒಂದು ಗುಡಿಸಲಿದ್ದಿತು, ಗುಡಿಸಲಿನಲ್ಲಿ ಒಬ್ಬ ಹಣ್ಣು ಹಣ್ಣು ಮುದುಕಿ ಶಣಬಿನಿಂದ ದಾರ ನೂಲುತ್ತ ಅಳುತ್ತ ಕೂತಿದ್ದಳು. ಅವಳೇ ರೈತಸಿಪಾಯಿಗಳ ತಾಯಿ ನೂಲುವಾಗ ಕೈಬೆರಳುಗಳನ್ನು ಒದ್ದೆಮಾಡಿಕೊಳ್ಳುವುದಕ್ಕೆ ಅದನ್ನು ಬಾಯೊಳಕ್ಕೆ ಇಟ್ಟುಕೊಳ್ಳುತ್ತಿರಲಿಲ್ಲ, ಅದಕ್ಕೆ ಬದಲಾಗಿ ಕಣ್ಣೀರಿನಿಂದ ನೆನೆಸಿಕೊಳ್ಳುವುದಕ್ಕೆಂದು ಅವನ್ನು ಕಣ್ಣಿನೊಳಕ್ಕೆ ಇಟ್ಟುಕೊಳ್ಳುತ್ತಿದ್ದಳು ಆ ಮುದುಕಿ ಎಮಿಲ್ಯಾನ್ನನ್ನು ಕಂಡಕೂಡಲೆ 'ಇಲ್ಲೇಕೆ ಬಂದೆ?' ಎಂದು ಗಟ್ಟಿಯಾಗಿ ಕೂಗಿದಳು. ಆಗ ಎಮಿಲ್ಯಾನ್ ಅವಳಿಗೆ ಕದರನ್ನು ಕೊಟ್ಟು ಅದನ್ನು ತನ್ನ ಹೆಂಡತಿ ಕಳುಹಿಸಿಕೊಟ್ಟಳೆಂದು ಹೇಳಿದನು.

ಆ ಕೂಡಲೆ ಮುದುಕಿಯು ಮೃದುವಾದಳು, ಅವನನ್ನು ಬಗೆ ಬಗೆಯಾಗಿ ಪ್ರಶ್ನೆಮಾಡತೊಡಗಿದಳು ಎಮಿಲ್ಯಾನ್ ತನ್ನ ಕಥೆಯನ್ನೆಲ್ಲ ಹೇಳಿದನು ತಾನು ಆ ಹುಡುಗಿಯನ್ನು ಮದುವೆಯಾದದ್ದು, ತಾವು ಪಟ್ಟಣದಲ್ಲಿ ವಾಸಮಾಡುವುದಕ್ಕೆ ಹೋದದ್ದು, ತಾನು ಕೂಲಿ ಕೆಲಸಮಾಡುತ್ತಿದ್ದದ್ದು, ಅರಮನೆಯಲ್ಲಿ ಮಾಡಿದ್ದ ಕೆಲಸಗಳು, ಗುಡಿಯನ್ನು ಕಟ್ಟಿದ್ದು, ಹಡಗುಗಳು ಓಡಾಡುತ್ತಿರುವ ನದಿಯನ್ನು ನಿರ್ಮಿಸಿದ್ದು, ಕಡೆಗೆ ಈಗ ದೊರೆ "ಎಲ್ಲೋ ಗೊತ್ತಿಲ್ಲ ಅಲ್ಲಿಗೆ" ಹೋಗಿ, "ಏನೋ

ಗೊತ್ತಿಲ್ಲ ಅದನ್ನು '' ತರಬೇಕೆಂದು ತನಗೆ ಹೇಳಿರುವುದು—ಎಲ್ಲವನ್ನೂ ಹೇಳಿದನು

ಅಜ್ಜಿ ಕೂನೆಯತನಕ ಕೇಳುತ್ತಿದ್ದು, ಅಳುವನ್ನು ನಿಲ್ಲಿಸಿದಳು. ಅವಳು 'ನಿಜವಾಗಿಯೂ ಆ ಕಾಲ ಬಂದೇ ಇದೆ' ಎಂದು ತನ್ನಷ್ಟಕ್ಕೆ ತಾನೇ ಅಸ್ಪಷ್ಟವಾಗಿ ಅಂದುಕೊಂಡಳು. ಆಮೇಲೆ 'ಒಳ್ಳೇದು ಮಗನೇ, ಈಗ ಕೂತು ಸ್ವಲ್ಪ ವಿಶ್ರಮಿಸಿಕೋ ನಿನಗೆ ತಿನ್ನುವುದಕ್ಕೆ ಏನನ್ನಾದರೂ ಕೊಡುತ್ತೇನೆ' ಎಂದಳು

ಎಮಿಲ್ಯನ್ ತಿಂದನು. ಆಮೇಲೆ ಆ ಅಜ್ಜಿ ಅವನೇನು ಮಾಡಬೇಕೆಂಬುದನ್ನು ಹೇಳಿಕೊಟ್ಟಳು 'ಇಗೋ ನೋಡು ಇಲ್ಲೊಂದು ದಾರದ ಉಂಡೆಯಿದೆ, ಇದನ್ನು ಮುಂದುಗಡೆ ಉರುಳು ಬಿಟ್ಟು ಅದು ಹೋದ ಕಡೆಗೇ ಹೋಗುತ್ತಿರು. ನೀನು ಬಹು ದೂರ ಹೋಗಬೇಕು, ಸಮುದ್ರ ಸಿಕ್ಕುವವರಗೂ ಹೋಗುತ್ತಲೇ ಇರಬೇಕು. ಅಲ್ಲಿಗೆ ಹೋಗಿ ಸೇರಿದ ಮೇಲೆ ಅಲ್ಲಿ ನಿನಗೊಂದು ದೊಡ್ಡ ಪಟ್ಟಣ ಕಾಣಿಸುತ್ತದೆ. ಆ ಪಟ್ಟಣಕ್ಕೆ ಹೋಗಿ, ಕಟ್ಟಕಡೆಯ ತುದಿಯ ಮನೆಯಲ್ಲಿ ಒಂದು ರಾತ್ರಿ ತಂಗಿರುವುದಕ್ಕೆ ಅವಕಾಶಕೊಡಿರೆಂದು ಕೇಳಿಕೊ ಅಲ್ಲಿ ಉಳಿದಿದ್ದು ನೀನು ಏನನ್ನು ಹುಡುಕುತ್ತಿರುವೆಯೋ ಅದನ್ನು ಗೊತ್ತುಮಾಡಿ ತೆಗೆದುಕೊ' ಎಂದಳು.

'ಅಜ್ಜಿ, ಅದನ್ನು ಕಂಡಾಗ ನಾನು ಹುಡುಕುತ್ತಿರುವುದು ಇದೇ ಸರಿಯೆಂದು ಹೇಗೆ ತಿಳಿಯಲಜ್ಜಿ ?' ಎಂದು ಎಮಿಲ್ಯನ್ ಕೇಳಿದನು

'ಜನರು ತಂದೆಗಿಂತಲೂ ತಾಯಿಗಿಂತಲೂ ಹೆಚ್ಚಾಗಿ ಯಾವುದಕ್ಕೆ ವಿಧೇಯರಾಗಿರುತ್ತಾರೋ ಅಂಥದೇನಾದರೂ ನಿನ್ನ ಕಣ್ಣಿಗೆ ಬಿದ್ದರೆ ಅದೇ ಎಂದು ತಿಳಿದುಕೊ ಅದನ್ನು ತೆಗೆದುಕೊಂಡು ದೊರೆಯ ಹತ್ತಿರ ಹೋಗು. ನೀನು ದೊರೆಯ ಬಳಿಗೆ ಅದನ್ನು ತೆಗೆದುಕೊಂಡು ಹೋದಾಗ ಅವನು ಅದು ಸರಿಯಾದ ವಸ್ತುವಲ್ಲವೆನ್ನುತ್ತಾನೆ. ಆಗ ನೀನು ''ಅದು ಸರಿಯಾದ ವಸ್ತುವಲ್ಲವಾದರೆ ಅದನ್ನು ಜಜ್ಜಿ ಪುಡಿಮಾಡಿಬಿಡಬೇಕು'

ಎಂದು ಉತ್ತರ ಕೊಡು. ಹಾಗೆ ಉತ್ತರ ಕೊಟ್ಟು ಅದನ್ನು ಹೊಡೆಯುತ್ತ ಹೊಳೆಯ ಹತ್ತಿರಕ್ಕೆ ತೆಗೆದುಕೊಂಡು ಹೋಗಿ, ಅಲ್ಲಿ ಅದನ್ನು ಚೂರುಚೂರಾಗಿ ಒಡೆದು ನೀರಿಗೆ ಎಸೆದುಬಿಡಬೇಕು. ಆಗ ನಿನ್ನ ಹೆಂಡತಿ ನಿನಗೆ ಸಿಕ್ಕುತ್ತಾಳೆ, ನನ್ನ ಕಣ್ಣೀರೂ ನಿಲ್ಲುತ್ತದೆ.'

ಎಮಿಲ್ಯನ್ ಅಜ್ಜಿಗೆ ಹೋಗಿಬರುವನೆಂದು ಹೇಳಿ ನೂಲಿನ ಉಂಡೆಯನ್ನು ಉರುಳಿಸತೊಡಗಿದನು. ಅದು ಉರುಳುತ್ತುರುಳುತ್ತ ಕಟ್ಟಕಡೆಗೆ ಸಮುದ್ರದ ಬಳಿಗೆ ಹೋಗಿ ಸೇರಿತು ಸಮುದ್ರದ ಹತ್ತಿರ ಒಂದು ದೊಡ್ಡ ಪಟ್ಟಣವಿದ್ದಿತು. ಆ ಪಟ್ಟಣದ ಕಟ್ಟಕಡೆಯ ಕೊನೆಯಲ್ಲಿ ಒಂದು ದೊಡ್ಡ ಮನೆಯಿದ್ದಿತು ಎಮಿಲ್ಯನ್ ಅಲ್ಲಿ ಹೋಗಿ, ಒಂದು ರಾತ್ರಿ ತಂಗಿರುವುದಕ್ಕೆ ಅವಕಾಶಕೊಡಬೇಕೆಂದು ಬೇಡಿಕೊಂಡನು 'ಆಗಬಹುದು' ಎಂದರು. ಅವನು ಮಲಗಿಕೊಂಡನು. ಬೆಳಿಗ್ಗೆ ಅವನು ಎದ್ದಾಗ ಒಬ್ಬ ತಂದೆ ತನ್ನ ಮಗನನ್ನು ಒಲೆಗೆ ಸೌದೆಯನ್ನು ಕಡಿಯುವುದಕ್ಕೆಂದು ಎಬ್ಬಿಸುತ್ತಿದ್ದನು. ಆದರೆ ಮಗನು ಅವನ ಮಾತು ಕೇಳಲಿಲ್ಲ. 'ಇದು ತೀರ ಮುಂಚೆ ಇನ್ನೂ ಬೇಕಾದಷ್ಟು ಹೊತ್ತಿದೆ' ಎಂದನು. ಆಗ ತಾಯಿ 'ಹೋಗು ಮಗು. ನಿಮ್ಮ ತಂದೆಗೆ ಮೂಳೆಗಳೆಲ್ಲ ನೋಯುತ್ತಿವೆ. ಅವನೇ ಹೋಗುವುದು ನಿನಗೆ ಸಮ್ಮತವೇ? ಏಳುವ ಹೊತ್ತಾಯಿತಪ್ಪಾ?' ಎಂದು ಹೇಳಿದಳು.

ಆದರೆ ಮಗನು ಏನನ್ನೋ ಗೊಣಗಿ ಮತ್ತೆ ಮಲಗಿಬಿಟ್ಟನು. ಅವನಿಗಿನ್ನೂ ನಿದ್ದೆ ಹತ್ತಿರಲಿಲ್ಲ, ಅಷ್ಟರಲ್ಲಿ ಬೀದಿಯಲ್ಲಿ ಗುಡುಗಿನಹಾಗೆ ಏನೋ ಒಂದು ಸದ್ದಾಯಿತು. ಆ ಮಗನು ನೆಗೆದು ಮೇಲಕ್ಕೆದ್ದು ಬೇಗ ಬೇಗ ಉಡುಪು ತೊಟ್ಟುಕೊಂಡು ಬೀದಿಗೆ ಓಡಿಹೋದನು. ಎಮಿಲ್ಯನ್ ಕೂಡ ನೆಗೆದೆದ್ದು ತಂದೆಗಿಂತಲೂ ತಾಯಿಗಿಂತಲೂ ಹೆಚ್ಚಾಗಿ ಯಾವುದಕ್ಕೆ ಮಗನು ವಿಧೇಯನಾಗಿರುವನೋ ಆ ವಸ್ತು ಎಂಥದೆಂದು ನೋಡುವುದಕ್ಕಾಗಿ ಅವನ ಹಿಂದೆಯೇ ಓಡಿದನು. ಅಲ್ಲಿ ನೋಡಿದ್ದೇನೆಂದರೆ, ಒಬ್ಬ ಮನುಷ್ಯನು ತನ್ನ ಹೊಟ್ಟೆಗೆ ಒಂದು ವಸ್ತುವನ್ನು ಕಟ್ಟಿಕೊಂಡು ಅದನ್ನು

ಹೊಡೆಯುತ್ತ ಬೀದಿಯಲ್ಲಿ ನಡೆದುಹೋಗುತ್ತಿದ್ದನು. ಅವನು ಹೊಟ್ಟೆಗೆ ಕಟ್ಟಿಕೊಂಡಿದ್ದದ್ದೇ ಹಾಗೆ ಗುಡುಗುಟ್ಟಿ ಗುಡುಗಿನಂತೆ ಸದ್ದುಮಾಡುತ್ತಿದ್ದದ್ದು, ಹಾಗೆ ಸದ್ದುಮಾಡಿ ಮಗನನ್ನು ವಿಧೇಯನನ್ನಾಗಿ ಮಾಡಿದ್ದದ್ದು. ಎಮಿಲ್ಯನ್ ಓಡಿಹೋಗಿ ಒಂದು ಸಲ ಅದನ್ನು ನೋಡಿದನು. ಅದು ದುಂಡಗೆ ಒಂದು ಪುಟ್ಟ ತೊಟ್ಟಿಯಂತೆ ಇದ್ದಿತು. ಅದರ ಎರಡು ತುದಿಗಳಲ್ಲಿಯೂ ಚಕ್ಕಳವನ್ನು ಮುಚ್ಚಿದ್ದಿತು. 'ಅದನ್ನು ಏನೆಂದು ಕರೆಯುತ್ತೀರಿ?' ಎಂದು ಕೇಳಿದನು.

'ಭೇರಿ' ಎಂದು ಅವನಿಗೆ ಉತ್ತರ ಬಂದಿತು.

'ಅದು ಬರಿದಾಗಿದೆಯೋ?'

'ಹೌದು, ಅದರೊಳಗೆ ಏನೂ ಇಲ್ಲ, ಬರಿದು.'

ಎಮಿಲ್ಯನ್ನಿಗೆ ಆಶ್ಚರ್ಯವಾಯಿತು. ಆ ಪದಾರ್ಥವನ್ನು ತನಗೆ ಕೊಡುವಂತೆ ಅವರನ್ನು ಕೇಳಿದನು. ಆದರೆ ಅವರು ಕೊಡುವುದಕ್ಕೆ ಒಪ್ಪಲಿಲ್ಲ. ಆದ್ದರಿಂದ ಎಮಿಲ್ಯನ್ ಕೇಳುವುದನ್ನು ನಿಲ್ಲಿಸಿ ಭೇರಿಯವನ ಹಿಂದೆಯೇ ಹೋದನು. ಹಗಲೆಲ್ಲ ಅವನ ಹಿಂದೆಯೇ ಹೋಗುತ್ತಿದ್ದನು. ಕಡೆಗೆ ಆ ಭೇರಿಯವನು ನಿದ್ದೆಮಾಡುವುದಕ್ಕೆ ಮಲಗಿಕೊಂಡಾಗ ಎಮಿಲ್ಯನ್ ಅವನ ಕೈಯಿಂದ ಭೇರಿಯನ್ನು ಫಕ್ಕನೆ ಕಿತ್ತುಕೊಂಡು ಓಡಿಹೋದನು.

ಓಡಿ ಓಡಿ ಕಟ್ಟಕಡೆಗೆ ತನ್ನ ಸ್ವಂತ ಪಟ್ಟಣಕ್ಕೆ ಬಂದು ಸೇರಿದನು. ತನ್ನ ಹೆಂಡತಿಯನ್ನು ನೋಡುವುದಕ್ಕೆ ಹೋದನು. ಆದರೆ ಅವಳು ಮನೆಯಲ್ಲಿರಲಿಲ್ಲ ಅವನು ಹೋದ ಮರುದಿನವೇ ದೊರೆ ಅವಳನ್ನು ಕರೆದುಕೊಂಡು ಹೋಗಿದ್ದನು. ಆದ್ದರಿಂದ ಎಮಿಲ್ಯನ್ ಅರಮನೆಗೆ ಹೋಗಿ, '"ಎಲ್ಲೋ ಗೊತ್ತಿಲ್ಲ, ಅಲ್ಲಿಗೆ" ಹೋಗಿದ್ದವನು ಹಿಂದಿರುಗಿ ಬಂದಿದಾನೆ, ಅವನು "ಏನೋ ಗೊತ್ತಿಲ್ಲ, ಅದನ್ನು' ತಂದಿದಾನೆ' ಎಂದು ದೊರೆಗೆ ಹೇಳಿ ಕಳುಹಿಸಿದನು.

ಅವರು ಹೋಗಿ ದೊರೆಗೆ ಹೇಳಿದರು. ದೊರೆ ಅವನು ಮರುದಿನ ಮತ್ತೆ ಬರಬೇಕೆಂದು ಹೇಳಿ ಕಳುಹಿಸಿದನು.

ಆದರೆ ಎಮಿಲ್ಯನ್ 'ದೊರೆಗೆ ಹೇಳಿ, ನಾನು ಇವತ್ತು ಬಂದಿದೇನೆ. ದೊರೆ ಅಪೇಕ್ಷ ಪಟ್ಟದ್ದನ್ನು ತಂದಿದೇನೆ. ಅವನೇ ನಾನಿರುವಲ್ಲಿಗೆ ಬರಲಿ; ಇಲ್ಲದಿದ್ದರೆ ನಾನೇ ಅವನ ಬಳಿಗೆ ಹೋಗುತ್ತೇನೆ' ಎಂದನು.

ದೊರೆ ಹೊರಕ್ಕೆ ಬಂದನು. 'ನೀನು ಎಲ್ಲಿಗೆ ಹೋಗಿದ್ದೆ?' ಎಂದು ಕೇಳಿದನು.

ಎಮಿಲ್ಯನ್ ಅವನಿಗೆ ಹೇಳಿದನು.

ದೊರೆ, 'ಅದು ಸರಿಯಾದ ಜಾಗವಲ್ಲ' ಎಂದು, 'ಹೋಗಲಿ, ಏನನ್ನು ತಂದಿದೀಯ?' ಎಂದು ಕೇಳಿದನು

ಎಮಿಲ್ಯನ್ ಭೇರಿಯ ಕಡೆಗೆ ತೋರಿಸಿದನು. ಆದರೆ ದೊರೆ ಅದರ ಕಡೆಗೆ ತಿರುಗಿಯೂ ನೋಡಲಿಲ್ಲ.

'ನಾನು ಹೇಳಿದ್ದು ಅದಲ್ಲ'

ಎಮಿಲ್ಯನ್, 'ಅದು ಸರಿಯಾದ ವಸ್ತುವಲ್ಲದಿದ್ದರೆ ಅದನ್ನು ಚೂರು ಮಾಡಿಬಿಡಬೇಕು. ಅದೆಲ್ಲಾದರೂ ಹಾಳಾಗಲಿ' ಎಂದನು.

ಎಮಿಲ್ಯನ್ ಅರಮನೆಯನ್ನು ಬಿಟ್ಟು ಹೊರಟನು. ಭೇರಿಯನ್ನು ಹೊತ್ತುಕೊಂಡು ಅದನ್ನು ಬಡಿಯುತ್ತಲೇ ಬಂದನು. ಅವನು ಭೇರಿಯನ್ನು ಹೊಡೆದಾಗ ದೊರೆಯ ಸೈನ್ಯದವರೆಲ್ಲ ಹೊರಕ್ಕೆ ಹೊರಟು ಎಮಿಲ್ಯನ್ನನ ಹಿಂದೆಯೇ ಓಡಿದರು ಅವರೆಲ್ಲರೂ ಅವನಿಗೆ ಕೈ ಮುಗಿದು ಅಪ್ಪಣೆಯನ್ನು ಕಾಯುತ್ತ ನಿಂತುಕೊಂಡರು.

ದೊರೆ ಕಿಟಿಕಿಯ ಬಳಿಯಲ್ಲಿ ನಿಂತು ತನ್ನ ಸೈನಿಕರಿಗೆಲ್ಲ ಎಮಿಲ್ಯನ್ನನ ಹಿಂದೆ ಹೋಗಬೇಡಿರೆಂದು ಗಟ್ಟಿಯಾಗಿ ಕೂಗಿ ಹೇಳಿದನು. ಆದರೆ ಒಬ್ಬರೂ ಅವನ ಮಾತನ್ನು ಕಿವಿಗೆ ಹಾಕಿಕೊಳ್ಳಲಿಲ್ಲ, ಎಲ್ಲರೂ ಎಮಿಲ್ಯನ್ನನ್ನೇ ಹಿಂಬಾಲಿಸಿದರು

ಇದನ್ನು ಕಂಡು ದೊರೆ ಎಮಿಲ್ಯನ್ನನ ಹೆಂಡತಿಯನ್ನು ಮತ್ತೆ ಅವನ ಬಳಿಗೆ ಕರೆದುಕೊಂಡು ಹೋಗಿ ಬಿಡಬೇಕೆಂದು ಅಪ್ಪಣೆ ಮಾಡಿದನು. ಆ ಮೇಲೆ ಭೇರಿಯನ್ನು ತನಗೆ ಕೊಡುವಂತೆ ಎಮಿಲ್ಯನ್ನನಿಗೆ ಹೇಳಿಕಳು ಹಿಸಿದನು

'ಅದಾಗುವುದಿಲ್ಲ. ಅದನ್ನು ಒಡೆದು ಚೂರುಚೂರು ಮಾಡಿ, ಚೂರುಗಳನ್ನು ಹೊಳೆಗೆ ಎಸೆದು ಬಿಡಬೇಕೆಂದು ನನಗೆ ಹೇಳಿದಾರೆ, ಎಂದು ಎಮಿಲ್ಯನ್ ಉತ್ತರಕೊಟ್ಟನು.

ಎಮಿಲ್ಯನ್ ಭೇರಿಯನ್ನು ಹೊತ್ತುಕೊಂಡೇ ಹೊಳೆಯ ಬಳಿಗೆ ಹೋದನು ಸೈನಿಕರೂ ಅವನ ಹಿಂದೆ ಹೋದರು. ನದಿಯ ದಡವನ್ನು ತಲಪಿದ ಕೂಡಲೆ ಎಮಿಲ್ಯನ್ ಭೇರಿಯನ್ನು ಚೂರುಚೂರಾಗಿ ಒಡೆದು ಆ ಚೂರುಗಳನ್ನು ಹೊಳೆಗೆ ಎಸೆದುಬಿಟ್ಟನು. ಆಗ ಸೈನಿಕರೆಲ್ಲರೂ ಓಡಿ ಹೋದರು.

ಎಮಿಲ್ಯನ್ ತನ್ನ ಹೆಂಡತಿಯನ್ನು ಕರೆದುಕೊಂಡು ಅವಳ ಸಂಗಡ ಮನೆಗೆ ಹೋದನು. ಆಮೇಲೆ ದೊರೆ ಏನೂ ತೊಂದರೆ ಕೊಡುತ್ತಿರಲಿಲ್ಲ. ಆದ್ದರಿಂದ ಅಲ್ಲಿಂದ ಮುಂದೆ ಅವರು ಸುಖವಾಗಿ ಜೀವಿಸುತ್ತಿದ್ದರು.

---

# ಬೆಪ್ಪುತಕಡಿ ಐವಾ್ರ್



೧

ಹಿಂದೆ ಒಂದು ನಾಡಿನ ಪ್ರಾಂತವೊಂದರಲ್ಲಿ ಹಣವಂತ ರೈತನೊಬ್ಬನಿದ್ದನು. ಅವನಿಗೆ ಮೂವರು ಮಕ್ಕಳು. ಶೂರ ಸೈಮನ್, ರೊಣಯು ತಾರಸ್, ಬೆಪ್ಪುತಕ್ಕಡಿ ಐವಾರ್ ಜೊತೆಗೆ ಮಾರ್ಥ ಎಂಬ ಮಗಳಿದ್ದಳು. ಅವಳು ಕಿವುಡಿ, ಮೂಗಿ. ಅವಳಿಗೆ ಮದುವೆಯಾಗಿರಲಿಲ್ಲ.

ಶೂರ ಸೈಮನನು ದೊರೆಯ ಸೇವೆಗಾಗಿ ಯುದ್ಧಕ್ಕೆ ಹೋದನು. ರೊಣಯು ತಾರಸನು ವ್ಯಾಪಾರಿಯೊಬ್ಬನೊಡನೆ ವ್ಯಾಪಾರ ಮಾಡಲು ಪಟ್ಟಣಕ್ಕೆ ಹೋದನು ಬೆಪ್ಪುತಕಡಿ ಐವಾನನು ಹುಡುಗಿಯೊಡನೆ ಮನೆಯಲ್ಲಿ ನಿಂತು, ಬೆನ್ನು ಬಗ್ಗುವವರೆಗೂ ಹೊಲದಲ್ಲಿ ಕೆಲಸಮಾಡುತ್ತಿದ್ದನು.

ಶೂರ ಸೈಮನನು ದೊಡ್ಡ ಪದವಿ ಪಡೆದು, ಜಹಗೀರೊಂದನ್ನು ಸಂಪಾದಿಸಿ, ದೊಡ್ಡವರ ಮಗಳನ್ನು ಮದುವೆಯಾದನು ಅವನ ಸಂಬಳವೂ ಜಹಗೀರೂ ದೊಡ್ಡದಾಗಿದ್ದರೂ ಒಂದುದು ಹೊಟ್ಟೆ ಬಟ್ಟೆಗಳಿಗೇ ಸಾಲುತ್ತಿರಲಿಲ್ಲ. ಗಂಡ ಸಂಪಾದಿಸಿದುದನ್ನು ಅವನ ಹೆಂಡತಿ—ದೊಡ್ಡ ಕುದುರೆ ಜೇಷ್ಟೆಯವಳು—ದುಂದುಮಾಡುತ್ತಿದ್ದಳು. ಅವರಿಗೆ ಎಂದೂ ಹಣ ಸಾಕಾಗುತ್ತಿರಲಿಲ್ಲ

ಅದು ಸಲುವು ಶೂರ ಸೈಮನನು ತನ್ನ ಜಮೀನಿನ ಆದಾಯವನ್ನು ತೆಗೆಯುವುದಕ್ಕೆ ಹೋದನು. ಅಲ್ಲಿಯ ಮೇಲ್ವಿಚಾರಕನು 'ಆದಾಯ ಬರಲು ದಾರಿಯೇ ಇಲ್ಲ. ಆಕಳಿಲ್ಲ, ಮುಟ್ಟುಗಳಿಲ್ಲ, ಕುದುರೆಯಿಲ್ಲ, ನೇಗಿಲಿಲ್ಲ, ಕುಂಟೆಯಿಲ್ಲ. ಇದನ್ನೆಲ್ಲ ಮೊದಲು ತಂದರೆ, ಆಮೇಲೆ ಹಣ ಬರುತ್ತದೆ' ಎಂದನು

ಆಗ ಶೂರ ಸೈಮನನು ತನ್ನ ತಂದೆಯ ಹತ್ತಿರ ಹೋಗಿ 'ಅಪ್ಪಾ, ನಿನಗೆ ಹಣವಿದೆ. ನೀನು ನನಗೇನೂ ಕೊಟ್ಟಿಲ್ಲ. ನಾನು ನನ್ನ ಜವಾನನ್ನು ಉತ್ತಮಗೊಳಿಸಬೇಕು. ಆಸ್ತಿಯಲ್ಲಿ ನನ್ನ ಮೂರನೆಯ ಒಂದು ಪಾಲು ಕೊಟ್ಟುಬಿಡು' ಎಂದನು.

ಮುದುಕನು 'ನೀನು ಮನೆಗೆ ಏನೂ ತಂದುಹಾಕಿಲ್ಲ. ನಿನಗೇಕೆ ಮೂರರಲ್ಲೊಂದು ಭಾಗ ಕೊಡಬೇಕು? ಐವಾನನಿಗೂ ಹುಡುಗಿಗೂ ನ್ಯಾಯಮಾಡಿದ ಹಾಗಾಗುವುದಿಲ್ಲ' ಎಂದನು

ಆದರೆ ಸೈಮನನೆಂದ. 'ಸರಿ! ಅವನೊಬ್ಬ ಬೆಪ್ಪುತಕಡಿ, ಅವಳೊಂದು ಗೃಧ್ರ, ಕಿವುಡಿ, ಮೂಗಿ. ಅವರಿಗೆ ತಾನೆ ಬಹಳ ಬೇಕು!'

'ಐವಾನ್ ಏನು ಹೇಳುತ್ತಾನೆ ನೋಡೋಣ' ಎಂದನು ಮುದುಕ.

'ಆಗಲೇಳು. ತೆಗೆದುಕೊಳ್ಳಲಿ ಬಿಡು' ಎಂದನು ಐವಾನ್.

ಶೂರ ಸೈಮನನು ತಂದೆಯ ಆಸ್ತಿಯಲ್ಲಿ ಪಾಲು ತೆಗೆದುಕೊಂಡು ತನ್ನ ಜಹಗೀರಿಗೆ ಹೋದನು. ಪುನಃ ಅರಸನ ಸೇವೆಗೆ ಹೊರಟನು

ರೊಣೆಯ ತಾರಸನೂ ಹಣ ಜಮಾಯಿಸಿಕೊಂಡು, ಒಬ್ಬ ವರ್ತಕನ ಮನೆಗೆ ಮದುವೆಯಾದನು. ಅವನಿಗೂ ಹಣ ಸಾಲಲಿಲ್ಲ. ತಂದೆಯ ಬಳಿ ಬಂದು 'ನನ್ನ ಪಾಲು ಕೊಡು' ಎಂದನು.

ಮುದುಕನಿಗೆ ತಾರಸನಿಗೂ ಪಾಲು ಕೊಡಲು ಮನಸಿರಲಿಲ್ಲ. ಅದಕ್ಕಾಗಿ 'ನೀನು ಮನೆಗೇನೂ ತಂದಿಲ್ಲ. ಮನೆಯಲ್ಲಿರುವುದೆಲ್ಲಾ ಐವಾನ್ ಸಂಪಾದಿಸಿದ್ದು. ಅವನಿಗೂ ಹುಡುಗಿಗೂ ಏಕೆ ಅನ್ಯಾಯಮಾಡಬೇಕು?' ಎಂದನು.

ಅದಕ್ಕೆ ತಾರಸನು 'ಅವನಿಗೇನು ಬೇಕು? ಅವನೊಬ್ಬ ಬೆಪ್ಪುತಕಡಿ! ಅವನಿಗೆ ಮದುವೆಯಾಗುವುದಿಲ್ಲ. ಅವನನ್ನು ಯಾರೂ ಕಟ್ಟಿಕೊಳ್ಳುವುದಿಲ್ಲ. ಆ ಮೂಗಿಗೂ ಏನೂ ಬೇಕಾಗಿಲ್ಲ' ಎಂದು ಐವಾನನ ಕಡೆ ತಿರುಗಿ, 'ನೋಡಿಲ್ಲಿ, ಐವಾನ್! ದವಸದಲ್ಲಿ ಅರ್ಧಕೊಡು, ನಿನ್ನ ಮುಟ್ಟು ನನಗೆ

ಬೇಡ, ಈ ದನಕರುಗಳಲ್ಲಿ ಆ ಬೂದುಗುದುರೆಯನ್ನು ಕೊಡು. ಹೇಗಿದ್ದರೂ, ಅದನ್ನು ಉಳುವುದಕ್ಕೆ ಕಟ್ಟುವುದಿಲ್ಲ' ಎಂದನು.

ಐವಾನನು ನಕ್ಕು 'ಆಗಲೇಳು. ಹೋಗಿ, ಕೆಲಸಮಾಡಿ ಇನ್ನೂ ಒಂದಷ್ಟು ತರುತ್ತೇನೆ' ಎಂದನು.

ಹಾಗೆ ತಾರಸನಿಗೂ ಪಾಲು ಕೊಟ್ಟರು. ಅವನು ದವಸವನ್ನೂ ಬೂದುಗುದುರೆಯನ್ನೂ ಪಟ್ಟಣಕ್ಕೆ ಸಾಗಿಸಿದನು. ಐವಾನನು ತನಗುಳಿದ ಮುದಿ ಹೆಣ್ಣುಕುದುರೆಯಿಂದಲೇ ಒಕ್ಕಲುತನ ನಡೆಸುತ್ತಾ, ತಂದೆತಾಯಿಗಳನ್ನು ಸಾಕುತ್ತಿದ್ದನು.

೨

ಹೀಗೆ ಸೋದರರು ಪಾಲಿಗಾಗಿ ಜಗಳವಾಡದೆ ಶಾಂತವಾಗಿ ಬೇರೆಯಾದುದನ್ನು ಕಂಡು ಮುದಿಪಿಶಾಚಿಗೆ ಅಸಮಾಧಾನವಾಯಿತು. ಕೂಡಲೆ ಮೂರು ಮರಿಪಿಶಾಚಿಗಳನ್ನು ಬರಮಾಡಿತು.

'ನೋಡಿಲ್ಲಿ! ಶೂರ ಸೈಮನ್, ರೊಣಯ ತಾರಸ್, ಬೆಪ್ಪುತಕಡಿ ಐವಾನ್ ಎಂಬ ಮೂವರು ಸೋದರರಿದ್ದಾರೆ. ಅವರು ಜಗಳ ಕಾಯಬೇಕಾಗಿತ್ತು, ಆದರೆ ಶಾಂತರಾಗಿದ್ದು ಸೋದರರಂತಿರುವರು. ಆ ಬೆಪ್ಪುತಕಡಿ ನನ್ನ ಕುಲವನ್ನೆಲ್ಲಾ ಕುಲಗೆಡಿಸಿರುವನು. ನೀವು ಮೂವರು ಹೋಗಿ, ಆ ಮೂವರು ಸೋದರರನ್ನೂ ಹತೋಟಿಗೆ ತಂದು, ಒಬ್ಬರೊಬ್ಬರು ಕಣ್ಣು ಕೀಳುವತನಕ ಕಾದಾಡುವಂತೆ ಮಾಡಬೇಕು! ಮಾಡಬಲ್ಲಿರಾ?' ಎಂದು ಕೇಳಿತು.

'ಓಹೊ! ಮಾಡುವೆವು'

'ಹೇಗೆ ಮಾಡುವಿರಿ?'

'ಹೇಗೆ! ಮೊದಲು ಅವರನ್ನು ಹಾಳುಮಾಡುವೆವು ತಿನ್ನುವುದಕ್ಕೆ ಏನೂ ಇಲ್ಲದಿರುವಾಗ, ಎಲ್ಲರನ್ನೂ ಒಟ್ಟುಗೂಡಿಸಿದರೆ, ಕಾದಾಡದೆ ಏನು ಮಾಡುತ್ತಾರೆ!'

'ಅದು ಬುದ್ಧಿ! ಬುದ್ಧಿವಂತರು ನೀವು ಹೋಗಿ, ಅವರನ್ನು ಕಣಕಿ ಕುಣಿಸುವವರೆಗೂ ಬರಬೇಡಿ. ಬಂದರೆ ಚರ್ಮ ಸುಲಿದುಬಿಡುವೆ!'

ಮರಿಪಿಶಾಚಿಗಳು ಒಂದು ಜೌಗಿಗೆ ಹೋಗಿ, ಕೆಲಸವನ್ನು ಹೇಗೆ ಮೊದಲು ಮಾಡಬೇಕೆಂದು ಮಂತ್ರಣಮಾಡಿದುವು. ಪ್ರತಿಯೊಂದೂ ತನಗೆ ಸುಲಭವಾದ ಕಲಸಬೇಕೆಂದು ಕೂಗಿ ಕಿರುಚಾಡಿ, ಕೊನಗೆ ಯಾರು ಯಾವ ಸೋದರನನ್ನು ನೋಡಿಕೊಳ್ಳಬೇಕೆಂದು ಚೀಟಿಹಾಕಲು ಒಪ್ಪಿದುವು. ಒಂದು ಮರಿಯು ತನ್ನ ಕೆಲಸವನ್ನು ಬೇಗ ಮುಗಿಸಿದರೆ, ಅದು ಒಂದು ಮಿಕ್ಕವುಗಳಿಗೆ ಸಹಾಯಕೊಡಬೇಕಾಗಿತ್ತು. ಹಾಗೆಯೇ ಮರಿಪಿಶಾಚಿಗಳು ಚೀಟಿಹಾಕಿ, ಕೈಕೊಂಡ ಕಾರ್ಯದ ವಿಚಾರವನ್ನು ತಿಳಿಯಲು ಜೌಗಿನಲ್ಲಿ ಸೇರಬೇಕಾದ ಕಾಲವನ್ನೂ ನಿರ್ಣಯಿಸಿದುವು.

ಕಾಲ ಬಂದಾಗ, ನಿರ್ಣಯದಂತೆ ಮರಿಪಿಶಾಚಿಗಳು ಜೌಗಿಗೆ ಬಂದುವು. ಪ್ರತಿಯೊಂದೂ ವಿದ್ಯಮಾನಗಳ ವಿವರವೊಪ್ಪಿಸಲು ಮೊದಲಿಟ್ಟುವು. ಮೊದಲನೆಯದು, ಶೂರ ಸೈಮನನ ಮರಿಪಿಶಾಚಿ, "ನನ್ನ ಕೆಲಸ ಸರಿಯಾಗಿ ಜರುಗುತ್ತಿದೆ. ನಾಳೆ ಸೈಮನನು ಅವನ ತಂದೆಯ ಒಳಿಗೆ ಹೋಗುತ್ತಾನೆ" ಎಂದಿತು.

ಮಿಕ್ಕವು 'ಅದು ಹೇಗೆ ಮಾಡಿದೆ?' ಎಂದು ಕೇಳಿದುವು.

ಅದು ಹೇಳಿತು. 'ಮೊದಲು ಸೈಮನನಿಗೆ ಧೈರ್ಯ ಕೊಟ್ಟೆ. ಅವನು ಭೂಮಂಡಲವನ್ನೇ ಜಯಿಸಿಕೊಡುವೆನೆಂದು ತನ್ನ ದೊರೆಗೆ ಮಾತುಕೊಡಲು, ದೊರೆಯು ಅವನನ್ನು ಸೈನ್ಯಾಧಿಕಾರಿಯನ್ನಾಗಿ ಮಾಡಿ, ಹಿಂದೂದೇಶದ ರಾಜನಮೇಲೆ ಯುದ್ಧಕ್ಕೆ ಕಳುಹಿಸಿದನು. ಯುದ್ಧಕ್ಕೆ ಅವರು ನೆರೆಯಲು ಅದೇ ರಾತ್ರಿ ಸೈಮನನ ಪಾಳೆಯದ ಮದ್ದನ್ನೆಲ್ಲ ಒದ್ದೆ ಮಾಡಿದೆನು. ಹಿಂದೂದೇಶದ ರಾಜನ ಸೈನ್ಯದಲ್ಲಿ ಎಣಿಸಲಾಗದಷ್ಟು ಹುಲ್ಲಿನ ಸಿಪಾಯಿಗಳನ್ನು ಮಾಡಿಟ್ಟೆನು. ಹುಲ್ಲಿನ ಸಿಪಾಯಿಗಳು ತಮ್ಮನ್ನು ಮುತ್ತಲು, ಸೈಮನನ ಸೈನಿಕರು ಬೆದರಿದರು. ಸೈಮನನು ಗುಂಡು ಹೊಡಿ ಎಂದನು.

ಅವರ ಗುಂಡು ತುಪಾಕಿಗಳು ಸದ್ದೇ ಮಾಡಲಿಲ್ಲ ಆಗ ಸೈಮನನ ಸೈನಿಕರು ಹೆದರಿ ಕುರಿಗಳಂತೆ ಓಡಿದರು. ಹಿಂದೂರಾಜನು ಅವರನ್ನು ಕತ್ತರಿಸಿ ಹಾಕಿದನು. ಸೈಮನನಿಗೆ ಛೀಮಾರಿಯಾಯ್ತು. ಅವನ ಜಹಗೀರು ಹೋಯ್ತು. ನಾಳೆ ಅವನ ತಲೆ ಹೋಗುತ್ತದೆ ನಾಳೆ ಒಂದು ದಿವಸ ನನಗೆ ಕೆಲಸ ಇದೆ. ಅವನನ್ನು ಜೈಲಿನಿಂದ ತಪ್ಪಿಸಿದರೆ ಮನೆಗೆ ಓಡುತ್ತಾನೆ. ನಾಳೆ ನನಗೆ ವಿರಾಮ ಯಾರಿಗೆ ಒಂದು ಸಹಾಯ ಮಾಡಲಿ?'

ಆಮೇಲೆ. ಎರಡನೆಯ ಮರಿಪಿಶಾಚಿ-ತಾರಸನದು-ತನ್ನ ಕೆಲಸದ ವರದಿಯೊಪ್ಪಿಸಿತು 'ನನ್ನ ಕೆಲಸ ಸರಿಯಾಗುತ್ತಿದೆ! ನನಗೇನೂ ನಿನ್ನ ಸಹಾಯ ಬೇಕಿಲ್ಲ. ತಾರಸನು ಇನ್ನೊಂದು ವಾರ ಸುಮ್ಮನಿದ್ದರೆ ಹೆಚ್ಚು. ಮೊದಲು ಅವನಿಗೆ ಜೊಬ್ಬು ಬೆಳೆದು ಹೊಟ್ಟೆಬಾಕನಾಗುವಂತೆ ಮಾಡಿದೆನು ಕಂಡದ್ದನ್ನೆಲ್ಲಾ ಕೊಂಡುಕೊಳ್ಳಬೇಕಂದಾಯ್ತು ಅವನ ದುರಾಸೆ ಬೇಕಾದಷ್ಟು ಸಾಮಾನು ಕೊಂಡುಕೊಂಡು ಹಣವನ್ನೆಲ್ಲಾ ಹಾಳುಮಾಡಿಕೊಂಡಿದ್ದಾನೆ, ಇನ್ನೂ ಕೊಂಡುಕೊಳ್ಳುತ್ತಿದ್ದಾನೆ. ಆಗಲೇ ಸಾಲ ತೆಗೆಯುತ್ತಿದ್ದಾನೆ. ಅವನ ಸಾಲ ಅವನ ಕತ್ತಿನ ಸುತ್ತ ಭಾರವಿದ್ದಂತಿದೆ. ಅದರಲ್ಲಿ ಅವನು ಏಗುವ ಹಾಗಿಲ್ಲ. ಇನ್ನೊಂದು ವಾರದಲ್ಲಿ ಸಾಲಗಾರರು ಬರುತ್ತಾರೆ ಆಗ ಅವನ ಸಾಮಾನನ್ನೆಲ್ಲ ಕುಪ್ಪೆ ಮಾಡುತ್ತೇನೆ. ಸಾಲ ತೆರುವುದಕ್ಕಾಗದೆ ತಂದೆಯ ಮನೆಗೆ ಓಡಿಹೋಗುತ್ತಾನೆ'.

'ನಿನ್ನದು ಹೇಗಿದೆ' ಎಂದು ಅವು ಮೂರನೆಯ ಮರಿಪಿಶಾಚಿಯನ್ನು (ಐವಾನನದು) ಕೇಳಿದುವು.

'ಐಬು! ಏನೂ ಸುಖವಿಲ್ಲ. ಅವನಿಗೆ ಹೊಟ್ಟೆನೋವು ಬರಲೆಂದು ಮೊದಲು ಅವನ ಹೆಂಡದ ಬುರುಡೆಯಲ್ಲಿ ಉಗಿದೆ ಆಮೇಲೆ ಹೊಲಕ್ಕೆ ಹೋಗಿ, ಅವನು ಕೆಲಸಮಾಡಲಾಗದಂತೆ ಕಲ್ಲಾಗುವ ಹಾಗೆ ನೆಲವನ್ನು ಗಟ್ಟಿಮಾಡಿದೆ. ಅವನು ಉಳುವುದಿಲ್ಲವೆಂದಿದ್ದೆ, ಆದರೆ, ಬೆಪ್ಪುತಕಡಿ, ನೇಗಿಲು ತಂದು ಉಳಲು ಮೊದಲಿಟ್ಟನು. ಹೊಟ್ಟೆನೋವಿನಿಂದ ಸಂಕಟ

ಪಡುತ್ತಲೇ ಉಳುತ್ತಿದ್ದನು. ಅವನ ನೇಗಿಲು ಮುರಿದೆ; ಮನೆಗೆ ಹೋಗಿ ಹೊಸದು ತಂದು ಉಳಲು ಹೊರಟನು ನಾನು ನೆಲದಡಿ ಹೊಕ್ಕು ನೇಗಿಲು ಮೊಳೆ ಹಿಡಿದುಕೊಂಡೆ, ಹಿಡಿದುಕೊಳ್ಳಲಾಗಬೇಕಲ್ಲ! ಅವನು ನೇಗಿಲ ಮೇಲೆ ಭಾರಬಿಟ್ಟನು. ಮೊನಚಾದ ನೇಗಿಲುಮೊಳೆ ನನ್ನ ಕೈ ಕತ್ತರಿಸಿತು. ಎಲ್ಲೊ ಒಂದು ಚೂರು ಬಿಟ್ಟು ಭೂಮಿಯನ್ನೆಲ್ಲಾ ಉತ್ತಿದ್ದಾನೆ. ನನ್ನ ಜೊತೆಗೆ ಬಂದು ಸಹಾಯಮಾಡಿ. ಇಲ್ಲದಿದ್ದರೆ, ಅವನನ್ನು ಸೋಲಿಸದಿದ್ದರೆ, ನಮ್ಮ ಕಾರ್ಯವೆಲ್ಲಾ ವ್ಯರ್ಥವಾಗುತ್ತದೆ ಆ ಬೆಪ್ಪುತಕಡಿ ಹೀಗೆಯೇ ಹಿಡಿದು ಕಲಸಮಾಡಿದರೆ, ಅವನು ತನ್ನ ಸೋದರರಿಗೆ ಕೂಡುತ್ತಾನೆ. ಅವರಿಗೆ ಏನೂ ಕೊರತೆಯಿರುವುದಿಲ್ಲ" ಎಂದು ಮೂರನೆಯದೆಂದಿತು.

ಶೂರ ಸೈಮನನ ಮರಿಪಿಶಾಚಿಯು ಮೂರನೆಯ ದಿನ ಬಂದು ಸಹಾಯ ನೀಡುವಂತೆ ಮಾತು ಕೊಟ್ಟಿತು ಮರಿಪಿಶಾಚಿಗಳೆಲ್ಲ ಹೊರಟವು.

೩

ಸಣ್ಣ ಚೂರೊಂದುಳಿದು, ನೆಲವನ್ನೆಲ್ಲ ಐವಾನನು ಉಳುತ್ತಿದ್ದನು. ಅದನ್ನು ಮುಗಿಸಲು ಬಂದನು. ಹೊಟ್ಟೆನೋಯುತ್ತಿದ್ದರೂ ಉಳುವುದು ಕೊನೆಗಾಣಬೇಕು. ನೇಗಿಲನ್ನು ತಿರುಗಿಸಿಕೊಂಡು, ಕೆಲಸಕ್ಕೆ ಮೊದಲು ಮಾಡಿದನು. ಒಂದು ನೇಗಿಲ ಸಾಲಾದ ಮೇಲೆ, ಹಿಂದಿರುಗಿ ಬರುವಾಗ, ಯಾವುದೋ ಬೇರಿಗೆ ನೇಗಿಲು ತಗುಲಿಕೊಂಡಂತಾಯ್ತು. ಮರಿಪಿಶಾಚಿಯು ನೇಗಿಲಮೊಳೆಗೆ ಕಾಲು ಸುತ್ತಿಕೊಂಡು ಹಿಂದಕ್ಕೆಳೆಯುತ್ತಿತ್ತು.

'ಏನಿದು ವಿಚಿತ್ರ! ಇಲ್ಲಿ ಬೇರುಗಳೇ ಇರಲಿಲ್ಲ ಆದರೂ ಬಂದಿದೆಯಲ್ಲ'

ಎಂದುಕೊಂಡು ಐವಾನನು ನೇಗಿಲಸಾಲಿನಲ್ಲಿ ಕೈಹಾಕಿ, ಸುತ್ತ ಹುಡುಕಿ, ಕೈಗೆ ಸಿಕ್ಕಿದ ಮೆತ್ತನೆಯದನ್ನು ಹಿಡಿದು ಹೊರಗೆಳೆದನು. ಅದು ಕಪ್ಪಗೆ ಬೇರಿನಂತಿತ್ತು, ಒದ್ದಾಡುತ್ತಿತ್ತು ಜೀವಿತ ಮರಿಪಿಶಾಚಿ!

'ಏನು ಅಧ್ವಾನ!' ಎಂದವನೆ ಐವಾರ್, ನೇಗಿಲ ಮೇಲೆ ರಾಚಿ ಬಡಿಯಬೇಕೆಂದು ಅದನ್ನು ಮೇಲೆತ್ತಿದನು.

'ನನ್ನನ್ನು ನೋಯಿಸಬೇಡ. ನಿನಗೇನು ಬೇಕಾದರೂ ಮಾಡಿ ಕೊಡುತ್ತೇನೆ' ಎಂದು ಮರಿಪಿಶಾಚಿಯು ಮೊರೆಯಿಟ್ಟಿತು.

'ಏನು ಮಾಡಿಕೊಡುತ್ತೀಯೆ?'

'ಏನು ಹೇಳಿದರೂ ಮಾಡಿಕೊಡುತ್ತೇನೆ'

ಐವಾನನು ತಲೆ ಕೆರೆದುಕೊಂಡನು.

'ನನ್ನ ಹೊಟ್ಟೆ ನೋಯುತ್ತದೆ. ವಾಸಿ ಮಾಡಿಕೊಡುವೆಯೊ?'

'ಮಾಡಬಲ್ಲೆ.'

'ಮಾಡು, ಹಾಗಾದರೆ'

ಮರಿಪಿಶಾಚಿಯು ನೇಗಿಲ ಸಾಲಿಗೆ ಬಗ್ಗಿ, ಸುತ್ತ ಹುಡುಕಿ, ಉಗುರುಗಳಿಂದ ಕೆದಕಿ, ಮೂರು ಮೊನೆಯ ಸಣ್ಣ ಬೇರನ್ನು ತೆಗೆದು ಐವಾನನಿಗೆ ಕೊಟ್ಟಿತು.

'ಇದರ ಒಂದು ಮೊನೆಯನ್ನು ಯಾರು ನುಂಗಿದರೂ, ಯಾವ ರೋಗವಿದ್ದರೂ ಹೋಗುತ್ತದೆ' ಎಂದಿತು.

ಐವಾನನು ಆ ಬೇರಿನ ಒಂದು ಮೊನೆಯನ್ನು ಕಿತ್ತು ನುಂಗಿದನು. ಹೊಟ್ಟೆನೋವು ಥಟ್ಟನೆ ನಿಂತಿತು. ಮರಿಪಿಶಾಚಿ 'ನನ್ನನ್ನು ಬಿಟ್ಟುಬಿಡು. ನೆಲದೊಳಕ್ಕೆ ಹೋಗಿ, ಪುನಃ ಬರುವುದಿಲ್ಲ' ಎಂದು ಬೇಡಿತು

'ಆಗಲೇಳು, ದೇವರು ಒಳ್ಳೆಯದು ಮಾಡಲಿ ನಿನಗೆ'

ಹೀಗೆ ದೇವರ ಹೆಸರೆತ್ತಿ ಐವಾನನು ಬಿಟ್ಟಕೂಡಲೆ, ನೀರಿಗೆಸೆದ ಕಲ್ಲಿನಂತೆ ಮರಿಪಿಶಾಚಿಯು ನೆಲದಲ್ಲಿ ಮುಳುಗಿತು. ಬಿಲಮಾತ್ರ ಕಾಣುತ್ತಿತ್ತು.

ಐವಾನನು ಬೇರಿನ ಇನ್ನೆರಡು ಚೂರುಗಳನ್ನು ಟೋಪಿಯಲ್ಲಿಟ್ಟು ಉಳುಮೆಯನ್ನು ಮುಂದಕ್ಕೆ ಸಾಗಿಸಿದನು. ಬಿಟ್ಟಿದ್ದುದನ್ನು ಮುಗಿಸಿ ಮನೆಗೆ ಹೋದನು. ಕುದುರೆಯನ್ನು ಬಿಟ್ಟುಕೊಟ್ಟು, ಗುಡಿಸಲಿಗೆ ಬಂದು

ಶೂರ ಸೈಮನನೂ ಅವನ ಹೆಂಡತಿಯೂ ರಾತ್ರಿಯೂಟಕ್ಕೆ ಕುಳಿತಿರುವುದನ್ನು ಕಂಡನು. ಅವನ ಜಹಗೀರು ರಾಜ್ಯಕ್ಕಾಗಿತ್ತು, ಅವನು ಹೇಗೆ ಹೇಗೋ ಸೆರೆಯಿಂದ ತಪ್ಪಿಸಿಕೊಂಡು, ತಂದೆಯ ಮನೆಗೆ ಓಡಿಬಂದಿದ್ದನು.

ಸೈಮನನು ಐವಾನನನ್ನು ಕಂಡು 'ನಿನ್ನೊಡನೆ ಇರಬೇಕೆಂದು ಬಂದೆ. ಬೇರೆ ಕೆಲಸ ಸಿಗುವವರೆಗೆ ನನಗೂ ನನ್ನ ಹೆಂಡತಿಗೂ ಅನ್ನ ಹಾಕು' ಎಂದನು.

ಐವಾನನು 'ಆಗಲೇಳು, ಇಲ್ಲೇ ಇರು' ಎಂದನು

ಆದರೆ ಐವಾನನು ಊಟಕ್ಕೆ ಕೂರಲಿರುವಾಗ, ಸೈಮನನ ಹೆಂಡತಿಗೆ ಅವನ ವಾಸನೆ ಸರಿಬೀಳಲಿಲ್ಲ. 'ಕೊಳಕು ರೈತನೊಡನೆ ಊಟಮಾಡಲಾರೆ' ಎಂದು ಗಂಡನಿಗೆಂದಳು.

ಶೂರ ಸೈಮನನು, 'ನನ್ನವಳಿಗೆ ನಿನ್ನ ವಾಸನೆ ಚೆನ್ನಾಗಿಲ್ಲವಂತೆ. ನೀನು ಹೊರಗೆ ಹೋಗಿ ತಿನ್ನು' ಎಂದನು.

'ಆಗಲೇಳು, ಹೇಗಿದ್ದರೂ ರಾತ್ರಿ ಹೊರಗೆ ಹೋಗಿ ಕುದುರೆಯನ್ನು ಮೇಯಿಸಬೇಕು'

ಹೀಗೆ ಹೇಳಿ ಐವಾನನು ಕೊಂಚ ರೊಟ್ಟಿಯನ್ನೂ ತನ್ನ ಅಂಗಿಯನ್ನೂ ತೆಗೆದುಕೊಂಡು ಕುದುರೆಯೊಡನೆ ಹೊಲದೆಡೆಗೆ ಹೊರಟನು.

ಸೈಮನನ ಮರಿಪಿಶಾಚಿ ತನ್ನ ಆ ರಾತ್ರಿಯ ಕಲಸವನ್ನು ಮುಗಿಸಿ, ಒಪ್ಪಿಗೆಯಂತೆ ಚಪ್ಪತಕಡಿಯನ್ನು ದಾರಿಗೆ ತರುವುದಕ್ಕಾಗಿ, ಐವಾನನ ಮರಿಪಿಶಾಚಿಗೆ ಸಹಾಯಮಾಡಲು ಬಂದಿತು. ಬಂದು ಹೊಲದಲ್ಲಿ ನೋಡಿದರೆ, ತನ್ನ ಜತೆಗಾರನ ಬದಲು ಬಂದು ಬಿಲ ಮಾತ್ರವಿತ್ತು.

'ಸರಿ! ಅದಕ್ಕೇನೋ ಗ್ರಹಚಾರ ಬಂದಿದೆ. ಅದರ ಬದುಲು ನಾನೇ ಬರಬೇಕು. ಹೊಲ ಉತ್ತಿದ್ದಾನೆ, ಆದರೆ ಹುಲ್ಲುಗಾವಲಿಗೆ ಬರುತ್ತಾನಲ್ಲ ಚಪ್ಪತಕಡಿ' ಎಂದು ಯೋಚಿಸಿತು.

೪

ಮರಿಪಿಶಾಚಿಯು ಹುಲ್ಲುಗಾವಲಿಗೆ ಹೋಗಿ, ಅಲ್ಲಿಯ ಹುಲ್ಲೊಟ್ಟುಗಳನ್ನು ನೀರಿನಲ್ಲಿ ಕೊಚ್ಚಿಸಿತು. ಅಲ್ಲೆಲ್ಲ ಮಣ್ಣಾಯಿತು.

ಐವಾನನು ಉಷೆಯಲ್ಲಿ ಕಾವಲಿನಿಂದ ಬಂದು, ಕುಡುಲನ್ನು ಮಸೆದು, ಹುಲ್ಲುಕೊಯ್ಯಲು ಹೊರಟನು. ಕುಯ್ಯಲಿಟ್ಟಾಗ, ಒಂದೆರಡುಸಲ ತಿರುಗಿಸಿದುದಕ್ಕೇ ಅಲುಗು ಬಾಗಿತು, ಕುಯ್ಯಲಾಗಲಿಲ್ಲ. ಪುನಃ ಮಸೆಯಬೇಕಾಯಿತು ಐವಾನನು ಕೊಂಚಹೊತ್ತು ಹೆಣಗಾಡಿ 'ಇದೇನು ಸುಖವಿಲ್ಲ ಮನೆಗೆ ಹೋಗಿ ಈ ಕುಡುಲನ್ನು ಸರಿಪಡಿಸಲು ಸಾಮಾನು ತರಬೇಕು ಹಾಗೆಯೇ ರೊಟ್ಟಿ ಚೂರನ್ನೂ ತರಬೇಕು. ಒಂದು ವಾರವಾದರೂ ಆಗಲಿ ಇದನ್ನೆಲ್ಲ ಕುಯ್ಯದೆ ಬಿಡುವನೇನು!' ಎಂದುಕೊಂಡನು.

ಮರಿಪಿಶಾಚಿ ಅದನ್ನು ಕೇಳಿ 'ಭಾರಿ ಗಿರಾಕಿ ಇವನು. ಹೀಗೆ ಮಾಡಿದರೆ ಇವನ ಹತ್ತಿರ ನಡೆಯುವುದಿಲ್ಲ. ಬೇರೆ ಹಿಕ್ಮತ್ ಮಾಡಬೇಕು' ಎಂದುಕೊಂಡಿತು.

ಐವಾನನು ಹಿಂದಿರುಗಿ, ಕುಡುಲನ್ನು ಮಸೆದು, ಕುಯ್ಯಲಾರಂಭಿಸಿದನು. ಮರಿಪಿಶಾಚಿಯು ಹುಲ್ಲಿನೊಳಗೆ ನುಸಿದು, ಕುಡುಲಿಗೆ ಹಿಮ್ಮಡಿ ಕೊಟ್ಟು, ಅದರ ಮೊನೆಯನ್ನು ನೆಲಕ್ಕೆ ತಿರುಗಿಸುತ್ತಿತ್ತು. ಐವಾನನು, ಕಷ್ಟವಾದರೂ ಎಲ್ಲವನ್ನೂ ಕತ್ತರಿಸಿದನು. ಜೌಗಿನಲ್ಲಿ ಸಣ್ಣ ಚೂರೊಂದು ಹಾಗೆಯೇ ನಿಂತಿತು. ಮರಿಪಿಶಾಚಿಯು ಜೌಗನ್ನು ಸೇರಿ 'ನನ್ನ ಕಾಲು ಹೋದರೆ ಹೋಯಿತು. ಈಗ ಅವನನ್ನು ಬಿಡುತ್ತೇನೆಯೇನು!' ಎಂದುಕೊಂಡಿತು.

ಐವಾನನು ಜೌಗಿಗೆ ಬಂದನು. ಅಲ್ಲಿ ಹುಲುಸಲ್ಲದಿದ್ದ ಕಡೆ ಕುಯ್ಯಲು ಕಷ್ಟವಾಗಿತ್ತು. ಐವಾನನು ರೇಗಿ ಕುಡುಲನ್ನು ಸಿಕ್ಕಿದಂತೆ ತಿರುಗಿಸಲಾರಂಭಿಸಿದನು. ಮರಿಪಿಶಾಚಿಗೆ ಸಾಕಾಯಿತು. ಅವನ ಜತೆಗೆ ಹೆಣಗುವುದು ಸಾಧ್ಯವಿಲ್ಲೆಂದು ಪೊದೆಯೊಂದಕ್ಕೆ ಓಡಿಹೋಯಿತು.

ಐವಾನನು ಪೊದೆಯನ್ನು ಕತ್ತರಿಸುವಾಗ ಅದರ ಬಾಲವನ್ನೂ ಕತ್ತರಿಸಿ ಬಿಟ್ಟನು. ಐವಾನನು ಹುಲ್ಲು ಕುಯಿದು, ಮಾರ್ಥಳಿಗೆ ಅದನ್ನು ಒಟ್ಟು ಹಾಕುವಂತೆ ಹೇಳಿ, ರೈ*ಯನ್ನು ಕುಯ್ಯಲು ತಾನೇ ಹೊರಟನು. ಇವನು ಹೋಗುವ ಮೊದಲೇ ಆ ಮೊಂಡುಬಾಲದ ಮರಿಪಿಶಾಚಿಯು ಅಲ್ಲಿ ಸೇರಿ, ರೈಯನ್ನೆಲ್ಲಾ ಗೋಜಲು ಮಾಡಿತ್ತು. ಕುಡುಲು ಉಪಯೋಗವಿರದಿರಲು, ಐವಾನನು ಮನೆಯಿಂದ ಕುಡುಗೋಲನ್ನು ತಂದು, ಅದರಿಂದ ರೈಯೆಲ್ಲವನ್ನೂ ಕುಯ್ದನು.

'ಇನ್ನು ಓಟ್ಸ್ ಕುಯ್ಯುವ ಹೊತ್ತಾಯಿತು' ಎಂದನು.

ಮೊಂಡಬಾಲದ ಮರಿಪಿಶಾಚಿಯು ಅದನ್ನು ಕೇಳಿ 'ರೈನಲ್ಲಿ ಆಗಲಿಲ್ಲ. ಓಟ್ಸ್‌ನಲ್ಲಿ ಮಾಡುತ್ತೇನೆ ಇವನಿಗೆ, ಬೆಳಗಾಗಲಿ' ಎಂದಿತು.

ಮಾರನೆಯ ದಿನ ಬೆಳಗ್ಗೆ ಓಟ್ಸ್ ಹೊಲಕ್ಕೆ ಮರಿಪಿಶಾಚಿಯು ಓಡಿತು. ಆದರೆ ಕುಯ್ಯಲಾಗಿಹೋಗಿತ್ತು. ಹೆಚ್ಚು ಕಾಳು ಹೋಗಬಾರದೆಂದು ಐವಾನನು ರಾತ್ರಿಯೇ ಕುಯ್ಯಲಿಗೆ ಕೈಹಾಕಿದ್ದನು. ಮರಿಪಿಶಾಚಿಗೆ ಕೋಪ ಕೆರಳಿತು.

'ಮೈಯೆಲ್ಲ ಗಾಯಮಾಡಿ, ಸುಸ್ತುಮಾಡಿದಾನೆ—ಬೆಪ್ಪುತಕಡಿ! ಏನು! ಯುದ್ಧಕ್ಕಿಂತ ಕೇಡಾಯ್ತು! ದರಿದ್ರನ ಬೆಪ್ಪುಮಗ ನಿದ್ರೆಮಾಡುವುದಿಲ್ಲ. ಇವನ ಜತೆಗೆ ಯಾರು ಕಾಯುತ್ತಾರೆ. ಅವನ ಮೆದೆಗಳಿಗೆ ಹೋಗಿ ಎಲ್ಲಾ ಕೊಳೆಯಿಸಿಬಿಡುತ್ತೇನೆ'

ಹೀಗೆಂದು, ರೈ ಮೆದೆಗಳನ್ನು ಹೊಕ್ಕು ಎಲ್ಲವನ್ನೂ ಕೊಳೆಯಿಸಿತು. ಅವುಗಳಲ್ಲಿ ಶಾಖವನ್ನುಂಟುಮಾಡಿ, ಬೆಚ್ಚಗಿರಲು, ನಿದ್ರೆಹೋಯಿತು.

ಐವಾನನು ಗಾಡಿಗೆ ಕುದುರೆ ಕಟ್ಟಿ, ರೈಯನ್ನು ಸಾಗಿಸಲು ಆ ಹುಡುಗಿಯೊಡನೆ ಹೋದನು. ಮೆದೆಯ ಹತ್ತಿರ ಬಂದು, ರೈಯನ್ನು ಗಾಡಿಗೆ ಏರಿಸುತ್ತಿದ್ದನು. ಎರಡು ಕಂತೆ ಎಸೆದು, ಪುನಃ ಕವಲುಗೋಲನ್ನು

---

* ಒಂದು ತೆರದ ಧಾನ್ಯ

ಮೆದೆಗಿಕ್ಕುವಾಗ, ಮರಿಪಿಶಾಚಿಯು ಬೆನ್ನಿಗೆ ಚುಚ್ಚಿದನು. ಕೋಲನ್ನು ಮೇಲೆತ್ತಿದರೆ, ಅದರ ಕವಲೊಂದರ ಮೊನೆಯಲ್ಲಿ ಸಜೀವವಾದ ಮರಿಪಿಶಾಚಿ! ಮೊಂಡುಬಾಲ! ಕೆಳಕ್ಕೆ ಧುಮುಕಲು ಒದ್ದಾಡುತ್ತಿತ್ತು

'ಅಧ್ವಾನವೆ! ತಿರಿಗಿ ಬಂದೆಯಾ?'

'ನಾನು ಬೇರೆ. ಮೊದಲನೆಯವನು ನನ್ನಣ್ಣ. ನಾನು ನಿಮ್ಮಣ್ಣ ಸೈಮನನ ಜತೆಯಲ್ಲಿದ್ದೆ.'

'ನೀ ಯಾರಾದರೇನು! ನಿನಗೂ ಅದೇ ಗತಿ ತಾನೆ!'

ಎಂದು ಅದನ್ನೆತ್ತಿ ಗಾಡಿಗೆ ರಾಚಬೇಕಂದಿರುವಾಗ 'ನನ್ನನ್ನು ಬಿಟ್ಟುಬಿಡು. ಪುನಃ ಬರುವುದಿಲ್ಲ. ನೀನೇನು ಕೇಳಿದರೂ ಮಾಡುತ್ತೇನೆ' ಎಂದು ಮರಿಪಿಶಾಚಿ ಕೂಗಿಕೊಂಡಿತು

'ನೀನೇನು ಮಾಡಬಲ್ಲೆ?'

'ಏನನ್ನು ಬೇಕಾದರೂ ಸೈನಿಕರನ್ನಾಗಿ ಮಾಡುತ್ತೇನೆ.

'ಅವರಿಂದ ಏನು ಪ್ರಯೋಜನ?'

'ಅವರ ಕೈಲಿ ಏನು ಬೇಕಾದರೂ ಮಾಡಿಸಬಹುದು. ಏನು ಬೇಕಾದರೂ!'

'ಹಾಡುತ್ತಾರೆಯೆ?'

'ಓಹೋ!'

'ಸರಿ, ಮತ್ತೆ. ಎಲ್ಲಿ ಮಾಡು.'

'ಇದೋ, ಈ ರೈ ಕಂತೆ ತೆಗೆದುಕೊಂಡು ನೆಲದಮೇಲೆ ನಿಲ್ಲಿಸಿ,

ಕಂತೆ ಕಂತೆ ನನ್ನ ಗುಲಾಮ
ಕೊಟ್ಟನು ಆಜ್ಞೆಯ ನಿನಗೀಗ,
ಇಲ್ಲಿಯ ಕಂತೆಯ ಕಡ್ಡಿಗಳೆಲ್ಲಾ
ಸೈನಿಕರಾಗಲಿ—ಸೈನಿಕರು

ಎಂದು ಹೇಳು' ಎಂದು ಮರಿಪಿಶಾಚಿಯೆಂದಿತು.

ಐವಾನನು ಕಂತೆಯನ್ನು ನೆಲಕ್ಕೆ ಬಡಿದು, ಮರಿಪಿಶಾಚಿಯಿಂದಂತೆಯೇ ಮಾಡಿದನು. ಕಂತೆಯು ಚೂರುಚೂರಾಗಿ, ಸೈನಿಕರಾಯಿತು. ಮುಂದುಗಡೆ ಒಬ್ಬ ತುತೂರಿಯವನೂ ಒಬ್ಬ ತಂಬಟೆಯವನೂ ಬಾರಿಸುತ್ತಿದ್ದರು

ಐವಾನನು ನಕ್ಕನು

'ಭೇಷ್! ಭಲೆ! ಇದನ್ನು ಹುಡುಗಿಯರಿಗೆ ತೋರಿಸಬೇಕು' ಎಂದನು

'ನನ್ನನ್ನು ಈಗ ಬಿಡು' ಎಂದಿತು ಪಿಶಾಚಿ

ಐವಾನನು 'ಇಲ್ಲ. ಸೈನಿಕರನ್ನು ದವಸವನ್ನಾಗಿ ಮಾಡಬೇಕು ಇಲ್ಲದಿದ್ದರೆ ಕಾಳು ಹಾಳಾಗುತ್ತೆ. ಎಲ್ಲಿ, ಇವರನ್ನು ಕಂತೆ ಮಾಡುವುದು ಹೇಗೆ? ನಾನು ಕಾಳು ಬಡಿಯಬೇಕು' ಎಂದನು

ಮರಿಪಿಶಾಚಿಯು.

'ಸೈನಿಕರೆಲ್ಲರು ಮೊದಲಂತೆ<br>
ಕಂತೆಗಳಾಗಿರಿ ಚಟಚಟನೆ,<br>
ನಚ್ಚಿನಮೆಚ್ಚಿನ ನನ್ನ ಗುಲಾಮ<br>
ಕೊಟ್ಟಿಹನೀ ಕಟ್ಟಾಜ್ಞೆಯನು

ಎಂದು ಹೇಳು' ಎಂದಿತು.

ಐವಾನನು ಹೇಳಿದನು ಮರಳಿ ಕಂತೆಯಾಯಿತು.

ಪುನಃ 'ನನ್ನನ್ನು ಬಿಡು' ಎಂದು ಮರಿಪಿಶಾಚಿ ಬೇಡಿತು.

'ಆಗಲೇಳು' ಎಂದು ಐವಾನನು ಅದರ ಕಾಲುಹಿಡಿದು, ಕವಲು ಕಡ್ಡಿಯಿಂದ ಬಿಡಿಸಿ

'ದೇವರು ಒಳ್ಳೆಯದುಮಾಡಲಿ ನಿನಗೆ' ಎಂದನು.

ದೇವರು ಎಂದಕ್ಷಣ, ನೀರಿನಲ್ಲಿಟ್ಟ ಕಲ್ಲಿನಂತೆ ಮರಿಪಿಶಾಚಿ ಭೂಮಿಯಲ್ಲಿ ಮುಳುಗಿತು. ಒಂದು ಬಿಲ ಮಾತ್ರ ಮಿಕ್ಕಿತ್ತು.

ಐವಾನನು ಮನೆಗೆ ಬಂದನು. ಅವನ ಅಣ್ಣ ತಾರಸನು ಹೆಂಡತಿಯೊಡನೆ ರಾತ್ರಿಯೂಟಕ್ಕೆ ಕುಳಿತಿದ್ದನು

ರೋಣಯು ತಾರಸನು ಸಾಲ ತೀರಿಸಲಾರದೆ, ಸಾಲಗಾರರಿಂದ ತಲೆತಪ್ಪಿಸಿಕೊಂಡು ತಂದೆಯ ಮನೆಗೆ ಓಡಿಬಂದಿದ್ದನು. ಐವಾನನನ್ನು ಕಂಡು 'ನೋಡಿಲ್ಲಿ! ನಾನು ತಿರುಗಿ ವ್ಯಾಪಾರ ಹೂಡುವವರೆಗೂ ನನಗೂ ನನ್ನ ಹೆಂಡತಿಗೂ ಹಿಟ್ಟು ಹಾಕಬೇಕು' ಎಂದನು

'ಆಗಲೇಳು, ಇಲ್ಲೇ ಇರು' ಎಂದನು ಐವಾನ್.

ಐವಾನನು ಅಂಗಿ ಬಿಚ್ಚಿ ಊಟಕ್ಕೆ ಕುಳಿತರೆ, ವರ್ತಕನ ಹೆಂಡತಿಯು 'ಈ ಬೆಪ್ಪುತಕಡಿಯು ಜತೆಯಲ್ಲಿ ನಾನು ಊಟಮಾಡಲಾರೆ ಬೆವರಿನ ಗಬ್ಬು ಹೊಡೆಯುತ್ತಿದೆ' ಎಂದಳು

ಆಗ 'ಐವಾನ್! ನಿನ್ನ ಹತ್ತಿರ ಕೊಳಕು ನಾತ ಹೊರಗೆ ಹೋಗಿ ಊಟಮಾಡು' ಎಂದು ರೋಣಯ ತಾರಸ್ ಹೇಳಿದನು

'ಆಗಲೇಳು. ಹೇಗಿದ್ದರೂ ಹೊರಗೆ ಹೋಗಿ ಕುದುರೆ ಮೇಯಿಸುವ ಹೊತ್ತಾಯಿತು' ಎಂದು ಐವಾನನು ಸ್ವಲ್ಪ ರೊಟ್ಟಿ ತೆಗೆದುಕೊಂಡು ಬಯಲಿಗಿಳಿದನು.

೫

ತಾರಸನ ಮರಿಪಿಶಾಚಿಗೂ ಆ ರಾತ್ರಿ ಬಿಡುವಿದ್ದುದರಿಂದ, ತನ್ನ ಜತೆಗಾರರ ಸಹಾಯಕ್ಕಾಗಿ ಬಂದಿತು ಬೆಪ್ಪುತಕಡಿ ಐವಾನನನ್ನು ತಹಬಂದಿಗೆ ತರಬೇಕಂದು, ಹೊಲಕ್ಕೆ ಬಂದು ನೋಡಿತು. ಎಲ್ಲಿ ನೋಡಿದರೂ ಯಾರ ಸುಳಿವೂ ಇರಲಿಲ್ಲ. ಒಂದು ಬಿಲ ಮಾತ್ರ ಕಾಣಿಸಿತು. ಅಲ್ಲಿಂದ ಕಾವಲಿಗೆ ಹೋಗಿ ಜೌಗಿನಲ್ಲಿ ಒಂದು ಬಿಲವನ್ನೂ, ರೈ ಕಣದಲ್ಲಿ ಒಂದು ಬಿಲವನ್ನೂ ಕಂಡಿತು.

'ಸರಿ! ಅವರಿಗೇನೋ ವಕ್ರಿಸಿದೆ. ಅವರ ಬದಲು ನಾನೇ ಈ ಬೆಪ್ಪುತಕಡಿಯನ್ನು ವಿಚಾರಿಸಿಕೊಳ್ಳಬೇಕು' ಎಂದುಕೊಂಡಿತು.

ಐವಾನನು ಕಾಳನ್ನು ತುಂಬಿ ಮರಗಳನ್ನು ಕಡಿಯುತ್ತಿದ್ದಲ್ಲಿಗೆ ಮರಿ ಪಿಶಾಚಿ ಹೋಯಿತು. ಇಬ್ಬರು ಅಣ್ಣಂದಿರೂ ಇರಲು ಸ್ಥಳ ಸಂಕೋಚ ವೆಂದು ಮರಗಳನ್ನು ಕಡಿದು ತಮಗೆ ಹೊಸಮನೆ ಕಟ್ಟುವಂತೆ ಬೆಪ್ಪುತಕಡಿಗೆ ಹೇಳಿದ್ದರು.

ಮರಿಪಿಶಾಚಿಯು ಕಾಡಿಗೆ ಓಡಿ, ಮರದ ಕೊಂಬೆಗಳಲ್ಲಿ ಕುಳಿತು, ಐವಾನನು ಮರ ಬೀಳಿಸುವುದಕ್ಕೆ ಅಡ್ಡಿ ಮಾಡುತ್ತಿತ್ತು. ಐವಾನನು ಬೀಳಿಸ ಬೇಕೆಂದು ಕಡಿದ ಮರವು ತಿರುಗಿಕೊಂಡು ಕೊಂಬೆಗಳಲ್ಲಿ ತಗುಲಿಕೊಂಡಿತು. ಅದನ್ನು ಪಕ್ಕಕ್ಕೆತ್ತಲು ಬೇರೆ ಗಣೆಯನ್ನು ಕಡಿದು, ಪ್ರಯಾಸದಿಂದ ಮರ ವನ್ನುರುಳಿಸಿದನು ಮತ್ತೊಂದು ಮರವನ್ನುರುಳಿಸುವಾಗಲೂ ಹೀಗೆಯೇ ಆಯಿತು ಎಷ್ಟು ಕಷ್ಟಪಟ್ಟರೂ ಮರ ಸರಿಯಾಗಿ ಬೀಳುತ್ತಿರಲಿಲ್ಲ. ಮೂರನೆಯ ಮರ ಉರುಳಿಸುವಾಗಲೂ ಹೀಗೆಯೇ ಆಯಿತು.

ಐವಾನನು, ಐವತ್ತು ಚಿಕ್ಕ ಮರಗಳನ್ನು ಉರುಳಿಸಬೇಕಂದಿದ್ದವನು, ಹತ್ತು ಮರಗಳನ್ನು ಕೂಡ ಉರುಳಿಸಿರಲಿಲ್ಲ. ಆಗಲೇ ರಾತ್ರಿಯಾಗುತ್ತಿತ್ತು. ಐವಾನನಿಗೆ ಸಾಕಾಗಿತ್ತು. ಅವನಿಂದ ಹೊರಟ ಹಬೆಯು ಕಾಡಿನಲ್ಲೆಲ್ಲ ಮಂಜಿನಂತೆ ಹರಡಿದರೂ, ಇನ್ನೂ ಕೆಲಸ ಕಚ್ಚಿದ್ದನು ಇನ್ನೊಂದು ಮರ ಹೊಡೆದನು. ಬೆನ್ನು ಬಿಗಿಯುತ್ತಿತ್ತು, ನಿಲ್ಲಲಾಗುತ್ತಿರಲಿಲ್ಲ. ಮರಕ್ಕೆ ಕೊಡಲಿಯನ್ನು ಸಿಕ್ಕಿಸಿ ಸುದಾರಿಸಿಕೊಳ್ಳಲು ಕುಳಿತುಕೊಂಡನು

ಐವಾನನು ಕೆಲಸ ನಿಲ್ಲಿಸಿದುದನ್ನು ಕಂಡು ಮರಿಪಿಶಾಚಿಗೆ ಹರ್ಷ ವಾಯಿತು.

'ಕೊನೆಗೆ ಸುಸ್ತಾದ. ಇನ್ನು ಬಿಟ್ಟುಬಿಡುತ್ತಾನೆ ನಾನೂ ಕೊಂಚ ಸುದಾರಿಸಿಕೊಳ್ಳುತ್ತೇನೆ.'

ಒಂದು ಕೊಂಬೆಯಮೇಲೆ ಕಾಲೆಸೆದು ಕುಳಿತುಕೊಂಡು, ಸಕ್ಕಿತು ಆದರೆ ಐವಾನನು ಎದ್ದು, ಕೊಡಲಿಯನ್ನು ಎಳೆದು ಬೀಸಿದನು. ಮರಕ್ಕೆಟ್ಟ ಬಿರುಸಿನಲ್ಲಿ ಮರವೊಡೆದು ಸರ್ರ ಸುರುಳಿತು. ಮರಿಪಿಶಾಚಿಗೆ ಅದರ ಅರಿವಿರಲಿಲ್ಲ.

ಕಾಲೆಳೆದುಕೊಳ್ಳಲು ಕಾಲಪರಲಿಲ್ಲ ಒಡೆದೂ ಕಂಬೆಯಲ್ಲಿ ಕಾಲು ಸಿಕ್ಕಿಕೊಂಡಿತು. ಐವಾನನು ಕೊಂಬೆಗಳನ್ನು ತರಿಯುತ್ತ, ಜೀವಿತವಾದ ಮರಿಪಿಶಾಚಿಯನ್ನು ಕಂಡನು. ಐವಾನನಿಗೆ ಆಶ್ಚರ್ಯವಾಯಿತು

'ಅಯ್ಯೋ ಅನಿಷ್ಟವೆ! ತಿರುಗಿ ಬಂದೆಯಾ!' ಎಂದನು

ಅದು 'ನಾನು ಬೇರೆ. ನಿಮ್ಮಣ್ಣ ತಾರಸನ ಜತೆಯಲ್ಲಿದ್ದೆ' ಎಂದಿತು.

'ನೀನು ಯಾರಾದರೇನು. ನಿನಗೂ ಅದೇ ಗತಿ' ಎಂದು ಐವಾನನು ಕೊಡಲಿ ಬೀಸಿ, ಹಿಡಿಯಿಂದ ಹೊಡೆಯಬೇಕು, ಅಷ್ಟರಲ್ಲಿ ಮರಿಪಿಶಾಚಿಯು 'ಹೊಡೆಯಬೇಡ ನಿನಗೇನು ಬೇಕಾದರೂ ಮಾಡಿಕೊಡುತ್ತೇನೆ' ಎಂದು ಗೋಗರೆಯಿತು.

'ನೀನೇನು ಮಾಡಬಲ್ಲೆ?'

'ನಿನಗೆ ಬೇಕಾದಷ್ಟು ಹಣ ಮಾಡಬಲ್ಲೆ'

'ಅದು! ಮಾಡು, ಎಲ್ಲಿ!'

ಮರಿಪಿಶಾಚಿಯು ಹೇಗೆಂಬುದನ್ನು ತೋರಿಸಿತು.

'ಈ ಓಕ್ ಮರದಿಂದ ಕೆಲವು ಎಲೆಗಳನ್ನು ತೆಗೆದು, ಕೈಯ್ಯಲ್ಲಿ ಉಜ್ಜು. ಚಿನ್ನ ಬೀಳುತ್ತದೆ' ಎಂದಿತು.

ಐವಾನನು ಕಲವು ಎಲೆಗಳನ್ನು ತೆಗೆದುಕೊಂಡು, ಉಜ್ಜಿದನು. ಚಿನ್ನ ಚೆಲ್ಲಿತು.

'ಇದೀಗ! ಎರಾಮುಕಾಲದಲ್ಲ ಹುಡುಗರಿಗೆ ಆಡುವುದಕ್ಕೆ ಚೆನ್ನಾಗಿದೆ'.

'ನನ್ನನ್ನು ಈಗ ಬಿಡು' ಎಂದಿತು ಮರಿಪಿಶಾಚಿ.

'ಆಗಲೇಳು' ಎಂದು ಐವಾನನು ಗಣೆಯೆತ್ತಿ ಅದನ್ನು ಬಿಡಿಸಿ 'ದೇವರು ಒಳ್ಳೆಯದು ಮಾಡಲಿ ನಿನಗೆ' ಎಂದನು.

ದೇವರ ಹೆಸರೆತ್ತಿದ ಕ್ಷಣ, ನೀರಿನಲ್ಲಿಟ್ಟ ಕಲ್ಲಿನಂತೆ, ಮರಿಪಿಶಾಚಿಯು ನೆಲದಲ್ಲಿ ಮುಳುಗಿತು. ಒಂದು ಬಿಲ ಮಾತ್ರ ಉಳಿಯಿತು.

೬

ಹೀಗೆ ಸೋದರರು ಮನೆ ಕಟ್ಟಿ ಬೇರೆ ಬೇರೆ ಇದ್ದರು ಐವಾನನು ಸುಗ್ಗಿಯ ಕೆಲಸವನ್ನು ಮುಗಿಸಿ, ಹೆಂಡದ ಭಟ್ಟಿಯಿಳಿಸಿ, ಸೋದರರನ್ನು ಮರುದಿವಸದ ಔತಣಕ್ಕೆ ಕರೆದನು. ಅವನ ಸೋದರರು ಬರಲಿಲ್ಲ.

'ರೈತನ ಹಬ್ಬ ಎಂದರೆ ಗೊತ್ತಿಲ್ಲವೆ!' ಎಂದರವರು.

ಐವಾನನು ರೈತರನ್ನೂ ಅವರ ಹೆಂಡಿರನ್ನೂ ಕರೆದು, ನೆತ್ತಿಗೇರುವ ತನಕ ಕುಡಿದನು. ಅಲ್ಲಿಂದ ಹೊರಗೆ ಕುಣಿತದವರ ಬಳಿ ಹೋದನು. ಅವರ ಬಳಿ ಹೋಗಿ 'ನನ್ನ ಮೇಲೊಂದು ಹಾಡು ಹಾಡಿ. ನಿಮಗೊಂದು ತಮಾಷೆ ಕೊಡುತ್ತೇನೆ. ನೀವೆಂದೂ ಅಂಥದನ್ನು ಕಂಡಿಲ್ಲ' ಎಂದು ಹೆಂಗಸರಿಗೆಂದನು.

ಹೆಂಗಸರು ನಕ್ಕು ಅವನ ಹೊಗಳನ್ನು ಹಾಡಿದರು. ಮುಗಿಸಿದ ಮೇಲೆ 'ನಿನ್ನ ಒಹುಮಾನ ಕೊಡು' ಎಂದರು.

'ಇದೋ ತಂದೆ' ಎಂದನು ಐವಾನ್.

ಒಂದು ಬೀಜದ ಬುಟ್ಟಿಯನ್ನು ಕಾಡಿಗೆ ಎತ್ತಿಕೊಂಡು ಓಡಿದನು. ಹೆಂಗಸರು 'ಅದೊಂದು ಬೆಪ್ಪುತಕಡಿ' ಎಂದು ನಕ್ಕು, ಅವನ ವಿಚಾರ ಮರೆತರು.

ಆದರೆ ಐವಾನನು ಹಿಂದಕ್ಕೆ ಓಡಿ ಒಂದನು. ಬುಟ್ಟಿಯಲ್ಲಿ ಏನೋ ತುಂಬಿತ್ತು.

'ಹಂಚಲೇನು?'

'ಹಂಚು, ಹಂಚು'.

ಐವಾನನು ಹಿಡಿ ಚಿನ್ನವನ್ನು ಹೆಂಗಸರಿಗೆಸೆದನು. ಅವರು ಮೇಲೆಬಿದ್ದು ಅದನ್ನು ಆಯುವುದನ್ನು ನೋಡಬೇಕಿತ್ತು. ಗಂಡಸರು ಸುತ್ತ ಗೇರಾಯಿಸಿ ಕೊಂಡು ಒಬ್ಬರಿಂದೊಬ್ಬರು ಅದನ್ನು ಕಿತ್ತುಕೊಳ್ಳುತ್ತಿದ್ದರು. ಒಬ್ಬ ಮುದುಕಿಯು ಅಲ್ಲಿ ಸಿಕ್ಕಿ ಆಗಿಯೇ ಹೋಗಿದ್ದಳು. ಐವಾನನು ನಕ್ಕನು.

'ನೀವೆಲ್ಲ ಗುಗ್ಗುಗಳು. ಆ ಅಜ್ಜಿಯನ್ನು ಏತಕ್ಕೆ ಸಾಯಿಸುತ್ತೀರಿ! ಸುಮ್ಮನಿರಿ, ಇನ್ನೂ ಕೂಡುತ್ತೇನೇ' ಎಂದು ಇನ್ನೂ ಎಸೆದನು. ಜನರೆಲ್ಲ ಮುತ್ತಿದರು. ಅವರು ಇನ್ನೂ ಕೇಳಿದರು. 'ಈಗಿರುವುದಷ್ಟೆ. ಇನ್ನೊಂದು ಸಲ ಇನ್ನೂ ಕೊಡುತ್ತೇನೆ. ಈಗ ಕುಣಿಯೋಣ. ಎಲ್ಲಿ, ಹಾಡಿ' ಎಂದನು.

ಹೆಂಗಸರು ಹಾಡತೊಡಗಿದರು.

'ನಿಮ್ಮ ಹಾಡು ಚೆನ್ನಾಗಿಲ್ಲ' ಎಂದನು.

'ಯಾವ ಹಾಡು ಇದಕ್ಕಿಂತ ಚೆನ್ನಾಗಿದೆ?' ಎಂದರವರು.

'ತೋರಿಸುತ್ತೇನೆ' ಎಂದನು.

ಕಣಜಕ್ಕೆ ಹೋಗಿ, ಕಂತೆಯೊಂದನ್ನು ತೆಗೆದು, ಒಡಿದು ನೆಲದ ಮೇಲೆ ನಿಲ್ಲಿಸಿದನು.

'ಎಲ್ಲಿ!

ಕಂತೆ ಕಂತೆ ನನ್ನ ಗುಲಾಮು
ಕೊಟ್ಟನು ಅಜ್ಜಿಯು ನಿನಗೀಗ
ಇಲ್ಲಿಯ ಕಂತೆಯು ಕಡ್ಡಿಗಳೆಲ್ಲಾ
ಸೈನಿಕರಾಗಲಿ—ಸೈನಿಕರು' ಎಂದನು

ಕಂತೆ ಒಂದು ಸೈನಿಕರಾದುವು. ತುತೂರಿ ಭೇರಿಗಳು ಬಾರಿಸ ತೊಡಗಿದುವು. ಐವಾನನು, ಬಾರಿಸಿ ಹಾಡಬೇಕೆಂದು ಸೈನಿಕರಿಗೆ ಆಜ್ಞಾಪಿಸಿದನು. ಅವರ ಜತೆಯಲ್ಲಿ ಬೀದಿಗೆ ಬಂದನು. ಜನರೆಲ್ಲಾ ಆಶ್ಚರ್ಯ ಪಟ್ಟರು ಸೈನಿಕರು ಬಾರಿಸಿ ಹಾಡಿದರು. ಆಮೇಲೆ ಐವಾನನು, ತನ್ನನ್ನು ಯಾರೂ ಹಿಂಬಾಲಿಸಕೂಡದೆಂದು ವಿಧಿಸಿ, ಸೈನಿಕರನ್ನು ಕಣಕ್ಕೆ ಕರೆದುಕೊಂಡು ಹೋಗಿ, ಪುನಃ ಕಂತೆಯಾಗಿಸಿ, ಮೂಲೆಗೆಸೆದನು.

ಅಲ್ಲಿಂದ ಮನೆಗೆ ಹೋಗಿ ಲಾಯದಲ್ಲಿ ಮಲಗಿದನು.

೭

ಮರುದಿವಸ ಶೂರ ಸೈಮನನು ಈ ವಿದ್ಯಮಾನಗಳನ್ನು ಕೇಳಿ, ತಮ್ಮನ ಬಳಿಗೆ ಹೋದನು.

'ನಿನಗೆ ಸೈನಿಕರೆಲ್ಲ ಸಿಕ್ಕಿದರು? ಅವರನ್ನೆಲ್ಲಿಗೆ ಕರೆದುಕೊಂಡು ಹೋದೆ'? ಎಂದನು.

'ನಿನಗೇನಂತೆ ಅದೆಲ್ಲಾ ಕಟ್ಟಿಕೊಂಡು ?'

'ನನಗೇನೆ! ಸೈನಿಕರಿದ್ದರೆ ಏನು ಬೇಕಾದರೂ ಮಾಡಬಹುದು. ಬೇಕಾದರೆ ರಾಜ್ಯ ಸಂಪಾದಿಸಬಹುದು!'

ಐವಾನನು ಯೋಚಿಸಿದನು.

'ಹಾಗೇನು! ಮೊದಲೇ ಏಕೆ ಹೇಳಲಿಲ್ಲ? ನಿನಗೆ ಎಷ್ಟು ಬೇಕೋ ಅಷ್ಟು ಮಾಡಿಕೊಡುತ್ತೇನೆ ನಾನೂ ಹುಡುಗಿಯೂ ದವಸ ಒಡಿದುದು ಒಳ್ಳೆಯದಾಯಿತು.'

ಹೀಗೆಂದು ಐವಾನನು ಅವನನ್ನು ಕಣಕ್ಕೆ ಕರೆದುಕೊಂಡು ಹೋಗಿ 'ನೋಡು! ಆ ಸೈನಿಕರನ್ನು ನೀನು ಕರೆದುಕೊಂಡು ಹೋಗಬೇಕು. ಇಲ್ಲದಿದ್ದರೆ ಒಂದೇ ದಿನಕ್ಕೆ ಈ ಹಳ್ಳಿಯನ್ನು ತಿಂದುಬಿಡುತ್ತಾರೆ' ಎಂದನು.

ಶೂರ ಸೈಮನನು ಕರೆದುಕೊಂಡು ಹೋಗುವುದಾಗಿ ಮಾತು ಕೊಟ್ಟನು. ಐವಾನನು ಸೈನಿಕರನ್ನು ಆಗಿಸಿದನು. ಒಂದು ಕಂತೆ ನೆಲಕ್ಕೆ ಒಡಿದನು. ಒಂದು ದಳ ಪ್ರತ್ಯಕ್ಷವಾಯಿತು. ಇನ್ನೊಂದು ಒಡಿದನು ಇನ್ನೊಂದು ದಳ. ಹೊಲವೆಲ್ಲ ತುಂಬುವಷ್ಟು ತಯಾರಿಸಿದನು.

'ಸಾಕೇನು?'

ಸೈಮನನು ಕುಣಿದಾಡಿ 'ಸಾಕು, ಐವಾನ್! ಬಹಳ ಉಪಕಾರ ವಾಯಿತು' ಎಂದನು.

'ಸರಿ! ಇನ್ನೂ ಬೇಕಾದರೆ, ತಿರುಗಿ ಬಾ. ಇನ್ನೂ ಮಾಡಿಕೊಡುತ್ತೇನೆ. ಈಗೇನು, ಬೇಕಾದಷ್ಟು ಹುಲ್ಲಿದೆ.'

ಶೂರ ಸೈಮನನು ಸೈನ್ಯವನ್ನು ಸರಿಗೊಳಿಸಿಕೊಂಡು ಯುದ್ಧ ಮಾಡಲು ಹೊರಟನು.

ಶೂರ ಸೈಮನನು ಹೋದನೋ ಇಲ್ಲವೊ, ರೊಣೆಯ ತಾರಸನು ಒಂದನು. ಅವನಿಗೂ ಹಿಂದಿನ ದಿನದ ಸಮಾಚಾರ ಗೊತ್ತಿತ್ತು.

'ದುಡ್ಡೆಲ್ಲಿಯದೊ ನಿನಗಷ್ಟು' ಅಷ್ಟು ದುಡ್ಡು ನನಗಿದ್ದಿದ್ದರೆ, ಇನ್ನೂ ಎಷ್ಟೋ ಸಂಪಾದಿಸುತ್ತಿದ್ದೆ' ಎಂದನು.

ಐವಾನನು ನೋಡಿದನು.

'ಹಾಗೇನು! ಮೊದಲೇ ಹೇಳಿದ್ದಿದ್ದರೆ! ಬೇಕಾದಷ್ಟು ಮಾಡಿ ಕೊಡುತ್ತೇನೆ, ಬಾ'.

'ಮೂರು ಬಂಟ್ಟಿ ತುಂಬ ಕೊಟ್ಟರೆ!'

'ಆಗಲೇಳು. ನನ್ನ ಜತೆಯಲ್ಲಿ ಕಾಡಿಗೆ ಬಾ. ಅದಕ್ಕಿಂತ, ಕುದುರೆ ಕಟ್ಟಿಕೊ. ನಿನ್ನ ಕೈಲಿ ಹೊರಲಾಗುವುದಿಲ್ಲ' ಎಂದನು ಐವಾನ್.

ಅವರು ಕಾಡಿಗೆ ಹೋದರು. ಐವಾನನು ಓಕ್ ಎಲೆಗಳನ್ನು ಉಜ್ಜಿ ದನು. ದೊಡ್ಡ ರಾಶಿಯಾಯಿತು.

'ಸಾಕೇನು?'

ತಾರಸನ ಆನಂದ ಮೀರಿತು.

'ಈಗ್ಗೆ ಸಾಕು, ಐವಾನ್. ಬಹಳ ಉಪಕಾರವಾಯಿತು'.

'ಸರಿ! ಇನ್ನೂ ಬೇಕಾದರೆ ತಿರುಗಿ ಬಾ, ತಿರುಗಿ ಉಜ್ಜುತ್ತೇನೆ. ಇನ್ನೂ ಬೇಕಾದಷ್ಟು ಎಲೆಯಿದೆ'.

ರೊಣೆಯ ತಾರಸನು ಬಂಡಿ ತುಂಬ ಹಣ ತುಂಬಿಕೊಂಡು ವ್ಯಾಪಾರ ಮಾಡಲು ಹೋದನು.

ಇಬ್ಬರು ಸೋದರರೂ ಹೋದರು ಸೈಮನನು ಯುದ್ಧಕ್ಕೆ— ತಾರಸನು ವ್ಯಾಪಾರಕ್ಕೆ. ಶೂರ ಸೈಮನನು ರಾಜ್ಯ ಕಟ್ಟಿದನು. ರೊಣೆಯ ತಾರಸನು ಹಣ ಸೇರಿಸಿದನು.

ಇಬ್ಬರೂ ಕಲೆತಾಗ, ತಮತಮಗೆ ಸೈನ್ಯ ಧನಗಳು ಹೇಗೆ ಸಿಕ್ಕಿದು ವೆಂಬುದನ್ನು ಹೇಳಿಕೊಂಡರು. ಶೂರ ಸೈಮನನು 'ರಾಜ್ಯವನ್ನು ಜಯಿಸಿ

ಸುಖವಾಗಿದ್ದೇನೆ. ಆದರೆ ಸೈನಿಕರಿಗೆ ತಕ್ಕಷ್ಟು ಹಣವಿಲ್ಲ' ಎಂದು ತಮ್ಮಸಿಗೆಂದನು.

ರೊಣಯ ತಾರಸನು 'ಹಣ ರಾಶಿ ಇದೆ. ಕಾವಲಿಗೆ ಯಾರೂ ಇಲ್ಲ. ಅದೇ ಕಷ್ಟ' ಎಂದನು.

ಆಗ ಶೂರ ಸೈಮನನು 'ಐವಾನನ ಬಳಿ ಹೋಗೋಣ. ನಾನು ಸೈನಿಕರನ್ನು ಮಾಡಿಸಿ, ನಿನ್ನ ಹಣಕ್ಕೆ ಕಾವಲಿಗೆ ಕೊಡುತ್ತೇನೆ. ನೀನು ಹಣಮಾಡಿಸಿ ನನ್ನ ಸೈನ್ಯಕ್ಕೆ ಕೊಡು' ಎಂದನು.

ಅಲ್ಲಿಂದ ಐವಾನನ ಹತ್ತಿರ ಬಂದರು. ಸೈಮನನು 'ತಮ್ಮ, ನನಗೆ ಸೈನಿಕರು ಸಾಲದು. ಇನ್ನೊಂದೆರಡು ಮೆದೆ ಮಾಡಿಕೊಡು' ಎಂದನು.

ಐವಾನ್ ತಲೆ ಅಲ್ಲಾಡಿಸಿದನು.

'ಇಲ್ಲ, ನಿನಗಿನ್ನು ಸೈನಿಕರನ್ನು ಮಾಡಿಕೂಡುವುದಿಲ್ಲ.'

'ಮಾಡಿಕೊಡುತ್ತೇನೆ ಎಂದೆಯಲ್ಲ.'

'ಹೇಳಿದೆ. ಆದರೆ ಮಾಡಿಕೊಡುವುದಿಲ್ಲ.'

'ಯಾಕೊ? ಬೆಪ್ಪುತಕಡಿ!'

'ಯಾಕೇ? ನಿನ್ನ ಸೈನಿಕರು ಒಬ್ಬನನ್ನು ಕೊಂದರು. ಆ ಹೊತ್ತು ಉಳುತ್ತಿದ್ದೇನೆ—ಒಬ್ಬ ಹೆಂಗಸು ಬಂಡಿಯಲ್ಲಿ ಹೆಣ ಸಾಗಿಸುತ್ತಿದ್ದಳು ಸತ್ತವರಾರೆಂದು ಕೇಳಿದೆ. 'ಸೈಮನನ ಸೈನಿಕರು ಯುದ್ಧದಲ್ಲಿ ನನ್ನ ಗಂಡನನ್ನು ಕೊಂದರು' ಎಂದಳು ಸೈನಿಕರು ಸಂಗೀತ ಹಾಡುತ್ತಾರೆ ಎಂದರೆ ಮನುಷ್ಯನನ್ನು ಕೊಂದಿದ್ದಾರೆ. ಇನ್ನು ನಾನು ಮಾಡಿಕೊಡುವುದಿಲ್ಲ'.

ಅದೇ ಪಟ್ಟು ಹಿಡಿದು, ಜಪ್ಪಯ್ಯಾ ಎಂದರೂ ಪುನಃ ಮಾಡಿಕೊಡಲಿಲ್ಲ.

ರೊಣಯ ತಾರಸನೂ ಐವಾನನನ್ನು ಬೇಡಿದನು, ಇನ್ನೂ ಹಣ ಮಾಡಿಕೊಡೆಂದು. ಐವಾನ್ ತಲೆಯಾಡಿಸಿದನು.

'ಇಲ್ಲ. ನಾನಿನ್ನು ಉಜ್ಜುವುದಿಲ್ಲ'.

'ಉಜ್ಜುತ್ತೇನೆಂದೆಯಲ್ಲ'.

'ಅಂದೆ, ಆದರೆ ಉಜ್ಜುವುದಿಲ್ಲ.'

'ಯಾಕೂ? ಬೆಪ್ಪುತಕಡಿ!'

'ಯಾಕೇ? ನಿನ್ನ ಚಿನ್ನದ ನಾಣ್ಯ ಮೈಕೇಲನ ಮಗಳ ಹಸುವನ್ನು ಎತ್ತಿಕೊಂಡು ಹೋಯ್ತು'.

'ಹೇಗೆ?'

'ಹೇಗೆ ಎಂದರೆ? ಎತ್ತಿಕೊಂಡು ಹೋಯ್ತು! ಅವಳ ಮಕ್ಕಳು ಅದರ ಹಾಲು ಕುಡಿಯುತ್ತಿದ್ದರು. ಮೊನ್ನೆ ಆ ಮಕ್ಕಳು ಬಂದು ನನ್ನನ್ನು ಹಾಲು ಕೇಳಿದರು. 'ನಿಮ್ಮ ಹಸು ಎಲ್ಲಿ?' ಎಂದು ಕೇಳಿದೆ. 'ರೋಣಿಯ ತಾರಸನ ಮನೆಯವನು ಅಮ್ಮನಿಗೆ ಮೂರು ಚಿನ್ನದ ಚೂರು ಕೊಟ್ಟ. ಅವಳು ಹಸು ಕೊಟ್ಟಳು. ನಮಗೀಗ ಕುಡಿಯಲಿಕ್ಕ ಇಲ್ಲ, ಎಂದರು. ಚಿನ್ನದ ಚೂರು ನಿನಗೆ ಆಟವಾಡುವುದಕ್ಕೆ ಎಂದಿದ್ದರೆ, ಆ ಮಕ್ಕಳ ಹಸು ಎತ್ತಿಕೊಂಡಿದ್ದೀಯೆ! ನಾನು ಇನ್ನು ಏನೂ ಕೊಡುವುದಿಲ್ಲ'.

ಅದೇ ಪಟ್ಟು ಹಿಡಿದು, ಆ ಬೆಪ್ಪುತಕಡಿ ಒಪ್ಪಯ್ಯಾ ಎಂದರೂ ಪುನಃ ಕೊಡಲಿಲ್ಲ. ಸೋದರರು ಹೊರಟುಹೋದರು. ಹೋಗುತ್ತ ತಮ್ಮ ಸಂಕಟನಿವಾರಣೆಗೆ ಹಂಚಿಕೆ ನೋಡಿದರು. ಸೈಮನನೆಂದ

'ನೋಡು! ಹೀಗೆ ಮಾಡೋಣ. ನನ್ನ ಸೈನಿಕರಿಗೆ ಹಣ ಕೊಡು. ನಿನ್ನ ಹಣ ಕಾಯುವುದಕ್ಕೆ ಅರ್ಧ ರಾಜ್ಯ ತುಂಬ ಸೈನಿಕರನ್ನು ಕೊಡುತ್ತೇನೆ'.

ತಾರಸನು ಒಪ್ಪಿದನು. ಹೀಗೆ ಸೋದರರು ತಮ್ಮ ಆಸ್ತಿಗಳನ್ನು ಹಂಚಿಕೊಂಡರು. ಇಬ್ಬರೂ ರಾಜರಾಗಿ ಐಶ್ವರ್ಯವಂತರಾದರು.

೮

ಐವಾನನು ಮನೆಯಲ್ಲಿಯೆ ನಿಂತು, ತಂದೆತಾಯಿಗಳನ್ನು ಕಾಪಾಡುತ್ತ, ಮೂಗಿಯೊಡನೆ ಹೊಲದಲ್ಲಿ ದುಡಿಯುತ್ತಿದ್ದನು. ಒಂದು ಸಲ ಐವಾನನ ನಾಯಿ ಕಾಯಿಲೆ ಬಿದ್ದು, ಕಜ್ಜಿ ಹತ್ತಿ, ಸಾಯುವಂತಾಯಿತು. ಐವಾನನು ಕನಿಕರಗೊಂಡು, ಮೂಗಿಯಿಂದ ಕೊಂಚ ರೊಟ್ಟಿಯನ್ನು

ತೆಗೆದುಕೊಂಡು ಟೋಪಿಯಲ್ಲಿ ಇಟ್ಟುಕೊಂಡು ಒಂದು ನಾಯಿಗೆ ಎಸೆದನು. ಟೋಪಿ ಹರಿದಿತ್ತಾಗಿ ರೊಟ್ಟಿಯ ಜತೆಗೆ ಆ ಸಣ್ಣ ಬೇರುಗಳಲ್ಲಿ ಒಂದು ಬಿತ್ತು. ನಾಯಿ ಅದನ್ನೂ ರೊಟ್ಟಿಯನ್ನೂ ತಿಂದಿತು. ನುಂಗಿದ ಕೂಡಲೆ ಎದ್ದು ಕುಣಿದಾಡಿತು, ಬಗುಳಿತು, ಬಾಲ ಆಡಿಸಿತು, ಎಂದರೆ ಪೂರ್ಣ ಗುಣಹೊಂದಿತ್ತು.

ಅವನ ತಂದೆ ತಾಯಿಗಳಿಗೆ ಇದು ಸೋಜಿಗವಾಯಿತು.

'ನಾಯಿಗೆ ಹೇಗೆ ವಾಸಿಮಾಡಿದೆ?' ಎಂದರವರು.

ಐವಾನನು 'ನನ್ನ ನೋವು ನಿಲ್ಲಿಸಿದ ಎರಡು ಬೇರಿತ್ತು. ಅದರಲ್ಲಿ ಒಂದನ್ನು ಅದು ನುಂಗಿತು' ಎಂದನು.

ಅದೇ ಕಾಲದಲ್ಲಿ ದೊರೆಯ ಮಗಳು ಹಾಸಿಗೆ ಹಿಡಿದಳು ದೊರೆಯು ಅವಳನ್ನು ವಾಸಿಮಾಡಿದವನಿಗೆ ಬಹುಮಾನ ಕೊಡುವೆನೆಂದೂ, ವಾಸಿ ಮಾಡಿದವನು ಬ್ರಹ್ಮಚಾರಿಯಾದರೆ ಮಗಳನ್ನು ಅವನಿಗೆ ಮದುವೆ ಮಾಡುವೆನೆಂದೂ ಸಾರಿದನು. ಇದನ್ನು ಐವಾನನ ಹಳ್ಳಿಯಲ್ಲಿಯೂ ಸಾರಿದರು.

ಐವಾನನ ತಂದೆತಾಯಿಗಳು ಅವನನ್ನು ಕರೆದು 'ದೊರೆಯ ಡಂಗುರವನ್ನು ಕೇಳಿದೆಯ? ನಿನ್ನ ಹತ್ತಿರ ಬೇರಿದೆ ಎಂದೆ. ಹೋಗಿ ದೊರೆಯ ಮಗಳನ್ನು ಗುಣಪಡಿಸು. ನಿನಗೆ ಎಂದೆಂದಿಗೂ ಸುಖವಾಗಿರುತ್ತದೆ' ಎಂದನು.

'ಆಗಲೇಳು' ಎಂದನು ಐವಾನ್.

ಐವಾನನು ಹೊರಡಲನುವಾದನು. ಅವರು ಅವನನ್ನು ಸಿಂಗರಿಸಿದರು ಅವನು ಬಾಗಿಲಿನಿಂದ ಹೊರಗೆ ಬಂದಾಗ ಮುದುಕಿಯೊಬ್ಬಳು ತನ್ನ ಊನವಾದ ಕೈಯನ್ನು ತೋರಿದಳು.

'ನೀನು ವಾಸಿಮಾಡಬಲ್ಲೆಯಂತೆ ನನ್ನ ಕೈ ವಾಸಿ ಮಾಡು. ಜೋಡು ಹಾಕಿಕೊಳ್ಳಲು ಕೂಡ ಆಗುವುದಿಲ್ಲ' ಎಂದಳು.

'ಓಹೊ! ಅದಕ್ಕೇನು' ಎಂದು ಐವಾನನು ಬೇರನ್ನು ತೆಗೆದು ಕೊಟ್ಟು ನುಂಗ ಹೇಳಿದನು. ಅವಳು ನುಂಗಿದಳು. ವಾಸಿಯಾಯಿತು. ಕೂಡಲೆ ಕೈಯಾಡಿಸುವಂತಾದಳು.

ಐವಾನನ ತಂದೆತಾಯಿಗಳು ಅವನನ್ನು ಕಳುಹಿಸಲು ಹೊರಗೆ ಬಂದು, ಅವನು ಬೇರು ಕೊಟ್ಟುಬಿಟ್ಟುದನ್ನು ಕೇಳಿ ಬಯ್ಯತೊಡಗಿದರು.

'ಆ ಬಡವಿಯನ್ನು ಕಂಡರೆ ಕನಿಕರವಾಯಿತು ದೊರೆಯ ಮಗಳನ್ನು ಕಂಡರೆ ಕನಿಕರವಿಲ್ಲ' ಎಂದರು. ಐವಾನನಿಗೆ ದೊರೆಯ ಮಗಳ ಮೇಲೆ ಕನಿಕರ ಬಂತು ಕುದುರೆ ಹೂಡಿ, ಬಂಡಿಯಲ್ಲಿ ಕೊಂಚ ಹುಲ್ಲು ಹಾಕಿಕೊಂಡು, ಹೊರಡಲು ಸಿದ್ಧನಾದನು.

'ಎಲ್ಲಿಗೆ ಹೋಗುತ್ತಿ, ಬೆಪ್ಪುತಕಡಿ?'

'ದೊರೆಯ ಮಗಳನ್ನು ವಾಸಿಮಾಡುವುದಕ್ಕೆ'

'ವಾಸಿಮಾಡಲು ನಿನ್ನ ಹತ್ತಿರ ಏನಿದೆ?'

'ಇರಲಿ' ಎಂದು ಬಂಡಿ ಹೊಡೆದು ಹೊರಟನು.

ಅರಮನೆಗೆ ಹೊರಟು ಹೊಸಲಮೇಲೆ ಕಾಲಿಡಲು ದೊರೆಯ ಮಗಳಿಗೆ ವಾಸಿಯಾಯಿತು.

ದೊರೆಗೆ ಸಂತೋಷವಾಗಿ, ಐವಾನನನ್ನು ಕರೆತಂದು ಚೆಲುವು ಬಟ್ಟೆಗಳನ್ನು ಹಾಕಿಸಿ,

'ನನ್ನ ಅಳಿಯನಾಗು' ಎಂದನು.

'ಆಗಲೇಳು' ಎಂದನು ಐವಾರ್.

ಐವಾನನು ದೊರೆಯ ಮಗಳನ್ನು ಮದುವೆಯಾದನು ಬಲುಬೇಗ ಅವಳ ತಂದೆಯು ಸತ್ತು ಐವಾನನು ರಾಜನಾದನು. ಹೀಗೆ ಮೂವರು ಸೋದರರೂ ರಾಜರಾಗಿದ್ದರು.

೬

ಮೂವರು ಸೋದರರೂ ರಾಜ್ಯವಾಳುತ್ತಿದ್ದರು ಹಿರಿಯವ ಶೂರ ಸೈಮನನು ಉಚ್ಛ್ರಾಯಸ್ಥಿತಿಯಲ್ಲಿದ್ದನು. ಹುಲ್ಲಿನ ಸೈನಿಕರ ಜತೆಗೆ ಸರಿಯಾದವರನ್ನೂ ಸೇರಿಸಿದನು. ಅವನ ಇಡೀ ರಾಜ್ಯದ ಪ್ರತಿ ಹತ್ತು ಮನೆಗೆ

ಒಬ್ಬ ಸೈನಿಕನಾಗಬೇಕಾಗಿತ್ತು. ಸೈನಿಕನು ಎತ್ತರವಾಗಿ, ಚೆಲುವನಾಗಿ, ಧೃಢಾಂಗನಾಗಿರಬೇಕಾಗಿತ್ತು. ಹೀಗೆ ಸೈನಿಕರನ್ನು ಸಜ್ಜುಗೊಳಿಸಿದನು. ಯಾವನಾದರೂ ಎದುರುಬಿದ್ದರೆ, ಸೈನಿಕರೊಡಗೂಡಿ ನಡೆದು ತನ್ನ ಇಷ್ಟದಂತೆ ಬಗ್ಗಿಸುತ್ತಿದ್ದನು. ಎಲ್ಲರೂ ಅವನನ್ನು ಕಂಡರೆ ಹೆದರುವರು. ಅವನ ಜೀವನವು ಸುಖಮಯವಾಗಿತ್ತು, ಅವನು ಬೇಕೆಂದುದು ಕಂಡುದು ಎಲ್ಲವೂ ಅವನದಾಗುತ್ತಿತ್ತು. ಸೈನಿಕರನ್ನು ಕಳುಹಿಸಿ ಬೇಕೆನಿಸಿದುದನ್ನೆಲ್ಲಾ ತೆಗೆದುಕೊಳ್ಳುತ್ತಿದ್ದನು.

ರೊಣಯ ತಾರಸನೂ ಸುಖವಾಗಿದ್ದನು. ಐವಾನನಿಂದ ಪಡೆದ ಹಣವನ್ನು ಹಾಳುಮಾಡದೆ ಬಹುವಾಗಿ ಹೆಚ್ಚಿಸಿದನು. ತನ್ನ ರಾಜ್ಯದಲ್ಲಿ ಕಟ್ಟುನಿಟ್ಟುಗಳನ್ನಿಟ್ಟಿದ್ದನು. ತನ್ನ ಹಣವನ್ನು ಪೆಠಾರಿಗಳಲ್ಲಿಟ್ಟು ಜನರಿಗೆ ತೆರಿಗೆ ಹಾಕಿದನು ನಡಗೆಗೆ ತೆರಿಗೆ, ಒಂಡಿ ನಡೆಸಲು ತೆರಿಗೆ, ಜೋಡಿಗೆ, ಕಾಲುಚೀಲಕ್ಕೆ, ಒಟ್ಟೆಬರೆಗೆ ಕಟ್ಟಿದ ಅಂಚಿಗೆ ತೆರಿಗೆ—ಹೀಗೆ ಎಷ್ಟೋ ತೆರಿಗೆಗಳನ್ನಿಟ್ಟಿದ್ದನು. ಬೇಕಾದುದನ್ನೆಲ್ಲ ಪಡೆಯುತ್ತಿದ್ದನು ಅವನ ಹಣಕ್ಕಾಗಿ ಅವನಿಗೆ ಬೇಕಾದುದನ್ನೆಲ್ಲ ಜನರು ಕೊಡುತ್ತಿದ್ದರು, ಅವನಿಗಾಗಿ ಕೆಲಸಮಾಡುತ್ತಿದ್ದರು—ಎಲ್ಲರಿಗೂ ಹಣ ಬೇಕಿತ್ತು.

ಐವಾನನಿಗೂ ಸುಖಕ್ಕೇನೂ ಕಡಮೆಯಿರಲಿಲ್ಲ ತನ್ನ ಮಾವನ ಸಮಾಧಿಯಾದಮೇಲೆ, ತನ್ನ ರಾಜತನದ ಬಟ್ಟೆಗಳನ್ನು ತೆಗೆದು ಹೆಂಡತಿಗೆ ಕೊಟ್ಟು ಪೆಟ್ಟಿಗೆಗೆ ಹಾಕಿಸಿದನು ಪುನಃ ಹಳೆಯ ಜುಬ್ಬ, ಚೆಡ್ಡಿ, ಮೆಟ್ಟುಗಳನ್ನು ಹಾಕಿಕೊಂಡು ಕೆಲಸಕ್ಕೆ ಹೊರಟನು.

'ಬೇಜಾರಾಗುತ್ತದೆ. ಬೊಜ್ಜು ಬೆಳೆಯುತ್ತಿದೆ. ಹಸಿವಿಲ್ಲ, ನಿದ್ರೆಯಿಲ್ಲ' ಎಂದು ತಂದೆತಾಯಿಗಳನ್ನೂ ಮೂಗಿಯನ್ನೂ ಕರೆತಂದು ಕೆಲಸಮಾಡಲು ತೊಡಗಿದನು.

'ನೀನು ದೊರೆ' ಎಂದು ಜನವೆಂದರು.

'ದೊರೆಯಾದರೆ ಹೊಟ್ಟೆ ತುಂಬಬೇಡವೆ!' ಎಂದನು ಐವಾನ್.

ಅವನ ಮಂತ್ರಿಗಳಲ್ಲೊಬ್ಬನು ಬಂದು 'ಸಂಬಳ ಕೊಡುವುದಕ್ಕೆ ಹಣವಿಲ್ಲ' ಎಂದನು.

'ಸರಿ! ಸಂಬಳವನ್ನೇ ಕೊಡಬೇಡ' ಎಂದನು ಐವಾನ್.

'ಹಾಗಾದರೆ ಯಾರೂ ಇಲ್ಲಿ ಜೀತಮಾಡುವುದಿಲ್ಲ'

'ಬೇಡ ಬಿಡು. ಜೀತ ಮಾಡಲೇ ಬೇಡ. ಅವರ ಕಲಸಕ್ಕೆ ಹೆಚ್ಚು ಹೊತ್ತು ಇರುತ್ತದೆ. ಗೊಬ್ಬರ ಹೊರಲಿ. ಅಷ್ಟು ಕೂಡಿಸಿದ್ದಾರೆ'.

ಜನರು ಐವಾನನ ಬಳಿ ನ್ಯಾಯವೊಪ್ಪಿಸಲು ಬಂದರು. ಒಬ್ಬನು 'ಇವನು ನನ್ನ ಹಣ ಕದ್ದಿದ್ದಾನೆ' ಎಂದನು. 'ಸರಿ ಮತ್ತೆ. ಅಂದರೆ ಅವನಿಗದು ಬೇಕಾಗಿತ್ತು ಎಂದಾಯ್ತು' ಎಂದನು ಐವಾನ್.

ಐವಾನನು ಬೆಪ್ಪುತಕಡಿಯೆಂದು ಎಲ್ಲರಿಗೂ ಗೊತ್ತಾಯಿತು. ಅವನ ಹೆಂಡತಿಯು 'ಜನಗಳು ನಿನ್ನನ್ನು ಬೆಪ್ಪುತಕಡಿಯೆನ್ನುತ್ತಾರೆ' ಎಂದಳು.

'ಹೇಳಲೇಳು' ಎಂದನು ಐವಾನ್

ಇದರ ವಿಚಾರವಾಗಿ ಅವಳು ಯೋಚಿಸಿದಳು, ಯೋಚಿಸಿದಳು. ಆದರೆ ಅವಳು ಕೂಡ ಬೆಪ್ಪುತಕಡಿಯಾಗಿದ್ದಳು.

'ನನ್ನ ಗಂಡನಿಗೆ ಪ್ರತಿಯಾಗಿ ಹೋಗಲೆ! ಸೂಜಿ ಹೋದಹಾಗೆ ದಾರಹೋಗುತ್ತೆ' ಎಂದಳು.

ಹಾಗೆಂದು, ದೊರೆತನದ ಬಟ್ಟೆಬರೆಗಳನ್ನು ಪೆಟ್ಟಿಗೆಯಲ್ಲಿಟ್ಟು, ಮೂಗಿಯ ಹತ್ತಿರ ಕೆಲಸ ಕಲಿಯಲು ಹೋದಳು. ಕೆಲಸಮಾಡಲು ಕಲಿತು ಗಂಡನಿಗೆ ನೆರವಾಗತೊಡಗಿದಳು.

ಬುದ್ಧಿವಂತರೆಲ್ಲಾ ಐವಾನನ ರಾಜ್ಯವನ್ನು ಬಿಟ್ಟರು. ಬೆಪ್ಪುತಕಡಿಗಳು ಮಾತ್ರ ಉಳಿದುಕೊಂಡರು.

ಯಾರಲ್ಲಿಯೂ ಹಣವಿರಲಿಲ್ಲ. ಎಲ್ಲರೂ ಕೆಲಸಮಾಡಿ ಬದುಕುತ್ತಿದ್ದರು. ತಾವು ಉಂಡು ಒಳ್ಳೆಯವರಿಗೆ ಉಣಿಸಿಕ್ಕುತ್ತಿದ್ದರು.

೧೦

ದೊಡ್ಡ ಪಿಶಾಚಿಯು ಮರಿಪಿಶಾಚಿಗಳು ಮೂವರು ಸೋದರರನ್ನೂ ಹಾಳುಮಾಡಿದ ಸುದ್ದಿ ಕೇಳಲು ಕಾದು ಕಾದು ಸಾಕಾಗಿ, ಸುದ್ದಿ ಬರದಿರಲು, ತಾನೇ ಹೊರಟಿತು. ಹುಡುಕಿ ಹುಡುಕಿ ಮೂರು ಮರಿಪಿಶಾಚಿಗಳ ಬದಲಾಗಿ ಮೂರು ಬಿಲಗಳನ್ನು ಕಂಡಿತು.

'ಸರಿ! ನೋಡಿದರೆ ಅವರ ಕೆಲಸ ಗೆಲುವಾಗಿಲ್ಲ. ನಾನೇ ಇದಕ್ಕೆ ನಿಂತುಕೊಳ್ಳಬೇಕು' ಎಂದುಕೊಂಡಿತು.

ಅದು ಆ ಮೂರು ಸೋದರರನ್ನೂ ಕಾಣಲು ಹುಡುಕಿತು. ಆದರೆ ಅವರು ಮೊದಲು ಇದ್ದಲ್ಲಿರಲಿಲ್ಲ. ಬೇರೆ ಬೇರೆ ರಾಜ್ಯಗಳಲ್ಲಿ ಅವರು ಸಿಕ್ಕಿದರು. ಮೂವರೂ ಸುಖವಾಗಿ ರಾಜ್ಯವಾಳುತ್ತಿದ್ದರು. ಇದರಿಂದ ಪಿಶಾಚಿಗೆ ಸಂಕಟವಾಯಿತು.

'ಸರಿ! ಇದಕ್ಕೆ ನಾನೇ ನಿಂತುಕೊಳ್ಳಬೇಕು' ಎಂದಿತು.

ಮೊದಲು ಸೈಮನ್ ದೊರೆಯ ಬಳಿ ಹೋಯಿತು. ತನ್ನ ಸ್ವರೂಪದಲ್ಲಿ ಹೋಗದೆ, ಸೈನ್ಯಾಧಿಕಾರಿಯ ವೇಷದಲ್ಲಿ ಹೋಯಿತು.

'ಸೈಮನ್ ದೊರೆಯೆ! ನೀನು ಮಹಾವೀರನಂತೆ. ನನಗೆ ಸೈನ್ಯದಲ್ಲಿ ಪರಿಶ್ರಮವಿದೆ. ನಿನ್ನ ಸೇವೆಮಾಡಲು ಬಯಸುವೆನು' ಎಂದಿತು.

ಸೈಮನನು ಅವನನ್ನು ಪ್ರಶ್ನಿಸಿ, ಅವನು ಬುದ್ಧಿವಂತನೆಂದು ಕಂಡು ಅವನನ್ನು ಕೆಲಸಕ್ಕಿಟ್ಟುಕೊಂಡನು.

ಹೊಸ ಅಧಿಕಾರಿಯು ಜೋರಾದ ಸೈನ್ಯಕಟ್ಟುವುದನ್ನು ಸೈಮನನಿಗೆ ಹೇಳತೊಡಗಿದನು.

'ಮೊದಲು ಇನ್ನೂ ಹೆಚ್ಚು ಸೈನಿಕರನ್ನು ಹೊಂದಿಸಬೇಕು. ನಿನ್ನ ರಾಜ್ಯದಲ್ಲಿ ಕೆಲಸವಿಲ್ಲದ ಬಹು ಮಂದಿ ಇದ್ದಾರೆ. ಒಬ್ಬರುಳಿಯದಂತೆ ಎಲ್ಲಾ ಯುವಕರನ್ನೂ ಸೇರಿಸಿಕೊಳ್ಳಬೇಕು. ಆಗ ಈಗಿರುವುದಕ್ಕೆ ಐದರಷ್ಟು ಸೈನಿಕರಾಗುತ್ತಾರೆ. ಎರಡನೆಯದು ತುಪಾಕಿ ಫಿರಂಗಿಗಳಾಗಬೇಕು.

ಒಟ್ಟಿಗೆ ನೂರು ಗುಂಡುಗಳನ್ನೆಸೆಯುವ ತುಪಾಕಿಗಳನ್ನು ತರಿಸುತ್ತೇನೆ. ಕಡಲೆಯಂತೆ ಸಿಡಿಯುತ್ತಿರಬೇಕು. ಬೆಂಕಿಯಂತೆ ಮನುಷ್ಯ, ಕುದುರೆ ಗೋಡೆಗಳನ್ನು ನುಂಗುವ ಫಿರಂಗಿಗಳನ್ನು ತರಿಸುತ್ತೇನೆ ಅವು ಎಲ್ಲವನ್ನೂ ಸುಟ್ಟುಹಾಕುತ್ತವೆ ' ಎಂದನು

ಶೂರ ಸೈಮನನು ಹೊಸ ಸೈನ್ಯಾಧಿಕಾರಿಯ ಮಾತಿಗೆ ಕಿವಿಗೊಟ್ಟು ಅವರಿವರೆನ್ನದೆ ಎಲ್ಲಾ ಯುವಕರನ್ನೂ ಸೈನಿಕರನ್ನಾಗಿಸಿ, ಹೊಸತೆರದ ಬಂದೂಕು ಫಿರಂಗಿಗಳನ್ನು ತಯಾರಿಸಲು ಕೋರಿಗಳನ್ನು ಕಟ್ಟಿದನು. ಬಹು ಶೀಘ್ರವಾಗಿ ಪಕ್ಕದ ದೊರೆಯೊಬ್ಬನಮೇಲೆ ದಂಡೆತ್ತಿ ಹೊರಟನು. ಪರಸೈನ್ಯಕ್ಕೆ ದೂರವಾಗಿ ಸೈಮನ್ ದೊರೆಯು, ತನ್ನ ಪಡೆಯಿಂದ ಗುಂಡಿನ ಮಳೆಗರಿಸಿ, ಒಂದೇ ಏಟಿಗೆ ಎದುರಾಳಿಯ ಅರ್ಧ ಬಲವನ್ನು ಮುರಿದುಬಿಟ್ಟನು ಪಕ್ಕದ ದೊರೆಯು ಹೆದರಿ, ಮೆತ್ತನಾಗಿ ರಾಜ್ಯವನ್ನೊಪ್ಪಿಸಿದನು ಸೈಮನ್ ದೊರೆಗೆ ಹಿಗ್ಗಾಯಿತು

' ಈಗ ಹಿಂದೂ ರಾಜನನ್ನು ಜಯಿಸುತ್ತೇನೆ ' ಎಂದನು

ಆದರೆ ಹಿಂದೂ ರಾಜನು ಸೈಮನನ ಸಜ್ಜುಗಳನ್ನೆಲ್ಲ ತಿಳಿದುಕೊಂಡು ಜತೆಗೆ ತನ್ನದೂ ಕೊಂಚ ಸೇರಿಸಿದನು ಹಿಂದೂ ರಾಜನು ಯುವಕರನ್ನೆಲ್ಲ ಕೂಡಿಸಿ ಜತೆಗೆ ಒಂಟಿಯಾಗಿದ್ದ ಹೆಂಗಸರನ್ನೂ ಸೇರಿಸಿ ಸೈಮನ್ ದೊರೆಗಿಂತ ಹೆಚ್ಚು ಸೈನ್ಯ ಕಟ್ಟಿದನು ಸೈಮನ್ ದೊರೆಯ ಬಂದೂಕು ಫಿರಂಗಿಗಳನ್ನು ಅನುಕರಿಸಿ, ಮೇಲಿನಿಂದ ಸಿಡಿಗುಂಡುಗಳನ್ನೆಸೆಯಲು ತಕ್ಕ ಹಾರುವ ಯಂತ್ರಗಳನ್ನೂ ಕಲ್ಪಿಸಿದನು.

ಸೈಮನ್ ದೊರೆಯು ಹಿಂದೂ ರಾಜನಮೇಲೆ ನಡೆದು, ಬಂಟನನ್ನು ಹೊಡೆದೋಡಿಸಿದಂತೆ ಇವನನ್ನೂ ಓಡಿಸುವನೆಂದಿದ್ದನು. ಆದರೆ ಕೂರ್ಮನನೆದ ಕುಡುಲಿನ ಅಲುಗು ಮೊಂಡಾಗಿತ್ತು. ಹಿಂದೂ ರಾಜನು ಸೈಮನನ ಸೈನಿಕರನ್ನು ಗುಂಡಿನೇಟಿನ ದೂರದಲ್ಲಿ ಬರಲೀಸದೆ, ಸೈಮನನ ಸೈನಿಕರಮೇಲೆ ಸಿಡಿಮದ್ದೆಸೆಯಲು ತನ್ನ ಹೆಂಗಸರನ್ನು ಕಳುಹಿಸಿದನು.

ಹೆಂಗಸರು ಸಿಡಿಮದ್ದಿನ ಸುರಿಮಳೆಗರೆದರು. ಸೈನ್ಯವು ಓಡಿಹೋಗಿ, ಸೈಮನನು ಒಂಟಿಯಾದನು. ಹಿಂದೂ ರಾಜನು ಸೈಮನನ ರಾಜ್ಯವನ್ನು ಕೈವಶಮಾಡಿಕೊಳ್ಳಲು, ಶೂರ ಸೈಮನನು ಕಂಬಿಕಿತ್ತನು.

ಈ ಸೋದರರನ್ನು ಮುಗಿಸಿ, ಪಿಶಾಚಿಯು ತಾರಸ ದೊರೆಯ ಬಳಿಗೆ ಸಾಗಿತು. ವ್ಯಾಪಾರಿಯಂತೆ ತಾರಸನ ರಾಜ್ಯದಲ್ಲಿ ನಿಂತು, ಕೋರಿಯನ್ನು ಕಟ್ಟಿ ಹಣಕೊಡಲು ಮೊದಲಿಟ್ಟಿತು. ವರ್ತಕನು ಎಲ್ಲಕ್ಕೂ ಹೆಚ್ಚು ಬೆಲೆ ಕೊಡುತ್ತಿದ್ದುದರಿಂದ, ಎಲ್ಲರೂ ಹಣಕ್ಕಾಗಿ ಅವನ ಬಳಿಗೋಡಿದರು. ಹಣ ಬಹಳ ಬಂದುದರಿಂದ, ಜನರು ಸರಿಯಾಗಿ ತೆರಿಗೆ ತೆತ್ತು, ಬಾಕಿಗಳನ್ನು ಸಲ್ಲಿಸಿದರು. ತಾರಸದೊರೆಗೆ ಸಂತೋಷವಾಯಿತು.

'ವರ್ತಕನಿಂದ ನನ್ನ ವರಮಾನ ಹೆಚ್ಚಾಗಲಾಗಿದೆ. ನನಗಿನ್ನೂ ಸುಖ ಹೆಚ್ಚಾಗುತ್ತದೆ' ಎಂದನು.

ತಾರಸ ದೊರೆಯು ಹೊಸ ಹೊಸ ಹಂಚಿಕೆ ಹಾಕಿ, ಹೊಸ ಅರಮನೆ ಕಟ್ಟಹತ್ತಿದನು. ಜನರು ಮರಕಲ್ಲುಗಳನ್ನು ತಂದು ಕೆಲಸಮಾಡಬೇಕೆಂದು ಹೇಳಿ ಎಲ್ಲಕ್ಕೂ ಹೆಚ್ಚು ಬೆಲೆ ವಿಧಿಸಿದನು. ಜನರು ಮೊದಲಿನಂತೆ ಹಿಂಡಾಗಿ ಕಲಸಕ್ಕೆ ಬರುವರೆಂದು ಎಣಿಸಿದ್ದನು. ಆದರೆ ಕಲ್ಲುಮರಗಳನ್ನು ತೆಗೆದು ಕೊಂಡು ಜನರೆಲ್ಲರೂ ವ್ಯಾಪಾರಿಯಲ್ಲಿಗೆ ಹೋಗುವುದನ್ನು ಕಂಡು ಆಶ್ಚರ್ಯಪಟ್ಟನು. ತಾರಸ ದೊರೆಯು ಬೆಲೆಯೇರಿಸಿದರೆ, ವ್ಯಾಪಾರಿಯು ಇನ್ನೂ ಹೆಚ್ಚು ಮಾಡಿದನು. ತಾರಸ ದೊರೆಯಲ್ಲಿ ಹಣ ಹೆಚ್ಚಿದ್ದರೆ ವ್ಯಾಪಾರಿಯಲ್ಲಿ ಇನ್ನೂ ಹೆಚ್ಚಿತ್ತು, ಅವನು ದೊರೆಯನ್ನು ಮೀರಿಸುತ್ತಿದ್ದನು.

ದೊರೆಯ ಅರಮನೆಯ ಕೆಲಸ ನಿಂತುಹೋಯಿತು. ಕಟ್ಟಡವು ಮುಂದೆ ಸಾಗಲಿಲ್ಲ.

ತಾರಸ ದೊರೆಯು ತೋಟವೊಂದನ್ನು ಕಟ್ಟಬೇಕೆಂದು, ಶರತ್ಕಾಲದಲ್ಲಿ ಜನರೆಲ್ಲ ಬಂದು ತೋಟಮಾಡಬೇಕೆಂದು ಪ್ರಸಿದ್ಧಪಡಿಸಿದನು. ಆದರೆ ಯಾರೂ ಬರಲಿಲ್ಲ. ಜನರೆಲ್ಲರೂ ವರ್ತಕನಿಗಾಗಿ ಕೊಳವೊಂದನ್ನು ತೆಗೆಯು

ತ್ತಿದ್ದರು. ಚಳಿಗಾಲದಲ್ಲಿ ಮೇಲಂಗಿಗಾಗಿ ಕುರಿಯ ತುಪ್ಪಳವನ್ನು ಕೊಳ್ಳ ಬೇಕೆಂದು, ತಾರಸ ದೊರೆಯು ದೂತರನ್ನು ಕಳುಹಿಸಿದನು ಅವರು ಬಂದು 'ಕುರಿಯ ತುಪ್ಪಳವಿಲ್ಲ ಎಲ್ಲವನ್ನೂ ವರ್ತಕನೇ ಕೊಂಡುಕೊಂಡನು. ಬಲು ಬೆಲೆಕೊಟ್ಟು ಅವುಗಳಲ್ಲಿ ರತ್ನಗಂಬಳಿ ಮಾಡಿದ್ದಾನೆ' ಎಂದರು.

ತಾರಸ ದೊರೆಗೆ ಕುದುರೆಗಳನ್ನು ಕೊಳ್ಳಲಾಸೆಯಾಗಿ ಅವನು ಕಳುಹಿದ ದೂತರು ಮರಳಿ 'ವರ್ತಕನು ಒಳ್ಳೇ ಕುದುರೆಗಳನ್ನೆಲ್ಲಾ ತೆಗೆದು ಕೊಂಡಿದ್ದಾನೆ. ಅವುಗಳು ಅವನ ಕೊಳಕ್ಕೆ ನೀರು ಹೊರುತ್ತಿವೆ' ಎಂದರು.

ದೊರೆಯ ಕೆಲಸಗಳೆಲ್ಲಾ ನಿಂತುಹೋದುವು. ಅವನಿಗೆ ಯಾರೂ ಕಲಸಮಾಡರು. ಆದರೆ ಎಲ್ಲರೂ ವರ್ತಕನಿಗೆ ಕಲಸಮಾಡುವರು. ಮಾಡಿ ವರ್ತಕನ ಹಣದಿಂದ ದೊರೆಗೆ ತೆರಿಗೆ ಕೊಡುತ್ತಿದ್ದರು.

ದೊರೆಗೆ ಶೇಖರಿಸಲು ತಾವಿಲ್ಲದಷ್ಟು ಹಣ ಕೂಡಿತು. ಅವನ ಬಾಳು ಹಾಳಾಯಿತು. ಅದು ಇದು ಮಾಡುವುದನ್ನು ಬಿಟ್ಟು ಸುಮ್ಮನೆ ಒದುಕಲು ಬಯಸುತ್ತಿದ್ದನು. ಆದರೆ ಅವನ ಪಾಲಿಗದೂ ಇರಲಿಲ್ಲ. ಅವನಿಗೆ ಎಲ್ಲದ ರಲ್ಲಿಯೂ ಲೋಪವಾಯಿತು. ಅಡುಗೆಯವರು, ಗಾಡಿ ಹೊಡೆಯುವವರು, ಸೇವಕರು, ಎಲ್ಲರೂ ಇವನನ್ನು ಬಿಟ್ಟು ವರ್ತಕನೆಡೆಗೆ ನಡೆದರು ಊಟಕ್ಕೆ ಕೂಡ ಇಲ್ಲವಾಯಿತು. ಅಂಗಡಿಗೆ ವ್ಯಾಪಾರಕ್ಕೆ ಹೋದರೆ ಏನೂ ಇರುತ್ತಿರ ಲಿಲ್ಲ— ವ್ಯಾಪಾರಿಯು ಎಲ್ಲವನ್ನೂ ಕೊಂಡಿರುತ್ತಿದ್ದನು. ಜನರು ಮಾತ್ರ ದೊರೆಗೆ ತೆರಿಗೆ ಸಲ್ಲಿಸುತ್ತಿದ್ದರು.

ತಾರಸ ದೊರೆಗೆ ಕೋಪಬಂತು. ವರ್ತಕನನ್ನು ರಾಜ್ಯದಿಂದ ಓಡಿಸಿ ದನು. ವರ್ತಕನು ಗಡಿಯಿಂದಾಚೆ ನೆಲಸಿ, ಎಂದಿನಂತೆ ನಡೆಯುತ್ತಿದ್ದನು. ಅವನ ಹಣಕ್ಕಾಗಿ ಜನರು ಎಲ್ಲವನ್ನೂ ಅವನಿಗೆ ತೆಗೆದುಕೊಂಡು ಹೋಗು ತ್ತಿದ್ದರು. ದೊರೆಯನ್ನು ಕೇಳುವವರಿರಲಿಲ್ಲ.

ದೊರೆಗೆ ಬಹಳ ತೊಂದರೆಯಾಯಿತು. ಎಷ್ಟೋ ದಿನ ಅವನಿಗೆ ತಿನ್ನಲೂ ಏನೂ ಸಿಕ್ಕುತ್ತಿರಲಿಲ್ಲ. ವ್ಯಾಪಾರಿಯು ದೊರೆಯನ್ನು ಬೇಕಾದರೂ

ಕೊಳ್ಳುತ್ತೇನೆಂದು ಕೊಚ್ಚುತ್ತಿದ್ದನೆಂದು ಸುದ್ದಿ ಹಬ್ಬಿತು. ತಾರಸ ದೊರೆಯು ಗಾಬರಿಬಿದ್ದು ಕಿಂಕರ್ತವ್ಯತಾ ಮೂಢನಾದನು.

ಅದೇ ಕಾಲದಲ್ಲಿ ಶೂರ ಸೈಮನನು 'ಹಿಂದೂ ರಾಜನು ನನ್ನನ್ನು ಜಯಿಸಿದನು. ನನಗೆ ಸಹಾಯ ನೀಡು' ಎಂದು ಬಂದನು.

ಆದರೆ ತಾರಸ ದೊರೆಯು ಕೋಟಲೆಗಳಲ್ಲಿ ಮುಳುಗಿದ್ದನು. 'ನನಗೆಯೆ ಎರಡು ದಿನದಿಂದ ತಿನ್ನಲು ಏನೂ ಇಲ್ಲ' ಎಂದನು.

೧೧

ಇಬ್ಬರು ಸೋದರರನ್ನೂ ಮುಗಿಸಿ, ಪಿಶಾಚಿಯು ಐವಾನನ ಬಳಿಗೆ ಬಂದಿತು. ಸೈನ್ಯಾಧಿಕಾರಿಯಂತೆ ಬಂದು, ಐವಾನನು ಸೈನ್ಯವನ್ನು ಕೂಡಿಸ ಬೇಕೆಂದು ಒತ್ತಾಯಪಡಿಸಿತು.

'ದೊರೆ ಎಂದ ಮೇಲೆ ಸೈನ್ಯವಿರಬೇಕು. ಆಜ್ಞೆ ಕೊಟ್ಟರೆ ಸಾಕು, ನಿನ್ನ ಜನಗಳಲ್ಲಿ ಸೈನಿಕರನ್ನು ಹಿಡಿದು ಸೈನ್ಯ ತಯಾರುಮಾಡುತ್ತೇನೆ' ಎಂದಿತು.

ಐವಾನನು ಅದನ್ನು ಕೇಳಿ 'ಆಗಲೇಳು. ಸೈನ್ಯ ತಯಾರಿಸಿ ಅವರಿಗೆ ಚೆನ್ನಾಗಿ ಹಾಡು ಕಲಿಸು. ನನಗೆ ಅದು ಬೇಕು' ಎಂದನು.

ಪಿಶಾಚಿಯು ಐವಾನನ ರಾಜ್ಯದಲ್ಲಿ ಸೈನಿಕರನ್ನಾಗಿಸುತ್ತಾ ಸಾಗಿತು. ಪ್ರತಿಯೊಬ್ಬರೂ ಸೈನಿಕರಾದರೆ ಒಂದು ಬುರುಡೆ ಹೆಂಡವನ್ನೂ, ಒಂದು ಕೆಂಪು ಟೋಪಿಯನ್ನೂ ಕೊಡುವೆನೆಂದಿತು.

ಬೆಪ್ಪುತಕಡಿಗಳು ನಕ್ಕರು.

'ಹೆಂಡ ನಮ್ಮಲ್ಲಿಯೇ ಬೇಕಾದಷ್ಟಿದೆ. ಅದನ್ನು ನಾವೇ ಮಾಡುತ್ತೇವೆ. ಟೋಪೀನೆ! ನಮ್ಮ ಹೆಂಗಸರು ತರಹೇವಾರಿ ಮಾಡುತ್ತಾರೆ. ಕುಚ್ಚು ಕೂಡ ಇರುತ್ತದೆ' ಎಂದರು

ಯಾರೂ ಸೈನ್ಯಕ್ಕೆ ಸೇರಲಿಲ್ಲ.

ಪಿಶಾಚಿಯು ಐವಾನನ ಹತ್ತಿರ ಬಂದು 'ನಿನ್ನ ಬೆಪ್ಪುತಕಡಿಗಳು ತಾವಾಗಿಯೇ ಸೈನಿಕರಾಗುವುದಿಲ್ಲ. ಬಲವಂತ ಮಾಡಬೇಕು' ಎಂದಿತು.

'ಆಗಲೇಳು. ಹಾಗೇ ಮಾಡು' ಎಂದನು ಐವಾಣ್.

ಪಿಶಾಚಿಯು ಎಲ್ಲರೂ ಸೈನಿಕರಾಗಬೇಕೆಂದೂ ಆಗದಿದ್ದವರನ್ನು ಐವಾನನು ಕೊಲ್ಲಿಸುವನೆಂದೂ ಪ್ರಸಿದ್ಧಪಡಿಸಿತು.

ಬೆಪ್ಪುತಕಡಿಗಳು ಸೈನ್ಯಾಧಿಕಾರಿಯಲ್ಲಿಗೆ ಬಂದು 'ನಾವು ಸೈನ್ಯಕ್ಕೆ ಸೇರದಿದ್ದರೆ ದೊರೆಯು ಕೊಲ್ಲಿಸುವನೆನ್ನುವೆ. ಸೈನ್ಯಕ್ಕೆ ಸೇರಿದರೆ ಏನಾಗುತ್ತೆ ಎನ್ನುವುದನ್ನು ಹೇಳಲಿಲ್ಲವಲ್ಲ! ಸೈನಿಕರು ಪ್ರಾಣಬಿಡುತ್ತಾರಂತೆ' ಎಂದರು

'ಹೌದು, ಕೆಲವು ವೇಳೆ ಹಾಗಾಗುವುದುಂಟು.'

ಇದನ್ನು ಕೇಳಿ ಬೆಪ್ಪುತಕಡಿಗಳು ಮೊಂಡುಹಿಡಿದರು.

'ನಾವು ಹೋಗುವುದಿಲ್ಲ. ನಾವು ಮನೆಯಲ್ಲೇ ಸಾಯುತ್ತೇವೆ. ಹೇಗಿದ್ದರೂ ಸಾಯಬೇಕು'.

'ಬೆಪ್ಪುತಕಡಿಗಳು! ನೀವಲ್ಲಾ ಬೆಪ್ಪುತಕಡಿಗಳು! ಸೈನಿಕನು ಸಾಯಬಹುದು-ಸಾಯದಿರಬಹುದು ನೀವು ಹೋಗದಿದ್ದರೆ ಐವಾನನು ಕೊಲ್ಲಿಸಿಯೇ ಕೊಲ್ಲಿಸುವನು' ಎಂದು ಪಿಶಾಚಿಯೆಂದಿತು.

ಬೆಪ್ಪುತಕಡಿಗಳು ಕಕ್ಕುಬೆಕ್ಕಾದರು. ಅಲ್ಲಿಂದ ಬೆಪ್ಪುತಕಡಿ ಐವಾನನ ಬಳಿಗೆ ಹೋದರು.

'ಒಬ್ಬ ಸೈನ್ಯಾಧಿಕಾರಿ ಬಂದು ಸೈನ್ಯಕ್ಕೆ ಸೇರು ಎನ್ನುತ್ತಾನೆ. ಸೈನಿಕರಾದರೆ ಸಾಯಬಹುದು, ಸಾಯದಿರಬಹುದು, ಸೈನಿಕರಾಗದಿದ್ದರೆ ಐವಾನನು ನಿಮ್ಮನ್ನು ಕೊಂದೇ ಬಿಡುವನು ಎನ್ನುತ್ತಾನೆ. ನಿಜವೆ ಇದು?' ಎಂದರು.

ಐವಾನನು ನಕ್ಕು 'ನಾನೊಬ್ಬನೇ ನಿಮ್ಮನ್ನೆಲ್ಲ ಹೇಗೆ ಸಾಯಿಸಲಿ? ನಾನು ಬೆಪ್ಪುತಕಡಿಯಾಗಿರದಿದ್ದರೆ ಅದೇನು ಎನ್ನುವುದನ್ನು ಹೇಳುತ್ತಿದ್ದೆ. ಆದರೆ ಈಗಿರುವ ಹಾಗೆ ನನಗೇ ಇದು ಅರ್ಥವಾಗುವುದಿಲ್ಲ' ಎಂದನು.

'ಹಾಗಿದ್ದರೆ ನಾವು ಸೇರುವುದಿಲ್ಲ'

'ಬೇಡ ಬಿಡು. ಸೇರಲೇ ಬೇಡ.'

ಬೆಪ್ಪುತಕಡಿಗಳು ಸೈನ್ಯಾಧಿಕಾರಿಯ ಬಳಿ ಹೋಗಿ ಸೇರುವುದಿಲ್ಲ ವೆಂದರು. ಪಿಶಾಚಿಯು ಆಟ ಸ್ವಾರಸ್ಯವಿಲ್ಲೆಂದು ನೋಡಿಕೊಂಡು, ಅಲ್ಲಿಂದ ತೊಲಗಿ ತಾರಕಾನ್ ದೊರೆಯ ಬಳಿ ಸೇರಿಕೊಂಡಿತು.

'ನಾವು ಹೋಗಿ ಐವಾನನ ರಾಜ್ಯವನ್ನು ಗೆಲ್ಲೋಣ. ಹಣ ಪಣೋ ಇಲ್ಲ. ಆದರೂ ಧಾನ್ಯ ದವಸ ಆಳು ಕಾಳು ಬೇಕಾದಷ್ಟಿದೆ' ಎಂದಿತು.

ತಾರಕಾನ್ ದೊರೆಯು ಯುದ್ಧಕ್ಕೆ ಸಿದ್ಧನಾದನು. ದೊಡ್ಡ ಪಡೆ ಯನ್ನು ಕೂಡಿಸಿ, ತುಪಾಕಿ ಫಿರಂಗಿಗಳನ್ನೇರಿಸಿ, ಗಡಿಯನ್ನು ದಾಟಿ, ಐವಾನನ ರಾಜ್ಯಕ್ಕೆ ಬಂದನು.

ಜನರೆಲ್ಲ ಐವಾನನ ಬಳಿಗೋಡಿ 'ತಾರಕಾನ್ ದೊರೆಯು ದಂಡೆತ್ತಿ ಬರುತ್ತಿದ್ದಾನೆ' ಎಂದರು.

'ಬರಲೇಳು' ಎಂದನು ಐವಾನ್.

ಗಡಿಯನ್ನು ದಾಟಿ, ತಾರಕಾನಿನ ಗುಪ್ತಚರರು ಐವಾನನ ಪಡೆ ಯನ್ನು ಹುಡುಕಿದರು. ಎಷ್ಟು ನೋಡಿದರೂ ಸೈನ್ಯ ಕಾಣಿಸಲಿಲ್ಲ! ಎಲ್ಲಿ ಯಾದರೂ ಯಾರಾದರೂ ಬರುವರೆಂದು ಕಾದು ಕಾದು ನೋಡಿದರೂ ಸೈನ್ಯವಿಲ್ಲ, ಯುದ್ಧ ಮಾಡಲು ಯಾರೂ ಇಲ್ಲ. ತಾರಕಾನ್ ದೊರೆಯು ಹಳ್ಳಿಗಳನ್ನು ಮುತ್ತೆಂದನು. ಸೈನಿಕರು ಹಳ್ಳಿಗೆ ಬಂದರು. ಬೆಪ್ಪುತಕಡಿಗಳು ಹೆಂಗಸರು ಗಂಡಸರೆನ್ನದೆ ಹೊರಗೆ ಬಂದು ಆಶ್ಚರ್ಯದಿಂದ ನಿಟ್ಟಿಸಿದರು. ಸೈನಿಕರು ಅವರ ಧಾನ್ಯವನ್ನೂ ಆಕಳನ್ನೂ ಹಿಡಿದುಕೊಂಡರು, ಅವನ್ನು ಬೆಪ್ಪುತಕಡಿಗಳು ಬಿಟ್ಟುಕೊಟ್ಟು, ಅಡ್ಡಿಪಡಿಸದೆ ನಿಂತರು. ಸೈನಿಕರು ಇನ್ನೊಂದು ಹಳ್ಳಿಗೆ ಹೋದರು; ಅಲ್ಲಿಯೂ ಹೀಗೆಯೇ ಆಯಿತು. ಸೈನಿಕರಿಗೆ ಒಂದು ದಿನವಾಯಿತು, ಎರಡಾಯಿತು, ಎಲ್ಲೆಲ್ಲಿಯೂ ಹೀಗೆಯೇ! ಜನರು ಎಲ್ಲವನ್ನೂ ಬಿಟ್ಟುಕೊಟ್ಟರು. ಅಡ್ಡಿಮಾಡುವ ಬದಲು, ತಮ್ಮ ಜತೆಯಲ್ಲಿ ಬಾಳಿರೆಂದು ಕರೆದರು.

'ಪಾಪ! ನಿಮಗೆ ನಿಮ್ಮ ದೇಶದಲ್ಲಿ ಕಷ್ಟವಾಗಿದ್ದರೆ ಇಲ್ಲಿ ಬಂದು ನಮ್ಮ ಜತೆಯಲ್ಲಿರಿ' ಎಂದರು.

ಸೈನಿಕರು ಸಾಗಿದರು. ಆದರೆ ಎಲ್ಲಿಯೂ ತಮ್ಮ ಪಾಡಿಗೆ ತಾವಿದ್ದ ಜನರಲ್ಲದೆ ಸೈನ್ಯವಿಲ್ಲ. ಅವರೂ ತುಟಿ ಪಿಟಕ್ಕೆನ್ನದೆ ತಮ್ಮನ್ನೂ ಜತೆಯಲ್ಲಿರ ಹೇಳುತ್ತಿದ್ದರು. ಸೈನಿಕರಿಗೆ ಇದು ಬೇಜಾರಾಗಿ, ತಾರಕಾನ್ ದೊರೆಯ ಬಳಿ ಬಂದು 'ನಾವು ಇಲ್ಲಿ ಕಾದಲಾರೆವು. ಬೇರೆಲ್ಲಿಗಾದರೂ ಕರೆದುಕೊಂಡು ಹೋಗು. ಯುದ್ಧವೆಲ್ಲಾ ಸರಿಯೆ, ಆದರೆ ಇದೇನಿದು? ತಿಳೀಸಾರು ಕತ್ತರಿಸಿದ ಹಾಗೆ? ಇಲ್ಲಿನ್ನು ಯುದ್ಧಮಾಡಲಾರೆವು' ಎಂದರು.

ತಾರಕಾನ್ ದೊರೆಯು ಕುಪಿತನಾಗಿ, ರಾಜ್ಯವನ್ನು ನೆಲಸಮಮಾಡಿ ಹಳ್ಳಿಗಳನ್ನು ಹಾಳುಮಾಡಿ, ಕಣಜಗಳನ್ನೂ ಮನೆಗಳನ್ನೂ ಸುಟ್ಟು, ಆಕಳನ್ನು ತರಿಯ ಹೇಳಿದನು. 'ನನ್ನ ಆಜ್ಞೆಯನ್ನು ಪಾಲಿಸದಿದ್ದರೆ ತಲೆ ಚಂಡಾಡುತ್ತೇನೆ' ಎಂದನು.

ಸೈನಿಕರು ಅಂಜಿ ದೊರೆಯಾಜ್ಞೆಯನ್ನು ನಡೆಸತೊಡಗಿದರು. ಮನೆ ಕಣಜಗಳನ್ನು ಸುಟ್ಟು ಆಕಳನ್ನು ಕೊಂದರು. ಆದರೆ ಬೆಪ್ಪುತಕಡಿಗಳು ಎದುರಾಡದೆ ಅತ್ತರು. ಮುದುಕರು ಅತ್ತರು, ಮುದುಕಿಯರು ಅತ್ತರು, ಹರೆಯದವರೂ ಅತ್ತರು.

'ನಮ್ಮನ್ನೇಕೆ ನೋಯಿಸುತ್ತೀರಿ? ಒಳ್ಳೆಯ ಪದಾರ್ಥಗಳನ್ನೇಕೆ ಹಾಳುಮಾಡುತ್ತೀರಿ? ನಿಮಗೆ ಬೇಕಾದರೆ ಅವನ್ನು ನೀವೇ ತೆಗೆದುಕೊಳ್ಳಿರಿ' ಎಂದರು.

ಸೈನಿಕರಿಗೆ ಇನ್ನು ತಡೆಯಲಾಗಲಿಲ್ಲ, ಮುಂದೆ ಸಾಗದೆ, ಸೈನ್ಯದಿಂದ ಹೇಳದೆ ಕೇಳದೆ ಓಡಿಹೋದರು.

೧೨

ಹೀಗಾಗಿ ಪಿಶಾಚಿಯು ಹೊರಟುಹೋಗಬೇಕಾಯಿತು. ಸೈನಿಕರ ಮೂಲಕ ಐವಾನನನ್ನು ಕೆಡಿಸಲಾಗಲಿಲ್ಲ. ಅದು ಸಲುವು ದೊಡ್ಡ ಮನುಷ್ಯನ

ವೇಷದಲ್ಲಿ ಒಂದು, ಐವಾನನ ರಾಜ್ಯದಲ್ಲಿ ನೆಲೆಸಿತು. ರೋಣಿಯ ತಾರಸನನ್ನು ಕೆಡಿಸಿದಂತೆ ಐವಾನನನ್ನೂ ಹಣದಿಂದ ಕೆಡಿಸಬೇಕೆಂದು ಯೋಚಿಸಿಕೊಂಡಿತು.

'ನಿಮಗೆ ಒಳ್ಳೆಯದುಮಾಡಿ ಕೊಂಚ ಬುದ್ಧಿ ಕಲಿಸಬೇಕೆಂದಿದ್ದೇನೆ. ನಿಮ್ಮಲ್ಲಿಯೇ ನಿಂತು ವ್ಯಾಪಾರಮಾಡಬೇಕಂದಿದ್ದೇನೆ' ಎಂದಿತು.

'ಅದಕ್ಕೇನು ಇರು' ಎಂದನು ಐವಾನ್.

ಮಾರನೆಯ ದಿನ ಬೆಳಿಗ್ಗೆ ಆ ದೊಡ್ಡಮನುಷ್ಯನು ಚೌಕದಲ್ಲಿ ಒಂದು ಚೀಲ ಹಣವನ್ನೂ ಒಂದು ಚೂರು ಕಾಗದವನ್ನೂ ತೆಗೆದುಕೊಂಡು ಬಂದು 'ನೀವೆಲ್ಲ ಹಂದಿಗಳ ಹಾಗೆ ಜೀವಿಸುತ್ತೀರಿ. ನಿಮಗೆ ಬದುಕುವುದು ಹೇಗೆಂದು ಹೇಳಿಕೊಡುತ್ತೇನೆ. ಈ ಕಾಗದದಲ್ಲಿರುವ ಹಾಗೆ ಒಂದು ಮನೆ ಕಟ್ಟಿ, ನಾನು ಹೇಳಿದಂತೆ ಕೆಲಸಮಾಡಿದರೆ, ನಿಮಗೆ ಚಿನ್ನದ ನಾಣ್ಯ ಕೊಡುತ್ತೇನೆ' ಎಂದು ಚಿನ್ನದನಾಣ್ಯ ತೋರಿಸಿತು.

ಬೆಪ್ಪುತಕಡಿಗಳ ಕಣ್ಣರಳಿತು, ಅವರಲ್ಲಿ ಹಣ ಚಲಾವಣೆಯೇ ಇರಲಿಲ್ಲ. ಅವರು ಸಾಮಾನಿಗೆ ಸಾಮಾನು ಕೊಡುತ್ತಿದ್ದರು. ಕೆಲವರು ಸಾಮಾನಿಗೆ ಬದಲಾಗಿ ಕಲಸ ಮಾಡುತ್ತಿದ್ದರು. ಚಿನ್ನದ ನಾಣ್ಯಗಳನ್ನು ಕುತೂಹಲದಿಂದ ನೋಡಿದರು.

'ಎಷ್ಟು ಚೆನ್ನಾಗಿದೆ!' ಎಂದರು.

ಅವನ ಚಿನ್ನದ ನಾಣ್ಯಗಳಿಗಾಗಿ ಸಾಮಾನು ಕೊಟ್ಟು ಕೆಲಸಮಾಡಿ ಕೊಡುತ್ತಿದ್ದರು. ಪಿಶಾಚಿಯು ತಾರಸನ ರಾಜ್ಯದಲ್ಲಿ ಮಾಡಿದಂತೆ ಇಲ್ಲಿಯೂ ಹಣವನ್ನು ಚೆಲ್ಲಿತು. ಜನರು ಆ ಹಣಕ್ಕಾಗಿ ಎಲ್ಲವನ್ನೂ ಕೊಟ್ಟು ಏನು ಬೇಕಾದರೂ ಮಾಡುತ್ತಿದ್ದರು.

ಪಿಶಾಚಿಯು ಹಿಗ್ಗಿ 'ಈಗಲೀಗ ಕೆಲಸ ಸರಿಯಾಗಿದೆ, ಈಗ ತಾರಸನಿಗೆ ಮಾಡಿದಂತೆ ಈ ಬೆಪ್ಪುತಕಡಿಯನ್ನೂ ಕೆಡಿಸಿ, ಅವನ ದೇಹ ಆತ್ಮ ಎಲ್ಲಾ ಕೊಂಡುಕೊಳ್ಳುತ್ತೇನೆ' ಎಂದು ಯೋಚಿಸಿತು.

ಆದರೆ, ಬೆಪ್ಪುತಕಡಿಗಳು ಚಿನ್ನದ ನಾಣ್ಯ ಬಂದ ಕ್ಷಣ, ಅದನ್ನು ಹೆಂಗಸರಲ್ಲಿ ಹಾರಕ್ಕಾಗಿ ಹಂಚಿದರು. ಹುಡುಗಿಯರೆಲ್ಲಾ ಜಡೆಯಲ್ಲಿ ಹೆಣೆಯುತ್ತಿದ್ದರು ಮಕ್ಕಳು ಅವನ್ನಿಟ್ಟು ಬೀದಿಯಲ್ಲಿ ಆಡತೊಡಗಿದರು. ಎಲ್ಲರ ಹತ್ತಿರಲೂ ಬೇಕಾದಷ್ಟಾಗಿ, ಹಣ ತೆಗೆದುಕೊಳ್ಳುವುದನ್ನು ನಿಲ್ಲಿಸಿದರು. ಆ ದೊಡ್ಡಮನುಷ್ಯನ ಮಹಲು ಇನ್ನೂ ಅರ್ಧ ಆಗಿರಲಿಲ್ಲ. ಆ ವರ್ಷದ ಕಾಳು ಕಡ್ಡಿಗಳನ್ನು ಕೂಡಿಸಿರಲಿಲ್ಲ ಅದು ಸಲುವು ಜನರು ಬಂದು ಕೆಲಸ ಮಾಡಿ, ಕಾಳು ಕಡ್ಡಿ ತಂದುಕೊಟ್ಟರೆ ಇನ್ನೂ ಹಣವನ್ನು ಕೊಡುವೆನೆಂದು ಹೇಳಿದನು.

ಯಾರೂ ಕೆಲಸಕ್ಕೆ ಬರಲಿಲ್ಲ, ಏನನ್ನೂ ತರಲಿಲ್ಲ. ಯಾವಾಗಲೋ ಒಂದು ಸಲ ಒಬ್ಬ ಹುಡುಗನೋ ಹುಡುಗಿಯೋ ಅವನ ಬಳಿ ಒಂದು ಮೊಟ್ಟೆ ಕೊಟ್ಟು ಹಣ ತೆಗೆಯುತ್ತಿದ್ದರಲ್ಲದೆ, ಇನ್ನಾರೂ ಬರಲಿಲ್ಲ. ತಿನ್ನಲೇನೂ ಇರಲಿಲ್ಲ. ದೊಡ್ಡಮನುಷ್ಯನಿಗೆ ಹಸಿವೆಯಾಗಿರಲು, ಊಟಕ್ಕೆ ಏನಾದರೂ ಕೊಳ್ಳಬೇಕೆಂದು ಹಳ್ಳಿಯಲ್ಲಿ ತಿರುಗಿದನು ಒಂದು ಮನೆಯಲ್ಲಿ ಕೋಳಿಗಾಗಿ ಹಣ ಕೊಡಲು ಹೋದನು. ಮನೆಯವಳು ತೆಗೆದುಕೊಳ್ಳದೆ ಹೋದಳು.

'ಈಗಲೇ ಬೇಕಾದಷ್ಟಿದೆ' ಎಂದಳು.

ಒಬ್ಬ ವಿಧವೆಯ ಮನೆಯಲ್ಲಿ ಮೀನು ತೆಗೆದುಕೊಂಡು ಹಣ ಕೊಡಲು ಹೋದನು.

'ನನಗೆ ಬೇಡ, ಮಾರಾಯ! ಮನೆಯಲ್ಲಿ ಆಡಲು ಮಕ್ಕಳಿಲ್ಲ. ನನ್ನ ಹತ್ತಿರ ಆಗಲೇ ಮೂರು ನಾಣ್ಯವಿದೆ' ಎಂದಳು.

ಒಬ್ಬ ರೈತನ ಮನೆಗೆ ಹೋದನು. ಅವನು ರೊಟ್ಟಿಯನ್ನೂ ಕೊಡನು ಹಣವನ್ನೂ ತೆಗೆಯನು

'ನನಗೆ ಬೇಡ. ನೀನು ಕ್ರಿಸ್ತನ ಹೆಸರಿನಲ್ಲಿ ಬೇಡಿದರೆ, ನೋಡುತ್ತೇನೆ. ಮನೆಯವಳ ಹತ್ತಿರ ಒಂದು ಚೂರು ರೊಟ್ಟಿ ತರುತ್ತೇನೆ'ಎಂದನು.

ಇದನ್ನು ಕೇಳಿ ಪಿಶಾಚಿಯು ಉಗಿದು ಓಡಿತು. ಕ್ರಿಸ್ತನ ಹೆಸರಿನಲ್ಲಿ ಏನಾದರೂ ತೆಗೆದುಕೊಳ್ಳುವುದಿರಲಿ, ಕ್ರಿಸ್ತನ ಹೆಸರೆತ್ತಿದರೇ ಅದಕ್ಕೆ ಚಾಕು ಚುಚ್ಚಿದ್ದಕ್ಕಿಂತ ಹೆಚ್ಚು ನೋವಾಗುತ್ತಿತ್ತು.

ಅಂತೂ ಅದಕ್ಕೆ ರೊಟ್ಟಿ ಸಿಕ್ಕಲಿಲ್ಲ. ಎಲ್ಲರಲ್ಲಿಯೂ ಚಿನ್ನದ ಹಣವಿತ್ತು. ಅದು ಎಲ್ಲಿಗೆ ಹೋಗಲಿ, ಯಾರೂ ಅದರ ಹಣಕ್ಕೆ ಬದಲಾಗಿ ಏನೂ ಕೊಡುತ್ತಿರಲಿಲ್ಲ. ಆದರೆ 'ನಮಗೆ ಬೇರೆ ಏನಾದರೂ ತಂದುಕೊಡು, ಇಲ್ಲಿ ಬಂದು ಕೆಲಸಮಾಡು, ಇಲ್ಲವೆ ಕ್ರಿಸ್ತನ ಹೆಸರಿನಲ್ಲಿ ಬೇಕಾದ್ದನ್ನು ಬೇಡು' ಎಂದು ಎಲ್ಲರೂ ಎನ್ನುತ್ತಿದ್ದರು.

ಆದರೆ ಪಿಶಾಚಿಯ ಬಳಿ ಹಣವಲ್ಲದೆ ಬೇರೇನೂ ಇರಲಿಲ್ಲ, ಕೆಲಸ ಮಾಡಲು ಮನಸ್ಸಿಲ್ಲ, ಕ್ರಿಸ್ತನ ಹೆಸರೆತ್ತಿ ಬೇಡುವುದು ಆಗುವಹಾಗಿರಲಿಲ್ಲ ಅದಕ್ಕೆ ಕೋಪ ಬಂತು.

'ನಾನು ಹಣ ಕೊಡುವಾಗ ಇನ್ನೇನು ಬೇಕು ನಿಮಗೆ? ಹಣವಿದ್ದರೆ ಏನುಬೇಕಾದರೂ ಕೊಳ್ಳಬಹುದು' ಎಂದಿತು.

ಬೆಪ್ಪುತಕಡಿಗಳು ಆ ಮಾತನ್ನು ಕೇಳಲಿಲ್ಲ.

'ಬೇಡ, ನಮಗೆ ಬೇಡ. ನಾವು ಯಾರಿಗೂ ಹಣಕೊಡಬೇಕಾಗಿಲ್ಲ. ತೆರಿಗೆಯಿಲ್ಲ. ಹಣ ಕಟ್ಟಿಕೊಂಡು ಏನುಮಾಡೋಣ?' ಎಂದರು.

ಪಿಶಾಚಿಯು ಊಟವಿಲ್ಲದೆಯೇ ಮಲಗಿತು.

ಈ ಸಮಾಚಾರವು ಬೆಪ್ಪುತಕಡಿ ಐವಾನನಿಗೆ ಮುಟ್ಟಿತು. 'ನಾವೇನು ಮಾಡಬೇಕು? ಒಬ್ಬ ದೊಡ್ಡಮನುಷ್ಯ ಬಂದಿದ್ದಾನೆ. ತಿಂದು ಕುಡಿದು ಚೆನ್ನಾಗಿ ಸಿಂಗರಿಸಿಕೊಳ್ಳಲು ಆಸೆಯಿದೆ ಅವನಿಗೆ. ಕೆಲಸ ಮಾಡಲು ಮನಸ್ಸಿಲ್ಲ. ಕ್ರಿಸ್ತನ ಹೆಸರೆತ್ತಿ ಭಿಕ್ಷೆಯೆತ್ತಲಾರ. ಆದರೆ ಎಲ್ಲರಿಗೂ ಚಿನ್ನದ ನಾಣ್ಯಗಳನ್ನು ಕೊಡುತ್ತಾನೆ. ಮೊದಲು ಜನರು ಅವನಿಗೆ ಬೇಕಾದ್ದನ್ನೆಲ್ಲ ಕೊಟ್ಟರು. ಈಗ ಎಲ್ಲರ ಹತ್ತಿರಲೂ ಚಿನ್ನದ ಹಣ ಬೇಕಾದಷ್ಟಿದೆ. ಅವನಿಗೆ ಯಾರೂ ಏನೂ ಕೊಡುವುದಿಲ್ಲ. ಅವನನ್ನು ಏನು ಮಾಡಬೇಕು? ಹೊಟ್ಟೆಗಿಲ್ಲದೆ ಸಾಯುತ್ತಿದಾನೆ' ಎಂದು ಜನರು ಹೇಳಿದರು.

ಐವಾನನು ಕೇಳಿದನು.

'ಸರಿ! ಅವನಿಗೆ ಊಟ ಹಾಕಬೇಕು. ಒಂದೊಂದು ದಿನ ಒಬ್ಬೊಬ್ಬರ ಮನೆಯಲ್ಲಿ ಕುರಿ ಕಾಯಲಿ' ಎಂದನು.

ಹಾಗೆ ಮಾಡದಿದ್ದರೆ ನಿಧಿಯಿರಲಿಲ್ಲ. ಪಿಶಾಚಿಯು ಕೆಲಸಕ್ಕೆ ಮೊದಲು ಮಾಡಿತು.

ಹೀಗೆ ಕ್ರಮವಾಗಿ ಬರುತ್ತ ಐವಾನನ ಮನೆಯ ಸರದಿಯೂ ಒಂತು. ಪಿಶಾಚಿಯು ಊಟಕ್ಕೆ ಬಂದಿತು. ಮೂಗ ಹುಡುಗಿಯು ಊಟಕ್ಕೆ ಅಣಿಮಾಡುತ್ತಿದ್ದಳು.

ಎಷ್ಟೋಸಲ ಶೋಂಭೇರಿಗಳು ತಮ್ಮ ಪಾಲಿನ ಕೆಲಸ ಮಾಡದೆಯೇ ಬಂದು ಗಂಜಿಯನ್ನು ಮುಗಿಸಿ, ಅವಳಿಗೆ ಮೋಸಮಾಡಿದ್ದರು.

ಆ ಮೂಗಿಗೆ ಶೋಂಭೇರಿಗಳನ್ನು ಅವರ ಕೈಗಳಿಂದ ತಿಳಿವ ಜಾಣ ತನವಿತ್ತು. ಕೈಯಲ್ಲಿ ಬೊಬ್ಬೆಯೆದ್ದು ಜಿಡ್ಡು ಕಟ್ಟಿದವರನ್ನು ಊಟಕ್ಕೆ ಕೂರಿಸಿ, ಮಿಕ್ಕವರಿಗೆ ಎಲ್ಲರೂ ಊಟಮಾಡಿ ಮಿಕ್ಕದ್ದನ್ನು ಹಾಕುತ್ತಿದ್ದಳು

ಪಿಶಾಚಿಯು ಊಟಕ್ಕೆ ಕೂರಲು ಮೂಗಿಯು ಅದರ ಕೈಸೆಳೆದು ನೋಡಿದಳು. ಕೈ ಒರಟಾಗಿರಲಿಲ್ಲ. ಶುಚಿಯಾಗಿ ಮೃದುವಾಗಿತ್ತು, ಉಗುರು ಉದ್ದವಾಗಿತ್ತು. ಮೂಗಿ ಗೊಣಗುಟ್ಟುತ್ತ ಅವನನ್ನು ಅತ್ತ ಸೆಳೆದುಹಾಕಿ ದಳು. ಆಗ ಐವಾನನ ಹೆಂಡತಿ 'ಅಯ್ಯಾ ಮನಸ್ಸಿಗೇನೂ ತಿಳಿದುಕೊಳ್ಳ ಬೇಡ. ನನ್ನ ನಾದಿನಿ ಕೈಯಲ್ಲಿ ಬೊಬ್ಬೆಯಿಲ್ಲದವರನ್ನು ಊಟಕ್ಕ ಕೂರಿಸು ವುದಿಲ್ಲ. ಆದರೆ ಕೊಂಚ ತಡೆದರೆ, ಜನರು ಊಟಮಾಡಿ ಮಿಕ್ಕುದನ್ನು ತೆಗೆದುಕೊಳ್ಳಬಹುದು' ಎಂದಳು.

ತನ್ನನ್ನು ಅರಮನೆಯಲ್ಲಿ ಹಂದಿಯಂತೆ ಕಾಣುವರೆಂದು ಪಿಶಾಚಿಗೆ ಮನಸ್ಸಿಗೆ ಇದಾಯಿತು. 'ಎಲ್ಲರೂ ಕೈಗಳಿಂದ ಕೆಲಸಮಾಡಬೇಕೆಂದು ನಿನ್ನ ರಾಜ್ಯದಲ್ಲಿನ ನ್ಯಾಯ ಶುದ್ಧ ವಿಲುಪ್ತೈಲು. ಅದನ್ನು ಮಾಡಿದವನು ನೀನೊಬ್ಬ ಮಡ್ಡಿ ಕಲಸಮಾಡಲು ಕೈ ಒಂದೇಯೇನು ಇರುವುದು?

ಬುದ್ಧಿವಂತರು ಕೆಲಸಮಾಡುವುದು ಯಾವುದರಿಂದ?'' ಎಂದು ಐವಾನನಿಗೆಂದಿತು.

ಐವಾನನೆಂದ. 'ನಾವು ಬೆಪ್ಪುತಕಡಿಗಳು ನಮಗೇನು ಗೊತ್ತು? ನಾವು ಹೆಚ್ಚಾಗಿ ಕೆಲಸ ಮಾಡುವುದು ಅಂದರೆ ನಮ್ಮ ಕೈ, ನಮ್ಮ ಬೆನ್ನು'.

'ನೀವು ಬೆಪ್ಪುತಕಡಿಗಳು—ಹಾಗೆ ಮಾಡುತ್ತೀರಿ. ತಲೆಯಿಂದ ಕೆಲಸ ಮಾಡುವುದನ್ನು ಹೇಳಿಕೊಡುತ್ತೇನೆ. ಆಗ ನಿಮಗೆ ಕೈಲಿ ಮಾಡುವುದಕ್ಕಿಂತ ತಲೆಯಲ್ಲಿ ಕೆಲಸಮಾಡುವುದು ಒಳ್ಳೆಯದೆಂದು ಗೊತ್ತಾಗುತ್ತೆ' ಎಂದಿತು.

ಐವಾನನಿಗೆ ಆಶ್ಚರ್ಯವಾಯಿತು.

'ಹಾಗಾದರೆ ನಮ್ಮನ್ನು ಬೆಪ್ಪುತಕಡಿಗಳೆನ್ನುವುದರಲ್ಲಿ ಏನೋ ಸ್ವಾರಸ್ಯವಿದೆ' ಎಂದನು.

ಪಿಶಾಚಿಯು ಇನ್ನೂ ಹೇಳಿತು, 'ತಲೆಯಿಂದ ಕೆಲಸ ಮಾಡುವುದು ಅಷ್ಟು ಸುಲಭವಲ್ಲ. ನನ್ನ ಕೈ ಮೇಲೆ ಬೊಬ್ಬೆ ಎದ್ದಿಲ್ಲವೆಂದು ನೀವು ನನಗೇನೂ ತಿನ್ನಲು ಕೊಡುವುದಿಲ್ಲ; ಆದರೆ ತಲೆಯಿಂದ ಕೆಲಸಮಾಡಲು ಅದಕ್ಕಿಂತ ನೂರುಪಾಲು ಹೆಚ್ಚು ಕಷ್ಟವೆಂದು ನಿನಗೆ ಗೊತ್ತಿಲ್ಲ. ಒಂದೊಂದು ಸಲ ತಲೆ ಸಿಡಿದುಹೋಗುತ್ತದೆ'.

ಐವಾನನು ಯೋಚಿಸಿದನು.

'ಹಾಗಿದ್ದರೆ ಅಷ್ಟುಯಾಕೆ ತೊಂದರೆಪಟ್ಟುಕೊಳ್ಳಬೇಕು? ತಲೆಸಿಡಿದರೆ ಏನು ಸುಖವೆ? ಅದಕ್ಕಿಂತ ಕೈ ಬೆನ್ನು ಉಪಯೋಗಿಸಿ ಕೆಲಸಮಾಡುವುದು ತಾನೆ?''

ಆದರೆ ಪಿಶಾಚಿಯು 'ನಿಮಗೆ ಕನಿಕರದಿಂದ ಹೇಳಿಕೊಡುತ್ತೇನೆ. ನಾನು ಅಷ್ಟು ತೊಂದರೆ ಬೀಳದಿದ್ದರೆ ನೀವು ಎದೆಂದಿಗೂ ಬೆಪ್ಪುತಕಡಿಗಳಾಗಿರುತ್ತೀರಿ. ಆದರೆ ನಾನು ತಲೆಯಿಂದ ಕೆಲಸಮಾಡಿರುವೆನಾಗಿ ನಿಮಗೆ ಕಲಿಸಬಲ್ಲೆ' ಎಂದಿತು.

ಐವಾನನಿಗೆ ಆಶ್ಚರ್ಯವಾಯಿತು.

'ಹಾಗಿದ್ದರೆ ಹೇಳಿಕೊಡು. ಕೈ ಸವೆದುಹೋದಾಗ ತಲೆಯಲ್ಲಿ ಕೆಲಸಮಾಡೋಣ' ಎಂದನು.

ಪಿಶಾಚಿಯು ಶಿಷ್ಯರಿಗೆ ಕಲಿಸಲು ಮಾತುಕೊಟ್ಟಿತು. ಐವಾನನು, ರಾಜ್ಯದಲ್ಲೊಬ್ಬ ದೊಡ್ಡಮನುಷ್ಯನು ಬಂದಿರುವನೆಂದೂ, ಅವನು ಎಲ್ಲರಿಗೂ ತಲೆಯಿಂದ ಕೆಲಸಮಾಡಲು ಕಲಿಸುವನೆಂದೂ, ಕೈಗಳಿಗಿಂತ ತಲೆಯಿಂದ ಹೆಚ್ಚು ಕೆಲಸಮಾಡಬಹುದೆಂದೂ, ಜನರೆಲ್ಲ ಬಂದು ಕಲಿಯಬೇಕೆಂದೂ ಸಾರಿಸಿದನು.

ಐವಾನನ ರಾಜ್ಯದಲ್ಲಿ ಒಂದು ಎತ್ತರದ ಗೋಪುರವಿತ್ತು. ಮೇಲಿದ್ದ ಪೀಠವೊಂದಕ್ಕೆ ಕೆಳಗಿನಿಂದ ಹಂತವಿತ್ತು. ಎಲ್ಲರಿಗೂ ಕಾಣಿಸಲೆಂದು ಐವಾನನು ಅವನನ್ನು ಅಲ್ಲಿಗೆ ಕರೆದೊಯ್ದನು.

ಆ ದೊಡ್ಡಮನುಷ್ಯನು ಗೋಪುರದ ಮೇಲಿಂದ ಮಾತನಾಡುವುದನ್ನು ಕೇಳಲು ಬೆಪ್ಪುತಕಡಿಗಳೆಲ್ಲಾ ಬಂದರು. ಅವನು ತನ್ನ ಕೈಗಳಲ್ಲದೆ ಬರಿಯ ತಲೆಯಲ್ಲಿಯೇ ಕಲಸಮಾಡಿ ತೋರಿಸುವನೆಂದು ಬೆಪ್ಪುತಕಡಿಗಳೆಲ್ಲಾ ಯೋಚಿಸಿದ್ದರು. ಆದರೆ, ಕಲಸ ಮಾಡದೆಯೆ ಹೇಗೆ ಬದುಕಬಹುದೆಂಬುದನ್ನು ಪಿಶಾಚಿಯು ಕಲಿಸುತ್ತಿತ್ತು. ಬೆಪ್ಪುತಕಡಿಗಳಿಗೆ ಇದು ಅರ್ಥವಾಗಲಿಲ್ಲ. ನೋಡಿ, ಕೊನೆಗೆ ತಮ್ಮ ಕೆಲಸಗಳನ್ನು ನೋಡಿಕೊಳ್ಳಲು ಹೊರಟುಹೋದರು.

ಪಿಶಾಚಿಯು ಮಾತನಾಡುತ್ತ—ಒಂದು ದಿನ, ಎರಡು ದಿನ—ಗೋಪುರದಮೇಲೆ ನಿಂತಿತ್ತು. ಅದಕ್ಕೆ ತಿನ್ನಲೇನಾದರೂ ಬೇಕಾಗಿತ್ತು. ಬೆಪ್ಪುತಕಡಿಗಳು ಅದಕ್ಕೆ ರೊಟ್ಟಿ ಮುಟ್ಟಿಸುವ ಯೋಚನೆಯನ್ನೇ ಮಾಡಲಿಲ್ಲ. ಕೈಗಳಿಗಿಂತ ತಲೆಯಲ್ಲಿ ಚೆನ್ನಾಗಿ ಕೆಲಸಮಾಡಬಲ್ಲವನಾದರೆ ತನ್ನ ರೊಟ್ಟಿಯನ್ನು ತಾನು ಸುಖವಾಗಿ ಸಂಪಾದಿಸಿಕೊಳ್ಳಬಲ್ಲನೆಂದು ಅವರೆಂದರು.

ಪಿಶಾಚಿಯು ಗೋಪುರದಮೇಲೆ ಮಾತನಾಡುತ್ತ ಇನ್ನೊಂದು ದಿನವನ್ನು ಕಳೆಯಿತು. ಜನರು ಹತ್ತಿರ ಬರುವರು, ಕೊಂಚ ಹೊತ್ತು ನೋಡುವರು; ಆಮೇಲೆ ಹೊರಟುಹೋಗುವರು.

'ಏನು ! ಅವನು ತಲೆಯಿಂದ ಕೆಲಸಮಾಡಲು ತೊಡಗಿದ್ದಾನೆಯೋ ?' ಎಂದನು ಐವಾನ್.

'ಇನ್ನೂ ಇಲ್ಲ. ಇನ್ನೂ ಮಾತು ಸುರಿಸುತ್ತಿದ್ದಾನೆ' ಎಂದರು ಜನರು.

ಪಿಶಾಚಿಯು ಇನ್ನೂ ಒಂದು ದಿನ ಗೋಪುರದಮೇಲೆ ನಿಂತಿತ್ತು ಬರಬರುತ್ತ ನಿಶ್ಶಕ್ತಿ ಹೆಚ್ಚಾಗಿ, ತೂರಾಡುತ್ತ ಕಂಭಕ್ಕೆ ತಲೆ ಬಡಿದು ಕೊಂಡಿತು. ಒಬ್ಬ ಬೆಪ್ಪುತಕಡಿ ಇದನ್ನು ಕಂಡು, ಐವಾನನ ಹೆಂಡತಿಗೆ ತಿಳಿಸಲು, ಅವಳು ಹೊಲದಲ್ಲಿದ್ದ ಐವಾನನ ಬಳಿಗೋಡಿದಳು.

'ಬಾ. ಒಂದು ನೋಡು. ಅವನು ತಲೆಯಿಂದ ಕೆಲಸಮಾಡುತ್ತಿದಾನಂತೆ' ಎಂದಳು.

ಐವಾನನಿಗೆ ಆಶ್ಚರ್ಯವಾಯಿತು.

'ನಿಶ್ಚಯವಾಗಿ !' ಎಂದವನು ಕುದುರೆಯನ್ನು ತಿರುಗಿಸಿಕೊಂಡು ಗೋಪುರಕ್ಕೆ ಬಂದನು. ಅವನು ಅಲ್ಲಿಗೆ ಬರುವ ವೇಳೆಗೆ ಪಿಶಾಚಿಯು ಹಸಿವಿನಿಂದ ನಿತ್ರಾಣವಾಗಿ, ತತ್ತರಿಸುತ್ತ ಕಂಭಕ್ಕೆ ತಲೆಯಿಡಿದುಕೊಳ್ಳುತ್ತಿತ್ತು. ಐವಾನನು ಗೋಪುರಕ್ಕೆ ಬರಲು, ಪಿಶಾಚಿಯು ಎಡವಿಬಿದ್ದು, ಮೆಟ್ಟಲುಗಳನ್ನು ತಲೆಯೇಟಿನಿಂದ ಎಣಿಸುತ್ತ ತಪ್, ತಪ್, ತಪ್ ಎಂದು ಹಂತದುದ್ದಕ್ಕೂ ಬೀಳುತ್ತ ಬಂದಿತು.

'ಅದು ! ಒಂದೊಂದು ಸಲ ತಲೆ ಸಿಡಿಯುತ್ತೆ ಎಂದಾಗ ಅವನು ಸತ್ಯ ನುಡಿದ. ಬೊಬ್ಬೆಗಿಂತ ಕೇಡಾದದ್ದು ಇದು ; ಇಷ್ಟು ಕೆಲಸಮಾಡಿದ ಮೇಲೆ ತಲೆ ಊದಿಹೋಗಿರಬೇಕು' ಎಂದನು ಐವಾನ್.

ಪಿಶಾಚಿಯೂ ಮೆಟ್ಟಲಿನ ಕೆಳಗಿನವರೆಗೂ ಉರುಳಿ, ನೆಲಕ್ಕೆ ತಲೆ ಒಡಿದುಕೊಂಡಿತು. ಅವನೆಷ್ಟು ಕೆಲಸಮಾಡಿರುವನೋ ನೋಡಬೇಕೆಂದು ಐವಾನನು ಅದರ ಬಳಿಗೆ ಹೋಗಬೇಕು—ಅಷ್ಟರಲ್ಲಿ ನೆಲಬಿರಿದು ಪಿಶಾಚಿಯು ಒಳಗೆ ಬಿದ್ದಿತು. ಒಂದು ಬಿಲ ಮಾತ್ರ ಮಿಕ್ಕಿತು.

ಐವಾನನು ತಲೆ ಕೆರೆದುಕೊಂಡನು.

‘ ಏನನಿಷ್ಟ! ತಿರುಗಿ ಅದೇ! ಅವುಗಳ ಅಪ್ಪ ಇರಬೇಕು! ಏನು ದರಿದ್ರ!’ ಎಂದನು.

ಐವಾನನು ಈಗಲೂ ಇದ್ದಾನೆ. ಜನರು ಅವನ ರಾಜ್ಯದಲ್ಲಿ ಕಿಕ್ಕಿರಿಯುತ್ತಾರೆ. ಅವನ ಇಬ್ಬರು ಸೋದರರೂ ಅವನಲ್ಲಿಗೇ ಬಂದಿದ್ದಾರೆ. ಅವನು ಅವರನ್ನೂ ಸಾಕುತ್ತಾನೆ. ಯಾರು ಬಂದು ತಿನ್ನಲು ಕೇಳಿದರೂ ಐವಾನನು ‘ಆಗಲೇಳು. ನಮ್ಮ ಜತೆಯಲ್ಲಿರು. ನಮ್ಮಲ್ಲಿ ಎಲ್ಲ ಬೇಕಾದಷ್ಟಿದೆ.’ ಎನ್ನುತ್ತಾನೆ.

ಆದರೆ ಅವನ ರಾಜ್ಯದಲ್ಲಿ ಒಂದು ಪದ್ಧತಿಯುಂಟು. ಕೈಮೇಲೆ ಬೊಬ್ಬೆಯಿರುವವರು ಮೊದಲು ಪಂಙ್ತಿಗೆ ಕೂರಬಹುದು; ಇಲ್ಲದವರು, ಇತರರು ಬಿಟ್ಟುದನ್ನು ತಿನ್ನಬೇಕು.

# ಸೂರತ್ತಿನ ಕಾಫಿ ಮನೆ



ಇಂಡಿಯಾದಲ್ಲಿ ಸೂರತ್ ಪಟ್ಟಣದಲ್ಲಿ ಒಂದು ಕಾಫಿ ಮನೆ ಇದ್ದಿತು. ಅಲ್ಲಿಗೆ ಪ್ರಪಂಚದ ಎಲ್ಲಾ ಭಾಗಗಳಿಂದಲೂ ಪ್ರಯಾಣಿಕರು ಬಂದು ಸೇರಿ ಮಾತನಾಡುತ್ತಿದ್ದರು.

ಒಂದು ದಿನ ಆ ಕಾಫಿ ಮನೆಗೆ ಬಹಳ ಪಂಡಿತನಾದ ಒಬ್ಬ ಪಾರ್ಸಿ ತತ್ವಜ್ಞಾನಿಯು ಬಂದನು. ಅವನು ದೇವರ ಗುಣಸ್ವಭಾವಾದಿಗಳ ವಿಚಾರ ವನ್ನು ಚರ್ಚಿಸಿ ತಿಳಿಯುತ್ತಲೂ ಆ ವಿಷಯದಲ್ಲಿ ಪುಸ್ತಕಗಳನ್ನು ಓದಿ ಬರೆಯುತ್ತಲೂ ತನ್ನ ಆಯಸ್ಸನ್ನೆಲ್ಲಾ ಕಳೆದಿದ್ದನು. ದೇವರ ವಿಚಾರವಾಗಿ ಬೇಕಾದಷ್ಟು ಯೋಚಿಸಿ, ಓದಿ, ಬರೆದು, ಕಡೆಗೆ ಬುದ್ಧಿಯನ್ನು ಕಳೆದು ಕೊಂಡು ತೀರ ಮರುಳಾಗಿ ದೇವರು ಇರುವನು ಎಂಬುದರಲ್ಲೇ ನಂಬಿಕೆ ಯನ್ನು ಕಳೆದುಕೊಂಡನು. ಇದನ್ನು ಕೇಳಿ ಷಾ ಅವನನ್ನು ಪಾರ್ಸಿದೇಶ ದಿಂದ ಗಡೀಪಾರು ಮಾಡಿಸಿದನು.

ತನ್ನ ಜೀವಮಾನವೆಲ್ಲಾ ಆದಿಕಾರಣದ ವಿಷಯವಾಗಿ ಚರ್ಚಿಸಿ ಚರ್ಚಿಸಿ ಈ ಅದೃಷ್ಟಗೇಡಿ ತತ್ವಜ್ಞಾನಿಯು ಕೊನೆಗೆ ಭ್ರಾಂತನಾಗಿಬಿಟ್ಟನು. ಆಮೇಲೆ ತಾನು ತಿಳಿವಳಿಕೆಯನ್ನು ಕಳೆದುಕೊಂಡಿರುವುದನ್ನು ಮರೆತು ಪ್ರಪಂಚವನ್ನು ನಡೆಸುವುದಕ್ಕೆ ಒಂದು ಹೆಚ್ಚಿನ ಕಾರಣವೇ ಇಲ್ಲವೆಂದು ತಿಳಿಯುವುದಕ್ಕೆ ಪ್ರಾರಂಭಿಸಿದನು.

ಆ ಮನುಷ್ಯನಿಗೆ ಒಬ್ಬ ಆಫ್ರಿಕನ್ ಗುಲಾಮನಿದ್ದನು ಅವನು ಇವನನ್ನು ಎಲ್ಲೆಲ್ಲಿಯೂ ಹಿಂಬಾಲಿಸುತ್ತಿದ್ದನು. ತತ್ವಜ್ಞಾನಿ ಕಾಫಿ ಮನೆಯ ಒಳಕ್ಕೆ ಹೋದಾಗ ಗುಲಾಮನು ಹೊರಗಡೆ ನಿಂತು ಬಾಗಿಲ ಹತ್ತಿರ ಒಂದು ಕಲ್ಲಿನ ಮೇಲೆ ಬಿಸಿಲಿನಲ್ಲಿ ಕುಳಿತುಕೊಂಡು ತನ್ನ ಸುತ್ತಲೂ ಝೇಂಕರಿಸುತ್ತಿದ್ದ ನೊಣಗಳನ್ನು ಓಡಿಸುತ್ತಿದ್ದನು.

ಪಾರ್ಸಿಯು ಆ ಕಾಫಿ ಮನೆಯಲ್ಲಿ ದಿವಾನಿನ ಮೇಲೆ ಕುಳಿತುಕೊಂಡು ಒಂದು ಬಟ್ಟಲು ಅಫೀಮು ತರುವಂತೆ ಹೇಳಿದನು. ಅದನ್ನು ಕುಡಿದ ಬಳಿಕ ಅಫೀಮು ಮೆದುಳಿನ ಕೆಲಸವನ್ನು ಜೋರುಮಾಡಿದಮೇಲೆ ಅವನು ತೆರೆದ ಬಾಗಿಲಿನಿಂದ ತನ್ನ ಗುಲಾಮನನ್ನು ಕುರಿತು ಹೀಗೆ ಹೇಳಿದನು

" ಎಲೋ ಗುಲಾಮ, ದೇವರು ಒಬ್ಬನು ಇರುವನೊ ಇಲ್ಲವೋ ಹೇಳು. '

" ಇದ್ದೇ ಇದಾನೆ " ಎಂದು ಗುಲಾಮನು ಹೇಳಿ ತಕ್ಷಣ ತನ್ನ ನಡುಕಟ್ಟಿನಿಂದ ಒಂದು ಸಣ್ಣ ವಿಗ್ರಹವನ್ನು ಹೊರಕ್ಕೆ ತೆಗೆದುಕೊಂಡನು.

" ಇಗೋ ನೋಡಿ, ಇದೇ ನನ್ನನ್ನು ಹುಟ್ಟಿದಂದಿನಿಂಲೂ ಕಾಪಾಡಿ ಕೊಂಡು ಬಂದಿರುವ ದೇವರು. ನಮ್ಮ ದೇಶದಲ್ಲಿ ಪ್ರತಿ ಒಬ್ಬರೂ ಫೀಟಿಷ್ ಮರವನ್ನು ಪೂಜಿಸುತ್ತಾರೆ ಆ ಮರದಿಂದಲೇ ಈ ದೇವರನ್ನು ಮಾಡಿದೆ " ಎಂದನು.

ತತ್ವಜ್ಞಾನಿಗೂ ಅವನ ಗುಲಾಮನಿಗೂ ನಡೆದ ಈ ಸಂಭಾಷಣೆಯನ್ನು ಅಲ್ಲಿ ಆ ಕಾಫಿ ಮನೆಯಲ್ಲಿದ್ದ ಇತರರು ಕೇಳಿ ಆಶ್ಚರ್ಯಗೊಂಡರು ಯಜಮಾನನ ಪ್ರಶ್ನೆಗೆ ಅವರಿಗೆ ಆಶ್ಚರ್ಯವಾಯಿತು ಆದರೆ ಗುಲಾಮನ ಉತ್ತರವನ್ನು ಕೇಳಿ ಅದು ಇನ್ನೂ ಹೆಚ್ಚಾಯಿತು.

ಅವರಲ್ಲಿ ಒಬ್ಬ ಬ್ರಾಹ್ಮಣನು ಗುಲಾಮನು ಆಡಿದ ಮಾತುಗಳನ್ನು ಕೇಳಿ ಅವನ ಕಡೆ ತಿರುಗಿ ಹೇಳಿದನು.

" ಅಯ್ಯೋ ದಡ್ಡ, ದೇವರನ್ನು ಒಬ್ಬ ಮನುಷ್ಯನ ನಡುಕಟ್ಟಿನಲ್ಲಿ ಇಟ್ಟು ತೆಗೆದುಕೊಂಡು ಹೋಗಲು ಆಗುವುದೆಂದು ನಂಬಲು ಸಾಧ್ಯವೇ ? ದೇವರು ಒಬ್ಬನೇ; ಅವನೇ ಬ್ರಹ್ಮ. ಅವನು ಈ ಪ್ರಪಂಚವೆಲ್ಲಕ್ಕಿಂತಲೂ ದೊಡ್ಡವನು. ಏಕೆಂದರೆ ಅವನೇ ಅದನ್ನು ಮಾಡಿದವನು. ಬ್ರಹ್ಮನೊಬ್ಬನೇ ಸರ್ವಸಮರ್ಥನಾದ ದೇವರು. ಅವನ ನೆನಪಿಗಾಗಿ ಗಂಗಾನದಿಯ ದಡಗಳಲ್ಲಿ ದೇವಸ್ಥಾನಗಳನ್ನು ಕಟ್ಟಿದಾರ. ಅವುಗಳಲ್ಲಿ ಅವನ ಅರ್ಚಕರಾದ ಬ್ರಾಹ್ಮಣರು

ಅವನನ್ನು ಪೂಜಿಸುತ್ತಾರೆ. ಅವರಿಗೆ ನಿಜವಾದ ದೇವರು ಗೊತ್ತು. ಅವರಲ್ಲದೆ ಇತರರು ಯಾರೂ ಅವನನ್ನು ಅರಿಯರು ಸಾವಿರಾರು ವರ್ಷಗಳು ಕಳೆದಿವೆ, ಬದಲಾವಣೆಗಳ ಮೇಲೆ ಬದಲಾವಣೆಗಳು ಆಗಿಹೋಗಿವೆ, ಈ ಅರ್ಚಕರು ತಮ್ಮ ಅಧಿಕಾರವನ್ನು ಉಳಿಸಿಕೊಂಡೇ ಬಂದಿದಾರೆ. ಏಕೆಂದರೆ ಅದ್ವಿತೀಯ ನಾಗಿ ನಿಜವಾದ ದೇವರಾದ ಬ್ರಹ್ಮನು ಅವರನ್ನು ಕಾಪಾಡಿದ್ದಾನೆ".

ಎಲ್ಲರನ್ನೂ ಒಪ್ಪಿಸುವುದಾಗಿ ತಿಳಿದುಕೊಂಡು ಬ್ರಾಹ್ಮಣನು ಹೀಗೆ ಹೇಳಿದನು. ಆದರೆ ಅಲ್ಲಿದ್ದ ಒಬ್ಬ ಯೆಹೂದ್ಯ ದಳ್ಳಾಳಿ ಅವನಿಗೆ ಉತ್ತರ ಕೊಡುತ್ತಾ ಹೀಗೆ ಹೇಳಿದನು.

'ಇಲ್ಲ! ನಿಜವಾದ ದೇವರ ಗುಡಿ ಇಂಡಿಯದಲ್ಲಿಲ್ಲ. ದೇವರು ಬ್ರಾಹ್ಮಣ ಜಾತಿಯನ್ನು ಕಾಪಾಡುವುದೂ ಇಲ್ಲ. ಬ್ರಾಹ್ಮಣರ ದೇವರು ನಿಜವಾದ ದೇವರಲ್ಲ ಆದರೆ ಅಬ್ರಹಾಮ್, ಐಸಾಕ್, ಜೇಕಬ್ ಇವರ ದೇವರೇ ನಿಜವಾದ ದೇವರು. ತನ್ನ ಆರಿಸಿದ ಮೆಚ್ಚಿಗೆಯ ಜನಗಳಾದ ಇಸ್ರಯೇಲರನ್ನು ಹೊರತಾಗಿ ಉಳಿದವರು ಯಾರನ್ನೂ ಅವನು ಕಾಪಾಡುವುದಿಲ್ಲ. ಪ್ರಪಂಚದ ಆದಿಯಿಂದಲೂ ನಮ್ಮ ಜನಾಂಗ ಒಂದೇ ಅವನಿಗೆ ಪ್ರಿಯವಾಗಿದೆ. ಉಳಿದವುಗಳಲ್ಲ. ನಾವು ಈಗ ಪ್ರಪಂಚದಲ್ಲೆಲ್ಲಾ ಚದರಿ ಹೋಗಿರುವುದಾದರೆ, ಅದು ನಮ್ಮನ್ನು ಪರೀಕ್ಷಿಸುವುದಕ್ಕೇ ಸರಿ. ಏಕೆಂದರೆ ಒಂದಲ್ಲ ಒಂದು ದಿನ ತನ್ನ ಜನಗಳನ್ನು ಜೆರುಸಲೇಮಿನಲ್ಲಿ ಒಟ್ಟಿಗೆ ಕೂಡಿಸುವ ನೆಂದು ದೇವರು ಮಾತುಕೊಟ್ಟಿದ್ದಾನೆ. ಜೆರುಸಲೇಮಿನ ದೇವಸ್ಥಾನ ಪುರಾತನ ಪ್ರಪಂಚದ ಮಹದಾಶ್ಚರ್ಯ. ಅದರ ಪುನರುದ್ಧಾರವಾಗಿ, ತಮ್ಮ ಕಾಂತಿ ಯನ್ನು ಸಂಪಾದಿಸಿಕೊಂಡು ಇಸ್ರಯೇಲರು ಎಲ್ಲಾ ಜನಾಂಗಗಳಿಗೂ ಒಡೆಯರಾಗಿ ಬಾಳುತ್ತಾರೆ'.

ಯೆಹೂದ್ಯನು ಹೀಗೆ ಹೇಳಿ ಕಣ್ಣೀರು ಸುರಿಸಿದನು. ಇನ್ನೂ ಹೆಚ್ಚಾಗಿ ಹೇಳಬೇಕೆಂದು ಅವನಿಗೆ ಇಷ್ಟವಿದ್ದಿತು. ಆದರೆ ಅಲ್ಲಿದ್ದ ಇಟಲಿಯ ಒಬ್ಬ ಪಾದ್ರಿಯು ಮಧ್ಯೆ ಬಾಯಿಹಾಕಿದನು.

ಅವನು ಯೆಹೂದ್ಯನನ್ನು ಕುರಿತು, 'ನೀನು ಹೇಳುತ್ತಿರುವುದು ಸುಳ್ಳು. ದೇವರಿಗೆ ನೀನು ಅನ್ಯಾಯವನ್ನು ಆರೋಪಿಸುತ್ತಿದ್ದೀಯೆ. ಅವನು ನಿನ್ನ ಜನಾಂಗವನ್ನು ಉಳಿದವುಗಳಿಗಿಂತ ಹೆಚ್ಚಾಗಿ ಪ್ರೀತಿಸಲಾರನು. ಹಿಂದಿನ ಜನಾಂಗಗಳಲ್ಲಿ ಇಸ್ರಯೇಲರನ್ನು ಅವನು ಹೆಚ್ಚಾಗಿ ಮೆಚ್ಚಿದ್ದದ್ದು ಒಂದುವೇಳೆ ನಿಜವಾಗಿದ್ದರೂ ಈಗ ಅವರು ಅವನಿಗೆ ಕೋಪ ಬರುವಂತೆ ಮಾಡಿ ಒಂದುಸಾವಿರದೊಂಬೈನೂರು ವರ್ಷಗಳು ಕಳೆದು ಹೋದವು. ದೇವರು ಕೋಪಗೊಂಡು ಆ ಜನಾಂಗವನ್ನು ನಾಶಮಾಡಿ ಅವರನ್ನು ಭೂಮಿಯಮೇಲೆಲ್ಲಾ ಚದರಿಸಿರುವನು. ಅವರ ಮತವು ಹೊಸಬರನ್ನು ಆಕರ್ಷಿಸಿಕೊಳ್ಳಲಾರದು ಅಲ್ಲಲ್ಲೇ ಸ್ವಲ್ಪ ಮಾತ್ರ ನಿಂತಿರುವುದೇ ಹೊರತು ಈಗ ಅದು ನಿರ್ನಾಮವಾಗಿದೆ. ದೇವರು ಯಾವ ಜನಾಂಗಕ್ಕೂ ಹೆಚ್ಚು ಮೆಚ್ಚಿಗೆಯನ್ನು ತೋರಿಸುವುದಿಲ್ಲ. ಆದರೆ ಉದ್ಧಾರವಾಗಬೇಕೆಂದು ಬಯಸುವವರೆಲ್ಲರನ್ನೂ ರೋಮನ್ ಕ್ಯಾಥೊಲಿಕ್ ಚರ್ಚಿನ ಆಶ್ರಯಕ್ಕೆ ಕರೆಯುತ್ತಾನೆ. ಇದರಿಂದ ಹೊರಗೆ ಉಳಿದ ಯಾರಿಗೂ ಮೋಕ್ಷವು ಸಿಕ್ಕುವುದಿಲ್ಲ' ಎಂದನು.

ಹೀಗೆಂದು ಇಟಲಿಯವನು ಹೇಳಿದನು. ಆದರೆ ಅಲ್ಲಿ ಬಂದಿದ್ದ ಒಬ್ಬ ಪ್ರಾಟೆಸ್ಟೆಂಟ್ ಪಾದ್ರಿಯು ಕ್ಯಾಥೊಲಿಕ್ ಪಾದ್ರಿಯ ಕಡೆ ತಿರುಗಿ ಹೀಗೆ ಹೇಳಿದನು.

"ನಿನ್ನ ಮತಕ್ಕೇ ಮೋಕ್ಷವು ಸೇರಿದ್ದೆಂದು ಅದು ಹೇಗೆ ಹೇಳುತ್ತೀಯೆ? ಕ್ರಿಸ್ತನ ಮಾತಿನ ಅಪ್ಪಣೆಯಲ್ಲಿ ಹೇಳಿರುವಂತೆ, ಬೈಬಲ್ಲಿಗೆ ಅನುಸಾರವಾಗಿ ದೇವರನ್ನು ಅಂತರಂಗದಲ್ಲಿ ಸತ್ಯಸ್ವರೂಪನೆಂದು ಪೂಜಿಸಿದವರು ಮಾತ್ರವೇ ಉದ್ಧಾರವಾಗುತ್ತಾರೆ".

ಆಮೇಲೆ ಸೂರತ್ತಿನ ಸುಂಕದ ಮನೆಯಲ್ಲಿ ಅಧಿಕಾರಿಯಾಗಿದ್ದ ಒಬ್ಬ ತುರುಕನು, ಆ ಕಾಫಿ ಮನೆಯಲ್ಲಿ ಚುಟ್ಟವನ್ನು ಸೇದುತ್ತಾ ಕುಳಿತಿದ್ದವನು, ತಾನೇ ಹೆಚ್ಚು ಎಂಬ ಭಾವದಿಂದ ಇಬ್ಬರು ಕ್ರಿಶ್ಚಿಯನರ ಕಡೆಗೂ ತಿರುಗಿದನು.

'ನಿಮ್ಮ ರೋಮನ್ ಮತದಲ್ಲಿ ನೀವು ನಂಬಿಕೆ ಇಟ್ಟಿರುವುದು ವ್ಯರ್ಥ. ಈಗ ಒಂದುಸಾವಿರದ ಇನ್ನೂರು ವರ್ಷಗಳ ಹಿಂದೆ ನಿಜವಾದ ಮತ, ಮಹಮ್ಮದನ ಮತ, ಬಂದು ಅದನ್ನು ತಳ್ಳಿಹಾಕಿಬಿಟ್ಟಿತು! ಸತ್ಯವಾದ ಮಹಮ್ಮದನ ಮತವು ಯೂರೋಪಿನಲ್ಲೂ ಏಷ್ಯದಲ್ಲೂ, ಕಡೆಗೆ ತಿಳಿವಳಿಕೆ ಇಲ್ಲದ ಜನರು ಇರುವ ಚೀನಾದೇಶದಲ್ಲೂ ಹಬ್ಬುತ್ತಲೇ ಇರುವುದೆಂಬುದು ನಿಮಗೆ ಗೊತ್ತಾಗದೆ ಇರಲಾರದು. ಯೆಹೂದ್ಯರನ್ನು ದೇವರು ತಿರಸ್ಕರಿಸಿ ಬಿಟ್ಟಿರುವನೆಂದು ನೀವು ಹೇಳಿದಿರಿ. ಅದಕ್ಕೆ ಆಧಾರವಾಗಿ ಯೆಹೂದ್ಯರು ಅವಮಾನಿತರಾಗಿ ಇರುವುದನ್ನೂ ಅವರ ಮತವು ಹರಡದೇ ಇರುವುದನ್ನೂ ಹೇಳಿದಿರಿ. ಹೀಗಾದಮೇಲೆ ಮಹಮ್ಮದನ ಮತದ ಸತ್ಯವನ್ನು ಒಪ್ಪಿಕೊಳ್ಳಲೇ ಬೇಕು. ಏಕೆಂದರೆ, ಅದು ಈಗ ಜಯಶಾಲಿಯಾಗಿ ಎಲ್ಲಾ ಕಡೆಯಲ್ಲೂ ಬಹಳ ದೂರ ಹರಡುತ್ತಿರುವುದು. ದೇವರ ಕಟ್ಟಕಡೆಯ ಪ್ರವಾದಿಯಾದ ಮಹಮ್ಮದನ ಅನುಯಾಯಿಗಳಲ್ಲದವರು ಯಾರೂ ಉದ್ಧಾರವಾಗಲಾರರು. ಅವರಲ್ಲೂ ಉಮ್ಮರನನ್ನು ಹಿಂಬಾಲಿಸಿದವರೇ ಉದ್ಧಾರವಾಗುವರು. ಅಲ್ಲಿಯ ಹಿಂಬಾಲಕರಲ್ಲ. ಏಕೆಂದರೆ ಅವರು ದ್ರೋಹಿಗಳು, ಧರ್ಮಕ್ಕೆ ತಪ್ಪಿರುವರು'.

ಇದಕ್ಕೆ ಅಲ್ಲಿಯ ಪಂಗಡಕ್ಕೆ ಸೇರಿದವನಾದ ಪಾರ್ಸಿ ತತ್ವಜ್ಞಾನಿಯು ಉತ್ತರಕೊಡಬೇಕೆಂದಿದ್ದನು. ಆದರೆ ಅಷ್ಟುಹೊತ್ತಿಗೆ ಅಲ್ಲಿದ್ದ ಬೇರೆ ಬೇರೆ ಮತದ ಎಲ್ಲಾ ಅಪರಿಚಿತರಲ್ಲೂ ವಾದವು ಹಬ್ಬಿಬಿಟ್ಟಿದ್ದಿತು ಅಲ್ಲಿ ಅಬಸೀನಿಯನ್ ಕ್ರಿಶ್ಚಿಯನರೂ, ಟಿಬೆಟ್ಟಿನ ಲಾಮರೂ, ಇಸ್ಮಾಯಿಲನ ಅನುಯಾಯಿಗಳೂ ಅಗ್ನಿಪೂಜಕರೂ ಎಲ್ಲರೂ ಇದ್ದರು ಅವರೆಲ್ಲರೂ ದೇವರ ಗುಣದ ವಿಚಾರವಾಗಿಯೂ ಅವನನ್ನು ಹೇಗೆ ಪೂಜಿಸಬೇಕೆಂಬ ವಿಚಾರವಾಗಿಯೂ ವಾದಿಸುತ್ತಿದ್ದರು. ಪ್ರತಿಯೊಬ್ಬನೂ ತನ್ನ ದೇಶದಲ್ಲಿ ಮಾತ್ರ ನಿಜವಾದ ದೇವರನ್ನು ತಿಳಿದು ಅವನನ್ನು ಸರಿಯಾಗಿ ಪೂಜಿಸುತ್ತಿದ್ದರೆಂದು ಒತ್ತಿ ಒತ್ತಿ ಹೇಳುತ್ತಿದ್ದನು.

ಆಗ ಒಬ್ಬ ಚೀನಾದವನು ಹೊರತು ಅಲ್ಲಿದ್ದವರೆಲ್ಲರೂ ವಾದಿಸಿ ಕೂಗಾಡುತ್ತಿದ್ದರು. ಚೀನಿಯವನು ಕಾನ್‌ಫೂಸಿಯಸ್ಸನ ಶಿಷ್ಯ. ಅವನು ಕಾಫಿ ಮನೆಯ ಒಂದು ಮೂಲೆಯಲ್ಲಿ ವಾದಕ್ಕೆ ಸೇರದೆ ಸುಮ್ಮನೆ ಕುಳಿತು ಕೊಂಡು ಟೀ ಕುಡಿಯುತ್ತಾ ಇತರರು ಹೇಳಿದುದನ್ನು ಕೇಳುತ್ತಾ ಇದ್ದನು. ಆದರೆ ತಾನು ಮಾತ್ರ ಮಾತನಾಡುತ್ತಿರಲಿಲ್ಲ.

ಅವನು ಅಲ್ಲಿ ಕುಳಿತುಕೊಂಡಿರುವುದನ್ನು ತುರುಕನು ಕಂಡು ಅವನಿಗೆ ತಮ್ಮ ವಾದವನ್ನು ಒಪ್ಪಿಸುತ್ತಾ 'ಅಯ್ಯಾ ಚೀನೀ ಮನುಷ್ಯ, ನಾನು ಹೇಳಿದ್ದನ್ನು ನೀನು ನಿಜವೆಂದು ತೋರಿಸಬಲ್ಲೆ. ನೀನೇನೋ ಮಾತನಾಡದೆ ಸುಮ್ಮನೆ ಇದ್ದೀಯೆ ಆದರೆ ನೀನು ಮಾತನಾಡಿದರೆ ನನ್ನ ಅಭಿಪ್ರಾಯವನ್ನೇ ಸಮರ್ಥಿಸುವೆಯೆಂದು ನನಗೆ ಗೊತ್ತು. ನನ್ನ ಹತ್ತಿರಕ್ಕೆ ಸಹಾಯವನ್ನು ಅಪೇಕ್ಷಿಸಿ ಬರುವ ನಿಮ್ಮ ದೇಶದ ವ್ಯಾಪಾರಿಗಳು ಈಗ ಚೀನಾದೇಶಕ್ಕೆ ಅನೇಕ ಮತಗಳು ಬಂದಿರುವುವಾದರೂ ಅವುಗಳಲ್ಲೆಲ್ಲಾ ಮಹಮ್ಮದನ ಮತವು ಅತ್ಯುತ್ತಮವೆಂದು ನೀವೇ, ಚೀನಾದವರೇ, ಭಾವಿಸಿ ಅದನ್ನೇ ಮನಃಪೂರ್ವಕವಾಗಿ ಸ್ವೀಕರಿಸುತ್ತಿರುವುದಾಗಿ ಹೇಳುತ್ತಾರೆ. ಆದ್ದರಿಂದ ನನ್ನ ಮಾತನ್ನು ನಿಜವೆಂದು ನುಡಿದು ಸತ್ಯವಾದ ದೇವರ ಮತ್ತು ಅವನ ಪ್ರವಾದಿಯ ವಿಷಯದಲ್ಲಿ ನಿನ್ನ ಅಭಿಪ್ರಾಯವನ್ನು ನಮಗೆ ತಿಳಿಸು' ಎಂದು ಹೇಳಿದನು.

'ಹೌದು ಹೌದು ಈ ವಿಷಯದಲ್ಲಿ ನೀನು ಏನೆಂದು ಯೋಚಿಸುವೆಯೋ ನಾವೂ ಕೇಳೋಣ' ಎಂದು ಅಲ್ಲಿದ್ದವರೆಲ್ಲರೂ ಚೀನೀ ಮನುಷ್ಯನ ಕಡೆಗೆ ತಿರುಗಿ ಹೇಳಿದರು.

ಕಾನ್‌ಫೂಸಿಯಸ್ಸನ ಶಿಷ್ಯನಾದ ಚೀನೀ ಮನುಷ್ಯನು ಕಣ್ಣುಗಳನ್ನು ಮುಚ್ಚಿ ಸ್ವಲ್ಪಹೊತ್ತು ಯೋಚಿಸಿದನು. ಆಮೇಲೆ ಮತ್ತೆ ಕಣ್ಣು ಬಿಟ್ಟು ಬಹಳ ಅಗಲವಾದ ತನ್ನ ಅಂಗಿಯ ತೋಳುಗಳಿಂದ ಕೈಗಳನ್ನು ಹೊರಕ್ಕೆ ತೆಗೆದು ಎದೆಯಮೇಲೆ ಮಡಿಸಿಕೊಂಡು ಶಾಂತವಾಗಿ ನಿದಾನವಾಗಿ ಅವರಿಗೆ ಈ ಕೆಳಗೆ ಹೇಳುವಂತೆ ಹೇಳಿದನು.

'ಸ್ವಾಮಿ, ನಂಬಿಕೆಗೆ ಸಂಬಂಧಪಟ್ಟ ವಿಷಯಗಳಲ್ಲಿ ಮನುಷ್ಯರು ಒಬ್ಬರ ಮಾತನ್ನು ಒಬ್ಬರು ಒಪ್ಪಿಕೊಳ್ಳದಂತೆ ಮಾಡುವುದು ಮುಖ್ಯವಾಗಿ ಅವರಲ್ಲಿರುವ ಅಹಂಕಾರ ಎಂದು ನನಗೆ ತೋರುತ್ತದೆ. ನೀವು ಈ ನನ್ನ ಮಾತನ್ನು ಕೇಳುವುದಕ್ಕೆ ಇಷ್ಟಪಟ್ಟರೆ ಉದಾಹರಣೆಯನ್ನು ಕೊಟ್ಟು ಈ ವಿಷಯವನ್ನು ವಿವರಿಸುವ ಒಂದು ಕತೆಯನ್ನು ಹೇಳುತ್ತೇನೆ.

ಪ್ರಪಂಚವನ್ನೆಲ್ಲಾ ಸುತ್ತಿ ಬಂದಿದ್ದ ಒಂದು ಇಂಗ್ಲೀಷ್ ಸ್ಟೀಮರಿನ ಮೇಲೆ ನಾನು ಚೀನಾ ದೇಶದಿಂದ ಇಲ್ಲಿಗೆ ಬಂದೆ ನಾವು ಸುಮಾತ್ರಾ ದ್ವೀಪದ ಪೂರ್ವತೀರದಲ್ಲಿ ನೀರಿಗೋಸ್ಕರ ಇಳಿದೆವು. ಆಗ ಮಧ್ಯಾಹ್ನ ವಾಗಿತ್ತು. ನಮ್ಮಲ್ಲಿ ಕೆಲವರು ನೆಲದಮೇಲೆ ಹೋಗಿ ಸಮುದ್ರ ತೀರದಲ್ಲಿದ್ದ ಕೆಲವು ತೆಂಗಿನ ಮರಗಳ ನೆರಳಿನಲ್ಲಿ ಕುಳಿತುಕೊಂಡಿದ್ದೆವು. ಹತ್ತಿರದಲ್ಲಿ ಒಂದು ಹಳ್ಳಿ ಇತ್ತು ನಮ್ಮ ಗುಂಪಿನಲ್ಲಿ ಬೇರೆ ಬೇರೆ ಜನಾಂಗದ ಜನಗಳಿದ್ದರು. ನಾವು ಅಲ್ಲಿ ಕುಳಿತಿದ್ದಾಗ ಒಬ್ಬ ಕುರುಡನು ಹತ್ತಿರಕ್ಕೆ ಬಂದನು. ಅವನು ಸೂರ್ಯನು ಏನೆಂಬುದನ್ನು ಗೊತ್ತುಮಾಡಿ ಅವನ ಪ್ರಕಾಶವನ್ನು ಎಳೆದುಕೊಳ್ಳಬೇಕೆಂಬ ಉದ್ದೇಶದಿಂದ ಒಂದೇ ಸಮನಾಗಿ ಬಹಳ ಹೊತ್ತಿನ ವರೆಗೂ ಮತ್ತೆ ಮತ್ತೆ ಸೂರ್ಯನನ್ನು ನೋಡಿ ನೋಡಿ ಕುರುಡನಾಗಿದ್ದನೆಂದು ಆಮೇಲೆ ನಮಗೆ ತಿಳಿಯಿತು.

ಇದನ್ನು ಸಾಧಿಸುವುದಕ್ಕೋಸ್ಕರ ಅವನು ಸೂರ್ಯನನ್ನು ನೋಡುತ್ತ ಬಹಳ ಕಾಲದವರೆಗೂ ಪ್ರಯತ್ನಪಟ್ಟನು. ಆದರೆ ಅದರಿಂದ ಅವನ ಕಣ್ಣುಗಳಿಗೆ ಸೂರ್ಯನ ತೀಕ್ಷ್ಣ ಕಾಂತಿಯಿಂದ ತೊಂದರೆಯಾಗಿ ಅವನು ಕುರುಡಾದ್ದೊಂದೇ ಪ್ರಯೋಜನವಾಯಿತು.

ಆಮೇಲೆ ಅವನು ತನ್ನಲ್ಲಿ ತಾನೇ ಹೀಗೆ ಹೇಳಿಕೊಂಡನು. 'ಸೂರ್ಯನ ಪ್ರಕಾಶವು ದ್ರವವಲ್ಲ. ಏಕೆಂದರೆ ಅದು ದ್ರವವಾಗಿದ್ದ ಸಂದರ್ಭದಲ್ಲಿ ಅದನ್ನು ಒಂದು ಪಾತ್ರೆಯಿಂದ ಇನ್ನೊಂದಕ್ಕೆ ಸುರಿಯುವುದಕ್ಕೆ ಆಗುತ್ತಿತ್ತು, ನೀರಿನ ಹಾಗೆ ಗಾಳಿಯಿಂದ ಅದು ಚಲಿಸುತ್ತಿತ್ತು. ಅದು ಬೆಂಕಿಯೂ

ಅಲ್ಲ, ಏಕೆಂದರೆ ಬೆಂಕಿಯಾಗಿದ್ದರೆ ನೀರು ಅದನ್ನು ಆರಿಸುತ್ತಿತ್ತು. ಅದು ನಿರಾಕಾರವಾದ ಶಕ್ತಿಮಾತ್ರವೂ ಅಲ್ಲ ಏಕೆಂದರೆ ಅದನ್ನು ಕಣ್ಣಿನಿಂದ ನೋಡಬಹುದು. ಅದು ವಸ್ತುವೂ ಅಲ್ಲ ಏಕೆಂದರೆ ಅದನ್ನು ಕದಲಿಸುವುದಕ್ಕೆ ಸಾಧ್ಯವಿಲ್ಲ. ಆದ್ದರಿಂದ ಸೂರ್ಯನ ಪ್ರಕಾಶವು ದ್ರವವೂ ಅಲ್ಲದೆ, ಬೆಂಕಿಯೂ ಅಲ್ಲದೆ, ನಿರಾಕಾರವೂ ಅಲ್ಲದೆ, ವಸ್ತುವೂ ಅಲ್ಲದೆ ಇರುವುದರಿಂದ ಅದು ಏನೂ ಅಲ್ಲ—ಅದು ಇಲ್ಲವೇ ಇಲ್ಲ.'

ಹೀಗೆಂದು ಅವನು ವಾದಿಸಿದನು. ಯಾವಾಗಲೂ ಸೂರ್ಯನನ್ನು ನೋಡುತ್ತಲೂ ಯಾವಾಗಲೂ ಅದರ ವಿಚಾರದಲ್ಲಿ ಯೋಚಿಸುತ್ತಲೂ ಇದ್ದದ್ದರಿಂದ ಅವನು ತನ್ನ ದೃಷ್ಟಿಯನ್ನು ಕಳೆದುಕೊಂಡನು. ಅವನು ಪೂರ್ತಿ ಕುರುಡಾದ ಬಳಿಕ ಸೂರ್ಯನು ಇಲ್ಲವೇ ಇಲ್ಲವೆನ್ನುವುದು ನಿಸ್ಸಂದೇಹವಾಯಿತು.

ಈ ಕುರುಡನ ಸಂಗಡ ಒಬ್ಬ ಗುಲಾಮನು ಬಂದನು. ಅವನು ತನ್ನ ಯಜಮಾನನನ್ನು ತೆಂಗಿನ ಮರದ ನೆರಳಿನಲ್ಲಿ ಕೂರಿಸಿ ನೆಲದಮೇಲೆ ಬಿದ್ದಿದ್ದ ಒಂದು ತೆಂಗಿನ ಕಾಯನ್ನು ತೆಗೆದುಕೊಂಡು ಅದರಿಂದ ಒಂದು ದೀಪವನ್ನು ಮಾಡುವುದಕ್ಕೆ ತೊಡಗಿದನು. ತೆಂಗಿನಕಾಯಿನ ನಾರಿನಿಂದ ಒಂದು ಒತ್ತಿಯನ್ನು ಹೊಸೆದು ಕರಟಕ್ಕೆ ಕಾಯನ್ನು ಹಿಂಡಿ ಎಣ್ಣೆಯನ್ನು ಸುರಿದು ಅದರಲ್ಲಿ ಒತ್ತಿಯನ್ನು ಅದ್ದಿದನು.

ಗುಲಾಮನು ಹೀಗೆ ಮಾಡುತ್ತ ಕುಳಿತಿದ್ದಾಗ ಕುರುಡನು ನಿಟ್ಟುಸಿರುಬಿಟ್ಟು ಅವನನ್ನು ಕುರಿತು ಹೀಗೆ ಹೇಳಿದನು

'ಎಲವೋ ಗುಲಾಮ, ಸೂರ್ಯನು ಇಲ್ಲವೆಂದು ನಿನಗೆ ನಾನು ಹೇಳಿದೆನಲ್ಲ ಅದು ಸರಿಯಲ್ಲವೇ? ಎಷ್ಟು ಕತ್ತಲೆಯಾಗಿದೆ! ನಿನಗೆ ಕಾಣುವುದಿಲ್ಲವೆ? ಹೀಗಿದ್ದರೂ ಜನರು ಸೂರ್ಯನು ಇರುವನೆಂದು ಹೇಳುತ್ತಾರೆ. ಆದರೆ, ಹಾಗಿದ್ದ ಸಂದರ್ಭದಲ್ಲಿ, ಅದೇನದು?'

'ಸೂರ್ಯನು ಏನೋ ನನಗೆ ಗೊತ್ತಿಲ್ಲ. ಅದನ್ನು ಗೊತ್ತುಮಾಡುವುದು ನನ್ನ ಕೆಲಸವಲ್ಲ. ಆದರೆ ಬೆಳಕು ಎಂದರೆ ಏನೆಂಬುದನ್ನು ನಾನು ಬಲ್ಲೆ.

ಇಲ್ಲಿ ನಾನು ಒಂದು ರಾತ್ರಿ ಬೆಳಕನ್ನು ಮಾಡಿಕೊಂಡಿದೇನೆ. ಅದರ ಸಹಾಯದಿಂದ ನಿಮಗೆ ನಾನು ಸೇವೆಮಾಡಬಲ್ಲೆ, ಗುಡಿಸಲಿನಲ್ಲಿ ನನಗೆ ಬೇಕಾದ್ದನ್ನೆಲ್ಲ ತೆಗೆದುಕೊಳ್ಳಬಲ್ಲೆ.'

ಹೀಗೆಂದು ಹೇಳಿ ಗುಲಾಮನು ತೆಂಗಿನ ಕರಟವನ್ನು ತೆಗೆದುಕೊಂಡು ಇದು ನನ್ನ ಸೂರ್ಯ ಎಂದನು. ಹತ್ತಿರದಲ್ಲಿ ಕುಳಿತಿದ್ದ ಊರುಗೋಲಿನ ಒಬ್ಬ ಕುಂಟನು ಈ ಮಾತುಗಳನ್ನು ಕೇಳಿ ನಕ್ಕನು ಅವನು ಕುರುಡನನ್ನು ಕುರಿತು 'ನಿನ್ನ ಜೀವಮಾನವೆಲ್ಲಾ ನೀನು ಕುರುಡಾಗಿ ಇರುವಹಾಗೆ ತೋರುತ್ತದೆ. ಅದರಿಂದಲೇ ನಿನಗೆ ಸೂರ್ಯನೆಂದರೆ ಏನೆಂಬುದು ಗೊತ್ತಿಲ್ಲ. ಅದೇನೆಂದು ನಾನು ಹೇಳುತ್ತೇನೆ. ಸೂರ್ಯನು ಒಂದು ಬೆಂಕಿಯ ಚಂಡು. ಪ್ರತಿದಿನವೂ ಬೆಳಿಗ್ಗೆ ಇದೇ ಸಮುದ್ರದಿಂದ ಮೇಲೆ ಎದ್ದು ಪ್ರತಿ ಸಂಜೆಯಲ್ಲೂ ಇದೇ ನಮ್ಮ ದ್ವೀಪದ ಬೆಟ್ಟಗಳ ನಡುವೆ ಕೆಳಗೆ ಇಳಿದು ಹೋಗುತ್ತದೆ. ನಾವೆಲ್ಲರೂ ಅದನ್ನು ನೋಡಿದ್ದೇವೆ. ನಿನ್ನ ಕಣ್ಣಿನಲ್ಲೂ ದೃಷ್ಟಿ ಇದ್ದಿದ್ದರೆ ನೀನೂ ಇದನ್ನು ನೋಡುತ್ತಿದ್ದೆ.'

ಈ ಸಂಭಾಷಣವನ್ನು ಕೇಳುತ್ತಿದ್ದ ಒಬ್ಬ ಬೆಸ್ತನು 'ನೀನು ನಿನ್ನ ದ್ವೀಪದಿಂದ ಆಚೆಗೆ ಹೋಗಿಯೇ ಇರಲಿಲ್ಲವೆಂದು ಇದರಿಂದ ಸ್ಪಷ್ಟವಾಗುತ್ತದೆ. ನಾನು ನನ್ನ ಮೀನು ಹಿಡಿಯುವ ದೋಣಿಯಲ್ಲಿ ಹೋಗಿರುವಂತೆ ನೀನೂ ದೂರಕ್ಕೆ ಹೋಗಿದ್ದರೆ ಸೂರ್ಯನು ನಮ್ಮ ದ್ವೀಪದ ಬೆಟ್ಟಗಳ ನಡುವೆ ಮುಳುಗುವುದಿಲ್ಲವೆಂದೂ ಪ್ರತಿದಿನವೂ ಬೆಳಿಗ್ಗೆ ಸಮುದ್ರದಿಂದ ಏಳುವಂತೆ ಮತ್ತೆ ಪ್ರತಿ ರಾತ್ರಿಯಲ್ಲೂ ಸಮುದ್ರದಲ್ಲೇ ಮುಳುಗುವುದೆಂದೂ ನಿನಗೆ ಗೊತ್ತಾಗುತ್ತಿತ್ತು. ನಾನು ಈಗ ನಿನಗೆ ಹೇಳುತ್ತಿರುವುದು ಸತ್ಯವಾದದ್ದು. ಪ್ರತಿದಿನವೂ ಇದನ್ನು ನಾನು ಕಣ್ಣಾರ ಕಾಣುತ್ತೇನೆ' ಎಂದನು.

ಆಮೇಲೆ ನಮ್ಮ ಗುಂಪಿನಲ್ಲಿದ್ದ ಒಬ್ಬ ಇಂಡಿಯಾ ದೇಶದವನು ನಡುವೆ ಬಾಯಿ ಹಾಕಿ 'ಬುದ್ಧಿ ನೆಟ್ಟಗಿರುವ ಮನುಷ್ಯನು ಇಂಥ ಅವಿವೇಕದ ಮಾತುಗಳನ್ನು ಆಡುವದನ್ನು ಕೇಳಿ ನನಗೆ ಬಹಳ ಆಶ್ಚರ್ಯವಾಗುತ್ತಿದೆ

ಒಂದು ಬೆಂಕಿಯ ಚಂಡು ನೀರಿನೊಳಗೆ ಮುಳುಗಿದರೆ ಅದು ಹೇಗೆ ಆರಿ ಹೋಗದೆ ಇರುವುದು ? ಸೂರ್ಯನು ಬೆಂಕಿಯ ಚಂಡು ಅಲ್ಲವೇ ಅಲ್ಲ. ಅವನು ಒಬ್ಬ ದೇವತೆ. ಚಿನ್ನದ ಪರ್ವತದ ಸುತ್ತಲೂ ಸದಾ ಅವನು ರಥದಲ್ಲಿ ಕುಳಿತು ಸವಾರಿಮಾಡುತ್ತಲೇ ಇರುತ್ತಾನೆ. ಕೆಲವು ವೇಳೆ ರಾಹುಕೇತುಗಳೆಂಬ ಕೆಟ್ಟ ಸರ್ಪಗಳು ಆ ದೇವನನ್ನು ಹಿಡಿಸಿಕೊಂಡು ಹೋಗಿ ನುಂಗಿಬಿಡುತ್ತವೆ. ಆಗ ಭೂಮಿಯಲ್ಲೆಲ್ಲಾ ಕತ್ತಲಾಗುತ್ತದೆ. ಆದರೆ ನಮ್ಮ ಪುರೋಹಿತರು ದೇವತೆಗೆ ಬಿಡುಗಡೆಯಾಗಲೆಂದು ಪ್ರಾರ್ಥಿಸುತ್ತಾರೆ. ಆಗ ಅವನಿಗೆ ಬಿಡುಗಡೆಯಾಗುತ್ತದೆ. ತಮ್ಮ ತಮ್ಮ ದ್ವೀಪಗಳಿಂದ ಎಂದೂ ಆಚೆಗೆ ಹೋಗದೆ ಇರುವ ನಿನ್ನಂಥ ದಡ್ಡರು ಮಾತ್ರ ತಮ್ಮ ದೇಶ ಒಂದರಲ್ಲಿ ಮಾತ್ರವೇ ಸೂರ್ಯನು ಬೆಳಗುವನೆಂದು ಆಲೋಚಿಸುತ್ತಾರೆ'.

ಆಮೇಲೆ ಅಲ್ಲಿದ್ದ ಇಜಿಪ್ಟಿನ ಒಂದು ಹಡಗಿನ ಯಜಮಾನನು ತಾನು ಹೀಗೆ ಹೇಳಿದನು. 'ಅಲ್ಲ, ನೀನು ಹೇಳುವುದೂ ಸರಿಯಲ್ಲ. ಸೂರ್ಯನು ದೇವತೆಯಲ್ಲ. ಅವನು ಇಂಡಿಯಾ ದೇಶದ ಮತ್ತು ಅಲ್ಲಿರುವ ಚಿನ್ನದ ಬೆಟ್ಟದ ಸುತ್ತಲೂ ಮಾತ್ರವೇ ಸುತ್ತುವುದಿಲ್ಲ. ನಾನು ಕಪ್ಪುಸಮುದ್ರದಲ್ಲಿ ಬಹುದೂರ ಹಡಗಿನಲ್ಲಿ ಹೋಗಿದ್ದೇನೆ. ಅರೇಬಿಯದ ತೀರಗಳಲ್ಲಿಯೂ ಬಹುದೂರ ಹೋಗಿದ್ದೇನೆ. ಮಡಗಾಸ್ಕರ್ ಮತ್ತು ಫಿಲಿಪೈನ್ ದ್ವೀಪ ಗಳಿಗೂ ಹೋಗಿ ಬಂದಿದ್ದೇನೆ. ಸೂರ್ಯನು ಸಮಸ್ತ ಪ್ರಪಂಚವನ್ನೂ ಬೆಳಗುತ್ತಾನೆ, ಇಂಡಿಯವನ್ನು ಮಾತ್ರ ಅಲ್ಲ. ಒಂದೇ ಬೆಟ್ಟದ ಸುತ್ತಲೂ ಸುತ್ತುವುದಿಲ್ಲ. ಆದರೆ ಅದು ಪೂರ್ವದಲ್ಲಿ ಜಪಾನ್ ದ್ವೀಪಗಳಿಂದ ಆಚೆ ಹುಟ್ಟುತ್ತದೆ ಪಶ್ಚಿಮದಲ್ಲಿ ಬಹಳ ದೂರದಲ್ಲಿ ಇಂಗ್ಲೆಂಡು ದ್ವೀಪಗಳ ಆಚೆಗೆ ಮುಳುಗುತ್ತದೆ. ಜಪಾನಿನವರು ತಮ್ಮ ದೇಶವನ್ನು 'ನಿಪ್ಪನ್' ಎಂದರೆ 'ಸೂರ್ಯನ ಹುಟ್ಟು' ಎಂದು ಕರೆಯುವುದಕ್ಕೆ ಇದೇ ಕಾರಣ. ನಾನು ಅದನ್ನು ಚೆನ್ನಾಗಿ ಬಲ್ಲೆ. ನಾನು ಬಹಳ ನೋಡಿದ್ದೇನೆ. ಸಮುದ್ರಗಳ ದಡಗಳ ವರೆಗೆ ಹೋಗಿ ಬಂದಿದ್ದ ನಮ್ಮ ಅಜ್ಜನಿಂದಲೂ ಕೇಳಿದ್ದೇನೆ' ಎಂದನು.

ಅವನು ಇನ್ನೂ ಹೇಳುತ್ತಿದ್ದನು. ಆದರೆ ನಮ್ಮ ಹಡಗಿನಲ್ಲಿ ಬಂದಿದ್ದ ಒಬ್ಬ ಇಂಗ್ಲಿಷ್ ನಾವಿಕನು ನಡುವೆ ಬಾಯಿಹಾಕಿ ಹೀಗೆ ಹೇಳಿದನು.

'ಸೂರ್ಯನ ಚಲನೆಯನ್ನು ತಿಳಿದುಕೊಂಡಿರುವ ಜನರು ಇಂಗ್ಲೆಂಡ್ ದೇಶದಲ್ಲಿ ಇರುವ ಹಾಗೆ ಮತ್ತೆ ಯಾವ ದೇಶದಲ್ಲೂ ಇಲ್ಲ. ಸೂರ್ಯನು ಎಲ್ಲಿಯೂ ಹುಟ್ಟುವುದೂ ಇಲ್ಲ, ಎಲ್ಲಿಯೂ ಮುಳುಗುವುದೂ ಇಲ್ಲ. ಈ ಸಂಗತಿ ಇಂಗ್ಲೆಂಡ್ ದೇಶದಲ್ಲಿ ಪ್ರತಿಯೊಬ್ಬರಿಗೂ ಗೊತ್ತಿದೆ. ಅದು ಯಾವಾಗಲೂ ಭೂಮಿಯ ಸುತ್ತಲೂ ಸುತ್ತುತ್ತಿರುವುದು. ನಾವು ಈ ವಿಷಯದಲ್ಲಿ ನಿಶ್ಚಯ ವಾಗಿರಬಹುದು. ಏಕೆಂದರೆ ನಾವು ಪ್ರಪಂಚದ ಸುತ್ತಲೂ ಈಗ ತಾನೇ ಹೋಗಿ ಬಂದಿದ್ದೇವೆ. ಎಲ್ಲಿಯೂ ಸೂರ್ಯನಿಗೆ ಢಿಕ್ಕಿ ಹೊಡಿಯಲಿಲ್ಲ. ನಾವು ಎಲ್ಲೆಲ್ಲಿ ಹೋದರೂ ಅಲ್ಲೆಲ್ಲಾ ಸೂರ್ಯನು ಬೆಳಗಿನ ಹೊತ್ತು ಕಾಣು ತ್ತಲೇ ಇದ್ದು ರಾತ್ರಿಯಹೊತ್ತು ಇಲ್ಲಿನಂತೆ ಅಲ್ಲಿಯೂ ಮರೆಯಾಗುತ್ತಿದ್ದನೆ' ಎಂದು ನುಡಿದು ಆ ಇಗ್ಲೆಂಡಿನವನು ಒಂದು ಕಡ್ಡಿಯನ್ನು ತೆಗೆದುಕೊಂಡು ಅದರಿಂದ ಒಂದು ವರ್ತುಲವನ್ನು ಬರೆದು ಸೂರ್ಯನು ಆಕಾಶದಲ್ಲಿ ಚಲಿ ಸುತ್ತಾ ಹೇಗೆ ಭೂಮಿಯ ಸುತ್ತಲೂ ಹೋಗುವನು ಎಂಬುದನ್ನು ವಿವರಿಸಿ ಹೇಳುವುದಕ್ಕೆ ಪ್ರಯತ್ನ ಮಾಡಿದನು. ಆದರೆ ಅವನಿಗೆ ಸ್ಪಷ್ಟವಾಗಿ ಹೇಳು ವುದಕ್ಕೆ ತಿಳಿಯಲಿಲ್ಲ ಆಗ ಹಡಗನ್ನು ನಡೆಸುವವನನ್ನು ತೋರಿಸಿ

'ನನಗಿಂತ ಈತನಿಗೆ ಈ ವಿಷಯ ಚೆನ್ನಾಗಿ ಗೊತ್ತು ಅವನು ಅದನ್ನು ಸರಿಯಾಗಿ ವಿವರಿಸಬಲ್ಲನು' ಎಂದನು.

ಆ ಹಡಗುನಡೆಸುವವನು ಬಹಳ ಬುದ್ಧಿವಂತ. ತನ್ನನ್ನು ಕೇಳುವ ವರೆಗೂ ಮಾತನಾಡದೆ ಸುಮ್ಮನೆ ನಿಂತು ಅವರು ಆಡುವುದನ್ನೆಲ್ಲಾ ಕೇಳು ತ್ತಲೇ ಇದ್ದನು. ಈಗ ಪ್ರತಿಯೊಬ್ಬರೂ ಅವನ ಕಡೆ ತಿರುಗಿದರು ಅವನು ಹೀಗೆ ಹೇಳಿದನು 'ನೀವು ಒಬ್ಬರೊಬ್ಬರೂ ಪ್ರತಿ ಒಬ್ಬರಿಗೂ ತಪ್ಪು ಅಭಿಪ್ರಾಯವನ್ನು ಕೊಡುತ್ತಿರುವಿರಿ. ಅಲ್ಲದೆ ನೀವೂ ಮೋಸ ಹೋಗು ತ್ತಿದ್ದೀರಿ. ಸೂರ್ಯನು ಭೂಮಿಯ ಸುತ್ತಲೂ ಹೋಗುವುದಿಲ್ಲ ಆದರೆ

ಭೂಮಿ ಸೂರ್ಯನ ಸುತ್ತಲೂ ಹೋಗುತ್ತಿದೆ. ಹೋಗುವಾಗಲೆಲ್ಲಾ ತಾನು ಸುತ್ತುತ್ತಲೇ ಇರುತ್ತದೆ. ಪ್ರತಿ ಇಪ್ಪತ್ತನಾಲ್ಕು ಗಂಟೆಯ ಅವಕಾಶದಲ್ಲಿಯೂ ಅದು ಜಪಾನ್, ಫಿಲಿಪ್ಪೈನ್, ಈಗ ನಾವು ಇರುವ ಸುಮಾತ್ರಾ ಇವುಗಳನ್ನು ಮಾತ್ರವೇ ಅಲ್ಲ, ಆಫ್ರಿಕಾ, ಯೂರೋಪು, ಅಮೇರಿಕಾ ಮತ್ತು ಇನ್ನೂ ಅನೇಕ ದೇಶಗಳನ್ನು ಸೂರ್ಯನ ಕಡೆಗೆ ತಿರುಗಿಸುತ್ತಾ ಸುತ್ತುತ್ತಿರುತ್ತದೆ. ಸೂರ್ಯನು ಯಾವುದೊಂದು ಪರ್ವತಕ್ಕೇ ಆಗಲಿ ಯಾವುದೊಂದು ದ್ವೀಪಕ್ಕಾಗಲಿ ಅಥವಾ ಯಾವುದೊಂದು ಸಮುದ್ರಕ್ಕಾಗಲಿ ಕಡೆಗೆ ಯಾವುದೊಂದು ಭೂಮಿಗೆ ಮಾತ್ರವೇ ಆಗಲಿ ಬೆಳಗುತ್ತಿರದೆ ನಮ್ಮ ಭೂಮಿಯ ಹಾಗೆ ಇರುವ ಇನ್ನೂ ಅನೇಕ ಗ್ರಹಗಳಿಗೂ ಬೆಳಕನ್ನು ಕೊಡುತ್ತಾನೆ ನಮ್ಮ ಕಾಲ ಕೆಳಗೆ ಇರುವ ಭೂಮಿಯನ್ನು ನೋಡುವುದಕ್ಕೆ ಬದಲಾಗಿ ಕತ್ತೆತ್ತಿ ಆಕಾಶದ ಕಡೆಗೆ ನೋಡಿದರೆ ನೀವೆಲ್ಲರೂ ಇದನ್ನು ತಿಳಿದುಕೊಳ್ಳುತ್ತೀರಿ ಆಮೇಲೆ ಸೂರ್ಯನು ನಿಮಗೊಬ್ಬರಿಗೇ ಅಥವಾ ನಿಮ್ಮ ದೇಶ ಒಂದಕ್ಕೇ ಬೆಳಗುತ್ತಿದಾನೆ ಎಂಬ ಅಭಿಪ್ರಾಯವನ್ನು ನೀವು ಎಂದಿಗೂ ಇಟ್ಟುಕೊಳ್ಳಲಾರಿರಿ'.

ಪ್ರಪಂಚದ ಮೇಲೆಲ್ಲಾ ಬಹಳ ದೂರ ಸುತ್ತಿದ್ದ ಮತ್ತು ಆಕಾಶವನ್ನು ಬಹಳ ಹೆಚ್ಚಾಗಿ ನೋಡಿ ಪರೀಕ್ಷೆ ಮಾಡಿದ್ದ ವಿವೇಕಿಯಾದ ಆ ಹಡಗು ನಡೆಸುವವನು ಹೀಗೆ ಹೇಳಿದನು.

'ಆದ್ದರಿಂದ ನಂಬಿಕೆಯ ವಿಷಯಗಳಲ್ಲಿ ಮನುಷ್ಯರಿಗೆ ತಪ್ಪು ತಿಳಿವಳಿಕೆಗಳನ್ನು ಉಂಟುಮಾಡಿ ಅವರಲ್ಲಿ ದ್ವೇಷವನ್ನು ಹುಟ್ಟಿಸುವುದು ಅಹಂಕಾರವೇ. ಸೂರ್ಯನ ವಿಷಯದಲ್ಲಿ ಹೇಗೋ ದೇವರ ವಿಷಯದಲ್ಲೂ ಹಾಗೆಯೇ ಪ್ರತಿಯೊಬ್ಬ ಮನುಷ್ಯನೂ ತನಗೇ ಒಬ್ಬ ಪ್ರತ್ಯೇಕ ದೇವರನ್ನು ಅಥವಾ ತನ್ನ ದೇಶಕ್ಕೆ ಒಬ್ಬ ಪ್ರತ್ಯೇಕ ದೇವರನ್ನು ಅಪೇಕ್ಷಿಸುತ್ತಾನೆ. ಪ್ರಪಂಚವು ಯಾರನ್ನು ಅಡಗಿಸಿ ಇಟ್ಟುಕೊಳ್ಳಲಾರದೋ ಅಂಥವನನ್ನು ಪ್ರತಿಯೊಂದು ಜನಾಂಗವೂ ತಮ್ಮ ಗುಡಿಗಳಲ್ಲಿ ಮಾತ್ರವೇ ಬಂಧಿಸಲು ಇಷ್ಟಪಡುತ್ತದೆ

'ಸಮಸ್ತ ಜನರನ್ನೂ ಒಂದು ಮತದಲ್ಲಿ, ಒಂದು ನಂಬಿಕೆಯಲ್ಲಿ ಒಟ್ಟುಗೂಡಿಸುವುದಕ್ಕೆ ದೇವರು ತಾನೇ ಕಟ್ಟಿರುವ ಗುಡಿಗೆ ಯಾವ ಗುಡಿ ತಾನೆ ಸರಿತೂಗಬಲ್ಲದು'.

'ಮನುಷ್ಯನ ಗುಡಿಗಳೆಲ್ಲವೂ ಈ ಗುಡಿಯ ಅಂದರೆ ದೇವರು ನಿರ್ಮಿಸಿದ ಈ ಪ್ರಪಂಚದ ಮಾದರಿಯಲ್ಲೇ ಕಟ್ಟಿವೆ. ಪ್ರತಿಯೊಂದು ದೇವಾಲಯದಲ್ಲಿಯೂ ಅದಕ್ಕದಕ್ಕೆ ತಕ್ಕಂತೆ ಕಲಶಗಳನ್ನು ಇಟ್ಟು ಕಟ್ಟಿದ ಭುವನೇಶ್ವರಿಗಳೂ ದೀಪಗಳೂ ಶಾಸ್ತ್ರಗಳೂ ಅಥವಾ ವಿಗ್ರಹಗಳೂ ಶಾಸನಗಳೂ, ಕಾಯಿದೆ ಪುಸ್ತಕಗಳೂ, ಬಲಿಪೀಠಗಳೂ, ಪುರೋಹಿತರೂ ಇರುತ್ತಾರೆ. ಆದರೆ ಈ ಸಮುದ್ರಕ್ಕೆ ಸಮಾನವಾದ ಕಲಶವು ಯಾವ ಗುಡಿಯಲ್ಲಿದೆ? ಆಕಾಶದಂಥ ಭುವನೇಶ್ವರಿಯೂ, ಸೂರ್ಯ ಚಂದ್ರ ನಕ್ಷತ್ರಗಳಂಥ ದೀಪಗಳೂ ಅಥವಾ ಜೀವಿಸುತ್ತಾ, ಪ್ರೇಮಿಸುತ್ತಾ ಪರಸ್ಪರ ಪ್ರೀತಿಯಿಂದ ನಡೆಯುವ ಮನುಷ್ಯರಂಥ ವಿಗ್ರಹಗಳೂ ಯಾವ ಗುಡಿಯಲ್ಲಿ ತಾನೇ ಇದ್ದಾವು? ದೇವರು ಎಲ್ಲಾ ಕಡೆಯಲ್ಲೂ ಮನುಷ್ಯನ ಸುಖಕ್ಕಾಗಿ ಹರಡಿರುವ ಅಮೋಘ ಆಶೀರ್ವಾದದ ಹಾಗೆ ಸುಲಭವಾಗಿ ತಿಳಿಯಬಲ್ಲಂಥ, ದೇವರ ದಯೆಯನ್ನು ತಿಳಿಸುವ ಗ್ರಂಥಗಳು ಅಲ್ಲಿ ಒಂದಾದರೂ ಇದೆಯೇ? ಪ್ರತಿಯೊಬ್ಬನ ಹೃದಯದಲ್ಲೂ ಬರೆದಿರುವಷ್ಟು ಸುಲಭವಾಗಿ ಅರ್ಥವಾಗುವ ಕಟ್ಟಳೆಯ ಪುಸ್ತಕಗಳು ಯಾವದಾದರೂ ಇವೆಯೆ? ಪ್ರೇಮಪೂರ್ಣರಾದ ಗಂಡಸರೂ ಹೆಂಗಸರೂ ಪರಸ್ಪರವಾಗಿ ಮಾಡುವ ಸ್ವಾರ್ಥತ್ಯಾಗಗಳಿಗೆ ಯಾವ ಆಜ್ಞೆಯು ತಾನೆ ಸಮಾನವಾದೀತು? ದೇವರು ತಾನಾಗಿ ಬಲಿಯನ್ನು ಸ್ವೀಕರಿಸುವ ಸತ್ಪುರುಷನ ಹೃದಯಕ್ಕೆ ಯಾವ ಬಲಿಪೀಠವನ್ನು ತಾನೇ ಹೋಲಿಸಲಾದೀತು?

'ಭಗವಂತನ ವಿಷಯದಲ್ಲಿ ಮನುಷ್ಯನ ಭಾವನೆಯು ಉತ್ತಮವಾದಷ್ಟೂ ಅವನನ್ನು ಅವನು ಚೆನ್ನಾಗಿ ತಿಳಿದುಕೊಳ್ಳುತ್ತಾನೆ.

ದೇವರನ್ನು ಸ್ವಲ್ಪಸ್ವಲ್ಪವಾಗಿ ಚೆನ್ನಾಗಿ ತಿಳಿದುಕೊಂಡಂತೆಲ್ಲಾ ಅವನ ಒಳ್ಳೆಯತನ, ಅವನ ಕರುಣ, ಅವನ ಭೂತದಯೆ—ಇವುಗಳನ್ನು ಅನುಕರಿಸಿ ಮನುಷ್ಯನಿಗೆ ಹೆಚ್ಚುಹೆಚ್ಚು ಹತ್ತಿರದವನಾಗುತ್ತಾ ಬರುತ್ತಾನೆ.

ಆದ್ದರಿಂದ ಸಮಸ್ತ ಪ್ರಪಂಚವನ್ನೂ ತುಂಬಿರುವ ಸೂರ್ಯನ ಸಂಪೂರ್ಣ ಕಾಂತಿಯನ್ನು ಕಂಡವರು ತನ್ನ ವಿಗ್ರಹದಲ್ಲಿ ಅದೇ ಬೆಳಕಿನ ಒಂದೇ ಕಿರಣವನ್ನು ಕಾಣುವ ಮೂಢ ಮನುಷ್ಯನನ್ನು ಜರಿಯಬಾರದು, ತಿರಸ್ಕರಿಸಲೂ ಬಾರದು. ಸೂರ್ಯನನ್ನೇ ಕಾಣದೆ ಕುರುಡನಾಗಿರುವ ನಾಸ್ತಿಕನನ್ನು ಕೂಡ ತುಚ್ಛೀಕರಿಸಬಾರದು'.

ಹೀಗೆಂದು ಕಾನ್‌ಫ್ಯೂಸಿಯಸ್ಸನ ಶಿಷ್ಯನಾದ ಚೀನಿಯವನು ಹೇಳಿದನು. ಕಾಫಿ ಮನೆಯಲ್ಲಿ ಇದ್ದವರೆಲ್ಲರೂ ಸುಮ್ಮನಾದರು. ಮತ್ತು ತಮ್ಮ ಮತವೇ ಶ್ರೇಷ್ಠವೆಂದು ಮತ್ತೆ ಯಾರೂ ವಾದ ಮಾಡಲಿಲ್ಲ.

# ದೇವಪುತ್ರ

'ಕಣ್ಣಿಗೆ ಕಣ್ಣು, ಹಲ್ಲಿಗೆ ಹಲ್ಲು' ಎಂದು ನುಡಿಯುವ ಮಾತ ಕೇಳಿಹಿರಿ; ನನ್ನ ನುಡಿಯಿದ ಕೇಳಿ, ಯಾವಾತ ಕೆಟ್ಟವನೊ ಅವನ ನೀವೆದುರಿಸಲಿಬೇಡಿ,—ಮ್ಯಾಥ್ಯೂ V ೩೮, ೩೯

'ಕ್ರೋಧವೆನ್ನದು, ನಾನೆ ಫಲವ ಕೊಡುವೆ.'—ರೋಮ್ XII ೧೯

೧

ಒಬ್ಬ ಬಡರೈತನಿಗೆ ಒಬ್ಬ ಮಗ ಹುಟ್ಟಿದನು. ಅವನು ಸಂತೋಷ ಪಟ್ಟು ತನ್ನ ನೆರೆಯುವನ ಹತ್ತಿರ ಹೋಗಿ ತನ್ನ ಮಗನಿಗೆ ದೇವಪಿತನಾಗು ವಂತೆ ಕೇಳಿದನು. ನೆರೆಯುವನು ಒಪ್ಪದೆ ಒಲ್ಲೆನೆಂದನು. ಒಡವನ ಮಗನಿಗೆ ದೇವಪಿತನಾಗುವುದಕ್ಕೆ ಅವನಿಗೆ ಇಷ್ಟವಿರಲಿಲ್ಲ. ರೈತನು ಮತ್ತೊಬ್ಬ ನೆರೆಯುವನನ್ನು ಕೇಳಿದನು. ಅವನೂ ಒಲ್ಲೆನೆಂದನು. ಆಮೇಲೆ ಆ ಒಡ ತಂದೆಯು ಹಳ್ಳಿಯ ಪ್ರತಿಯೊಂದು ಮನೆಗೂ ಹೋಗಿ ಕೇಳಿದನು. ತನ್ನ ಮಗನಿಗೆ ದೇವಪಿತನಾಗಿ ನಿಲ್ಲುವ ಇಷ್ಟವಿರುವವರೊಬ್ಬರೂ ಅವನಿಗೆ ಸಿಕ್ಕ ಲಿಲ್ಲ. ಆದ್ದರಿಂದ ಅವನು ಮತ್ತೊಂದು ಹಳ್ಳಿಗೆ ಹೊರಟನು. ದಾರಿಯಲ್ಲಿ ಒಬ್ಬ ಮನುಷ್ಯನನ್ನು ಸಂಧಿಸಿದನು. ಆತನು ನಿಂತುಕೊಂಡು,

'ನಮಸ್ಕಾರವಯ್ಯಾ, ಎಲ್ಲಿಗೆ ಹೊರಟಿರುವ?' ಎಂದು ಕೇಳಿದನು.

ರೈತನು 'ಯೌವನದಲ್ಲಿ ನನ್ನ ಕಣ್ಣುಗಳಿಗೆ ಆನಂದವನ್ನು ತುಂಬುವು ದಕ್ಕೂ, ಮುಪ್ಪಿನಲ್ಲಿ ಸುಖಪಡಿಸುವುದಕ್ಕೂ ಸತ್ತ ಮೇಲೆ ನನ್ನ ಆತ್ಮ ಶಾಂತಿಗಾಗಿ ಪ್ರಾರ್ಥಿಸುವುದಕ್ಕೂ ದೇವರು ನನಗೊಬ್ಬ ಮಗನನ್ನು ಕೊಟ್ಟಿದಾನೆ. ಆದರೆ ನಾನು ಬಡವ. ನಮ್ಮ ಹಳ್ಳಿಯಲ್ಲಿ ಯಾರೊಬ್ಬರೂ ಅವನಿಗೆ ದೇವಪಿತನಾಗುವುದಿಲ್ಲ. ಆದ್ದರಿಂದ ಮತ್ತೆಲ್ಲಿಯಾದರೂ ಅವನಿ ಗೊಬ್ಬ ದೇವಪಿತನನ್ನು ಹುಡುಕಬೇಕೆಂದು ಹೊರಟಿದ್ದೇನೆ' ಎಂದನು.

ಆ ಅಪರಿಚಿತನು 'ನಾನು ದೇವಪಿತನಾಗುತ್ತೇನೆ' ಎಂದನು.

ರೈತನಿಗೆ ಸಂತೋಷವಾಯಿತು. ಉಪಕಾರವಾಯಿತೆಂದು ಅವನನ್ನು ವಂದಿಸಿದನು. ಆಮೇಲೆ 'ದೇವಮಾತೆಯಾಗೆಂದು ಯಾರನ್ನು ಕೇಳಲಿ?' ಎಂದನು.

'ಪಟ್ಟಣಕ್ಕೆ ಹೋಗು. ಅಲ್ಲಿ ನಾಲ್ಕು ಬೀದಿ ಸೇರಿದ ಚೌಕದಲ್ಲಿ ಮುಂಭಾಗದಲ್ಲಿ ಅಂಗಡಿಯ ಕಿಟಿಕಿಗಳಿರುವ ಒಂದು ಕಲ್ಲು ಕಟ್ಟಡ ಕಾಣುತ್ತದೆ. ಬಾಗಿಲಿನಲ್ಲಿ ಆ ಮನೆಗೆ ಒಡೆಯನಾದ ವರ್ತಕನು ಸಿಕ್ಕುತ್ತಾನೆ. ಅವನ ಮಗಳು ನಿನ್ನ ಮಗುವಿಗೆ ದೇವಮಾತೆಯಾಗುವಂತೆ ಅವಕಾಶ ಕೊಡಬೇಕೆಂದು ಆತನನ್ನು ಕೇಳು' ಎಂದನು.

ರೈತನು ಹಿಂದು ಮುಂದು ನೋಡಿದನು.

'ಆ ಶ್ರೀಮಂತ ಸಾಹುಕಾರನನ್ನು ನಾನು ಹೇಗೆ ಕೇಳಲಿ? ನನ್ನನ್ನು ಅವನು ತುಚ್ಛೀಕರಿಸಿ ತನ್ನ ಮಗಳನ್ನು ಬರಗೊಡಿಸುವುದಿಲ್ಲ' ಎಂದನು.

'ಆ ವಿಚಾರವಾಗಿ ತೊಂದರೆಪಟ್ಟುಕೊಳ್ಳಬೇಡ. ಹೋಗಿ ಕೇಳು. ನಾಳೆ ಬೆಳಗಿನ ಹೊತ್ತಿಗೆ ಎಲ್ಲವನ್ನೂ ಸಿದ್ಧಮಾಡಿಕೊ. ನಾಮಕರಣಕ್ಕೆ ನಾನು ಬರುತ್ತೇನೆ.'

ಬಡರೈತನು ಮನೆಗೆ ಹಿಂದಿರುಗಿ ಬಂದು, ಸಾಹುಕಾರನನ್ನು ಕಾಣುವುದಕ್ಕಾಗಿ ಪಟ್ಟಣಕ್ಕೆ ಗಾಡಿಯನ್ನು ಹೊಡೆದುಕೊಂಡು ಹೊರಟನು. ಅವನು ಕುದುರೆಯನ್ನು ಅಂಗಳದೊಳಕ್ಕೆ ಬಿಟ್ಟುಕೊಂಡು ಹೋದನೋ ಇಲ್ಲವೋ ಅಷ್ಟರಲ್ಲಿ ಸಾಹುಕಾರನೇ ಹೊರಕ್ಕೆ ಬಂದನು. ಅವನು 'ನಿನಗೇನು ಬೇಕು?' ಎಂದು ಕೇಳಿದನು.

'ನೋಡಿ, ಸ್ವಾಮಿ, ಯೌವನದಲ್ಲಿ ನನ್ನ ಕಣ್ಣುಗಳಿಗೆ ಆನಂದವನ್ನು ತುಂಬುವುದಕ್ಕೂ, ನನ್ನ ಮುಪ್ಪಿನಲ್ಲಿ ಸುಖಪಡಿಸುವುದಕ್ಕೂ ಸತ್ತ ಮೇಲೆ ನನ್ನ ಆತ್ಮಶಾಂತಿಗಾಗಿ ಪ್ರಾರ್ಥಿಸುವುದಕ್ಕೂ ದೇವರು ನನಗೊಬ್ಬ ಮಗ

ನನ್ನು ಕೊಟ್ಟಿದಾನೆ. ತಮ್ಮ ಮಗಳು ಅವನಿಗೆ ದೇವಮಾತೆಯಾಗಿ ನಿಲ್ಲು ವಂತೆ ಅವಕಾಶ ಕೊಟ್ಟು ಕರುಣಿಸಬೇಕು ' ಎಂದು ಕೇಳಿಕೊಂಡನು.

' ನಾಮಕರಣ ಯಾವಾಗ ?' ಎಂದು ಸಾಹುಕಾರನು ಕೇಳಿದನು.

' ನಾಳೆಯ ಬೆಳಿಗ್ಗೆ '

' ಒಳ್ಳೆಯದು ಸಮಾಧಾನವಾಗಿ ಮನೆಗೆ ಹೋಗು. ನಾಳೆಯು ಬೆಳಿಗ್ಗೆ ಪೂಜೆಯ (Mass) ಹೊತ್ತಿಗೆ ಅವಳು ಬರುತ್ತಾಳೆ '

ಮರುದಿನ ಬೆಳಿಗ್ಗೆ ದೇವಮಾತೆಯು ಬಂದಳು, ದೇವಪಿತನೂ ಬಂದನು, ಮಗುವಿಗೆ ನಾಮಕರಣವಾಯಿತು ನಾಮಕರಣವಾದ ಕೂಡಲೆ ದೇವಪಿತನು ಹೊರಟುಹೋದನು ಅವನು ಯಾರೆಂದು ಅವರಿಗೆ ಗೊತ್ತಿರ ಲಿಲ್ಲ, ಆ ಮೇಲೆ ಅವನನ್ನು ಎಂದೂ ಕಾಣಲಿಲ್ಲ

೨

ಆ ಮಗನು ತಂದೆತಾಯಿಗಳಿಗೆ ಆನಂದನಿಧಿಯಾಗಿ ಬೆಳೆದನು. ಅವನು ಬಲಶಾಲಿಯೂ, ಕೆಲಸ ಮಾಡುವ ಮನಸ್ಸುಳ್ಳವನೂ ಚತುರನೂ ವಿಧೇಯನೂ ಆಗಿದ್ದನು ಅವನಿಗೆ ಹತ್ತುವರ್ಷ ವಯಸ್ಸಾದಾಗ ತಂದೆ ತಾಯಿಗಳು ಅವನನ್ನು ಓದುಬರಹಗಳನ್ನು ಕಲಿಯುವುದಕ್ಕೆ ಮರಕ್ಕೆ ಕಳು ಹಿಸಿದರು ಉಳಿದವರು ಐದುವರ್ಷಗಳಲ್ಲಿ ಕಲಿಯುತ್ತಿದ್ದದ್ದನ್ನು ಅವನು ಒಂದೇ ವರ್ಷದಲ್ಲಿ ಕಲಿತನು. ಸ್ವಲ್ಪ ಕಾಲದಲ್ಲಿಯೇ ಅವರು ಅವನಿಗೆ ಕಲಿಸು ವಂಥದೇನೂ ಇಲ್ಲದಂತಾಯಿತು.

ಈಸ್ಟರ್ ಹಬ್ಬ ಬಂದಿತು. ಹುಡುಗನು ಈಸ್ಟರ್ ಹಬ್ಬದ ವಂದನೆ ಯನ್ನು ಅರ್ಪಿಸುವುದಕ್ಕಾಗಿ ತನ್ನ ದೇವಮಾತೆಯನ್ನು ನೋಡುವುದಕ್ಕ ಹೋದನು.

ಹಿಂದಿರುಗಿ ಮನೆಯನ್ನು ಸೇರಿದ ಬಳಿಕ, ತಂದೆತಾಯಿಗಳನ್ನು ಕುರಿತು ' ಅಪ್ಪಾ, ಅಮ್ಮಾ, ನನ್ನ ದೇವಪಿತನು ಎಲ್ಲಿ ವಾಸಮಾಡುತ್ತಾನೆ? ಈಸ್ಟರ್ ಹಬ್ಬದಲ್ಲಿ ಅವನನ್ನೂ ವಂದಿಸಿ ಬರಬೇಕೆಂದು ನನಗೆ ಆಸೆ ' ಎಂದನು

ಅವನ ತಂದೆಯು ‘ ಮುದ್ದು ಮಗುವೇ, ನಿನ್ನ ದೇವಪಿತನ ಸಂಗತಿಯೊಂದೂ ನಮಗೆ ಗೊತ್ತಿಲ್ಲ. ತಿಳಿದುಕೊಳ್ಳಲಿಲ್ಲವಲ್ಲಾ ಎಂದು ನಮಗೇ ಎಷ್ಟೋ ವೇಳೆ ವ್ಯಥೆಯಾಗಿದೆ. ನಿನಗೆ ನಾಮಕರಣವಾದ ದಿನದಿಂದಲೂ ಅವನನ್ನು ನಾವು ಕಂಡಿಲ್ಲ ಅವನ ವಿಷಯವಾದ ಯಾವ ವರ್ತಮಾನವನ್ನೂ ಕೇಳಿಲ್ಲ. ಅವನು ಎಲ್ಲಿ ವಾಸಮಾಡುವನೋ ನಮಗೆ ಗೊತ್ತಿಲ್ಲ. ಅವನು ಇನ್ನೂ ಬದುಕಿರುವನೋ ಇಲ್ಲವೋ ಅದೂ ತಿಳಿಯದು ’ ಎಂದು ಉತ್ತರ ಕೊಟ್ಟನು.

ಮಗನು ತಂದೆತಾಯಿಗಳಿಗೆ ಬಗ್ಗಿ ನಮಸ್ಕರಿಸಿ, ‘ ಅಪ್ಪಾ, ಅಮ್ಮಾ, ನಾನು ಹೋಗಿ ನನ್ನ ದೇವಪಿತನನ್ನು ಹುಡುಕಿಕೊಂಡು ಬರುತ್ತೇನೆ. ಅವನನ್ನು ಕಂಡು ಈಸ್ಟರ್ ಹಬ್ಬದ ವಂದನೆಯನ್ನರ್ಪಿಸಲೇಬೇಕು ’ ಎಂದನು.

ಆಗ ಅವನ ತಂದೆತಾಯಿಗಳು ಅವನನ್ನು ಹೋಗಗೊಟ್ಟರು. ಹುಡುಗನು ತನ್ನ ದೇವಪಿತನನ್ನು ಹುಡುಕುವುದಕ್ಕೆ ಪ್ರಯಾಣ ಮಾಡಿದನು.

೩

ಹುಡುಗನು ಮನೆಯನ್ನು ಬಿಟ್ಟು ರಸ್ತೆಯಲ್ಲೇ ಹೋಗುತ್ತಿದ್ದನು. ಹಲವು ಗಂಟೆಗಳವರೆಗೂ ನಡೆಯುತ್ತಲೇ ಇದ್ದ ಮೇಲೆ ಒಬ್ಬ ಅಪರಿಚಿತನು ಸಿಕ್ಕಿದನು ಅವನು ನಿಂತುಕೊಂಡು,

‘ ಒಳ್ಳೆಯದಯ್ಯಾ, ಮಗುವೆ, ನೀನೆಲ್ಲಿಗೆ ಹೋಗುತ್ತಿರುವೆ ?’ ಎಂದು ಕೇಳಿದನು.

ಹುಡುಗನು ಉತ್ತರ ಕೊಟ್ಟನು.

‘ ನನ್ನ ದೇವಮಾತೆಯನ್ನು ನೋಡಿ ಅವಳಿಗೆ ಈಸ್ಟರ್ ಹಬ್ಬದ ವಂದನೆಯನ್ನರ್ಪಿಸುವುದಕ್ಕೆ ಹೋದೆನು. ಮನೆಗೆ ಬಂದ ಮೇಲೆ ನನ್ನ ದೇವಪಿತನನ್ನೂ ವಂದಿಸಿ ಬರಬೇಕೆಂದುಕೊಂಡು ಅವನೆಲ್ಲಿ ವಾಸಮಾಡುತ್ತಾನೆಂದು ಅಪ್ಪನನ್ನೂ ಅಮ್ಮನನ್ನೂ ಕೇಳಿದೆನು. ಅವರು ತಮಗೆ ಗೊತ್ತಿಲ್ಲವೆಂದರು. ನನಗೆ ನಾಮಕರಣವಾದ ಕೂಡಲೆ ಹೊರಟುಹೋದನೆಂದೂ

ಅವನ ವಿಚಾರದಲ್ಲಿ ತಮಗೆ ಏನೂ ಗೊತ್ತಿಲ್ಲವೆಂದೂ, ಕಡೆಗೆ ಅವನಿನ್ನೂ ಬದುಕಿರುವನೋ ಇಲ್ಲವೋ ಅದೂ ತಿಳಿಯದೆಂದೂ ಹೇಳಿದರು. ಆದರೆ ನನಗೆ ದೇವಪಿತನನ್ನು ನೋಡಬೇಕೆಂದು ಆಸೆಯಾಯಿತು ಆದ್ದರಿಂದ ಅವನನ್ನು ಹುಡುಕುವುದಕ್ಕೆ ಹೊರಟಿದ್ದೇನೆ'

ಆಗ ಆ ಅಪರಿಚಿತನು 'ನಾನೇ ನಿನ್ನ ದೇವಪಿತನು' ಎಂದನು.

ಇದನ್ನು ಕೇಳಿ ಹುಡುಗನಿಗೆ ಹರ್ಷವಾಯಿತು ಈಸ್ಟರ್ ಹಬ್ಬದ ವಂದನೆಗೋಸ್ಕರ ತನ್ನ ದೇವಪಿತನನ್ನು ಮೂರು ಸಲ ಮುತ್ತಿಟ್ಟುಕೊಂಡು, ಅವನನ್ನು ಕುರಿತು,

'ದೇವಪಿತನೇ, ನೀನು ಈಗ ಯಾವ ಕಡೆ ಹೋಗುತ್ತಿದ್ದೀಯ? ನಮ್ಮ ಕಡೆಗೆ ಬರುತ್ತಿರುವುದಾದರೆ ದಯಪಟ್ಟು ನಮ್ಮ ಮನೆಗೆ ಬಾ, ಆದರೆ ನೀನು ಮನಗೆ ಹೋಗುತ್ತಿದ್ದರೆ ನಾನೂ ನಿನ್ನ ಜೊತೆಯಲ್ಲಿ ಬರುತ್ತೇನೆ' ಎಂದನು.

ದೇವಪಿತನು 'ನಿಮ್ಮ ಮನೆಗೆ ಬರುವುದಕ್ಕೆ ನನಗೆ ಈಗ ಹೊತ್ತಿಲ್ಲ, ಹಲವು ಹಳ್ಳಿಗಳಲ್ಲಿ ಕೆಲಸವಿದೆ. ಆದರೂ ನಾಳೆ ಪುನಃ ಮನೆಗೆ ಹಿಂದಿರುಗುತ್ತೇನೆ. ಆಗ ಬಂದು ನನ್ನನ್ನು ನೋಡು' ಎಂದನು.

'ದೇವಪಿತನೇ ನಿನ್ನನ್ನು ನಾನು ಕಾಣುವುದು ಹೇಗೆ?'

'ನೀನು ಮನೆಯನ್ನು ಬಿಟ್ಟ ಮೇಲೆ ಉದಯಸೂರ್ಯನ ಕಡೆಗೆ ನೇರವಾಗಿ ಹೋಗು. ಅಲ್ಲಿ ನಿನಗೆ ಒಂದು ಅಡವಿ ಸಿಕ್ಕುತ್ತದೆ. ಆ ಅಡವಿಯೊಳಗೆ ಹೋಗುತ್ತಿರುವಾಗ ನಡುವೆ ಒಂದು ಬಯಲು ಸಿಕ್ಕುತ್ತದೆ. ನೀನು ಆ ಬಯಲನ್ನು ತಲಪಿದ ಮೇಲೆ ಸ್ವಲ್ಪ ಹೊತ್ತು ಕುಳಿತು ವಿಶ್ರಮಿಸಿಕೊ. ಅಲ್ಲಿ ಕುಳಿತುಕೊಂಡು ಸುತ್ತಲೂ ದೃಷ್ಟಿಯನ್ನು ತಿರುಗಿಸಿ ಅಲ್ಲಿ ನಡೆಯುವುದನ್ನು ನೋಡಿ ತಿಳಿದುಕೊ. ಅಡವಿಯ ಆಚೆಗೆ ಒಂದು ತೋಟ ಸಿಕ್ಕುತ್ತದೆ. ಆ ತೋಟದೊಳಗೆ ಬಂಗಾರದ ಛಾವಣಿಯುಳ್ಳ

ಒಂದು ಮನೆ ಕಾಣುತ್ತದೆ ಅದೇ ನನ್ನ ಮನೆ. ಬಾಗಿಲಿನವರೆಗೆ ಹೋಗು. ನಿನ್ನನ್ನು ಎದುರುಗೊಳ್ಳುವುದಕ್ಕೆ ಅಲ್ಲಿ ನಾನೇ ಬಂದಿರುತ್ತೇನೆ.'

ಹೀಗೆಂದು ಹೇಳಿ ದೇವಪಿತನು ತನ್ನ ದೇವಪುತ್ರನ ದೃಷ್ಟಿಗೆ ಅದೃಶ್ಯನಾದನು.

೪.

ಹುಡುಗನು ತನ್ನ ದೇವಪಿತನು ಹೇಳಿದ್ದಂತೆಯೇ ಮಾಡಿದನು ಅವನು ಅಡವಿ ಸಿಕ್ಕುವವರೆಗೂ ಪೂರ್ವಾಭಿಮುಖವಾಗಿಯೇ ಹೋಗುತ್ತಿದ್ದನು ಆ ಅಡವಿಯಲ್ಲಿ ಒಂದು ಬಯಲು ಸಿಕ್ಕಿತು. ಬಯಲಿನ ಮಧ್ಯದಲ್ಲಿ ಒಂದು ಪೀತದಾರು (ಪೈನ್) ಮರವಿದ್ದಿತು. ಆ ಮರದ ಒಂದು ಕೊಂಬೆಗೆ ಒಂದು ಹಗ್ಗವನ್ನು ಕಟ್ಟಿ ಅದರ ತುದಿಗೆ ಭಾರವಾದ ಒಂದು ಬಾನವೃಕ್ಷದ (ಓಕ್ ಮರದ) ದಿಮ್ಮಿಯನ್ನು ಬಿಗಿದು ನೇತು ಹಾಕಿದ್ದಿತು. ಆ ದಿಮ್ಮಿಯ ಕಳಗಡೆ ಅದಕ್ಕೆ ಬಹಳ ಸಮೀಪದಲ್ಲಿಯೇ ಜೇನು ತುಪ್ಪ ತುಂಬಿದ ಒಂದು ಮರದ ತೊಟ್ಟಿಯಿದ್ದಿತು. 'ಜೇನುತುಪ್ಪವನ್ನು ಅಲ್ಲೇಕೆ ಇಟ್ಟಿದಾರೆ? ಅದರ ಮೇಲೆ ದಿಮ್ಮಿಯನ್ನು ಏಕೆ ನೇತುಬಿಟ್ಟಿದಾರೆ?' ಎಂದು ಹುಡುಗನು ಆಶ್ಚರ್ಯಪಡುತ್ತಿರುವಷ್ಟರಲ್ಲಿಯೇ ಅಡವಿಯೊಳಗೆ ಚಟಚಟನೆ ಒಂದು ಸದ್ದು ಕೇಳಿಸಿತು, ಕೆಲವು ಕರಡಿಗಳು ಹತ್ತಿರಕ್ಕೆ ಬರುತ್ತಿರುತ್ತಿರುವುದು ಕಾಣಿಸಿತು. ಒಂದು ಹೆಣ್ಣು ಕರಡಿ, ಅದರ ಹಿಂದೆ ವರ್ಷದ ಮರಿಯೊಂದು ಮತ್ತು ಮೂರು ಪುಟ್ಟ ಪುಟ್ಟ ಮರಿಗಳು. ಹೆಣ್ಣು ಕರಡಿ ಗಾಳಿಯನ್ನೆಳೆದುಕೊಂಡು ಮೂಸಿನೋಡಿ ನೇರವಾಗಿ ತೊಟ್ಟಿಯಿದ್ದ ಕಡೆಗೆ ಹೋಯಿತು. ಮರಿಗಳು ಅದನ್ನೇ ಹಿಂಬಾಲಿಸಿದವು. ಹೆಣ್ಣು ಕರಡಿ ತನ್ನ ಮೂತಿಯನ್ನು ಜೇನಿನೊಳಕ್ಕೆ ನೂಕಿ ಮರಿಗಳಿಗೂ ಹಾಗೆಯೇ ಮಾಡುವಂತೆ ಹೇಳಿತು. ಅವು ಒಂದೇ ಉಸಿರಿಗೆ ಓಡಿ ಬಂದು ತಿನ್ನುವುದಕ್ಕೆ ಪ್ರಾರಂಭಿಸಿದವು. ಅವು ಹಾಗೆ ತಿನ್ನುತ್ತಿರುವಾಗ ಹೆಣ್ಣು ಕರಡಿ ದಿಮ್ಮಿಯನ್ನು ತನ್ನ

ತಲೆಯಿಂದ ಒಂದು ಕಡೆಗೆ ಒತ್ತರಿಸಿತು. ದಿಮ್ಮಿ ಸ್ವಲ್ಪ ದೂರ ಹೋಗಿ ಹಿಂದಕ್ಕೆ ತೂಗಿ ಬಂದು ಮರಿಗಳನ್ನು ನೂಕಿತು. ಇದನ್ನು ಕಂಡು ಹೆಣ್ಣು ಕರಡಿ ಆ ದಿಮ್ಮಿಯನ್ನು ತನ್ನ ಪಂಜದಿಂದ ದೂರಕ್ಕೆ ನೂಕಿತು. ಅದು ಮೊದಲಿಗಿಂತ ದೂರಕ್ಕೆ ಹೋಗಿ ಹೆಚ್ಚು ರಭಸದಿಂದ ತೂಗುತ್ತ ಹಿಂದಕ್ಕೆ ಬಂದು ಒಂದು ಮರಿಯ ಬೆನ್ನಿಗೂ ಮತ್ತೊಂದರ ತಲೆಗೂ ಬಡಿಯಿತು. ಮರಿಗಳು ನೋವಿನಿಂದ ಅರಚುತ್ತ ದೂರ ಓಡಿಹೋದವು. ತಾಯಿ ಗುರುಗುಟ್ಟುತ್ತ ಮುಂದುಗಡೆಯ ಪಂಜಗಳಲ್ಲಿ ದಿಮ್ಮಿಯನ್ನು ಹಿಡಿದುಕೊಂಡು, ತನ್ನ ತಲೆಯ ಮೇಲಕ್ಕೆ ಎತ್ತಿ, ತೂಗಿ ಎಸದುಬಿಟ್ಟಿತು. ದಿಮ್ಮಿ ಬಹಳ ಮೇಲಕ್ಕೆ ಹಾರಿಹೋಯಿತು. ವರ್ಷದ ಮರಿ ತೊಟ್ಟಿಯ ಒಳಗೆ ಓಡಿಹೋಗಿ ಜೇನಿನೊಳಕ್ಕೆ ಮುಸುಡಿಯನ್ನು ಚಾಚಿ ಸದ್ದುಮಾಡುತ್ತ ಹೀರತೊಡಗಿತು. ಉಳಿದವೂ ಹತ್ತಿರಕ್ಕೆ ಬಂದವು. ಆದರೆ ಅವಿನ್ನೂ ತೊಟ್ಟಿಯನ್ನು ತಲುಪಿಯೇ ಇರಲಿಲ್ಲ, ಅಷ್ಟರಲ್ಲಿ ದಿಮ್ಮಿ ಹಿಂದಕ್ಕೆ ತೂಗುತ್ತ ಬಂದು ವರ್ಷದ ಮರಿಯ ತಲೆಗೆ ಬಡಿದು ಅದನ್ನು ಸಾಯಿಸಿತು. ತಾಯಿ ಮೊದಲಿಗಿಂತ ಗಟ್ಟಿಯಾಗಿ ಗುರುಗುಟ್ಟಿತು, ದಿಮ್ಮಿಯನ್ನು ಹಿಡಿದುಕೊಂಡು ತನ್ನ ಬಲವನ್ನೆಲ್ಲ ಬಿಟ್ಟು ಅದನ್ನು ತೂಗಿ ಎಸೆಯಿತು. ಅದು, ಅದನ್ನು ಕಟ್ಟಿದ್ದ ಕೊಂಬೆಗಿಂತಲೂ ಎತ್ತರಕ್ಕೆ ಏರಿತು, ಹಗ್ಗ ಅಳ್ಳಕವಾಗುವಷ್ಟು ಎತ್ತರಕ್ಕೆ ಹೋಯಿತು. ಹೆಣ್ಣು ಕರಡಿ ತೊಟ್ಟಿಯ ಒಳಗೆ ಹಿಂದಿರುಗಿತು, ಮರಿಗಳೂ ಅದರ ಹಿಂದೆಯೇ ಬಂದವು. ದಿಮ್ಮಿ ಮೇಲುಮೇಲಕ್ಕೆ ಹೋಗುತ್ತಿದ್ದದ್ದು, ಸ್ವಲ್ಪ ನಿಂತುಕೊಂಡು ಕೆಳಗೆ ಬೀಳುವುದಕ್ಕೆ ಮೊದಲಾಯಿತು. ಹತ್ತಿರತ್ತಿರಕ್ಕೆ ಬಂದಂತೆಲ್ಲ ಅದು ತೂಗುವ ರಭಸವೂ ಹೆಚ್ಚುತ್ತ ಬಂದು ಕಟ್ಟಕಡೆಗೆ ಪೂರ್ಣ ರಭಸವನ್ನು ಕೂಡಿಸಿಕೊಂಡು ಅದರ ತಲೆಯ ಮೇಲೆ ಜೋರಾಗಿ ಬಿದ್ದುಬಿಟ್ಟಿತು. ಹೆಣ್ಣುಕರಡಿ ತಲೆಕೆಳಗಾಗಿ ಉರುಳಿತು, ಅದರ ಕಾಲುಗಳು ತಿರಿಚಿಕೊಂಡವು, ಕಡೆಗೆ ಅದು ಸತ್ತುಹೋಯಿತು. ಮರಿಗಳು ಕಾಡಿನೊಳಕ್ಕೆ ಓಡಿಹೋದವು.

೫

ಹುಡುಗನು ಇದನ್ನೆಲ್ಲ ಬಹಳ ಆಶ್ಚರ್ಯದಿಂದ ನೋಡುತ್ತಿದ್ದು ಮುಂದಕ್ಕೆ ಪ್ರಯಾಣಮಾಡಿದನು. ಕಾಡನ್ನು ಬಿಟ್ಟು ಮುಂದೆ ಹೋಗಲು ಒಂದು ದೊಡ್ಡ ತೋಟ ಸಿಕ್ಕಿತು. ಆ ತೋಟದ ನಡುವೆ ಚಿನ್ನದ ಛಾವಣಿಯುಳ್ಳ ಒಂದು ಎತ್ತರವಾದ ಅರಮನೆಯಿದ್ದಿತು ತೋಟದ ಹೆಬ್ಬಾಗಿಲಿನಲ್ಲಿ ಅವನ ದೇವಪಿತನು ಮುಗುಳುನಗೆಯನ್ನು ಸೂಸುತ್ತ ನಿಂತಿದ್ದನು. ಅವನು ತನ್ನ ದೇವಪುತ್ರನನ್ನು ಆದರದಿಂದ ಬರಮಾಡಿಕೊಂಡು ಹೆಬ್ಬಾಗಿಲಿನಿಂದ ತೋಟದೊಳಕ್ಕೆ ಕೈಹಿಡಿದು ಕರೆದುಕೊಂಡು ಹೋದನು. ಆ ಸ್ಥಳದಲ್ಲಿ ಸುತ್ತಮುತ್ತಲೂ ತುಂಬಿತುಳುಕುತ್ತಿದ್ದ ಸೌಂದರ್ಯಾನಂದಗಳನ್ನು ಆ ಹುಡುಗನು ಕನಸಿನಲ್ಲಿಯೂ ಕಂಡಿರಲಿಲ್ಲ

ಬಳಿಕ ದೇವಪಿತನು ಅವನನ್ನು ಅರಮನೆಯೊಳಕ್ಕೆ ಕರೆದುಕೊಂಡು ಹೋದನು. ಅದರ ಒಳಭಾಗವು ಹೊರಭಾಗಕ್ಕಿಂತಲೂ ಹೆಚ್ಚು ಸುಂದರವಾಗಿದ್ದಿತು ದೇವಪಿತನು ಹುಡುಗನಿಗೆ ಪ್ರತಿಯೊಂದು ಕೊಠಡಿಯನ್ನೂ ತೋರಿಸುತ್ತ ಬಂದನು. ಒಂದಕ್ಕಿಂತ ಮತ್ತೊಂದು ಹೆಚ್ಚು ಸೊಗಸಾಗಿಯೂ ಪ್ರಕಾಶಯುಕ್ತವಾಗಿಯೂ ಇರುತ್ತಿದ್ದಿತು ಕಟ್ಟಕಡೆಗೆ ಮುದ್ರೆ ಮಾಡಿದ್ದ ಒಂದು ಬಾಗಿಲ ಬಳಿಗೆ ಬಂದರು.

ದೇವಪಿತನು ' ಈ ಬಾಗಿಲನ್ನು ನೋಡು. ಇದಕ್ಕೆ ಬೀಗ ಹಾಕಿಲ್ಲ, ಸುಮ್ಮನೆ ಮುದ್ರೆಮಾಡಿದೆ. ಅದನ್ನು ತೆಗೆಯುವುದಕ್ಕೆ ಸಾಧ್ಯ, ಆದರೆ ನೀನು ಅದನ್ನು ತೆಗೆಯಬಾರದು. ನೀನು ಇಲ್ಲಿಯೇ ವಾಸಮಾಡುತ್ತ ಮನಸ್ಸು ಬಂದಕಡೆ ಹೋಗಿ ಇಲ್ಲಿನ ಆನಂದಗಳನ್ನೆಲ್ಲ ಅನುಭವಿಸುತ್ತಿರಬಹುದು. ಆ ಬಾಗಿಲನ್ನು ಮಾತ್ರ ತೆಗೆಯಬೇಡ—ಇದೊಂದೇ ನಾನು ಮಾಡುವ ಅಪ್ಪಣೆ. ಎಲ್ಲಾದರೂ ತೆಗೆದುಬಿಟ್ಟರೆ ನೀನು ಅಡವಿಯಲ್ಲಿ ಏನು ಕಂಡೆಯೋ ಅದನ್ನು ಜ್ಞಾಪಿಸಿಕೊ ' ಎಂದು ಹೇಳಿದನು.

ಹೀಗೆ ಹೇಳಿ ದೇವಪಿತನು ಹೊರಟುಹೋದನು. ದೇವಪುತ್ರನು

ಅರಮನೆಯಲ್ಲಿಯೇ ಉಳಿದನು. ಅಲ್ಲಿ ಜೀವನ ಬಹು ಸುಖವಾಗಿಯೂ ಆನಂದದಾಯಕವಾಗಿಯೂ ಇದ್ದಿತು. ಅವನು ನಿಜವಾಗಿ ಮೂವತ್ತು ವರ್ಷಗಳಿದ್ದರೂ ಮೂರುಗಂಟೆಯ ಹೊತ್ತು ಮಾತ್ರ ತಾನು ಅಲ್ಲಿದ್ದಂತೆ ಭಾವಿಸಿದನು. ಮೂವತ್ತು ವರ್ಷಗಳು ಕಳೆದಮೇಲೆ ಒಂದು ದಿನ ದೇವ ಪುತ್ರನು ಮುದ್ರೆಮಾಡಿದ ಆ ಬಾಗಿಲ ಮುಂದೆ ಹಾದುಹೋಗು ತ್ತಿದ್ದನು. ಆಗ ತನ್ನ ದೇವಪಿತನು ಆ ಕೊಟಡಿಗೆ ಪ್ರವೇಶಿಸಬೇಡವೆಂದು ಏಕೆ ಕಟ್ಟು ಮಾಡಿದನೋ ಎಂದು ಆಶ್ಚರ್ಯದಿಂದ ಯೋಚಿಸಿ ಕೊಂಡನು.

'ಒಳಕ್ಕೆ ಇಣಿಕಿ ಅಲ್ಲೇನಿದೆಯೋ ನೋಡೋಣ' ಎಂದುಕೊಂಡು ಬಾಗಿಲನ್ನು ನೂಕಿದನು. ಮುದ್ರೆಯೊಡೆದು ಬಾಗಿಲು ತೆರೆದುಕೊಂಡಿತು. ದೇವಪುತ್ರನು ಒಳಕ್ಕೆ ಹೋಗಿ ನೋಡಲಾಗಿ ಉಳಿದವೆಲ್ಲಕ್ಕಿಂತಲೂ ಹೆಚ್ಚು ಎತ್ತರವಾಗಿಯೂ ಹೆಚ್ಚು ಸುಂದರವಾಗಿಯೂ ಇದ್ದ ಒಂದು ಸಭಾಂಗ ಣವೂ ಅದರ ಮಧ್ಯಭಾಗದಲ್ಲಿ ಒಂದು ಸಿಂಹಾಸನವೂ ಕಾಣಿಸಿದವು. ಅವನು ಸಭಾಂಗಣದಲ್ಲಿ ಸ್ವಲ್ಪ ಹೊತ್ತು ಓಡಾಡುತ್ತಿದ್ದು ಆಮೇಲೆ ಮೆಟ್ಟಲುಗಳನ್ನು ಹತ್ತಿ ಸಿಂಹಾಸನದಮೇಲೆ ಕುಳಿತುಬಿಟ್ಟನು. ಅಲ್ಲಿ ಕುಳಿತು ಕೊಳ್ಳುವಾಗ ಸಿಂಹಾಸನಕ್ಕೆ ಒರಗಿಸಿದ ಒಂದು ರಾಜದಂಡವು ದೃಷ್ಟಿಗೆ ಬೀಳಲು ಅದನ್ನು ಕೈಗೆ ತೆಗೆದುಕೊಂಡನು. ಅವನು ಹಾಗೆ ಮಾಡಿದ್ದೇ ತಡ, ಸಭಾಂಗಣದ ನಾಲ್ಕು ಗೋಡೆಗಳೂ ಕೂಡಲೇ ಮಾಯವಾದವು. ದೇವಪುತ್ರನು ಸುತ್ತಲೂ ನೋಡಿದನು, ಸಮಸ್ತ ಪ್ರಪಂಚವೂ ಅದರಲ್ಲಿ ಮನುಷ್ಯರು ಮಾಡುತ್ತಿದ್ದದ್ದೆಲ್ಲವೂ ಅವನಿಗೆ ಕಂಡಿತು. ಮುಂದುಗಡೆಯಲ್ಲಿ ನೋಡಿದನು, ಸಮುದ್ರವೂ ಅದರ ಮೇಲೆ ಹೋಗುತ್ತಿದ್ದ ಹಡಗುಗಳೂ ಕಣ್ಣಿಗೆ ಬಿದ್ದವು. ಬಲಗಡೆಗೆ ನೋಡಿದನು, ಅಲ್ಲಿ ವಿಲಕ್ಷಣವಾದ ಬೇರೆ ಬೇರೆ ಮತಗಳ ಜನರು ವಾಸಮಾಡುತ್ತಿದ್ದ ಸ್ಥಳಗಳನ್ನೆಲ್ಲ ಕಂಡನು. ಎಡಗಡೆಗೆ ನೋಡಿದನು, ಅಲ್ಲಿ ಕ್ರಿಶ್ಚಿಯನ್ ಜನರು, ಆದರೆ ರಷ್ಯನರಲ್ಲದವರು, ಕಂಡರು.

ಸುತ್ತಲೂ ತಿರುಗಿ ನಾಲ್ಕನೆಯ ಕಡೆಯಲ್ಲಿ ನೋಡಲಾಗಿ ತನ್ನಂತೆಯೇ ಇರುವ ರಷ್ಯನ್ ಜನರನ್ನು ಕಂಡನು.

'ಮನೆಯಲ್ಲಿ ಏನು ನಡೆಯುತ್ತಿದೆಯೋ, ಚೆನ್ನಾಗಿ ಪೈರು ಬಂದಿದೆಯೋ ಇಲ್ಲವೋ ನೋಡೋಣ' ಎಂದುಕೊಂಡನು.

ಹೀಗೆಂದು ತನ್ನ ತಂದೆಯ ಹೊಲಗಳ ಕಡೆಗೆ ದೃಷ್ಟಿಯನ್ನು ಬೀರಿ ಮೆದೆ ಹಾಕಿದ್ದ ಕಂತೆಗಳನ್ನು ಕಂಡನು. ಧಾನ್ಯ ಸಮೃದ್ಧಿಯಾಗಿದೆಯೋ ಇಲ್ಲವೋ ನೋಡುವುದಕ್ಕಾಗಿ ಅವನ್ನು ಎಣಿಸತೊಡಗಿದನು. ಅಷ್ಟರಲ್ಲಿ ಒಬ್ಬ ರೈತನು ಗಾಡಿಯನ್ನು ಹೊಡೆದುಕೊಂಡು ಬರುವುದು ಕಾಣಿಸಿತು. ಆಗ ರಾತ್ರಿಯಾಗಿದ್ದಿತು. ತಮ್ಮ ತಂದೆಯು ರಾತ್ರಿಹೊತ್ತಿನಲ್ಲಿ ಕಂತೆಗಳನ್ನೆಲ್ಲ ಬಂಡಿಯಲ್ಲಿ ಹೇರಿಕೊಂಡು ಹೋಗುವುದಕ್ಕೆ ಬಂದಿರುವನೆಂದು ದೇವಪುತ್ರನು ಯೋಚಿಸಿಕೊಂಡನು. ಆದರೆ ಹಾಗೆಯೇ ನೋಡುತ್ತಿರಲಾಗಿ ಅವನು ವಸೀಲಿ ಕುಡ್ರ್ಯಾಷೋವ್ ಎಂಬ ಕಳ್ಳನೆಂದು ಗುರುತು ಹಿಡಿದನು. ಕಳ್ಳನು ಹೊಲದೊಳಕ್ಕೆ ಗಾಡಿಯನ್ನು ಹೊಡೆದುಕೊಂಡು ಹೋಗಿ ಕಂತೆಗಳನ್ನು ತನ್ನ ಗಾಡಿಗೆ ಹೇರಿಕೊಳ್ಳಲು ಪ್ರಾರಂಭಿಸಿದನು. ಇದನ್ನು ಕಂಡು ದೇವಪುತ್ರನಿಗೆ ಸಿಟ್ಟುಹತ್ತಿತು. 'ಅಪ್ಪಾ, ನಮ್ಮ ಹೊಲದಿಂದ ಕಂತೆಗಳನ್ನು ಕದ್ದುಕೊಂಡು ಹೋಗುತ್ತಿದಾರೆ,' ಎಂದು ಗಟ್ಟಿಯಾಗಿ ಕೂಗಿದನು.

ರಾತ್ರಿಯ ಕಾವಲಿಗೆ ಕುದುರೆಗಳನ್ನು ಹೊಡೆದುಕೊಂಡು ಹೋಗಿದ್ದ ಅವರ ತಂದೆಗೆ ಎಚ್ಚರವಾಯಿತು.

'ಕಂತೆಗಳನ್ನು ಕಳ್ಳರು ಕದಿಯುತ್ತಿರುವಂತೆ ಕನಸಾಯಿತು. ಹೋಗಿ ನೋಡಿ ಬರೋಣ' ಎಂದನು.

ಹಾಗೆಂದುಕೊಂಡು ಒಂದು ಕುದುರೆಯನ್ನು ಹತ್ತಿ ಹೊಲಕ್ಕೆ ಹೋದನು. ಅಲ್ಲಿ ವಸೀಲಿಯನ್ನು ಕಂಡು ತನ್ನ ಸಹಾಯಕ್ಕೆ ಬರುವಂತೆ ಇತರ ರೈತರನ್ನು ಕೂಗಿಕೊಂಡನು. ವಸೀಲಿಯನ್ನು ಹೊಡೆದು ಬಡಿದು, ಹಗ್ಗಗಳಿಂದ ಬಿಗಿದು ಸೆರೆಮನೆಗೆ ಸಾಗಿಸಿದರು.

ಬಳಿಕ ದೇವಪಿತನು ತನ್ನ ದೇವಮಾತೆಯು ವಾಸಿಸುತ್ತಿದ್ದ ಪಟ್ಟಣದ ಕಡೆಗೆ ನೋಡಿದನು. ಈಗ ಅವಳು ಒಬ್ಬ ವರ್ತಕನನ್ನು ಮದುವೆಮಾಡಿ ಕೊಂಡಿದ್ದಳು. ಅವಳು ನಿದ್ದೆ ಹತ್ತಿ ಮಲಗಿದ್ದಳು, ಅವಳ ಗಂಡನು ಎದ್ದು ತನ್ನ ಸೂಳೆಯ ಬಳಿಗೆ ಹೊರಟುಹೋದನು. ಇದನ್ನು ಕಂಡು ದೇವಪುತ್ರನು,

"ಏಳು, ಏಳು, ನಿನ್ನ ಗಂಡನು ದುರ್ಮಾರ್ಗಕ್ಕೆ ಬಿದ್ದುಬಿಟ್ಟಿದಾನೆ" ಎಂದು ಗಟ್ಟಿಯಾಗಿ ಕೂಗಿದನು.

ದೇವಮಾತೆಯು ತಟ್ಟನೆ ಮೇಲಕ್ಕೆದ್ದಳು. ಎದ್ದು ಉಡುಪು ತೊಟ್ಟು ಕೊಂಡು ತನ್ನ ಗಂಡನು ಎಲ್ಲಿರುವನೆಂಬುದನ್ನು ಹುಡುಕಿ ಗೊತ್ತುಮಾಡಿ, ಅವನ ಸೂಳೆಯನ್ನು ಅವಮಾನಗೊಳಿಸಿ ಹೊಡೆದು, ತನ್ನ ಗಂಡನನ್ನು ಅಲ್ಲಿಂದ ಹೊರಡಿಸಿಕೊಂಡು ಬಂದಳು.

ಆಮೇಲೆ ದೇವಪುತ್ರನು ತನ್ನ ತಾಯಿಯೆಲ್ಲಿರುವಳೆಂದು ನೋಡಿದನು. ಅವಳು ತನ್ನ ಗುಡಿಸಲಿನಲ್ಲಿ ನಿದ್ದೆಮಾಡುತ್ತ ಮಲಗಿದ್ದಳು. ಒಬ್ಬ ಕಳ್ಳನು ಗುಡಿಸಿಲಿನೊಳಕ್ಕೆ ಮೆಲ್ಲಗೆ ತೆವಳಿಕೊಂಡು ಬಂದು ಅವಳು ತನ್ನ ಸಾಮಾನು ಗಳನ್ನಿಟ್ಟಿದ್ದ ಪೆಟ್ಟಿಗೆಯನ್ನು ಒಡೆಯುವುದಕ್ಕೆ ಪ್ರಾರಂಭಿಸಿದನು. ತಾಯಿಗೆ ಎಚ್ಚರವಾಗಿ ಕಿಟ್ಟನೆ ಕಿರಿಚಿಕೊಂಡಳು. ಕಳ್ಳನು ಒಂದು ಕೊಡಲಿಯನ್ನು ತೆಗೆದುಕೊಂಡು ಅವಳನ್ನು ಕೊಲ್ಲುವುದಕ್ಕಾಗಿ ಅದನ್ನು ತನ್ನ ತಲೆಯ ಮೇಲಕ್ಕೆ ಎತ್ತಿ ಬೀಸಿದನು.

ದೇವಪುತ್ರನಿಗೆ ತಡೆಯುವುದಕ್ಕಾಗಲಿಲ್ಲ. ತನ್ನ ಕೈಯಲ್ಲಿದ್ದ ರಾಜ ದಂಡವನ್ನು ಆ ಕಳ್ಳನ ಮೇಲೆ ಎಸೆದುಬಿಟ್ಟನು. ಅದು ಅವನ ಕಪಾಳದ ಮರ್ಮಸ್ಥಾನಕ್ಕೆ ಬಡಿದು ಅವನು ಅಲ್ಲಿಯೇ ಸತ್ತುಬಿದ್ದನು.

೬

ದೇವಪುತ್ರನು ಕಳ್ಳನನ್ನು ಸಾಯಿಸಿದ ಕೂಡಲೆ ಗೋಡೆಗಳೆಲ್ಲ ಕೂಡಿ ಕೊಂಡು ಸಭಾಂಗಣವು ಮೊದಲಿದ್ದಂತೆಯೇ ಆಯಿತು.

ಬಳಿಕ ಬಾಗಿಲು ತೆರೆಯಿತು; ದೇವಪಿತನು ಒಳಕ್ಕೆ ಬಂದನು. ದೇವಪುತ್ರನ ಹತ್ತಿರಕ್ಕೆ ಹೋಗಿ ಅವನ ಕೈ ಹಿಡಿದುಕೊಂಡು ಸಿಂಹಾಸನದಿಂದ ಕಳಕ್ಕಿಳಿಸಿದನು

'ನೀನು ನನ್ನ ಅಪ್ಪಣೆಯಂತೆ ನಡೆದುಕೊಳ್ಳಲಿಲ್ಲ. ತೆರೆಯಬೇಡವೆಂದು ಕಟ್ಟು ಮಾಡಿದ್ದ ಬಾಗಿಲನ್ನು ತೆರೆದಾಗ ಒಂದು ತಪ್ಪು ಮಾಡಿದೆ, ಸಿಂಹಾಸನದ ಮೇಲೆ ಹತ್ತಿ ನನ್ನ ರಾಜದಂಡವನ್ನು ಕೈಗೆ ತೆಗೆದುಕೊಂಡಾಗ ಮತ್ತೊಂದು ತಪ್ಪು ಮಾಡಿದೆ, ಈಗ ಮೂರನೆಯ ಮತ್ತೊಂದು ತಪ್ಪನ್ನು ಮಾಡಿ ಪ್ರಪಂಚದಲ್ಲಿ ಅನ್ಯಾಯವನ್ನು ಬಹಳ ಹೆಚ್ಚಿಸಿದೆ ನೀನು ಇನ್ನು ಒಂದು ಗಂಟೆಯ ಹೊತ್ತು ಅಲ್ಲಿ ಕುಳಿತಿದ್ದರೆ ಮಾನವಕುಲದಲ್ಲಿ ಅರ್ಧಕ್ಕರ್ಧವನ್ನೇ ಹಾಳುಮಾಡಿಬಿಡುತ್ತಿದ್ದೆ' ಎಂದನು.

ಆಮೇಲೆ ದೇವಪಿತನು ತನ್ನ ದೇವಪುತ್ರನನ್ನು ಮತ್ತೆ ಸಿಂಹಾಸನಕ್ಕ ಕರೆದುಕೊಂಡು ಹೋಗಿ ತನ್ನ ಕೈಯಲ್ಲಿ ರಾಜದಂಡವನ್ನು ಹಿಡಿದುಕೊಂಡನು, ಮತ್ತೆ ಗೋಡೆಗಳು ಚದರಿ ಬಿದ್ದು ಹೋಗಿ ಎಲ್ಲ ವಸ್ತುಗಳೂ ಕಾಣತೊಡಗಿದವು.

ದೇವಪಿತನು 'ನೋಡು, ನಿನ್ನ ತಂದೆಗೆ ನೀನೇನು ಮಾಡಿರುವೆಯೋ ನೋಡು. ವಸೀಲಿಯು ಒಂದು ವರ್ಷದವರೆಗೂ ಸೆರೆಮನೆಯಲ್ಲಿದ್ದು ಎಲ್ಲ ಬಗೆಯ ದುಷ್ಟತನವನ್ನೂ ಕಲಿತುಕೊಂಡು ತಿನ್ನುವುದಕ್ಕ ಸ್ವಲ್ಪವೂ ಸಾಧ್ಯವಿಲ್ಲದಂತಾಗಿ ಹೊರಗೆ ಬಂದಿದಾನೆ. ನೋಡು, ನಿಮ್ಮ ತಂದೆಯ ಕುದುರೆಗಳಲ್ಲಿ ಎರಡನ್ನು ಅವನು ಕದ್ದು ಹೊಡೆದು ಈಗ ಅವನ ಕಣಜಕ್ಕ ಬೆಂಕಿ ಹಾಕುತ್ತಿದ್ದಾನೆ. ಇದೆಲ್ಲ ನಿಮ್ಮ ತಂದೆಗೆ ನೀನು ಮಾಡಿರುವುದು' ಎಂದನು.

ದೇವಪುತ್ರನು ತಮ್ಮ ತಂದೆಯ ಕಣಜಕ್ಕೆ ಬೆಂಕಿ ಬಿದ್ದು ಉರಿಯುತ್ತಿರುವುದನ್ನು ಕಂಡನು. ಆದರೆ ದೇವಪಿತನು ಆ ನೋಟವನ್ನು ಅವನಿಗೆ ಕಾಣಿಸದಂತೆ ಮುಚ್ಚಿ, ಮತ್ತೊಂದು ಕಡೆಗೆ ನೋಡುವಂತೆ ಹೇಳಿದನು

'ಇಗೋ ಅವನು ನಿನ್ನ ದೇವಮಾತೆಯ ಗಂಡ. ಅವನು ತನ್ನ ಹೆಂಡತಿಯನ್ನು ಬಿಟ್ಟು ವರ್ಷವಾಯಿತು; ಈಗ ಇತರ ಹೆಂಗಸರನ್ನು ಹುಡುಕಿಕೊಂಡು ಹೋಗುತ್ತಿದಾನೆ. ಅವನ ಹಿಂದಿನ ಸೊಳೆ ಈಗ ಇನ್ನೂ ಅಧೋಗತಿಗೆ ಇಳಿದಿದ್ದಾಳೆ ಅವನ ಹೆಂಡತಿಯನ್ನು ದುಃಖ ಆವರಿಸಿಕೊಂಡು ಕುಡಿತವನ್ನು ಕಲಿಯುವಂತೆ ಮಾಡಿಬಿಟ್ಟಿದೆ. ಇದೇ ನಿನ್ನ ದೇವಮಾತೆಗೆ ನೀನು ಮಾಡಿರುವ ಉಪಕಾರ' ಎಂದನು.

ದೇವಪಿತನು ಇದನ್ನೂ ಮುಚ್ಚಿಬಿಟ್ಟು ದೇವಪುತ್ರನಿಗೆ ಅವನ ತಂದೆಯ ಮನೆಯನ್ನು ತೋರಿಸಿದನು. ಅಲ್ಲಿ ತನ್ನ ತಾಯಿಯು ತನ್ನ ಪಾಪಗಳಿಗಾಗಿ ಪಶ್ಚಾತ್ತಾಪಪಡುತ್ತ ಅಳುತ್ತಿದ್ದದ್ದನ್ನು ಕಂಡನು. ಅವಳು 'ಆ ದಿನ ರಾತ್ರಿ ಕಳ್ಳ ನನ್ನನ್ನು ಸಾಯಿಸಿದ್ದರೇ ಉತ್ತಮವಾಗಿತ್ತು. ನಾನು ಇಷ್ಟು ಹೆಚ್ಚಾಗಿ ಪಾಪ ಮಾಡುತ್ತಲೇ ಇರಲಿಲ್ಲ' ಎನ್ನುತ್ತಿದ್ದಳು

ದೇವಪಿತನು 'ಅದೇ ನೋಡು, ನಿಮ್ಮ ತಾಯಿಗೆ ನೀನು ಮಾಡಿರುವುದು' ಎಂದನು.

ಆದರೆ ಅವನು ಇದನ್ನೂ ಮುಚ್ಚಿ ಕೆಳಗಡೆಗೆ ಕೈ ತೋರಿಸಿದನು. ದೇವಪುತ್ರನು ಒಂದು ಸೆರೆಮನೆಯ ಮುಂದುಗಡೆ ಇಬ್ಬರು ಭಟರು ಒಬ್ಬ ಕಳ್ಳನನ್ನು ಹಿಡಿದುಕೊಂಡಿರುವುದನ್ನು ಕಂಡನು.

ದೇವಪಿತನು ಹೇಳತೊಡಗಿದನು.

'ಈ ಮನುಷ್ಯನು ಹತ್ತು ಜನರನ್ನು ಕೊಂದು ಹಾಕಿದ್ದನು. ಅವನು ಪ್ರಾಯಶ್ಚಿತ್ತಗಳ ಮೂಲಕ ತಾನೇ ತನ್ನ ಪಾಪಗಳನ್ನು ಪರಿಹರಿಸಿಕೊಳ್ಳಬೇಕಾಗಿದ್ದಿತು. ಆದರೆ ಅವನನ್ನು ನೀನು ಕೊಂದದ್ದರಿಂದ ಅವನ ಪಾಪಗಳನ್ನು ನೀನೇ ಹೊತ್ತುಕೊಂಡಿರುವೆ. ಈಗ ಅವನ ಪಾಪಗಳಿಗೆಲ್ಲ ನೀನೇ ಉತ್ತರ ಕೊಡಬೇಕಾಗಿದೆ. ಇದೇ ನಿನಗೆ ನೀನು ಮಾಡಿಕೊಂಡಿರುವುದು. ಹೆಣ್ಣು ಕರಡಿ ಒಂದು ಸಲ ದಿಮ್ಮಿಯನ್ನು ನೂಕಿ ತನ್ನ ಮರಿಗಳನ್ನು ಚದರಿಸಿತು, ಮತ್ತೊಂದು ಸಲ ನೂಕಿ ತಾನೇ ಒಲಿಯಾಯಿತು.

ನೀನೂ ಹಾಗೆಯೇ ಮಾಡಿರುವೆ. ಈಗ, ನಿನಗೆ ಮೂವತ್ತು ವರ್ಷಗಳನ್ನು ಕೊಡುತ್ತೇನೆ, ಪ್ರಪಂಚದೊಳಕ್ಕೆ ಹೋಗಿ ಆ ಕಳ್ಳನ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊ. ಅವಕ್ಕೆ ತಕ್ಕ ಪರಿಹಾರಗಳನ್ನು ಮಾಡಿಕೊಳ್ಳದಿದ್ದರೆ ನೀನೇ ಅವನ ಸ್ಥಾನಕ್ಕೆ ಬರಬೇಕಾಗುತ್ತದೆ!'

'ಅವನ ಪಾಪಗಳಿಗೆ ಪ್ರಾಯಶ್ಚಿತ್ತಮಾಡಿಕೊಳ್ಳುವುದು ಹೇಗೆ?' ಎಂದು ದೇವಪುತ್ರನು ಕೇಳಿದನು.

'ನೀನು ಪ್ರಪಂಚಕ್ಕೆ ಎಷ್ಟು ಪಾಪವನ್ನು ತಂದಿಟ್ಟಿರುವೆಯೋ ಅಷ್ಟನ್ನೂ ನಾಶಪಡಿಸಿದರೆ, ನಿನ್ನ ಸ್ವಂತ ಪಾಪಗಳಿಗೂ, ಆ ಕಳ್ಳನ ಪಾಪಗಳಿಗೂ-ಎಲ್ಲಕ್ಕೂ ತಕ್ಕ ಪ್ರಾಯಶ್ಚಿತ್ತ ಮಾಡಿಕೊಂಡಂತಾಗುತ್ತದೆ' ಎಂದು ದೇವಪಿತನು ಉತ್ತರ ಕೊಟ್ಟನು.

'ಪ್ರಪಂಚದಲ್ಲಿರುವ ಪಾಪವನ್ನು ನಾನು ಹೇಗೆ ನಾಶಮಾಡಬಲ್ಲೆ?' ಎಂದು ದೇವಪುತ್ರನು ಕೇಳಿದನು

ದೇವಪಿತನು ಉತ್ತರಕೊಟ್ಟನು

'ಹೊರಕ್ಕೆ ಹೋಗಿ, ಉದಯ ಸೂರ್ಯನ ಕಡೆಗೆ ನೇರವಾಗಿ ನಡೆಯುತ್ತಿರು. ಸ್ವಲ್ಪ ಹೊತ್ತಾದ ಬಳಿಕ ಒಂದು ಹೊಲದ ಬಳಿಗೆ ಬರುವೆ. ಅಲ್ಲಿ ಕೆಲವು ಜನಗಳಿರುತ್ತಾರೆ. ಅವರು ಏನು ಮಾಡುತ್ತಿರುವರೆಂಬುದನ್ನು ಪರೀಕ್ಷಿಸಿ ನೋಡು, ನಿನಗೆ ಗೊತ್ತಿರುವುದನ್ನು ಅವರಿಗೆ ಹೇಳಿಕೊಡು. ಆಮೇಲೆ ಮುಂದೆ ಹೋಗು, ಕಾಣುವುದನ್ನೆಲ್ಲ ಚೆನ್ನಾಗಿ ಗಮನಿಸುತ್ತಿರು. ನಾಲ್ಕನೆಯ ದಿನ ಒಂದು ಅಡವಿ ಸಿಕ್ಕುತ್ತದೆ. ಅಡವಿಯ ಮಧ್ಯದಲ್ಲಿ ಒಂದು ಗವಿಯಿದೆ, ಅದರೊಳಗೆ ಒಬ್ಬ ಸಾಧು ವಾಸಮಾಡುತ್ತಿದಾನೆ. ನಡೆದದ್ದನ್ನೆಲ್ಲ ಅವನಿಗೆ ಹೇಳು. ನೀನೇನು ಮಾಡಬೇಕೆಂಬುದನ್ನು ಹೇಳಿಕೊಡುತ್ತಾನೆ. ಅವನು ಹೇಳುವುದನ್ನೆಲ್ಲ ಯಾವಾಗ ಮಾಡಿ ಮುಗಿಸುತ್ತೀಯೋ ಆಗ ನಿನ್ನ ಮತ್ತು ಕಳ್ಳನ ಪಾಪಗಳಿಗೆಲ್ಲ ಪ್ರಾಯಶ್ಚಿತ್ತ ಮಾಡಿಕೊಂಡಂತಾಗುತ್ತದೆ.'

ಹೀಗೆ ಹೇಳಿ ದೇವಪಿತನು ತನ್ನ ದೇವಪುತ್ರನನ್ನು ಕರೆದುಕೊಂಡು ಒಂದು ಹೆಬ್ಬಾಗಿಲಿನಿಂದ ಹೊರಕ್ಕ ಕಳುಹಿಸಿಬಿಟ್ಟನು

೭

ದೇವಪುತ್ರನು ತನ್ನ ದಾರಿಯನ್ನು ಹಿಡಿದು ತಾನು ಹೊರಟನು. ಹೋಗುತ್ತಾ 'ಲೋಕದಲ್ಲಿರುವ ಪಾಪವನ್ನು ನಾನು ಹೇಗೆ ನಾಶಮಾಡಲಿ? ಪಾಪಿಗಳನ್ನು ಗಡೀಪಾರುಮಾಡಿ ಓಡಿಸುವುದು, ಅವರನ್ನು ಸೆರೆಮನೆಯಲ್ಲಿಡುವುದು ಅಥವಾ ಮರಣಕ್ಕೆ ಗುರಿಪಡಿಸುವುದು—ಇವುಗಳಿಂದ ಪಾಪವನ್ನು ನಾಶಗೊಳಿಸುತ್ತಾರೆ. ಆದರೆ ಇತರರ ಪಾಪಗಳು ನನ್ನ ಮೇಲೆ ಬರದಂತೆ ಆ ಪಾಪಗಳನ್ನು ಹೇಗೆ ನಾಶಗೊಳಿಸಲಿ?' ಎಂದು ಯೋಚಿಸುತ್ತಿದ್ದನು

ದೇವಪುತ್ರನು ಬಹಳ ಹೊತ್ತು ಇದನ್ನೇ ಮತ್ತೆ ಮತ್ತೆ ಯೋಚಿಸುತ್ತಿದ್ದನು. ಆದರೆ ಒಂದೂ ಗೊತ್ತಿಗೆ ಬರಲಿಲ್ಲ, ಮುಂದಕ್ಕ ಹೋಗುತ್ತಲೇ ಇದ್ದನು. ಒಂದು ಜೋಳದ ಹೊಲ ಸಿಕ್ಕಿತು ಅದರಲ್ಲಿ ಒಳ್ಳೆಯ ಜೋಳದ ಪೈರು ಬಹು ದಟ್ಟವಾಗಿ ಬೆಳೆದು ಕುಯ್ಲಿಗೆ ಸಿದ್ಧವಾಗಿದ್ದಿತು. ಒಂದು ಎಳೆಗರು ಜೋಳದೊಳಕ್ಕೆ ಹೋಯಿತು. ಅದನ್ನು ದೇವಪುತ್ರನು ಕಂಡನು. ಹತ್ತಿರದಲ್ಲೇ ಇದ್ದ ಕೆಲವು ಜನರು ಅದನ್ನು ನೋಡಿ ತಮ್ಮ ಕುದುರೆಗಳನ್ನು ಹತ್ತಿಕೊಂಡು ಜೋಳದೊಳಗೆ ಅದನ್ನು ಹಿಂದಕ್ಕೂ ಮುಂದಕ್ಕೂ ಅಟ್ಟಿಸಿಕೊಂಡು ಹೊರಟರು. ಕರು ಜೋಳದಿಂದ ಹೊರಕ್ಕೆ ಹೊರಡುವಂತಿದ್ದಾಗಲ್ಲೆಲ್ಲ, ಪ್ರತಿಯೊಂದು ಸಲವೂ ಯಾರಾದರೊಬ್ಬರು ಅದರ ಹತ್ತಿರಕ್ಕೆ ಕುದುರೆಯನ್ನು ಓಡಿಸಿಕೊಂಡು ಹೋಗುತ್ತಿದ್ದರು, ಕರು ಹೆದರಿ ಮತ್ತೆ ಮತ್ತೆ ಜೋಳದೊಳಕ್ಕೇ ಹಿಂದಿರುಗಿ ನುಗ್ಗುತ್ತಿದ್ದಿತು. ಅದು ಒಳಕ್ಕ ಹೋಗಲು ಅವರೆಲ್ಲರೂ ಅದನ್ನು ಓಡಿಸುತ್ತ ಮತ್ತೆ ಕುದುರೆಯನ್ನು ದೌಡಿಸಿಕೊಂಡು ಹೋಗಿ ಜೋಳವನ್ನೆಲ್ಲ ತುಳಿಯುತ್ತಿದ್ದರು. ರಸ್ತೆಯಲ್ಲಿ ಒಬ್ಬ ಹೆಂಗಸು 'ಅವರು ನನ್ನ ಕರುವನ್ನು ಓಡಿಸಿ ಓಡಿಸಿ ಸಾಯಿಸಿ ಬಿಡುತ್ತಾರೆ' ಎಂದು ಅಳುತ್ತ ನಿಂತಿದ್ದಳು.

ದೇವಪುತ್ರನು ಆ ರೈತರನ್ನು ಕುರಿತು,

‘ ಇದೇನು ಮಾಡುತ್ತಿದೀರಿ ? ಎಲ್ಲರೂ ಜೋಳದ ಹೊಲದಿಂದ ಹೊರಕ್ಕೆ ಬಂದು ಬಿಡಿ. ಆ ಹೆಂಗಸು ತನ್ನ ಕರುವನ್ನು ಕರೆಯಲಿ ’ ಎಂದನು.

ಅವರು ಹಾಗೆಯೇ ಮಾಡಿದರು. ಹೆಂಗಸು ಜೋಳದ ಹೊಲದ ಅಂಚಿಗೆ ಬಂದು ತನ್ನ ಕರುವನ್ನು ಕರೆದಳು, ‘ ಬಾ, ಬಾ, ಬ್ರೌನಿ, ಬಂದು ಬಿಡು ’ ಎಂದು ಕೂಗಿದಳು. ಕರು ತನ್ನ ಕಿವಿಗಳನ್ನು ನೆಟ್ಟಗೆ ಮಾಡಿಕೊಂಡು ಸ್ವಲ್ಪ ಹೊತ್ತು ಆಲಿಸುತ್ತಿದ್ದು, ಒಳಿಕ ಆ ಹೆಂಗಸಿನ ಕಡೆಗೆ ತಾನಾಗಿಯೇ ಓಡುತ್ತ ಹೋಗಿ, ಅವಳ ಬಟ್ಟೆಯ ಸೆರಗಿನಲ್ಲಿ ತನ್ನ ತಲೆಯನ್ನು ಹುದುಗಿಸಿ ಕೊಂಡು ನಿಂತಿತು. ರೈತರು ಸಂತೋಷಗೊಂಡರು, ಹೆಂಗಸು ಸಂತೋಷ ಗೊಂಡಳು, ಕರುವೂ ಸಂತೋಷಗೊಂಡಿತು.

ದೇವಪುತ್ರನು ಮುಂದಕ್ಕೆ ಹೊರಟನು. ಹೋಗುತ್ತಾ ಹೀಗೆ ಯೋಚಿಸಿದನು.

‘ ಈಗ ಗೊತ್ತಾಯಿತು. ಪಾಪವು ಪಾಪದಿಂದಲೇ ಹರಡುತ್ತದೆ. ಜನರು ಪಾಪವನ್ನು ಹೊರಹೊರಡಿಸುವುದಕ್ಕೆ ಪ್ರಯತ್ನಿಸಿದಷ್ಟೂ ಪಾಪವು ಹೆಚ್ಚುತ್ತಲೇ ಹೋಗುತ್ತದೆ. ಪಾಪವನ್ನು ಪಾಪದಿಂದ ನಾಶಪಡಿಸಲು ಸಾಧ್ಯವಿಲ್ಲವೆಂದು ತೋರುತ್ತದೆ ಆದರೆ ಅದನ್ನು ಯಾವ ದಾರಿಯಿಂದ ನಾಶಗೊಳಿಸಬೇಕೋ ತಿಳಿಯದು. ಕರು ತನ್ನ ಯಜಮಾನಿಯ ಮಾತು ಕೇಳಿ ಅದರಂತೆ ನಡಯಿತು, ಅದರಿಂದ ಎಲ್ಲವೂ ಸರಿಹೋಯಿತು. ಆದರೆ ಅದು ಅವಳ ಮಾತನ್ನು ಕೇಳದೆ ಹೋಗಿದ್ದರೆ ನಾವು ಅದನ್ನು ಹೊಲದಿಂದ ಹೊರಡಿಸುವುದಕ್ಕೆ ಹೇಗೆ ಸಾಧ್ಯವಾಗುತ್ತಿದ್ದಿತು ?’

ದೇವಪುತ್ರನು ಮತ್ತೆ ಯೋಚಿಸತೊಡಗಿದನು. ಆದರೆ ಯಾವ ನಿರ್ಧಾರಕ್ಕೂ ಬರದೆ ಪ್ರಯಾಣವನ್ನು ಮುಂದುವರಿಸಿದನು.

೮

ಅವನು ಒಂದು ಹಳ್ಳಿಗೆ ಬರುವವರೆಗೂ ಹೋಗುತ್ತಲೇ ಇದ್ದನು.

ಆ ಹಳ್ಳಿಯ ಅಂಚಿನಲ್ಲಿ ಒಂದು ಮನೆಯ ಹತ್ತಿರ ನಿಂತು, ಆ ರಾತ್ರಿ ಅಲ್ಲಿ ತಂಗುವುದಕ್ಕೆ ಅವಕಾಶಕೊಡಬೇಕೆಂದು ಕೇಳಿಕೊಂಡನು. ಅಲ್ಲಿ ಮನೆಯ ಹೆಂಗಸು ಮನೆಯನ್ನು ಗುಡಿಸಿ ಶುಚಿಮಾಡುತ್ತ ಒಬ್ಬಳೇ ಇದ್ದಳು. ಅವಳು ಒಳಗೆ ಬರುವಂತೆ ಹೇಳಿದಳು ದೇವಪುತ್ರನು ಒಳಕ್ಕೆ ಹೋಗಿ ಇಟ್ಟಿಗೆಯ ಒಲೆಯ ಮೇಲೆ ಕುಳಿತುಕೊಂಡು ಆ ಹೆಂಗಸು ಮಾಡುತ್ತಿದ್ದುದನ್ನೇ ನೋಡುತ್ತಿದ್ದನು. ಅವಳು ಕೊಟಡಿಯನ್ನು ಉಜ್ಜಿ ಒರೆಸುವುದನ್ನು ಮುಗಿಸಿ ಮೇಜವನ್ನು ಉಜ್ಜುವುದಕ್ಕ ಪ್ರಾರಂಭಿಸಿದಳು. ಉಜ್ಜಿದಮೇಲೆ ಅದನ್ನು ಒಂದು ಕೊಳೆಯ ಬಟ್ಟೆಯಿಂದ ಒರೆಸತೊಡಗಿದಳು. ಅದನ್ನು ಒಂದು ಪಕ್ಕದಿಂದ ಮತ್ತೊಂದು ಪಕ್ಕದವರೆಗೂ ಒರೆಸಿದಳು. ಆದರ ಅದು ಚೊಕ್ಕಟವಾಗಲಿಲ್ಲ. ಮಣ್ಣಾದ ಬಟ್ಟೆಯು ಅಲ್ಲಲ್ಲೇ ಮಣ್ಣಿನ ಪಟ್ಟಿಗಳನ್ನು ಮೂಡಿಸಿದ್ದಿತು. ಅವಳು ಅದನ್ನು ಹಿಂದುಮುಂದಾಗಿ ಒರೆಸಿದಳು ಮೊದಲಿನ ಪಟ್ಟಿಗಳು ಮರೆಯಾದವು, ಆದರ ಅವುಗಳ ಸ್ಥಳದಲ್ಲಿ ಹೊಸ ಹೊಸ ಪಟ್ಟಿಗಳು ಕಾಣಿಸಿಕೊಂಡವು. ಆಮೇಲೆ ಅವಳು ಅದನ್ನು ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೂ ಒರೆಸಿದಳು. ಆದರೆ ಆಗಲೂ ಒಂದೇ ರೀತಿ ಆಯಿತು. ಕೊಳೆಯ ಬಟ್ಟೆಯು ಮೇಜವನ್ನು ಅಂದಗೆಡಿಸಿತು, ಒಂದು ಪಟ್ಟಿಯನ್ನು ಒರೆಸಿದರೆ ಮತ್ತೊಂದು ಉಳಿಯುತ್ತಿದ್ದಿತು. ದೇವಪುತ್ರನು ಸ್ವಲ್ಪ ಹೊತ್ತು ಇದನ್ನು ಸುಮ್ಮನೇ ನೋಡುತ್ತಿದ್ದು ಆಮೇಲೆ,

'ಅಮ್ಮಾ, ನೀನೇನು ಮಾಡುತ್ತಿದ್ದೀಯ?' ಎಂದು ಕೇಳಿದನು.

'ನೋಡಪ್ಪಾ, ಹಬ್ಬಕ್ಕೆ ಎಲ್ಲವನ್ನೂ ಚೊಕ್ಕಟವಾಗಿ ಮಾಡುತ್ತಿದ್ದೇನೆ. ಈ ಮೇಜವನ್ನು ಮಾತ್ರ ಸರಿಮಾಡಲಾರೆ, ಇದು ನಿರ್ಮಲವಾಗಲೊಲ್ಲದು. ನನಗೆ ಸಾಕಾಗಿ ಹೋಗಿದೆ.'

'ಬಟ್ಟೆಯಿಂದ ಮೇಜವನ್ನು ಒರೆಸುವುದಕ್ಕೆ ಮೊದಲು ಅದನ್ನು ನೀರಿನಲ್ಲಿ ತೊಳೆಯಬೇಕು.'

ಹೆಂಗಸು ಹಾಗೆಯೇ ಮಾಡಿದಳು. ಬಹು ಬೇಗ ಮೇಜದ ಕೊಳೆಯೆಲ್ಲ ಹೋಗಿ ನಿರ್ಮಲವಾಯಿತು.

'ನೀನು ಹೇಳಿದ್ದು ಉಪಕಾರವಾಯಿತಪ್ಪಾ ಎಂದಳು.

ಮರುದಿನ ಬೆಳಿಗ್ಗೆ ಆ ಹೆಂಗಸಿಗೆ ಹೋಗಿಬರುತ್ತೇನೆಂದು ಹೇಳಿ ಮುಂದಕ್ಕೆ ಪ್ರಯಾಣ ಮಾಡಿದನು. ಬಹಳ ಹೊತ್ತು ನಡೆದ ಮೇಲೆ ಅವನು ಒಂದು ಅಡವಿಯ ಅಂಚಿಗೆ ಬಂದನು ಅಲ್ಲಿ ಕೆಲವರು ರೈತರು ಬಗ್ಗಿದ ಮರದಿಂದ ಚಕ್ರದ ಅಂಚುಗಳನ್ನು ಮಾಡುತ್ತಿದ್ದದ್ದನ್ನು ಕಂಡನು. ಹತ್ತಿರಕ್ಕೆ ಬಂದ ಮೇಲೆ ಆ ಜನರು ದುಂಡಗೆ ಸುತ್ತುತ್ತಿದ್ದರೂ ಮರವನ್ನು ಮಾತ್ರ ಬಗ್ಗಿಸಲಾರದಿದ್ದದ್ದು ದೇವಪುತ್ರನಿಗೆ ಕಾಣಿಸಿತು.

ಅವನು ನೋಡುತ್ತ ನಿಂತನು ಬಗ್ಗಿಸಬೇಕಾದಿದ್ದ ಮರವನ್ನು ಕಟ್ಟಿದ್ದ ತುಂಡನ್ನು ಭದ್ರಪಡಿಸಿರಲಿಲ್ಲ. ಆದ್ದರಿಂದ ಅವರು ಸುತ್ತ ಹೋದಂತೆಲ್ಲ ಅದೂ ತಿರುಗುತ್ತಿದ್ದಿತು. ಇದನ್ನು ಕಂಡು ದೇವಪುತ್ರನು,

'ಗೆಳೆಯರೇ ನೀವೇನು ಮಾಡುತ್ತಿರುವಿರಿ?' ಎಂದು ಕೇಳಿದನು

'ಏನು, ಕಾಣುವುದಿಲ್ಲವೆ? ಚಕ್ರದ ಅಂಚುಗಳನ್ನು ಮಾಡುತ್ತಿದ್ದೇವೆ. ಈ ಮರವನ್ನು ಎರಡು ಸಲ ಆವಿಗೆ ಹಾಕಿದ್ದೇವೆ ನಾವೂ ತುಂಬ ದಣಿದು ಹೋಗಿದ್ದೇವೆ ಆದರೂ ಮರ ಮಾತ್ರ ಬಗ್ಗವಲ್ಲದು'

ದೇವಪುತ್ರನು, 'ಗೆಳೆಯರೇ, ನೀವು ಮೊದಲು ಆ ತುಂಡನ್ನು ಅಲುಗದಂತೆ ಭದ್ರಪಡಿಸಬೇಕು. ಇಲ್ಲದಿದ್ದರೆ ನೀವು ಸುತ್ತಿದಾಗಲೆಲ್ಲ ಅದೂ ಸುತ್ತುತ್ತದೆ' ಎಂದನು.

ರೈತರು ಅವನ ಸಲಹೆಯನ್ನು ಗ್ರಹಿಸಿ ಆ ತುಂಡನ್ನು ಭದ್ರಪಡಿಸಿದರು. ಆಮೇಲೆ ಕೆಲಸ ಸರಾಗವಾಗಿ ನಡೆಯಿತು.

ದೇವಪುತ್ರನು ಆರಾತ್ರೆ ಅವರ ಜೊತೆಯಲ್ಲೇ ಇದ್ದು ಆಮೇಲೆ ಮುಂದೆ ಹೊರಟನು. ಅವನು ಹಗಲೂ ರಾತ್ರೆಯೂ ನಿಲ್ಲದೆ ನಡೆಯುತ್ತಿದ್ದು ಬೆಳಕು ಹರಿಯುವುದಕ್ಕೆ ಸ್ವಲ್ಪ ಹೊತ್ತಿರುವಾಗ ಕೆಲವರು ಮುಂದೆಯ ಗೊಲ್ಲರು

(ದನಗಳ ಮಂದೆಗಳನ್ನು ಅಟ್ಟಿಕೊಂಡು ಹೋಗುವವರು) ರಾತ್ರಿ ತಂಗಿದ್ದ ಬಳಿಗೆ ಒಂದು ಅವರ ಸಮೀಪದಲ್ಲಿ ಮಲಗಿಕೊಂಡನು. ಅವರು ತಮ್ಮ ದನಗಳನ್ನೆಲ್ಲ ಒಟ್ಟಿಗೆ ಕೂಡಿಸಿ ಬೆಂಕಿಯನ್ನು ಹೊತ್ತಿಸಲು ಹವಣಿಸುತ್ತಿದ್ದರು. ಒಣಗಿದ ಕೆಲವು ಕಡ್ಡಿಗಳನ್ನು ತಂದು ಬೆಂಕಿ ಹೊತ್ತಿಸಿದ್ದರು. ಆದರೆ ಕಡ್ಡಿಗಳು ಪೂರ್ತಿಯಾಗಿ ಹೊತ್ತಿಕೊಳ್ಳುವುದಕ್ಕೆ ಮೊದಲೇ ಪೊದೆಗಳಿಂದ ಹಸಿಯ ಕಡ್ಡಿಗಳನ್ನು ತಂದು ಮೇಲೆ ಹೇರಿಬಿಟ್ಟರು ಪೊದೆಯ ಕಡ್ಡಿ ಹಿಸ್ ಎಂದು ಸದ್ದಾಯಿತು, ಹೊಗೆ ತುಂಬಿ ಬೆಂಕಿ ಆರಿಹೋಯಿತು ಆಮೇಲೆ ಮಂದೆಯ ಗೊಲ್ಲರು ಮತ್ತಷ್ಟು ಒಣಕಡ್ಡಿಗಳನ್ನು ತಂದು ಹೊತ್ತಿಸಿದರು, ಮತ್ತೆ ಅದರ ಮೇಲೆ ಪೊದೆಯ ಕಡ್ಡಿಗಳನ್ನು ಹೇರಿದರು—ಮತ್ತೆ ಬೆಂಕಿ ಆರಿಹೋಯಿತು. ಅವರು ಹೀಗೆಯೇ ಬಹಳ ಹೊತ್ತು ಹೆಣಗುತ್ತಿದ್ದರೂ ಬೆಂಕಿಯನ್ನು ಮಾತ್ರ ಹೊತ್ತಿಸಲಾರದೆ ಹೋದರು. ಆಗ ದೇವಪುತ್ರನು 'ಪೊದೆಯ ಕಡ್ಡಿಗಳನ್ನು ಒಟ್ಟುವುದಕ್ಕೆ ಅಷ್ಟು ಆತುರಪಡಬೇಡಿ. ಏನನ್ನಾದರೂ ಮೇಲೆ ಹಾಕುವುದಕ್ಕಿಂತ ಮೊದಲು ಒಣಗಿದ ಪುಳ್ಳೆಗಳು ಸರಿಯಾಗಿ ಉರಿಯಲಿ, ಬೆಂಕಿ ಚೆನ್ನಾಗಿ ಹೊತ್ತಿಕೊಂಡ ಮೇಲೆ ಎಷ್ಟು ಬೇಕೋ ಅಷ್ಟನ್ನೂ ಹಾಕುವಿರಂತೆ' ಎಂದನು.

ಮಂದೆಯವರು ಅವನ ಸಲಹೆಯಂತೆ ನಡೆದುಕೊಂಡರು ಮೊದಲು ಬೆಂಕಿ ಜೋರಾಗಿ ಹತ್ತಿ ಉರಿಯುವವರೆಗೂ ಸುಮ್ಮನಿದ್ದು ಆಮೇಲೆ ಪೊದೆಯ ಕಡ್ಡಿಗಳನ್ನು ತಂದುಹಾಕಿದರು. ಆಗ ಪೊದೆಯ ಕಡ್ಡಿಗಳು ಚೆನ್ನಾಗಿ ಹೊತ್ತಿಕೊಂಡವು, ಒಹು ಬೇಗ ದೊಡ್ಡದಾಗಿ ಉರಿ ಹತ್ತಿ ಛಟ ಛಟನೆ ಸಿಡಿಯತೊಡಗಿತು.

ದೇವಪುತ್ರನು ಸ್ವಲ್ಪ ಹೊತ್ತು ಅವರ ಜೊತೆಯಲ್ಲಿದ್ದು ಆಮೇಲೆ ಮುಂದಕ್ಕೆ ಹೊರಟನು. ಹೋಗುತ್ತ ದಾರಿಯಲ್ಲಿ ತಾನು ಕಂಡ ಆ ಮೂರು ಸಂಗತಿಗಳಿಗೂ ಏನು ಅರ್ಥವಿರಬಹುದೆಂದು ಯೋಚಿಸುತ್ತಿದ್ದನು. ಆದರೆ ಅವುಗಳ ಆಳವನ್ನು ಅರಿಯಲಾರದೆ ಹೋದನು.

೯

ದೇವಪುತ್ರನು ಆ ಹಗಲೆಲ್ಲ ನಡೆಯುತ್ತಲೇ ಇದ್ದು ಸಂಜೆಯ ಹೊತ್ತಿಗೆ ಮತ್ತೊಂದು ಕಾಡಿನ ಹತ್ತಿರಕ್ಕೆ ಬಂದನು ಅಲ್ಲಿ ಒಬ್ಬ ಸಾಧು ವಿನ ಗುಡಿಸಲು ಸಿಕ್ಕಿತು. ಅಲ್ಲಿ ನಿಂತು ಬಾಗಿಲು ತಟ್ಟಿದನು.

'ಯಾರಲ್ಲಿ ?' ಎಂದು ಒಳಗಿನಿಂದ ಒಂದು ದನಿ ಕೇಳಿತು.

'ಒಬ್ಬ ಮಹಾಪಾಪಿ. ನನ್ನ ಪಾಪಗಳಿಗೂ ಅದರ ಜೊತೆಗೆ ಮತ್ತೊಬ್ಬನ ಪಾಪಗಳಿಗೂ ನಾನು ಪ್ರಾಯಶ್ಚಿತ್ತಮಾಡಿಕೊಳ್ಳಬೇಕಾಗಿದೆ' ಎಂದು ದೇವಪುತ್ರನು ಉತ್ತರ ಕೊಟ್ಟನು.

ಇದನ್ನು ಕೇಳಿ ಸಾಧು ಹೊರಕ್ಕೆ ಬಂದನು.

'ಮತ್ತೊಬ್ಬನಿಗಾಗಿ ನೀನು ಹೊತ್ತಿರುವ ಆ ಪಾಪಗಳು ಯಾವುವು ?'

ದೇವಪುತ್ರನು ಅವನಿಗೆ ಎಲ್ಲವನ್ನೂ ಹೇಳಿದನು ತನ್ನ ದೇವಪಿತನ ವಿಚಾರ, ಮರಿಗಳೊಡಗೂಡಿದ ಹೆಣ್ಣು ಕರಡಿಯ ವಿಚಾರ, ಮುದ್ರೆ ಮಾಡಿದ ಕೊಟಡಿಯಲ್ಲಿದ್ದ ಸಿಂಹಾಸನದ ವಿಚಾರ, ತನ್ನ ದೇವಪಿತನು ತನಗೆ ಮಾಡಿದ್ದ ಅಪ್ಪಣೆಗಳು, ಜೋಳವನ್ನು ತುಳಿಯುತ್ತಿದ್ದ ರೈತರನ್ನು ತಾನು ನೋಡಿದ್ದು, ತನ್ನ ಒಡತಿ ಕೂಗಿದ ಕೂಡಲೇ ಕರು ಹೊರಕ್ಕೆ ಹೊರಟು ಬಂದದ್ದು—ಈ ಎಲ್ಲವನ್ನೂ ತಿಳಿಸಿದನು

'ಪಾಪದಿಂದ ಪಾಪವನ್ನು ನಾಶಮಾಡಲು ಯಾರಿಗೂ ಸಾಧ್ಯವಿಲ್ಲ ವೆಂದು ನಾನು ಕಂಡುಕೊಂಡೆನು ಆದರೆ ಅದನ್ನು ಹೇಗೆ ನಾಶಮಾಡ ಬೇಕೋ ನನಗೆ ತಿಳಿಯದು. ಅದನ್ನು ಮಾಡುವುದು ಹೇಗೆಂಬುದನ್ನು ನನಗೆ ಕಲಿಸಿಕೊಡು' ಎಂದನು.

'ನೀನು ದಾರಿಯಲ್ಲಿ ಮತ್ತೇನು ಕಂಡೆ ? ಹೇಳು' ಎಂದು ಸಾಧು ಕೇಳಿದನು.

ದೇವಪುತ್ರನು ಮೇಜವನ್ನು ತೊಳೆಯುತ್ತಿದ್ದ ಹೆಂಗಸು, ಒಂಡಿಯ ಗಾಲಿಗಳನ್ನು ಮಾಡುತ್ತಿದ್ದ ಜನರು, ಬೆಂಕಿ ಹೊತ್ತಿಸುತ್ತಿದ್ದ ಮುಂದೆ ಯುವರು—ಇವರ ಸಂಗತಿಗಳನ್ನೆಲ್ಲ ಹೇಳಿದನು.

ಸಾಧು ಇದನ್ನೆಲ್ಲ ಕೇಳುತ್ತಿದ್ದು ಆಮೇಲೆ ತನ್ನ ಗುಡಿಸಿಲಿನೊಳಕ್ಕೆ ಹೋಗಿ ಹರಿತವಾದ ಒಂದು ಹಳೆಯ ಕೊಡಲಿಯನ್ನು ಹೊರಕ್ಕೆ ತಂದನು.

'ನನ್ನ ಸಂಗಡ ಬಾ' ಎಂದನು.

ಇಬ್ಬರೂ ಸ್ವಲ್ಪದೂರ ಹೋದ ಬಳಿಕ ಸಾಧು ಒಂದು ಮರದ ಕಡೆಗೆ ತೋರಿಸಿದನು.

'ಅದನ್ನು ಕಡಿದುರುಳಿಸು' ಎಂದನು.

ದೇವಪುತ್ರನು ಮರವನ್ನು ಉರುಳಿಸಿದನು.

'ಈಗ ಅದನ್ನು ಮೂರು ತುಂಡುಮಾಡು' ಎಂದನು.

ದೇವಪುತ್ರನು ಮರವನ್ನು ಮೂರು ತುಂಡುಗಳಾಗಿ ಕತ್ತರಿಸಿದನು. ಆಮೇಲೆ ಆ ಸಾಧು ತನ್ನ ಗುಡಿಸಲಿಗೆ ಹೋಗಿ ಕೆಲವು ಉರಿಯುವ ಕಡ್ಡಿಗಳನ್ನು ತಂದನು.

'ಆ ಮೂರು ಕೊರಡುಗಳನ್ನೂ ಸುಟ್ಟುಬಿಡು' ಎಂದು ಅವನು ಹೇಳಿದನು.

ಆಗ, ದೇವಪುತ್ರನು ಬೆಂಕಿಹೊತ್ತಿಸಿ ಸೀದು ಕರಿಕಾದ ಮೂರು ತುಂಡುಗಳು ಮಾತ್ರ ಉಳಿಯುವವರೆಗೂ ಆ ಕೊರಡುಗಳನ್ನು ಉರಿಸಿದನು.

'ಈಗ ಅವುಗಳನ್ನು ಹೀಗೆ ನೆಲದೊಳಕ್ಕ ಅರ್ಧಭಾಗ ನೆಡು.'

ದೇವಪುತ್ರನು ಹಾಗೆ ಮಾಡಿದನು.

'ಗುಡ್ಡದ ಬುಡದಲ್ಲಿರುವ ಆ ಹೊಳೆ ಕಾಣುತ್ತದೆಯಷ್ಟ. ಅಲ್ಲಿಂದ ನಿನ್ನ ಬಾಯಲ್ಲಿ ನೀರು ತುಂಬಿಕೊಂಡು ತಂದು ಈ ತುಂಡುಗಳಿಗೆ ನೀರೆರೆಯುತ್ತಿರು. ಈ ತುಂಡಿಗೆ ನೀನು ಆ ಹೆಂಗಸಿಗೆ ಹೇಳಿಕೊಟ್ಟಂತೆ ನೀರೆರೆ, ಇದಕ್ಕೆ ಚಕ್ರಮಾಡುವವರಿಗೆ ಹೇಗೆ ಕಲಿಸಿದೆಯೋ ಹಾಗೆ ನೀರು ಹಾಕು, ಇದಕ್ಕೆ ಮಂದೆಯವರಿಗೆ ನೀನು ಕಲಿಸಿಕೊಟ್ಟಂತೆ ನೀರು ಹಾಕು. ಇವು ಮೂರೂ ಯಾವಾಗ ಬೇರು ಬಿಡುತ್ತವೆಯೋ, ಈ ಕರಿಕಲು ತುಂಡುಗಳಿಂದ ಸೇಬು ಗಿಡಗಳು ಯಾವಾಗ ಏಳುತ್ತವೆಯೋ, ಆಗ ಮನುಷ್ಯರಲ್ಲಿರುವ

ಪಾಪವನ್ನು ನಾಶಮಾಡುವುದು ಹೇಗೆಂಬುದು ನಿನಗೆ ತಿಳಿಯುತ್ತದೆ, ಆಗ ನಿನ್ನ ಪಾಪಗಳೆಲ್ಲಕ್ಕೂ ಪ್ರಾಯಶ್ಚಿತ್ತಮಾಡಿಕೊಂಡ ಹಾಗಾಗುತ್ತದೆ.'

ಹೀಗೆ ಹೇಳಿ ಸಾಧು ತನ್ನ ಗುಡಿಸಲಿಗೆ ಹಿಂದಿರುಗಿದನು. ದೇವಪುತ್ರನು ಬಹಳಹೊತ್ತು ಯೋಚಿಸಿದನು. ಆದರೆ ಸಾಧುವಿನ ಅಭಿಪ್ರಾಯವೇನೆಂದು ತಿಳಿಯಲಾರದೆ ಹೋದನು. ಆದರೂ ತನಗೆ ಹೇಳಿದ್ದಂತೆ ಕೆಲಸ ಮಾಡಲು ಪ್ರಾರಂಭಿಸಿದನು.

೧೦

ದೇವಪುತ್ರನು ಹೊಳೆಗೆ ಹೋಗಿ, ಬಾಯಿತುಂಬ ನೀರು ತುಂಬಿಕೊಂಡು, ಹಿಂದಿರುಗಿ ಬಂದು ಅದನ್ನು ಕರಕಲು ತುಂಡುಗಳಲ್ಲಿ ಒಂದರಮೇಲೆ ಸುರಿದನು. ಹೀಗೆ ಮತ್ತೆಮತ್ತೆ ಮಾಡುತ್ತ ಎಲ್ಲ ತುಂಡುಗಳಿಗೂ ನೀರು ಹಾಕಿದನು. ತುಂಬ ದಣಿವಾಗಿ ಹಸಿವು ಕಾಣಿಸಿಕೊಂಡಾಗ ಮುದಿಸಾಧುವನ್ನು ಏನಾದರೂ ಆಹಾರವನ್ನು ಕೇಳಬೇಕೆಂದು ಗುಡಿಸಲಿಗೆ ಹೋದನು. ಬಾಗಿಲನ್ನು ತೆಗೆದು ನೋಡಲು, ಅಲ್ಲಿ ಒಂದು ಬೆಂಚಿನಮೇಲೆ ಮುದುಕನು ಸತ್ತು ಮಲಗಿರುವುದನ್ನು ಕಂಡನು. ದೇವಪುತ್ರನು ಆಹಾರಕ್ಕಾಗಿ ಸುತ್ತಲೂ ನೋಡಿದನು. ಅವನಿಗೆ ಸ್ವಲ್ಪ ಒಣರೊಟ್ಟಿ ಸಿಕ್ಕಿತು, ಅದರಲ್ಲೇ ಸ್ವಲ್ಪ ತಿಂದನು. ಆಮೇಲೆ ಒಂದು ಗುದ್ದಲಿಯನ್ನು ತೆಗೆದುಕೊಂಡು ಸಾಧುವಿಗೆ ಒಂದು ಸಮಾಧಿಯನ್ನು ತೋಡುವುದಕ್ಕೆ ಪ್ರಾರಂಭಿಸಿದನು. ರಾತ್ರಿ ಹೊತ್ತು ನೀರು ತಂದು ಮೋಟು ತುಂಡುಗಳಿಗೆ ನೀರು ಹಾಕಿ ಹಗಲು ಹೊತ್ತು ಸಮಾಧಿಯನ್ನು ಅಗೆಯುತ್ತಿದ್ದನು. ಅವನಿನ್ನೂ ಸಮಾಧಿಯನ್ನು ಮುಗಿಸಿಯೇ ಇರಲಿಲ್ಲ; ಇನ್ನೇನು ಹೆಣವನ್ನು ಹೂಳಬೇಕೆಂದಿದ್ದನು, ಅಷ್ಟರಲ್ಲಿ ಆ ಮುದುಕನಿಗೆ ಆಹಾರವನ್ನು ತೆಗೆದುಕೊಂಡು ಹಳ್ಳಿಯಿಂದ ಕೆಲವರು ಅಲ್ಲಿಗೆ ಬಂದರು.

ಆ ಮುದುಕ ಸಾಧು ಸತ್ತುಹೋದನೆಂದೂ, ಅವನು ದೇವಪುತ್ರನಿಗೆ ಆಶೀರ್ವಾದಮಾಡಿ ತನ್ನ ಸ್ಥಳದಲ್ಲಿ ಅವನನ್ನು ಬಿಟ್ಟು ಹೋದನೆಂದೂ ಅವರು ಕೇಳಿದರು. ಆಗ ಅವರು ಮುದುಕನನ್ನು ಹೂಳಿದರು, ತಾವು

ತಂದಿದ್ದ ಆಹಾರವನ್ನು ದೇವಪುತ್ರನಿಗೆ ಕೊಟ್ಟು ಮತ್ತಷ್ಟು ತಂದುಕೊಡು ವುದಾಗಿ ಹೇಳಿ, ಅವರೆಲ್ಲರೂ ಹೊರಟುಹೋದರು.

ದೇವಪುತ್ರನು ಮುದುಕನ ಸ್ಥಳದಲ್ಲಿಯೇ ನಿಂತನು. ತನಗೆ ಜನರು ತಂದು ಕೊಟ್ಟ ಆಹಾರವನ್ನು ತಿನ್ನುತ್ತಲೂ, ಸಾಧು ಹೇಳಿದ್ದಂತೆ ಮಾಡು ತ್ತಲೂ ಎಂದರೆ ಹೊಳೆಯಿಂದ ಬಾಯಲ್ಲಿ ನೀರು ತಂದು ಕರಿಕಲು ತುಂಡು ಗಳಿಗೆ ನೀರು ಹುಯ್ಯುತ್ತಲೂ ಅಲ್ಲಿಯೇ ವಾಸಿಸುತ್ತಿದ್ದನು.

ಅವನು ಹೀಗೆ ಒಂದು ವರ್ಷ ವಾಸಮಾಡಿದನು. ಅನೇಕ ಜನರು ಅವನ ಬಳಿಗೆ ಬರುತ್ತಿದ್ದರು. ಕಾಡಿನಲ್ಲಿ ವಾಸಮಾಡುತ್ತ, ತನ್ನ ಆತ್ಮದ ಮೋಕ್ಷಕ್ಕೋಸ್ಕರ, ಒಂದು ಗುಡ್ಡದ ಕೆಳಗಿರುವ ನದಿಯಿಂದ ಬಾಯಲ್ಲಿ ನೀರು ತುಂಬಿಕೊಂಡು ತಂದು ಕರಿಕಲು ತುಂಡುಗಳಿಗೆ ನೀರೆರೆಯುತ್ತಿರುವ ಮಹಾತ್ಮನೆಂದು ಅವನ ಖ್ಯಾತಿ ಹೊರದೇಶಗಳಿಗೂ ಹರಡಿತು. ಅವ ನನ್ನು ನೋಡುವುದಕ್ಕೆ ಜನರು ಹಿಂಡು ಹಿಂಡಾಗಿ ಬರತೊಡಗಿದರು. ಶ್ರೀಮಂತರಾದ ವರ್ತಕರು ಅವನಿಗೆ ಕಾಣಿಕೆಗಳನ್ನು ತಂದರು. ಆದರೆ ಅವನು ತನಗೆ ಅತ್ಯವಶ್ಯಕವಾಗಿ ಬೇಕಾದ ವಸ್ತುಗಳನ್ನು ಮಾತ್ರ ಇಟ್ಟುಕೊಂಡು ಉಳಿದವನ್ನು ಬಡವರಿಗೆ ಕೊಟ್ಟುಬಿಡುತ್ತಿದ್ದನು.

ದೇವಪುತ್ರನು ಹೀಗೆ ವಾಸಿಸುತ್ತಿದ್ದನು ಬಾಯಲ್ಲಿ ನೀರು ತಂದು ಕರಿಕಲು ತುಂಡುಗಳಿಗೆ ನೀರೆರೆಯುವುದರಲ್ಲಿ ಅರ್ಧ ದಿನವನ್ನೂ, ಒಂದ ಜನ ರನ್ನು ನೋಡುವುದರಲ್ಲಿ ಇನ್ನು ಅರ್ಧ ದಿನವನ್ನೂ ಕಳೆಯುತ್ತಿದ್ದನು. ಪಾಪ ವನ್ನು ನಾಶಮಾಡಿ, ತನ್ನ ಪಾಪಗಳಿಗೆ ಪ್ರಾಯಶ್ಚಿತ್ತಮಾಡಿಕೊಳ್ಳಬೇಕಾದರೆ ಈ ರೀತಿಯಾಗಿಯೇ ಜೀವಿಸುವಂತೆ ತನಗೆ ಸಾಧು ಹೇಳಿರುವನೆಂದು ಭಾವಿಸಿ ಕೊಂಡನು.

ಇದೇ ರೀತಿಯಲ್ಲಿ ಎರಡು ವರ್ಷಗಳನ್ನು ಕಳೆದನು ತುಂಡುಗಳಿಗೆ ನೀರುಹಾಕುವುದನ್ನು ಒಂದು ದಿನವಾದರೂ ಬಿಟ್ಟಿರಲಿಲ್ಲ. ಆದರೂ ಅವುಗಳಲ್ಲಿ ಒಂದೂ ಚಿಗುರಲಿಲ್ಲ.

ಒಂದು ದಿನ ಅವನು ಗುಡಿಸಲಿನಲ್ಲಿ ಕುಳಿತಿದ್ದಾಗ, ಒಬ್ಬ ಮನುಷ್ಯನು ಹಾಡುತ್ತ ಕುದುರೆಯ ಮೇಲೆ ಸವಾರಿ ಮಾಡಿಕೊಂಡು ಹೋಗುತ್ತಿದ್ದಂತೆ ಕೇಳಿಸಿತು. ಅವನು ಎಂಥ ಮನುಷ್ಯನೋ ನೋಡೋಣವೆಂದು ದೇವ ಪುತ್ರನು ಹೊರಕ್ಕೆ ಬಂದನು. ಅಲ್ಲಿ ಒಳ್ಳೆಯ ಉಡುಪುತೊಟ್ಟು, ಚೆನ್ನಾಗಿ ತಡಿಲಗಾಮುಗಳನ್ನು ಹಾಕಿದ ಅಂದವಾದ ಕುದುರೆಯ ಮೇಲೆ ಹತ್ತಿ ಕೊಂಡಿದ್ದ ಗಟ್ಟಿಮುಟ್ಟಾಗಿದ್ದ ಒಬ್ಬ ಪ್ರಾಯದ ಆಳನ್ನು ಕಂಡನು

ದೇವಪುತ್ರನು ಅವನನ್ನು ನಿಲ್ಲಿಸಿ 'ನೀನು ಯಾರು ? ಎಲ್ಲಿಗೆ ಹೋಗು ತ್ತಿರುವೆ ?' ಎಂದು ಕೇಳಿದನು.

ಆ ಮನುಷ್ಯನು ಕಡಿವಾಣವನ್ನು ಎಳೆಯುತ್ತ 'ನಾನೊಬ್ಬ ದರೋಡೆ ಗಾರ ನಾನು ದಾರಿಗಳಲ್ಲಿ ಸುತ್ತಿ ಜನರನ್ನು ಕೊಲ್ಲುತ್ತಿರುತ್ತೇನೆ ಹೆಚ್ಚು ಜನರನ್ನು ಕೊಂದಂತೆಲ್ಲ ಹೆಚ್ಚು ಹೆಚ್ಚು ಹರ್ಷಗೊಂಡು ಹಾಡುತ್ತೇನೆ' ಎಂದು ಉತ್ತರ ಕೊಟ್ಟನು

ದೇವಪುತ್ರನಿಗೆ ಬಹಳ ದಿಗಿಲು ಬಡಿದು ಹೀಗೆ ಯೋಚಿಸಿದನು.

'ಇವನಂಥ ಮನುಷ್ಯನಲ್ಲಿರುವ ಪಾಪವನ್ನು ನಾಶಮಾಡುವುದು ಹೇಗೆ ? ತಾವಾಗಿಯೇ ನನ್ನ ಹತ್ತಿರ ಬಂದು ತಮ್ಮ ಪಾಪಗಳನ್ನು ಒಪ್ಪಿಸು ವವರ ಸಂಗಡ ಮಾತಾಡುವುದು ಸುಲಭ. ಇವನಾದರೋ ತಾನು ಮಾಡುವ ಪಾಪಗಳನ್ನೇ ಜಂಬದಿಂದ ಹೊಗಳಿಕೊಳ್ಳುತ್ತಾನೆ'

ಹಾಗೆಂದುಕೊಂಡು ಅವನಿಗೆ ಏನೂ ಹೇಳದೆ ಹಿಂದಿರುಗಿದನು. ಹಿಂದಿರುಗಿ, ಮತ್ತೆ

'ಈಗ ನಾನೇನು ಮಾಡಲಿ ? ಈ ದರೋಡೆಗಾರನು ಇಲ್ಲಿ ಸುತ್ತಾ ಡಲು ಪ್ರಾರಂಭಿಸಿ, ಜನರನ್ನೆಲ್ಲ ಹೆದರಿಸಿ ಓಡಿಸಿಬಿಡಬಹುದು. ಅವರು ನನ್ನ ಬಳಿಗೆ ಬರುವುದನ್ನು ಬಿಟ್ಟು ಬಿಡುತ್ತಾರೆ. ಇದರಿಂದ ಅವರಿಗೆ ದೊಡ್ಡ ನಷ್ಟ. ನಾನು ಹೇಗೆ ಜೀವಿಸಬೇಕೋ ತಿಳಿಯದಾಗುತ್ತದೆ' ಎಂದು ಯೋಚಿಸಿದನು.

ಆದ್ದರಿಂದ ದೇವಪುತ್ರನು ಹಿಂದಕ್ಕೆ ತಿರುಗಿ ಕಳ್ಳನನ್ನು ಕುರಿತು,

'ಇಲ್ಲಿ ನನ್ನ ಬಳಿಗೆ ಜನರು ಬರುವುದು ತಮ್ಮ ಪಾಪಗಳನ್ನು ಹೊಗಳಿಕೊಂಡು ಜಂಬ ಮಾಡುವುದಕ್ಕಲ್ಲ, ಪಶ್ಚಾತ್ತಾಪಪಟ್ಟು ಮನ್ನಿಸುವಂತೆ ಬೇಡಿಕೊಳ್ಳುವುದಕ್ಕೆ. ನಿನಗೆ ದೇವರ ಭಯವಿದ್ದರೆ ನಿನ್ನ ಪಾಪಗಳನ್ನು ನೆನೆದುಕೊಂಡು ತಪ್ಪಾಯಿತೆಂದು ಒಪ್ಪಿಕೊ ಆದರೆ ನಿನ್ನ ಹೃದಯದಲ್ಲಿ ಪಶ್ಚಾತ್ತಾಪವಿಲ್ಲದಿದ್ದರೆ ದೂರ ಹೊರಟುಹೋಗು, ಮತ್ತೆ ಇಲ್ಲಿಗೆ ಬರಬೇಡ ನನಗೆ ತೊಂದರೆಮಾಡಬೇಡ, ಜನರನ್ನು ಹೆದರಿಸಿ ನನ್ನಿಂದ ದೂರಕ್ಕೆ ಓಡಿಸಿಬಿಡಬೇಡ. ಇದರಂತೆ ನಡೆಯದೆ ಇದ್ದರೆ ದೇವರು ನಿನ್ನನ್ನು ಶಿಕ್ಷಿಸುತ್ತಾನೆ' ಎಂದನು.

ಕಳ್ಳನು ಉತ್ತರ ಕೊಟ್ಟನು

'ನಾನು ದೇವರಿಗೆ ಹೆದರುವುದಿಲ್ಲ. ನಿನ್ನ ಮಾತನ್ನು ನಾನು ಕೇಳುವುದಿಲ್ಲ. ನೀನೇನು ನನ್ನ ಯಜಮಾನನಲ್ಲ. ನೀನು ನಿನ್ನ ಸಾಧುವೃತ್ತಿಯಿಂದ ಜೀವಿಸುತ್ತೀಯ, ನಾನು ನನ್ನ ದರೋಡೆಯಿಂದ ಜೀವಿಸುತ್ತೇನೆ. ನಾವೆಲ್ಲರೂ ಜೀವಿಸಬೇಕು ನಿನ್ನ ಬಳಿಗೆ ಬರುವ ಮುದಿ ಹೆಂಗಸರಿಗೆ ನೀನು ಉಪದೇಶಮಾಡಬಹುದು ಆದರೆ ನನಗೆ ಉಪದೇಶಿಸುವಂಥದೇನೂ ನಿನ್ನಲ್ಲಿಲ್ಲ. ನೀನು ದೇವರನ್ನು ನನಗೆ ಜ್ಞಾಪಿಸಿದ್ದರಿಂದ ನಾಳೆ ಇಬ್ಬರನ್ನು ಹೆಚ್ಚಾಗಿ ಕೊಲ್ಲುತ್ತೇನೆ. ನಿನ್ನನ್ನೂ ನಾನು ಕೊಂದುಬಿಡಬಹುದಾಗಿದ್ದಿತು, ಆದರ ಈಗಲೇ ಕೈಕೆಸರುಮಾಡಿಕೊಳ್ಳುವುದಕ್ಕೆ ನನಗೆ ಇಷ್ಟವಿಲ್ಲ. ಇನ್ನು ಮುಂದೆ ನನ್ನ ದಾರಿಗೆ ಸುಳಿಯದಂತೆ ಎಚ್ಚರವಾಗಿರು!'

ಹೀಗೆ ಹೆದರಿಕೆಯ ಮಾತಾಡಿ ಕಳ್ಳನು ಹೊರಟುಹೋದನು. ಅವನು ಮತ್ತೆ ಹಿಂದಕ್ಕೆ ಬರಲಿಲ್ಲ. ಮತ್ತೆ ಎಂಟು ವರ್ಷಗಳವರೆಗೆ ದೇವಪುತ್ರನು ತೊಂದರೆಯಿಲ್ಲದೆ ವಾಸಮಾಡುತ್ತಿದ್ದನು.

೧೧

ಒಂದುದಿನ ರಾತ್ರಿ ದೇವಪುತ್ರನು ತನ್ನ ಕರಿಕಲು ತುಂಡುಗಳಿಗೆ ನೀರು ಹಾಕಿ, ಗುಡಿಸಲಿಗೆ ಹಿಂದಿರುಗಿ ಒಂದು ಕುಳಿತು ವಿಶ್ರಮಿಸಿಕೊಳ್ಳುತ್ತಾ

ಯಾರಾದರೂ ಬೇಗ ಬರುತ್ತಾರೋ ಏನೋ ಎಂಬ ಯೋಚನೆಯಿಂದ ಕಾಲುದಾರಿಯ ಕಡೆಗೇ ನೋಡುತ್ತಿದ್ದನು. ಆದರೆ ಆ ದಿನವೆಲ್ಲ ಒಬ್ಬರೂ ಬರಲೇ ಇಲ್ಲ ಒಂಟಿಯಾಗಿ ಬೇಸರಪಟ್ಟುಕೊಂಡು ಸಂಜೆಯುವರೆಗೂ ಕುಳಿತಿದ್ದನು ಆಗ ತನ್ನ ಹಿಂದಿನ ಜೀವನವನ್ನು ಕುರಿತು ಯೋಚಿಸತೊಡಗಿದನು ತಾನು ಸಾಧುವೃತ್ತಿಯಿಂದ ಹೊಟ್ಟೆಹೊರೆಯುತ್ತಿರುವುದಾಗಿ ಕಳ್ಳನು ತನ್ನನ್ನು ಆಡಿಕೊಂಡದ್ದು ನಿಜವಾಯಿತು, ತಾನು ಜೀವಿಸುತ್ತಿದ್ದ ರೀತಿ ಸರಿಯೇ ಅಲ್ಲವೇ ಎಂದು ಮನಸ್ಸಿನಲ್ಲಿಯೇ ಯೋಚಿಸಿದನು. 'ಸಾಧು ನನಗೆ ಹೇಗೆ ಜೀವಿಸೆಂದು ಕಟ್ಟುಮಾಡಿದನೋ ಹಾಗೆ ನಾನು ಜೀವಿಸುತ್ತಿಲ್ಲ ಸಾಧು ನನಗೆ ಒಂದು ವ್ರತವನ್ನು ವಿಧಿಸಿದನು, ನಾನು ಅದರಿಂದ ಖ್ಯಾತಿಯನ್ನು ಸಂಪಾದಿಸಿದ್ದಲ್ಲದೆ ಹೊಟ್ಟೆಯನ್ನೂ ಹೊರೆದುಕೊಳ್ಳುತ್ತಿದ್ದೇನೆ ಅದರ ಮೋಹದಲ್ಲಿ ಬಲವಾಗಿ ಸಿಕ್ಕಿಬಿದ್ದು, ಈಗ ಜನರು ನನ್ನ ಬಳಿಗೆ ಬರದೆ ಇರುವುದರಿಂದ ಬೇಜಾರುಪಟ್ಟುಕೊಳ್ಳುತ್ತಿದ್ದೇನೆ! ಅವರು ಬಂದಾಗಲೆಲ್ಲ ನನ್ನನ್ನು ಬಹು ಪವಿತ್ರ ಪುರುಷನೆಂದು ಹೊಗಳುವರಾದ್ದರಿಂದಲೇ ನಾನು ಸಂತೋಷಪಟ್ಟುಕೊಳ್ಳುವುದು ಹೀಗಲ್ಲ ಜೀವಿಸಬೇಕಾದದ್ದು. ಹೊಗಳಿಕೆಯ ಮೋಹ ನನ್ನನ್ನು ದಾರಿತಪ್ಪಿಸಿಬಿಟ್ಟಿದೆ. ನನ್ನ ಹಿಂದಿನ ಪಾಪಗಳಿಗೆ ಪ್ರಾಯಶ್ಚಿತ್ತ ಮಾಡಿಕೊಂಡಿಲ್ಲ ಅದಕ್ಕೆ ಬದಲಾಗಿ ಮತ್ತಷ್ಟು ಹೊಸ ಪಾಪಗಳನ್ನು ಕೂಡಿಸಿಕೊಂಡಿದ್ದೇನೆ ಜನರು ನನ್ನನ್ನು ಹುಡುಕಿ ಗೊತ್ತುಮಾಡಲಾಗದಂಥ ಮತ್ತೊಂದು ಕಾಡಿನ ಭಾಗಕ್ಕೆ ಹೋಗುತ್ತೇನೆ; ಅಲ್ಲಿ ನನ್ನ ಹಳೆಯ ಪಾಪಗಳಿಗೆ ಪ್ರಾಯಶ್ಚಿತ್ತವಾಗಬೇಕಾದರೆ ಹೇಗಿರಬೇಕೋ ಹಾಗೆ ಜೀವಿಸುತ್ತೇನೆ, ಹೊಸದಾಗಿ ಯಾವ ಪಾಪವನ್ನು ಮಾಡುವುದಿಲ್ಲ.' ಎಂದುಕೊಂಡನು.

ಹೀಗೆಂದು ನಿರ್ಧರಿಸಿ ದೇವಪುತ್ರನು ಒಂದು ಚೀಲಕ್ಕೆ ಒಣಗಿದ ರೊಟ್ಟಿಗಳನ್ನು, ತುಂಬಿಕೊಂಡು ಒಂದು ಗುದ್ದಲಿಯನ್ನು ತೆಗೆದುಕೊಂಡು ಗುಡಿಸಲನ್ನು ಬಿಟ್ಟು ಯಾರೂ ಸುಳಿಯದಂಥ ಸ್ಥಳದಲ್ಲಿ ತಾನು ಕಂಡಿದ್ದ

ಒಂದು ಕಣಿವೆಯಲ್ಲಿ ಒಂದು ಗವಿಯನ್ನು ತೋಡಿ ಜನರ ಕಣ್ಣಿಗೆ ಮರೆಯಾಗಿ ಅಡಗಿಕೊಳ್ಳಬೇಕಂದು ಅಲ್ಲಿಗೆ ಹೊರಟನು.

ಚೀಲ ಗುದ್ದಲಿಗಳನ್ನು ಸಂಗಡ ತೆಗೆದುಕೊಂಡು ಅವನು ಹೋಗುತ್ತಾ ಇರುವಾಗ ಕಳ್ಳನು ತನ್ನ ಕಡೆಗೆ ಸವಾರಿಮಾಡಿಕೊಂಡು ಬರುತ್ತಿರುವುದನ್ನು ಕಂಡನು. ದೇವಪುತ್ರನಿಗೆ ದಿಗಿಲಾಯಿತು ಓಡಿಹೋಗುವುದಕ್ಕೆ ಪ್ರಾರಂಭಿಸಿದನು, ಆದರೆ ಕಳ್ಳನು ಹಿಂದಿನಿಂದ ಓಡಿಬಂದು ಅವನ ಬಳಿಗೆ ಸೇರಿಬಿಟ್ಟನು.

'ನೀನು ಎಲ್ಲಿಗೆ ಹೋಗುತ್ತಿದ್ದಿಯಾ?' ಎಂದು ಕಳ್ಳನು ಕೇಳಿದನು.

ಜನರ ಕಣ್ಣಿಗೆ ಮರೆಯಾಗಿ ದೂರ ಹೋಗಿ ಯಾರೊಬ್ಬರೂ ತನ್ನ ಬಳಿಗೆ ಬರುವುದಕ್ಕೆ ಆಗದಂಥ ಒಂದು ಕಡೆಯಲ್ಲಿ ವಾಸಮಾಡಬೇಕೆಂದು ಇಷ್ಟವಿದೆಯೆಂದು ದೇವಪುತ್ರನು ಹೇಳಿದನು. ಇದನ್ನು ಕೇಳಿ ಕಳ್ಳನಿಗೆ ಆಶ್ಚರ್ಯವಾಯಿತು.

'ಜನಗಳು ನಿನ್ನನ್ನು ನೋಡುವುದಕ್ಕೆ ಬರದೆ ಇದ್ದರೆ ನೀನು ಏನು ತಿಂದು ಜೀವಿಸುತ್ತೀಯು?' ಎಂದು ಕೇಳಿದನು.

ದೇವಪುತ್ರನು ಇದನ್ನು ಯೋಚಿಸಿ ಕೂಡ ಇರಲಿಲ್ಲ ಆದರೆ ಕಳ್ಳನ ಪ್ರಶ್ನೆ ಆಹಾರವು ಅವಶ್ಯಕವಾಗುವುದೆಂಬ ಸಂಗತಿಯನ್ನು ನೆನಪಿಗೆ ತಂದಿತು.

'ದೇವರು ದಯಮಾಡಿ ಏನು ಕೊಡುತ್ತಾನೋ ಅದನ್ನು' ಎಂದು ಉತ್ತರಕೊಟ್ಟನು.

ಕಳ್ಳನು ಏನೂ ಹೇಳದೆ ಮುಂದೆ ಹೊರಟನು.

'ಅವನ ಸ್ವಂತ ಜೀವನದ ವಿಷಯವಾಗಿ ಅವನಿಗೆ ಏನನ್ನೂ ನಾನೇಕ ಹೇಳದೆ ಹೋದೆ? ಈಗ ಅವನು ಪಶ್ಚಾತ್ತಾಪಪಡಬಹುದು. ಇವತ್ತು ಅವನ ಮನಸ್ಸು ಮೃದುವಾಗಿರುವಂತಿದೆ; ನನ್ನನ್ನು ಕೊಲ್ಲುವುದಾಗಿ ಹೆದರಿಸಲಿಲ್ಲ' ಎಂದು ದೇವಪುತ್ರನು ಯೋಚಿಸಿದನು. ಹಾಗೆ ಯೋಚಿಸಿ ಕಳ್ಳನನ್ನು ಕುರಿತು,

'ನೀನಿನ್ನೂ ನಿನ್ನ ಪಾಪಗಳಿಗಾಗಿ ಪಶ್ಚಾತ್ತಾಪ ಪಡಬೇಕಾದದ್ದು ಉಳಿದಿದೆ. ದೇವರಿಂದ ನೀನು ತಪ್ಪಿಸಿಕೊಳ್ಳಲಾರೆ' ಎಂದು ಗಟ್ಟಿಯಾಗಿ ಕೂಗಿದನು

ಕಳ್ಳನು ಕುದುರೆಯನ್ನು ಹಿಂದಿರುಗಿಸಿ, ಸೊಂಟದಿಂದ ಒಂದು ಚೂರಿಯನ್ನು ಹಿರಿದುಕೊಂಡು ಅದರಿಂದ ಸಾಧುವನ್ನು ಹೆದರಿಸಿದನು. ದೇವಪುತ್ರನಿಗೆ ಭಯವಾಯಿತು, ಕಾಡಿನೊಳಕ್ಕೆ ಇನ್ನೂ ಮುಂದಕ್ಕೆ ಓಡಿಹೋದನು.

ಕಳ್ಳನು ಅವನನ್ನು ಓಡಿಸಿಕೊಂಡು ಹೋಗಲಿಲ್ಲ, ಆದರೆ 'ಎಲಾ, ಮುದುಕಾ, ಎರಡುಸಲ ನಿನ್ನನ್ನು ಬಿಟ್ಟಿದ್ದೇನೆ. ಇನ್ನೊಂದು ಸಲ ನನಗೆ ಅಡ್ಡಬಂದರೆ ಆಗ ನಿನ್ನನ್ನು ಕೊಂದೇ ಬಿಡುತ್ತೇನೆ' ಎಂದು ಗಟ್ಟಿಯಾಗಿ ಕೂಗಿದನು.

ಹೀಗೆ ಹೇಳಿ ಅವನು ಹೊರಟುಹೋದನು. ಸಂಜೆ ದೇವಪುತ್ರನು ನೀರು ಹುಯ್ಯುವುದಕ್ಕೆ ಹೋದಾಗ, ಅವುಗಳಲ್ಲಿ ಒಂದು ಚಿಗುರಿತ್ತು; ಅದರಿಂದ ಒಂದು ಪುಟ್ಟ ಸೇಬಿನ ಗಿಡ ಬೆಳೆದು ಬರುತ್ತಿದ್ದಿತು.

೧೨

ದೇವಪುತ್ರನು ಯಾರಿಗೂ ಕಾಣದಂತೆ ಅಡಗಿಕೊಂಡ ಬಳಿಕ ಒಬ್ಬನೇ ಒಂಟಿಯಾಗಿ ಜೀವಿಸುತ್ತಿದ್ದನು. ತಾನು ತಂದಿದ್ದ ರೊಟ್ಟಿಯೆಲ್ಲ ಮುಗಿದು ಹೋಗಲು 'ಈಗ, ನಾನು ಹೋಗಿ ತಿನ್ನುವುದಕ್ಕೆ ತಕ್ಕ ಕೆಲವು ಬೇರುಗಳನ್ನು ಹುಡುಕಬೇಕು' ಎಂದುಕೊಂಡನು. ಅವನಿನ್ನೂ ದೂರ ಹೋಗಿರಲೇ ಇಲ್ಲ, ಅಷ್ಟರಲ್ಲಿ ಒಂದು ಮರದ ಕೊಂಬೆಯಲ್ಲಿ ನೇತಾಡುತ್ತಿದ್ದ ಒಂದು ರೊಟ್ಟಿಯ ಚೀಲವನ್ನು ಕಂಡನು. ಅದನ್ನು ಕೆಳಕ್ಕೆ ತೆಗೆದುಕೊಂಡು ಅದು ಮುಗಿಯುವ ವರೆಗೂ ಅದರಿಂದಲೇ ಜೀವ ಇಟ್ಟುಕೊಂಡಿದ್ದನು.

ಅದನ್ನೆಲ್ಲ ತಿಂದು ಮುಗಿಸಿದ ಮೇಲೆ ಅದೇ ಕೊಂಬೆಯಲ್ಲಿ ಮತ್ತೊಂದು ಚೀಲವನ್ನು ಕಂಡನು. ಹೀಗೆಯೇ ಅವನು ವಾಸಮಾಡು

ತ್ತಿದ್ದನು. ಕಳ್ಳನ ಹೆದರಿಕೆಯೊಂದೇ ಅವನಿಗಿದ್ದ ತೊಂದರೆ. ಕಳ್ಳನು ಹೋಗು ತ್ತಿರುವ ಸದ್ದು ಕೇಳಿಸಿದಾಗಲೆಲ್ಲ

'ನನ್ನ ಪಾಪಗಳಿಗೆ ಪ್ರಾಯಶ್ಚಿತ್ತಮಾಡಿಕೊಳ್ಳುವ ಮೊದಲೇ ಅವನು ನನ್ನನ್ನು ಕೊಂದುಬಿಡಬಹು' ಎಂದು ಯೋಚಿಸಿ ಅಡಗಿಕೊಳ್ಳು ತ್ತಿದ್ದನು.

ಇದೇ ರೀತಿಯಲ್ಲಿ ಅವನು ಮತ್ತೆ ಹತ್ತುವರ್ಷ ಜೀವಿಸಿದನು. ಒಂದು ಸೇಬಿನ ಗಿಡ ಬೆಳೆಯುತ್ತಾ ಇದ್ದಿತು, ಉಳಿದೆರಡು ಮೋಟುಗಳೂ ಇದ್ದ ಹಾಗೆಯೇ ಇದ್ದವು.

ಒಂದುದಿನ ದೇವಪುತ್ರನು ಬೆಳಗ್ಗೆ ಹೊತ್ತಿಗೆ ಮುಂಚೆ ಎದ್ದು ತನ್ನ ಕೆಲಸಕ್ಕೆ ಹೋದನು. ಮೋಟುಗಳ ಸುತ್ತಲೂ ನೆಲವನ್ನು ಚೆನ್ನಾಗಿ ನೆನಸುವ ಹೊತ್ತಿಗೆ ಬಹಳ ದಣಿದು ಹೋಗಿ ವಿಶ್ರಾಂತಿಗಾಗಿ ಕುಳಿತುಕೊಂಡನು. ಅಲ್ಲಿ ಕೂತಿದ್ದಾಗ ತನ್ನಲ್ಲಿ ತಾನು ಹೀಗೆ ಯೋಚಿಸಿದನು

'ನಾನು ಪಾಪಮಾಡಿದ್ದೇನೆ, ಸಾವಿಗೆ ಹೆದರಿಬಿಟ್ಟಿದೇನೆ. ಮರಣ ದಿಂದಲೇ ನನ್ನ ಪಾಪಗಳನ್ನು ಪರಿಹರಿಸಿಕೊಳ್ಳಬೇಕೆಂದು ದೇವರ ಇಷ್ಟ ವಿದ್ದರೂ ಇರಬಹುದು.'

ಈ ಯೋಚನೆ ಮನಸ್ಸಿಗೆ ಹೊಳೆದದ್ದೇ ತಡ, ಕಳ್ಳನು ಏನನ್ನೋ ಒಯ್ಯುತ್ತ ಕುದುರೆಯ ಮೇಲೆ ಬರುತ್ತಿರುವುದು ಕೇಳಿಸಿತು. ದೇವಪುತ್ರನು ಇದನ್ನು ಕೇಳಿದಾಗ,

'ಒಳ್ಳೆಯದಾಗಲಿ ಕೆಟ್ಟದಾಗಲಿ, ದೇವರಿಂದಲ್ಲದೆ ಮತ್ತೆ ಯಾರೊಬ್ಬ ರಿಂದಲೂ ನನಗೆ ಉಂಟಾಗುವುದಿಲ್ಲ' ಎಂದು ಯೋಚಿಸಿದನು.

ಆಗ ಅವನು ಕಳ್ಳನನ್ನು ಕಾಣುವುದಕ್ಕೆ ಹೋದನು. ಕಳ್ಳನು ಒಬ್ಬನೇ ಇರಲಿಲ್ಲ, ಅವನ ಹಿಂದೆ ಜೀನಿನ ಮೇಲೆ ಮತ್ತೊಬ್ಬ ಮನುಷ್ಯನು ಕುಳಿತಿದ್ದನು. ಅವನ ಕೈಕಾಲು ಕಟ್ಟಿ ಬಾಯಿಗೆ ಬಟ್ಟೆ ತುರುಕಿದ್ದಿತು. ಅವನೇನೂ ಮಾಡುತ್ತಿರಲಿಲ್ಲ, ಆದರೂ ಕಳ್ಳನು ಅವನನ್ನು ಬಹು ಕೋಪ

ದಿಂದ ಬಯ್ಯುತ್ತಿದ್ದನು ದೇವಪುತ್ರನು ಮುಂದೆ ಹೋಗಿ ಕುದುರೆಯ ಎದುರಿಗೆ ನಿಂತನು.

'ಈ ಮನುಷ್ಯನನ್ನು ಎಲ್ಲಿಗೆ ತೆಗೆದುಕೊಂಡು ಹೋಗುತ್ತಿದ್ದೀಯಾ?' ಎಂದು ಕೇಳಿದನು.

'ಕಾಡಿನೊಳಕ್ಕೆ ಇವನೊಬ್ಬ ವರ್ತಕನ ಮಗ ಇವರಪ್ಪನ ದುಡ್ಡನ್ನು ಎಲ್ಲಿ ಮುಚ್ಚಿಟ್ಟಿದೆಯೋ ಹೇಳಲೊಲ್ಲನು. ಅದನ್ನು ನನಗೆ ಹೇಳುವವರೆಗೂ ಅವನನ್ನು ಕೋರಡದಿಂದ ಹೊಡೆಯುತ್ತೇನೆ' ಎಂದು ಕಳ್ಳನು ಉತ್ತರ ಕೊಟ್ಟನು.

ಹೀಗೆ ಹೇಳಿ ಅವನು ತನ್ನ ಕುದುರೆಯನ್ನು ಚಬುಕಾಯಿಸಿದನು. ಆದರೆ ದೇವಪುತ್ರನು ಕಡಿವಾಣವನ್ನು ಭದ್ರವಾಗಿ ಹಿಡಿದುಕೊಂಡು ಅವನು ಮುಂದೆಹೋಗಲು ಅವಕಾಶಕೊಡಲಿಲ್ಲ.

'ಈ ಮನುಷ್ಯನನ್ನು ಬಿಟ್ಟುಬಿಡು' ಎಂದನು.

ಕಳ್ಳನಿಗೆ ಸಿಟ್ಟು ಹತ್ತಿತು, ಹೊಡೆಯುವುದಕ್ಕೆ ಕೈಯೆತ್ತಿದನು.

'ಇವನಿಗೆ ನಾನು ಕೊಡಬೇಕಂದಿರುವುದರ ರುಚಿ ಬೇಕಾಗಿದೆಯೋ? ನಿನ್ನನ್ನು ಕೊಲ್ಲುವೆನೆಂದು ನಿನಗೆ ನಾನು ಹೇಳಿಲ್ಲವೇ? ದಾರಿ ಬಿಡು'

ದೇವಪುತ್ರನು ಹೆದರಲಿಲ್ಲ.

'ನೀನು ಹೋಗಲಾಗದು. ನಾನು ನಿನಗೆ ಹೆದರುವುದಿಲ್ಲ. ದೇವರು ಒಬ್ಬನ ಹೊರತು ಮತ್ತಾ ಯಾರಿಗೂ ಹೆದರುವುದಿಲ್ಲ. ಅಲ್ಲದೆ ನಾನು ನಿನ್ನನ್ನು ಹೋಗುವುದಕ್ಕೆ ಬಿಡಲಾಗದೆಂದು ಅವನ ಇಷ್ಟ. ಈ ಮನುಷ್ಯನ ಕಟ್ಟನ್ನು ಬಿಚ್ಚಿ ಬಿಡು' ಎಂದನು.

ಕಳ್ಳನು ಹುಬ್ಬು ಗಂಟಿಕ್ಕಿದನು, ತನ್ನ ಚೂರಿಯನ್ನು ಹಿರಿದು ಕೊಂಡು ವರ್ತಕನ ಮಗನನ್ನು ಕಟ್ಟಿದ್ದ ಹಗ್ಗವನ್ನು ಕತ್ತರಿಸಿ ಅವನನ್ನು ಬಿಟ್ಟುಬಿಟ್ಟನು.

'ತೊಲಗಿ, ಆಚೆಗೆ, ಇಬ್ಬರೂ. ಮತ್ತೆ ನನ್ನ ದಾರಿಗೆ ಅಡ್ಡ ಬಂದೀರಿ-ಜೋಕೆ'! ಎಂದನು.

ವರ್ತಕನ ಮಗನು ಕೆಳಕ್ಕೆ ಕುಪ್ಪಳಿಸಿ ಓಡಿ ಹೊರಟುಹೋದನು. ಕಳ್ಳನು ಕುದುರೆಯನ್ನು ಓಡಿಸುವುದರಲ್ಲಿದ್ದನು, ಆದರೆ ದೇವಪುತ್ರನು ಮತ್ತೆ ಅವನನ್ನು ತಡೆದನು; ಪಾಪಜೀವನವನ್ನು ಬಿಟ್ಟುಬಿಡಬೇಕೆಂಬ ವಿಚಾರವಾಗಿ ಮತ್ತೆ ಅವನಿಗೆ ಹೇಳತೊಡಗಿದನು ಕಳ್ಳನು ಕೊನೆಯವರೆಗೂ ಸದ್ದುಮಾಡದೆ ಎಲ್ಲವನ್ನೂ ಕೇಳಿದನು, ಕೇಳಿ ಮಾತಾಡದೆ ಮುಂದಕ್ಕೆ ಹೊರಟುಹೋದನು.

ಮರುದಿನ ಬೆಳಿಗ್ಗೆ ದೇವಪುತ್ರನು ಮೋಟುಗಳಿಗೆ ನೀರು ಹುಯ್ಯಲು ಹೋದನು. ಹೋಗಿ ನೋಡಿದರೆ, ಎರಡನೆಯ ಮೋಟು ಚಿಗುರಿದ್ದಿತು. ಎರಡನೆಯದೊಂದು ಎಳೆಯ ಸೇಬಿನ ಗಿಡ ಬೆಳೆಯುತ್ತಿದ್ದಿತು.

೧೩

ಮತ್ತೆ ಹತ್ತು ವರ್ಷ ಕಾಲ ಕಳೆಯಿತು. ಒಂದು ದಿನ ದೇವ ಪುತ್ರನು ಸುಮ್ಮನೆ ಕುಳಿತುಕೊಂಡಿದ್ದನು ಅವನಿಗೆ ಯಾವುದರ ಅಪೇಕ್ಷೆಯೂ ಇರಲಿಲ್ಲ, ಯಾವುದರ ಹೆದರಿಕೆಯೂ ಇರಲಿಲ್ಲ, ಹೃದಯವು ಆನಂದದಿಂದ ತುಂಬಿದ್ದಿತು.

'ದೇವರು ಮನುಷ್ಯರಿಗೆ ಎಷ್ಟು ದಯೆ ತೋರಿಸುತ್ತಿದಾನೆ! ಆದರೂ ಅನವಶ್ಯಕವಾಗಿ ಅವರು ತಮಗೆ ತಾವೇ ಹಿಂಸೆಮಾಡಿಕೊಳ್ಳುತ್ತಾರಲ್ಲಾ! ಸುಖವಾಗಿ ಜೀವಿಸುವುದಕ್ಕೆ ಅವರಿಗೆ ಏನು ಅಡ್ಡಿಯಾಗಿದೆ?' ಎಂದು ಯೋಚಿಸುತ್ತಿದ್ದನು.

ಮನುಷ್ಯನಲ್ಲಿರುವ ಪಾಪಗಳೆಲ್ಲವನ್ನೂ, ಅವರು ತಾವಾಗಿಯೇ ತಂದುಕೊಳ್ಳುವ ತೊಂದರಗಳನ್ನೂ ನೆನೆದು ಅವನ ಹೃದಯವು ಕರುಣೆಯಿಂದ ಕರಗಿತು.

'ನಾನು ಈಗಿನಂತೆ ಜೀವಿಸುತ್ತಿರುವುದು ತಪ್ಪು, ನಾನು ಕಲಿತು ಕೊಂಡಿರುವುದನ್ನು ಇತರರಿಗೂ ಹೋಗಿ ಕಲಿಸಿಕೊಡಬೇಕು.' ಎಂದು ತನಗೆ ತಾನೇ ಹೇಳಿಕೊಂಡನು.

ಅವನು ಹೀಗೆ ಯೋಚಿಸುತ್ತಿರುವಷ್ಟರಲ್ಲಿಯೇ ಕಳ್ಳನು ಬರುತ್ತಿರುವ ಸದ್ದು ಕೇಳಿಸಿತು.

'ಅವನ ಸಂಗಡ ಮಾತಾಡಿ ಉಪಯೋಗವಿಲ್ಲ, ಅವನು ತಿಳಿದುಕೊಳ್ಳುವುದಿಲ್ಲ' ಎಂದು ಯೋಚಿಸಿ ಅವನಿಗೆ ಅಡ್ಡಿ ಮಾಡದೆ ಬಿಟ್ಟುಬಿಟ್ಟನು.

ಅದು ಅವನ ಮೊದಲನೆಯ ಯೋಚನೆ ಆದರೆ ಕೂಡಲೆ ಮನಸ್ಸು ಬದಲಾಯಿಸಿ ರಸ್ತೆಯೊಳಕ್ಕೆ ಹೋದನು ಕಳ್ಳನು ಮುಂಕಾಗಿ ನೋಟವನ್ನು ಕೆಳಕ್ಕೆ ತಗ್ಗಿಸಿ ಸವಾರಿ ಮಾಡುತ್ತಿದ್ದನು ದೇವಪುತ್ರನು ಅವನ ಕಡೆಗೆ ನೋಡಿದನು, ಅವನ ಮೇಲೆ ಮರುಕಗೊಂಡು ಅವನ ಬಳಿಗೆ ಓಡಿ ಹೋಗಿ ಅವನ ಮೊಳಕಾಲ ಮೇಲೆ ಕೈಯಿಟ್ಟನು.

ಇಟ್ಟು, 'ಅಣ್ಣಾ, ಅಣ್ಣಾ, ನಿನ್ನ ಜೀವದ ಮೇಲೆ ಸ್ವಲ್ಪ ದಯ ತೋರಿಸಪ್ಪಾ! ನಿನ್ನಲ್ಲಿ ದೇವರ ಅಂಶ ನೆಲಸಿದೆ ನೀನೂ ಸಂಕಟಪಡುತ್ತೀಯೆ, ಇತರರನ್ನೂ ಸಂಕಟಪಡಿಸುತ್ತೀಯೆ, ಮುಂದಕ್ಕೆ ಸಂಕಟವನ್ನು ಹೆಚ್ಚು ಹೆಚ್ಚಾಗಿ ಕೂಡಿಡುತ್ತೀಯೆ. ಹಾಗಾದರೂ ದೇವರು ನಿನ್ನನ್ನು ಪ್ರೀತಿಸುತ್ತಾನೆ; ಪ್ರೀತಿಸಿ ಉತ್ತಮಸುಖಸೌಭಾಗ್ಯಗಳನ್ನು ಸಿದ್ಧಗೊಳಿಸುತ್ತಾನೆ. ಪೂರ್ತಿಯಾಗಿ ಹಾಳಾಗಿ ಹೋಗುವಂತೆ ಮಾಡಿಕೊಳ್ಳಬೇಡ. ನಿನ್ನ ಜೀವನವನ್ನು ತಿದ್ದಿಕೊ' ಎಂದನು.

ಕಳ್ಳನು ಹುಬ್ಬುಗಂಟಿಕ್ಕಿ ಬೇರೆ ಕಡೆಗೆ ಮುಖ ತಿರುಗಿಸಿದನು.

'ನನ್ನ ಹಾಳತಕ್ಕೆ ನನ್ನನ್ನು ಬಿಟ್ಟುಬಿಡು' ಎಂದನು

ಆದರೆ ದೇವಪುತ್ರನು ಕಳ್ಳನನ್ನು ಇನ್ನೂ ಭದ್ರವಾಗಿ ಹಿಡಿದುಕೊಂಡು ಅಳುವುದಕ್ಕೆ ಪ್ರಾರಂಭಿಸಿದನು.

ಆಗ ಕಳ್ಳನು ಕಣ್ಣುಗಳನ್ನು ಮೇಲಕ್ಕೆ ಎತ್ತಿ ದೇವಪುತ್ರನನ್ನು ನೋಡಿದನು. ಬಹಳ ಹೊತ್ತಿನವರೆಗೂ ನೋಡುತ್ತಿದ್ದು, ಕಡೆಗೆ ಕುದುರೆಯಿಂದಿಳಿದು, ದೇವಪುತ್ರನ ಕಾಲಿಗೆ ಬಿದ್ದನು.

'ಮುದುಕ, ನೀನು ನನ್ನನ್ನು ಜಯಿಸಿಬಿಟ್ಟೆ. ಇಪ್ಪತ್ತು ವರ್ಷಗಳ

ವರೆಗೂ ನಾನು ನಿನ್ನನ್ನು ಎದುರಿಸಿದ್ದೇನೆ, ಆದರೆ ಈಗ ನನ್ನನ್ನು ಗೆದ್ದು ವಶಪಡಿಸಿಕೊಂಡು ಬಿಟ್ಟೆ. ನನ್ನನ್ನು ನಿನಗೆ ಮನಸ್ಸು ಬಂದಂತೆ ಮಾಡು, ನನ್ನ ಮೇಲೆ ನನಗೆ ಸ್ವಲ್ಪವೂ ಶಕ್ತಿ ಉಳಿದಿಲ್ಲ ಮೊದಲು ನೀನು ನನ್ನ ಮನಸ್ಸು ತಿರುಗಿಸಲು ಯತ್ನಿಸಿದಾಗ, ಅದರಿಂದ ನನಗೆ ಕೋಪ ಮಾತ್ರ ಹೆಚ್ಚಾಯಿತು. ಜನರ ಕಣ್ಣಿಗೆ ಮರೆಯಾಗಿ ನೀನು ಅಡಗಿಕೊಂಡಾಗ ಮಾತ್ರ, ನಿನ್ನ ಮಾತುಗಳನ್ನು ಕುರಿತು ಯೋಚಿಸತೊಡಗಿದೆನು, ಏಕೆಂದರ ನಿನಗೋಸ್ಕರ ನೀನೇನನ್ನೂ ಕೇಳುತ್ತಿರಲಿಲ್ಲವೆಂದು ಆಗ ನನಗೆ ಗೊತ್ತಾಯಿತು. ಅವತ್ತಿನಿಂದಲೂ ನಿನಗೆ ನಾನು ಆಹಾರವನ್ನು ತರುತ್ತಿದ್ದೆನು, ತಂದು ಮರಕ್ಕೆ ನೇತು ಹಾಕುತ್ತಿದ್ದೆನು

ಆಗ ಹೆಂಗಸು ತನ್ನ ಬಟ್ಟೆಯನ್ನು ಒಗೆದು ಶುಚಿಮಾಡಿಕೊಂಡ ಮೇಲೆಯೇ ಮೇಜವನ್ನು ಶುಚಿಮಾಡಲು ಸಾಧ್ಯವಾಯಿತೆಂಬುದು ದೇವ ಪುತ್ರನಿಗೆ ನೆನಪಾಯಿತು ಅದೇ ರೀತಿಯಲ್ಲಿ ಅವನು ತನ್ನ ಸ್ವಂತಕ್ಕಾಗಿ ಯೋಚಿಸುವುದನ್ನು ನಿಲ್ಲಿಸಿ ತನ್ನ ಹೃದಯವನ್ನು ಶುದ್ಧಿ ಮಾಡಿಕೊಂಡ ಬಳಿಕವೇ ಇತರರ ಹೃದಯದ ಕೊಳೆಯನ್ನು ತೊಳೆದು ಶುದ್ಧಿಮಾಡಲು ಸಮರ್ಥನಾದನು.

ಕಳ್ಳನು ಮುಂದುವರಿಸಿದನು

'ನೀನು ಸಾವಿಗೆ ಹೆದರದೆ ಇದ್ದದ್ದನ್ನು ಕಂಡಾಗ ನನ್ನ ಮನಸ್ಸು ತಿರುಗಿತು.'

ಆಗ ದೇವಪುತ್ರನಿಗೆ ಚಕ್ರವನ್ನು ಮಾಡುತ್ತಿದ್ದವರು ಮರದ ತುಂಡನ್ನು ಭದ್ರವಾಗಿ ನಿಲ್ಲಿಸುವವರೆಗೂ ಚಕ್ರದ ಮರವನ್ನು ಬಗ್ಗಿಸಲಾರದೆ ಹೋದದ್ದು ನೆನಪಾಯಿತು. ಹಾಗೆಯೇ ಅವನೂ ಸಾವಿನ ಭಯವನ್ನು ತೊರೆದು ತನ್ನ ಜೀವವನ್ನು ದೇವರಲ್ಲಿ ಭದ್ರವಾಗಿ ನೆಲೆಗೊಳಿಸುವವರೆಗೂ ಅಂಕೆಗೆ ಸಿಕ್ಕದ ಈ ಮನುಷ್ಯನ ಹೃದಯವನ್ನು ಬಗ್ಗಿಸಲಾಗಲಿಲ್ಲ.

'ಆದರೆ, ನನ್ನಲ್ಲಿ ಮರುಕಗೊಂಡು ನನಗಾಗಿ ನೀನು ಅತ್ತು

ಗೋಳಾಡುವವರೆಗೂ ನನ್ನ ಹೃದಯ ಪೂರ್ತಿಯಾಗಿ ಕರಗಲಿಲ್ಲ' ಎಂದು ಕಳ್ಳನು ಹೇಳಿದನು

ದೇವಪುತ್ರನು ಆನಂದದಿಂದ ತುಂಬಿ ಕಳ್ಳನನ್ನು ಮರದ ತೋಟುಗಳ ಬಳಿಗೆ ಕರೆದುಕೊಂಡು ಹೋದನು ಅವರು ಅಲ್ಲಿಗೆ ಹೋದಾಗ ಮೂರನೆಯ ತೋಟಿನಿಂದ ಒಂದು ಸೇಬಿನ ಸಸಿ ಚಿಗುರುತ್ತಿದ್ದುದನ್ನು ಕಂಡರು ಆಗ ದನದ ಮಂದೆಯವರು ಬೆಂಕಿ ಚೆನ್ನಾಗಿ ಉರಿಯುವವರೆಗೂ ಹಸಿಯ ಕಡ್ಡಿಗಳನ್ನು ಹೊತ್ತಿಸಲಾಗಲಿಲ್ಲವೆಂಬುದನ್ನು ಜ್ಞಾಪಿಸಿಕೊಂಡನು. ಅವನ ಹೃದಯವು ಪ್ರೇಮಜ್ಯೋತಿಯಿಂದ ಚೆನ್ನಾಗಿ ಬೆಳಗಿದಾಗಲೇ ಇತರರ ಹೃದಯವೂ ಅದರಿಂದ ಬೆಳಗತೊಡಗಿತು.

ಕಟ್ಟಕಡೆಗೆ ತನ್ನ ಪಾಪಗಳೆಲ್ಲಕ್ಕೂ ಪ್ರಾಯಶ್ಚಿತ್ತ ಮಾಡಿಕೊಂಡಂತಾಯಿತೆಂದು ದೇವಪುತ್ರನು ಆನಂದಭರಿತನಾದನು.

ಅವನು ಇದೆಲ್ಲವನ್ನೂ ಕಳ್ಳನಿಗೆ ಹೇಳಿ ಪ್ರಾಣಬಿಟ್ಟನು. ಕಳ್ಳನು ಅವನನ್ನು ಹೂಳಿದನು ದೇವಪುತ್ರನು ತನಗೆ ಕಟ್ಟುಮಾಡಿದಂತೆ, ತನಗೆ ಅವನು ಉಪದೇಶ ಮಾಡಿದ್ದನ್ನು ಇತರರಿಗೆ ಉಪದೇಶಮಾಡುತ್ತ ಆ ಕಳ್ಳನು ಜೀವಿಸುತ್ತಿದ್ದನು.

---

# ಪಶ್ಚಾತ್ತಾಪಿಯಾದ ಪಾಪಿ



ಒಂದಾನೊಂದು ಕಾಲದಲ್ಲಿ ಒಬ್ಬ ಮನುಷ್ಯನು ಎಪ್ಪತ್ತು ವರ್ಷದ ವರೆಗೂ ಈ ಪ್ರಪಂಚದಲ್ಲಿ ಜೀವಿಸುತ್ತಿದ್ದನು. ಅಷ್ಟು ಕಾಲವೂ ಅವನು ಪಾಪದಲ್ಲಿಯೇ ಬದುಕಿದ್ದನು ಅವನು ಕಾಹಿಲೆ ಬಿದ್ದನು, ಆಗಲೂ ಪಶ್ಚಾತ್ತಾಪಪಡಲಿಲ್ಲ. ಕಟ್ಟಕಡೆಯ ಕ್ಷಣದಲ್ಲಿ, ಸಾಯುತ್ತಿದ್ದಾಗ ಮಾತ್ರ, ಅಳುತ್ತ,

'ಒಡೆಯಾ, ನನ್ನನ್ನು ಮನ್ನಿಸು, ಶಿಲುಬೆಯ ಮೇಲಿನ ಕಳ್ಳನನ್ನು ಮನ್ನಿಸಿದಂತೆ ನನ್ನನ್ನೂ ಮನ್ನಿಸು' ಎಂದನು

ಅವನು ಹೀಗನ್ನುತ್ತಿದ್ದ ಹಾಗೆಯೇ ಅವನ ಜೀವ ಶರೀರವನ್ನು ಬಿಟ್ಟುಹೋಯಿತು ಆಮೇಲೆ ಪಾಪಿಯ ಜೀವ ದೇವರಲ್ಲಿ ಭಕ್ತಿಯನ್ನು ಹೊಂದಿ, ಅವನ ದಯೆಯಲ್ಲಿ ನಂಬಿಕೆಯಿಟ್ಟು, ಸ್ವರ್ಗದ ಬಾಗಿಲಿಗೆ ಹೋಗಿ ತನ್ನನ್ನೂ ಸ್ವರ್ಗರಾಜ್ಯದೊಳಕ್ಕೆ ಸೇರಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತ ಬಾಗಿಲನ್ನು ತಟ್ಟಿತು.

ಬಳಿಕ ಒಂದು ದನಿ ಬಾಗಿಲಿನೊಳಗಿನಿಂದ ಮಾತಾಡಿತು.

'ಸ್ವರ್ಗದ ಬಾಗಿಲನ್ನು ತಟ್ಟುತ್ತಿರುವ ಆ ಮನುಷ್ಯ ಎಂಥವನು? ಅವನು ತಾನು ಬದುಕಿದ್ದಾಗ ಎಂಥೆಂಥ ಕೆಲಸಗಳನ್ನು ಮಾಡಿದನು?' ಎಂದು ಕೇಳಿತು.

ದೂರುವವನ ದನಿ ಆ ಮನುಷ್ಯನ ಕೆಟ್ಟಕೆಲಸಗಳನ್ನೆಲ್ಲ ವಿವರಿಸುತ್ತ ಒಳ್ಳೆಯದೊಂದನ್ನೂ ಹೇಳದೆ ಉತ್ತರಕೊಟ್ಟಿತು.

ಬಾಗಿಲೊಳಗಿನಿಂದ ಬರುವ ದನಿ ಹೀಗೆಂದಿತು.

'ಪಾಪಿಗಳು ಸ್ವರ್ಗರಾಜ್ಯದೊಳಕ್ಕೆ ಪ್ರವೇಶಿಸಲಾರರು. ಇಲ್ಲಿಂದ ಹೊರಡು.'

ಆಗ ಆ ಮನುಷ್ಯನೆಂದನು.

'ಒಡೆಯ, ನಿನ್ನ ದನಿ ಕೇಳುತ್ತದೆ, ಆದರೆ ನಿನ್ನ ಮುಖ ಕಾಣುವುದಿಲ್ಲ, ನಿನ್ನ ಹೆಸರೂ ನನಗೆ ಗೊತ್ತಿಲ್ಲ'

ಆ ದನಿ ಹೇಳಿತು

'ನಾನು ಅಪೋಸ್ಟಲ್ ಪೀಟರ್.'

ಪಾಪಿ ಉತ್ತರಕೊಟ್ಟನು.

'ಅಪೋಸ್ಟಲ್ ಪೀಟರ್, ನನ್ನ ಮೇಲೆ ಮರುಕಪಡು ಮನುಷ್ಯನ ದೌರ್ಬಲ್ಯವನ್ನೂ ದೇವರ ದಯೆಯನ್ನೂ ಸ್ಮರಿಸಿಕೊ. ನೀನು ಕ್ರಿಸ್ತನಿಗೆ ಶಿಷ್ಯನಾಗಿರಲಿಲ್ಲವೇ? ಅವನ ಬಾಯಿಂದಲೇ ಅವನ ಉಪದೇಶಗಳನ್ನು ನೀನು ಕೇಳಿರಲಿಲ್ಲವೇ? ನಿನ್ನ ಕಣ್ಣ ಮುಂದೆ ಅವನ ಉದಾಹರಣೆಯೂ ಇದ್ದಿತಲ್ಲವೇ? ಅವನು ದುಃಖದಿಂದ ನೊಂದುಕೊಂಡು ಸಂಕಟಪಡುತ್ತಿದ್ದಾಗ, ಎಚ್ಚರವಾಗಿದ್ದು ಪ್ರಾರ್ಥಿಸುವಂತೆ ಮೂರುಸಲ ನಿನಗೆ ಹೇಳಿದ್ದನೆಂಬುದನ್ನೂ, ನಿನ್ನ ಕಣ್ಣುಗಳು ಭಾರೈಸಿಕೊಂಡದ್ದರಿಂದ ನೀನು ಹೇಗೆ ನಿದ್ದೆ ಮಾಡಿದೆಯೆಂಬುದನ್ನೂ, ಮೂರು ಸಲವೂ ನೀನು ನಿದ್ದೆ ಮಾಡುತ್ತಿದ್ದದ್ದನ್ನು ಅವನು ಕಂಡನೆಂಬುದನ್ನೂ ಸ್ಮರಿಸಿಕೊ ಸಾಯುವವರೆಗೂ ನಿನಗೆ ತಪ್ಪೆನೆಂದು ಮಾತುಕೊಟ್ಟಿದ್ದರೂ ಅವನನ್ನು ಕಾಯಿಫಾಸನ ಎದುರಿಗೆ ಕರೆದುಕೊಂಡು ಹೋದಾಗ ನೀನು ಮೂರುಸಲ ಅವನು ಯಾರೋ ಕಾಣೆನೆಂದು ತಪ್ಪಿ ನುಡಿದದ್ದನ್ನೂ ನೆನೆದುಕೋ? ನನಗೂ ಹಾಗೆಯೇ ಆಯಿತು. ಆಮೇಲೆ ಕೋಳಿ ಕೂಗಿದ ಕೂಡಲೆ ನೀನು ಹೊರಗೆ ಹೋಗಿ ಅತ್ತು ಗೋಳಾಡಿದೆಯಲ್ಲಾ, ಅದನ್ನೂ ಜ್ಞಾಪಿಸಿಕೊ. ನನಗೂ ಹಾಗೆಯೇ ಆಗಿದೆ ನನ್ನನ್ನು ಒಳಕ್ಕೆ ಬಿಡುವುದಕ್ಕೆ ನೀನು ಇಲ್ಲವೆನ್ನಲಾರೆ'

ಬಾಗಿಲ ಹಿಂದಿನ ದನಿ ಸುಮ್ಮನಾಯಿತು

ಆಮೇಲೆ ಪಾಪಿ ಸ್ವಲ್ಪ ಹೊತ್ತು ನಿಂತಿದ್ದು, ಮತ್ತೆ ಬಾಗಿಲನ್ನು ತಟ್ಟಿ, ತನ್ನನ್ನೂ ಸ್ವರ್ಗರಾಜ್ಯದೊಳಕ್ಕೆ ಸೇರಿಸಿಕೊಳ್ಳಬೇಕೆಂದು ಕೇಳತೊಡಗಿದನು.

ಬಾಗಿಲ ಹಿಂದೆ ಬೇರೊಂದು ದನಿ ಕೇಳಿಸಿತು. ಅದು ಹೇಳಿತು: 'ಈ ಮನುಷ್ಯನು ಯಾರು? ಭೂಮಿಯ ಮೇಲೆ ಅವನು ಹೇಗೆ ಜೀವಿಸುತ್ತಿದ್ದನು?'

ದೂರುವವನ ದನಿ ಮತ್ತೆ ಪಾಪಿಯು ಕಟ್ಟ ಕೆಲಸಗಳೆಲ್ಲವನ್ನೂ ವಿವರಿಸಿತು ಒಂದಾದರೂ ಒಳ್ಳೆಯದನ್ನು ಹೇಳಲಿಲ್ಲ.

ಬಾಗಿಲ ಹಿಂದಿನಿಂದ ಬರುವ ದನಿ ಮರುನುಡಿಯಿತು.

'ಹೊರಡು, ಇಲ್ಲಿಂದ! ಅಂಥ ಪಾಪಿಗಳು ನಮ್ಮ ಜೊತೆಯಲ್ಲಿ ಸ್ವರ್ಗದಲ್ಲಿ ಇರಲಾಗದು'

ಆಗ ಪಾಪಿ ಹೇಳಿದನು

'ಒಡೆಯ, ನಿನ್ನ ದನಿ ಕೇಳುತ್ತದೆ, ನೀನು ಕಾಣುವುದಿಲ್ಲ, ನಿನ್ನ ಹೆಸರೂ ನನಗೆ ಗೊತ್ತಿಲ್ಲ.'

ದನಿ ಉತ್ತರ ಕೊಟ್ಟಿತು.

'ನಾನು ಡೇವಿಡ್, ದೊರೆ ಮತ್ತು ಕಾಲಜ್ಞಾನಿ'

ಪಾಪಿ ನಿರಾಶನಾಗಲಿಲ್ಲ, ಸ್ವರ್ಗದ ಬಾಗಿಲನ್ನು ಬಿಟ್ಟು ಹೋಗಲೂ ಇಲ್ಲ, ಆದರೆ ಹೀಗೆ ಹೇಳಿದನು.

'ಡೇವಿಡ್ ದೊರೆಯೇ, ನನ್ನ ಮೇಲೆ ಕರುಣವಿಡು. ಮನುಷ್ಯನ ದೌರ್ಬಲ್ಯವನ್ನೂ ದೇವರ ದಯವನ್ನೂ ನೆನೆದುಕೊ. ದೇವರು ನಿನ್ನನ್ನು ಪ್ರೀತಿಸಿ, ನಿನ್ನನ್ನು ಮನುಷ್ಯರಲ್ಲೆಲ್ಲ ಶ್ರೇಷ್ಠನಾಗಿ ಮಾಡಿದನು. ನಿನಗೆ ರಾಜ್ಯ, ಗೌರವ, ಸಂಪತ್ತು ಹೆಂಡರು, ಮಕ್ಕಳು—ಎಲ್ಲ ಇದ್ದಿತು, ಆದರೆ ನಿನ್ನ ಮನೆಯ ಮೇಲೆ ನಿಂತು ನೀನು ಒಬ್ಬ ಬಡವನ ಹೆಂಡತಿಯನ್ನು ನೋಡಿದೆ, ಪಾಪ ನಿನ್ನಲ್ಲಿ ಒಳಹೊಕ್ಕಿತು, ನೀನು ಯೂರಿಯನ ಹೆಂಡತಿಯನ್ನು ತೆಗೆದುಕೊಂಡೆ, ಅವನನ್ನು ಅಮ್ಮೊನಿಟರ ಕತ್ತಿಗೆ ಗುರಿಮಾಡಿ ಕೊಲ್ಲಿಸಿದೆ ನೀನು ಐಶ್ವರ್ಯವಂತನಾಗಿದ್ದರೂ, ಬಡವನಿಗಿದ್ದ ಒಂದೇ ಒಂದು ಹೆಣ್ಣು ಕುರಿಯನ್ನು ಕಿತ್ತುಕೊಂಡು ಅವನನ್ನು ಕೊಂದೆ. ನಾನೂ

ಅದರಂತೆಯೇ ಮಾಡಿದ್ದೇನೆ. ಆಮೇಲೆ ನೀನು ಮಾಡಿದ್ದಕ್ಕೆ ಹೇಗೆ ಸಂಕಟ ಪಟ್ಟೆಯೆಂಬುದನ್ನೂ, ಸಂಕಟಪಟ್ಟು "ನಾನು ಅನ್ಯಾಯಮಾಡಿದೆನೆಂದು ಒಪ್ಪಿಕೊಳ್ಳುತ್ತೇನೆ, ನನ್ನ ಪಾಪ ಯಾವಾಗಲೂ ನನ್ನ ಕಣ್ಣಮುಂದೆಯೇ ಇದೆ" ಎಂದು ಹೇಳಿದೆಯೆಂಬುದನ್ನೂ ಜ್ಞಾಪಿಸಿಕೊ. ನಾನೂ ಹಾಗೆಯೇ ಮಾಡಿದ್ದೇನೆ. ನನ್ನನ್ನು ಒಳಗೆ ಬಿಡುವುದಕ್ಕೆ ನೀನು ಇಲ್ಲ ವೆನ್ನಲಾರೆ.'

ಬಾಗಿಲೊಳಗಿನಿಂದ ಬರುತ್ತಿದ್ದ ದನಿ ಸುಮ್ಮನಾಯಿತು.

ಪಾಪಿ ಸ್ವಲ್ಪ ಹೊತ್ತು ನಿಂತಿದ್ದು ಮತ್ತೆ ಬಾಗಿಲನ್ನು ತಟ್ಟತೊಡ ಗಿದನು. ತಟ್ಟಿ ತನ್ನನ್ನು ಸ್ವರ್ಗರಾಜ್ಯದೊಳಕ್ಕೆ ಬಿಡಬೇಕೆಂದು ಕೇಳತೊಡಗಿ ದನು. ಬಾಗಿಲಿನೊಳಗೆ ಮೂರನೆಯದೊಂದು ದನಿ ಕೇಳಿಸಿತು. ಅದು,

'ಈ ಮನುಷ್ಯನು ಯಾರು? ಅವನು ಭೂಮಿಯ ಮೇಲೆ ತನ್ನ ಜೀವಮಾನವನ್ನು ಹೇಗೆ ಕಳೆದಿದ್ದಾನೆ?' ಎಂದಿತು.

ದೂರುವವನ ದನಿ ಮೂರನೆಯ ಸಲ ಒಳ್ಳೆಯ ಕೆಲಸವೊಂದನ್ನೂ ಹೇಳದೆ, ಪಾಪಿಯ ಕೆಟ್ಟ ಕೆಲಸಗಳನ್ನು ವಿವರಿಸುತ್ತ ಉತ್ತರ ಕೊಟ್ಟಿತು.

ಬಾಗಿಲೊಳಗಿನ ದನಿ ಹೇಳಿತು:

'ಹೊರಡು ಇಲ್ಲಿಂದ! ಪಾಪಿಗಳು ಸ್ವರ್ಗರಾಜ್ಯವನ್ನು ಪ್ರವೇಶಿಸ ಲಾರರು.'

ಪಾಪಿ ಹೇಳಿದನು.

'ನಿನ್ನ ದನಿ ಕೇಳುತ್ತದೆ, ನಿನ್ನ ಮುಖ ಕಾಣುವುದಿಲ್ಲ, ನಿನ್ನ ಹೆಸರೂ ನನಗೆ ಗೊತ್ತಿಲ್ಲ.'

ಆಗ ದನಿ ಉತ್ತರ ಕೊಟ್ಟಿತು.

'ನಾನು ಧರ್ಮಜ್ಞಾನಿ ಜಾನ್, ಕ್ರಿಸ್ತನ ಪ್ರೀತಿಯ ಶಿಷ್ಯ.'

ಪಾಪಿ ಸಂತೋಷಗೊಂಡನು.

'ಈಗ ನಿಜವಾಗಿಯೂ ನನ್ನನ್ನು ಒಳಕ್ಕೆ ಬಿಡಬೇಕು. ಪೀಟರನಿಗೂ

ಡೇವಿಡ್ಡನಿಗೂ ಮನುಷ್ಯನ ದೌರ್ಬಲ್ಯವೂ ದೇವರ ದಯವೂ ಗೊತ್ತಿರುವುದರಿಂದ ಅವರು ನನ್ನನ್ನು ಒಳಕ್ಕೆ ಬಿಡಬೇಕು, ನೀನು ಬಹಳ ದಯವುಳ್ಳವನಾದ್ದರಿಂದ ನನ್ನನ್ನು ಒಳಕ್ಕೆ ಬಿಟ್ಟೇ ಬಿಡುತ್ತೀಯೆ. ಧರ್ಮಜ್ಞಾನಿ, ಜಾನ್, ನೀನೇ ಅಲ್ಲವೇ ದೇವರು ಪ್ರೇಮಸ್ವರೂಪನೆಂದೂ, ಯಾರು ಪ್ರೇಮವನ್ನು ಕಾಣನೋ ಅವನು ದೇವರನ್ನು ಕಾಣನೆಂದೂ ಒರೆದವನು? ನೀನು ಮುದುಕನಾದ ಮೇಲೆ 'ಅಣ್ಣಗಳಿರಾ, ನೀವು ಒಬ್ಬರನ್ನೊಬ್ಬರು ಪ್ರೀತಿಸಿ' ಎಂದು ಜನರಿಗೆ ಹೇಳಲಿಲ್ಲವೇ? ಹಾಗಾದರೆ, ಅದು ಹೇಗೆ ನನ್ನನ್ನು ದ್ವೇಷದಿಂದ ನೋಡಿ ದೂರ ಅಟ್ಟುತ್ತೀಯೆ? ನೀನು ಹೇಳಿದ್ದನ್ನು ಅಲ್ಲವೆನ್ನಬೇಕು, ಇಲ್ಲ, ನನ್ನನ್ನು ಪ್ರೀತಿಸಿ ಸ್ವರ್ಗರಾಜ್ಯದೊಳಕ್ಕೆ ಬರಲು ನನಗೆ ಅವಕಾಶ ಕೊಡಬೇಕು!' ಎಂದನು.

ಸ್ವರ್ಗದ ಬಾಗಿಲು ತೆರೆಯಿತು. ಜಾನನು ಪಶ್ಚಾತ್ತಾಪಿಯಾದ ಪಾಪಿಯನ್ನು ತಬ್ಬಿಕೊಂಡು, ಅವನನ್ನು ಸ್ವರ್ಗರಾಜ್ಯದೊಳಕ್ಕೆ ಕರೆದುಕೊಂಡನು.

---

# ಅಸ್ಸರ್‌ಹಾರ್ಡ್ದನ್ ದೊರೆ



ಅಸ್ಸರ್‌ಹಾರ್ಡ್ದನ್ ಎಂಬ ಅಸ್ಸಿರಿಯಾ ದೇಶದ ದೊರೆ ಲೈಲಿ ರಾಜನ ದೇಶವನ್ನು ಗೆದ್ದು, ಪಟ್ಟಣವನ್ನೆಲ್ಲ ಸುಟ್ಟು ಧ್ವಂಸಮಾಡಿ, ಅಲ್ಲಿನ ಸಿಪಾಯಿಗಳನ್ನೆಲ್ಲ ತನ್ನ ದೇಶಕ್ಕೆ ಅಟ್ಟಿಕೊಂಡು ಬಂದು, ಯುದ್ಧಮಾಡುವ ಸಿಪಾಯಿಗಳನ್ನು ಕೊಂದು, ಕಲವು ನಾಯಕರ ತಲೆಹೊಡಿಸಿ, ಕೆಲವರನ್ನು ಶೂಲಕ್ಕೇರಿಸಿ, ಕಲವರಿಗೆ ಜೀವಸಹಿತ ಚರ್ಮಸುಲಿಸಿ, ಕಡೆಗೆ ಲೈಲಿರಾಜನನ್ನು ಒಂದು ಪಂಜರದಲ್ಲಿ ಕೂಡಿಸಿದನು.

ಆ ದೊರ ಒಂದು ರಾತ್ರಿ ತನ್ನ ಹಾಸಿಗೆಯ ಮೇಲೆ ಮಲಗಿಕೊಂಡು ಲೈಲಿಯನ್ನು ಯಾವ ರೀತಿಯಲ್ಲಿ ಕೊಲ್ಲಿಸಬೇಕೆಂದು ಯೋಚಿಸುತ್ತಿದ್ದನು. ಹಾಗೆ ಯೋಚಿಸುತ್ತಿದ್ದಾಗ ಪಕ್ಕದಲ್ಲಿ ಏನೋ ಸ್ವಲ್ಪ ಸದ್ದಾದ ಹಾಗಾಯಿತು. ಕಣ್ಣು ಬಿಟ್ಟು ನೋಡಲಾಗಿ ಎದುರಿಗೆ ಉದ್ದವಾದ ನರೆತ ಗಡ್ಡದಿಂದಲೂ ದೈನ್ಯ ದೃಷ್ಟಿಯಿಂದಲೂ ಕೂಡಿದ ಒಬ್ಬ ಮುದುಕನನ್ನು ಕಂಡನು.

ಆ ಮುದುಕನು 'ಲೈಲಿಯನ್ನು ಕೊಲ್ಲಿಸಬೇಕೆಂದು ಒಯಸುವೆಯಲ್ಲವೆ?' ಎಂದು ಕೇಳಿದನು.

ದೊರೆ 'ಹೌದು ಅವನನ್ನು ಯಾವ ರೀತಿ ಕೊಲ್ಲಿಸಬೇಕೆಂಬುದನ್ನು ಮಾತ್ರ ಇನ್ನೂ ನಿರ್ಧರಿಸಿಲ್ಲ' ಎಂದನು.

ಮುದುಕನು 'ಆದರೆ, ಲೈಲಿಯೂ ನೀನೇ' ಎಂದನು.

ದೊರೆ 'ಅದು ಸತ್ಯವಲ್ಲ, ನಾನು ನಾನೇ, ಲೈಲಿ ಲೈಲಿಯೇ' ಎಂದನು.

ಮುದುಕನು 'ಲೈಲಿಯೂ ನೀನೂ ಒಂದೇ. ಹೊರಗಿನ ನೋಟಕ್ಕೆ ಮಾತ್ರ ನೀನು ಲೈಲಿಯಲ್ಲವೆಂದೂ, ಲೈಲಿ ನೀನಲ್ಲವೆಂದೂ ನಿನಗೆ ತೋರುತ್ತದೆ' ಎಂದನು.

'ಹಾಗಲ್ಲದೆ ಮತ್ತೆ ಹೇಗೆ ತಾನೇ ತೋರೀತು? ಇಲ್ಲಿ, ನಾನು

ಈ ಮೃದುವಾದ ಹಾಸಿಗೆಯಲ್ಲಿ ಮಲಗಿದೇನೆ. ಸುತ್ತಮುತ್ತಲೂ ಆಜ್ಞಾಧಾರಕರಾದ ಸೇವಕ ಸೇವಕಿಯರು ಕಾದುಕೊಂಡಿದಾರೆ, ಇವತ್ತಿನ ಹಾಗೆಯೇ ನಾಳೆ ಕೂಡ ಒಂಧು ಮಿತ್ರರೊಡನೆ ಸುಖಭೋಜನದಲ್ಲಿ ನಲಿಯುತ್ತೇನೆ. ಲೈಲಿಯಾದರೋ ಹಕ್ಕಿಯಂತೆ ಪಂಜರದಲ್ಲಿ ಸಿಕ್ಕಿಕೊಂಡಿದಾನೆ. ನಾಳೆ ಶೂಲಕ್ಕೇರಿಸಿದಾಗ ನಾಲಗೆಯನ್ನು ಹೊರಕ್ಕೆ ಚಾಚಿ ಉಸಿರು ಮೆತ್ತಗಾಗುವವರೆಗೂ ಒದ್ದಾಡುತ್ತ ಇರಬೇಕಾಗುತ್ತದೆ. ಕಡೆಗೆ ಅವನ ದೇಹವನ್ನು ನಾಯಿಗಳು ಕಿತ್ತು ಕಿತ್ತು ತಿನ್ನುತ್ತವೆ'

'ಅವನ ಪ್ರಾಣವನ್ನು ನೀನು ನಾಶಮಾಡಲಾರೆ'

'ಆ ಹದಿನಾಲ್ಕು ಸಾವಿರ ದಂಡಾಳುಗಳನ್ನೂ ಕೊಲ್ಲಿಸಿ ಅವರ ಹೆಣದ ಒಣಬೆಯನ್ನು ಒಟ್ಟಿಸಿದೆನಲ್ಲಾ, ಅದು ಹೇಗೆ ಸಾಧ್ಯವಾಯಿತು? ನಾನಿನ್ನೂ ಬದುಕಿದೇನೆ, ಅವರು ಇಲ್ಲವೇ ಇಲ್ಲ. ಆದ್ದರಿಂದ ನನಗೆ ಪ್ರಾಣವನ್ನು ನಾಶಮಾಡುವ ಸಾಮರ್ಥ್ಯವಿದೆ'

'ಅವರು ಇಲ್ಲವೇ ಇಲ್ಲವೆಂದು ನಿನಗೆ ಹೇಗೆ ಗೊತ್ತು?'

'ಅವರು ನನಗೆ ಕಾಣಿಸದೆ ಇರುವುದರಿಂದ. ಇದೂ ಅಲ್ಲದೆ, ಅವರೆಲ್ಲರೂ ಚಿತ್ರಹಿಂಸೆಗೊಳಗಾಗಿ ನೊಂದರು ; ನನಗಾದರೋ ಆ ನೋವುಗಳಿಲ್ಲ. ಅವರು ದುಃಖಪಟ್ಟರು, ನಾನು ಸುಖವಾಗಿಯೇ ಇದೇನೆ'

'ಇದೂ ಕೂಡ ನಿನಗೆ ಹಾಗೆಂದು ತೋರುವುದೇ ಹೊರತು ನಿಜವಲ್ಲ. ನಿನ್ನನ್ನೇ ನೀನು ಚಿತ್ರಹಿಂಸೆಗೆ ಗುರಿಪಡಿಸಿಕೊಂಡೆ, ಅವರನ್ನಲ್ಲ'

'ಇದು ನನಗೆ ತಿಳಿಯುವುದಿಲ್ಲ'

'ತಿಳಿಯುವ ಅಪೇಕ್ಷೆಯುಂಟೋ ನಿನಗೆ?'

'ಉಂಟು'

ಮುದುಕನು 'ಹಾಗಾದರೆ ಇಲ್ಲಿ ಬಾ' ಎಂದು ಅಲ್ಲಿದ್ದ ನೀರು ತುಂಬಿದ ಒಂದು ತೊಟ್ಟಿಯನ್ನು ಕೈನೀಡಿ ದೊರೆಗೆ ತೋರಿಸಿದನು.

ದೊರೆ ಹಾಸಿಗೆಯಿಂದೆದ್ದು ತೊಟ್ಟಿಯ ಬಳಿಗೆ ಹೋದನು.

ಬಟ್ಟೆಯನ್ನು ಬಿಚ್ಚಿ ಒಳಕ್ಕಿಳಿ '

ಅಸ್ಸರ್‌ಹಾರ್ಡ್ ದೊರೆ ಮುದುಕನು ಹೇಳಿದಂತೆಯೇ ಮಾಡಿದನು. ಮುದುಕನು ' ಇಲ್ಲಿ ಕೇಳು ನಾನು ಈ ನೀರನ್ನು ನಿನ್ನ ತಲೆಯಮೇಲೆ ಸುರಿದೊಡನೆಯೇ ತಲೆಯೆಲ್ಲ ಪೂರ್ತಿಯಾಗಿ ನೀರಿನೊಳಗಿಳಿಯುವಂತೆ ಮುಳುಗಿಬಿಡು ' ಎಂದನು.

ಮುದುಕನು ಹೂಜೆಯನ್ನು ದೊರೆಯ ತಲೆಯ ಮೇಲಕ್ಕೆ ಎತ್ತಿ ಹಿಡಿದನು. ಕೂಡಲೇ ದೊರೆಯು ಮುಳುಗಿಬಿಟ್ಟನು.

ಅಸ್ಸರ್‌ಹಾರ್ಡ್ ದೊರೆ ನೀರಿನೊಳಗೆ ಮುಳುಗಿದನೋ ಇಲ್ಲವೋ ಕೂಡಲೇ, ಅವನಿಗೆ ತಾನು ಅಸ್ಸರ್‌ಹಾರ್ಡ್ ಅಲ್ಲವೇ ಅಲ್ಲವೆಂದೂ, ಮತ್ತೆ ಇನ್ನಾರೋ ಒಬ್ಬ ಮನುಷ್ಯನೆಂದೂ ಅನ್ನಿಸಿತು ಹೀಗೆ ತಾನು ಮತ್ತೆ ಯಾರೋ ಒಬ್ಬನೆಂದು ಭಾವಿಸುತ್ತಿರುವಾಗಲೇ ತಾನೊಂದು ದಿವ್ಯ ತಲ್ಪದಲ್ಲಿರುವಂತೆಯೂ ತನ್ನ ಪಕ್ಕದಲ್ಲಿ ಸುಂದರಿಯಾದ ಹೆಂಗಸೊಬ್ಬಳು ಮಲಗಿರುವಂತೆಯೂ ಕಂಡನು. ಈ ಹೆಂಗಸು ಮೆಲ್ಲನೆ ಎದ್ದು ಕುಳಿತು ' ಪ್ರಿಯ ಲೈಲಿ, ನಿನ್ನಿನ ಆಯಾಸದಿಂದ ಬಹಳ ಬಳಲಿದೆ. ಆ ಆಯಾಸದಿಂದಲೇ ಎಂದೂ ಇಲ್ಲದೆ, ಇವತ್ತು ಇಷ್ಟು ಹೆಚ್ಚು ಹೊತ್ತು ಮಲಗಿಬಿಟ್ಟೆ. ನಿನ್ನ ನಿದ್ರೆಗೆ ಭಂಗಬರದಂತೆ ಇಷ್ಟು ಹೊತ್ತೂ ಎಬ್ಬಿಸಬಾರದೆಂದು ಕಾದುಕೊಂಡಿದ್ದೆ. ಈಗ ರಾಜಪುತ್ರರೆಲ್ಲರೂ ನಿನಗಾಗಿ ಸಭಾಂಗಣದಲ್ಲಿ ಕಾಯುತ್ತಿದಾರೆ ಉಡುಪುಗಳನ್ನು ತೊಟ್ಟು ಅವರಿಗೆ ದರ್ಶನಕೊಡು ' ಎಂದಳು.

ಈ ಮಾತುಗಳನ್ನು ಕೇಳಿ ಅಸ್ಸರ್‌ಹಾಡನ್ನನಿಗೆ ತಾನೇ ಲೈಲಿಯೆಂದು ತಿಳಿಯಬಂದಿತು. ಇದರಿಂದ ಅವನಿಗೆ ಸ್ವಲ್ಪವೂ ವಿಸ್ಮಯವಾಗಲಿಲ್ಲ, ಇದೂ ಹಾಗಿರಲಿ, ಇಷ್ಟು ದಿನಗಳವರೆಗೂ ತನಗೆ ಈ ಸಂಗತಿ ತಿಳಿಯದೇ ಹೋಯಿತಲ್ಲಾ ಎಂದು ಬಹಳ ಆಶ್ಚರ್ಯವಾಯಿತು. ಆಮೇಲೆ ಹಾಸಿಗೆಯಿಂದೆದ್ದು ವಸ್ತ್ರಭೂಷಣಗಳನ್ನು ಧರಿಸಿ, ರಾಜಪುತ್ರರು ತನಗಾಗಿ ನಿರೀಕ್ಷಿಸುತ್ತ ನಿಂತಿದ್ದ ವಿಸ್ತಾರವಾದ ಸಭಾಂಗಣಕ್ಕೆ ಬಂದು ಸೇರಿದನು.

ರಾಜಪುತ್ರರೆಲ್ಲರೂ ತಮ್ಮರಸನಾದ ಲೈಲಿರಾಜನಿಗೆ ನೆಲಮುಟ್ಟಿ ಬಗ್ಗಿ ನಮಸ್ಕರಿಸಿದರು. ಆಮೇಲೆ ಅವನ ಆಜ್ಞೆಗೆ ತಲೆಬಾಗಿ ರಾಜನೆದುರಿಗೆ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು.

ಆ ರಾಜಪುತ್ರ ಮಂಡಲಿಯಲ್ಲಿ ಎಲ್ಲರಿಗಿಂತಲೂ ಹಿರಿಯನಾದವನೊಬ್ಬನು ಮಾತಾಡಲು ಪ್ರಾರಂಭಿಸಿ ಆ ದುಷ್ಟ ದೊರೆ ಅಸ್ಸರ್‌ಹಾಡನ್ನನು ಮಾಡುವ ಅವಮಾನಗಳನ್ನು ತಾಳಿಕೊಂಡಿರುವುದು ಇನ್ನು ಸ್ವಲ್ಪವೂ ಸಾಧ್ಯವಿಲ್ಲವೆಂದೂ ಅವನ ಮೇಲೆ ದಂಡೆತ್ತಿ ಹೋಗುವುದೇ ನ್ಯಾಯವೆಂದೂ ಹೇಳಿದನು ಆದರೆ ಲೈಲಿಯು ಆ ಮಾತಿಗೊಪ್ಪಲಿಲ್ಲ ಅಸ್ಸರ್‌ಹಾಡನ್ನನ ಬಳಿಗೆ ರಾಯಭಾರಿಗಳನ್ನು ಕಳುಹಿಸಿ ಸಮಾಧಾನದಿಂದಿರುವಂತೆ ಹೇಳಿ ಕಳುಹಿಸಬೇಕೆಂದು ತೀರ್ಮಾನಿಸಿದನು ರಾಜಪುತ್ರರನ್ನೆಲ್ಲ ಹಿಂದಕ್ಕೆ ಕಳುಹಿಸಿಬಿಟ್ಟನು. ಆಮೇಲೆ ಗೌರವಾರ್ಹರಾದ ಹಿರಿಯ ಮನುಷ್ಯರನ್ನು ರಾಯಭಾರಿಗಳಾಗಿ ಆರಿಸಿಕೊಂಡು ಅಸ್ಸರ್‌ಹಾಡ್ಡ ದೊರೆಗೆ ಏನೆಂದು ಹೇಳಬೇಕೆಂಬುದನ್ನೆಲ್ಲಾ ವಿವರವಾಗಿ ಒಂದನ್ನೂ ಬಿಡದೆ ಚೆನ್ನಾಗಿ ವಿವರಿಸಿದನು. ಈ ಕೆಲಸವನ್ನು ಮುಗಿಸಿದ ಬಳಿಕ, ಅಸ್ಸರ್‌ಹಾಡನ್ನನು ಇನ್ನೂ ತಾನು ಲೈಲಿಯೆಂದು ಭಾವಿಸುತ್ತ ಕಾಡುಕತ್ತೆಗಳ ಬೇಟೆಗೆ ಬೆಟ್ಟಗಳ ಕಡೆಗೆ ಹೊರಟನು. ಬೇಟೆ ಬಹು ಸೊಗಸಾಗಿತ್ತು. ತಾನು ಸ್ವತಃ ಎರಡು ಕತ್ತೆಗಳನ್ನು ಕೊಂದನು. ಬೇಟೆಯಿಂದ ಹಿಂದಿರುಗಿ ಅರಮನೆಗೆ ಬಂದು ಬಂಧುಮಿತ್ರರೊಡನೆ ಸುಖವಾಗಿ ಭೋಜನಮಾಡಿ, ಸುಂದರಿಯರ ನರ್ತನವನ್ನು ನೋಡುತ್ತ ಆನಂದಪಟ್ಟನು ಮರುದಿನ ಎಂದಿನಂತೆ ಸಭಾಂಗಣಕ್ಕೆ ಹೋದನು. ಅಲ್ಲಿ ಕಾದಿದ್ದ ಅಪರಾಧಿಗಳೂ, ವ್ಯವಹಾರಗಳನ್ನು ತಂದು ಕಾದಿದ್ದವರೂ ಬಹಳ ಜನರಿದ್ದರು. ಅವರೆಲ್ಲರನ್ನೂ ವಿಚಾರಿಸಿ ಪ್ರತಿಯೊಂದು ವ್ಯವಹಾರವನ್ನೂ ಬಗೆಹರಿಸಿದನು.

ಆಸ್ಥಾನದ ಕೆಲಸವನ್ನು ಮುಗಿಸಿ ತನ್ನ ಮೆಚ್ಚಿನ ವಿನೋದಕ್ಕಾಗಿ—ಬೇಟೆಗಾಗಿ—ಮತ್ತೆ ಪ್ರಯಾಣಮಾಡಿದನು. ಆ ದಿನ ಒಂದು ಹೆಣ್ಣು

ಸಿಂಹವನ್ನು ಕೊಂದು ಅದರ ಚಿಕ್ಕಮರಿಗಳೆರಡನ್ನು ಹಿಡಿದುಕೊಂಡು ಬಂದನು. ಈ ಬೇಟೆಯನ್ನು ಮುಗಿಸಿ ಹಿಂದಿರುಗಿ ಬಂಧು ಮಿತ್ರರೊಡನೆ ಮತ್ತೆ ಸುಖವಾಗಿ ನಲಿಯುತ್ತ ಊಟಮಾಡಿ, ನೃತ್ಯ ಗೀತಾದಿ ಮಹೋತ್ಸವಗಳಲ್ಲಿ ಹಗಲನ್ನು ನೂಕಿ, ತನ್ನ ಅಚ್ಚುಮೆಚ್ಚಿನ ರಾಣಿಯೊಡನೆ ರಾತ್ರಿ ಆನಂದಪಟ್ಟನು.

ಹೀಗೆ ರಾಜಕಾರ್ಯಗಳಿಗೂ ಸುಖಾನುಭವಕ್ಕೂ ತನ್ನ ಕಾಲವನ್ನು ಸರಿಯಾಗಿ ವಿಭಾಗಿಸಿಕೊಂಡು ವಾಸಿಸುತ್ತಿರಲು ದಿನಗಳೂ ವಾರಗಳೂ ಒಂದಾದಮೇಲೊಂದು ಮರಳುತ್ತ ಬಂದವು. ಹಿಂದೆ ತಾನೇ 'ನಾನು' ಎಂದುಕೊಳ್ಳುತ್ತಿದ್ದ ಆ ಅಸ್ಸರ್‌ಹಾಡ್ಡನ್‌ದೊರೆಯ ಬಳಿಗೆ ಕಳುಹಿಸಿದ್ದ ರಾಯಭಾರಿಗಳ ಬರವನ್ನೇ ನಿರೀಕ್ಷಿಸುತ್ತ ಕಾಲವನ್ನು ಕಳೆಯುತ್ತಿದ್ದನು. ಒಂದು ತಿಂಗಳು ಕಳೆದ ಬಳಿಕ ಆ ರಾಯಭಾರಿಗಳು ಹಿಂದಿರುಗಿದರು. ಅವರ ಕಿವಿ ಮೂಗುಗಳು ಕತ್ತರಿಸಿ ಹೋಗಿದ್ದುವು.

ಹಿಂದೆ ಅಸ್ಸರ್‌ಹಾಡನ್ನನಾಗಿದ್ದ ಲೈಲಿಯು ಮತ್ತೆ ರಾಜಪುತ್ರರನ್ನೆಲ್ಲಾ ಕರಸಿಕೊಂಡು 'ಈಗ ಮಾಡತಕ್ಕದ್ದೇನು' ಎಂದು ಎಲ್ಲರೊಡನೆಯೂ ಆಲೋಚನೆ ಮಾಡಿದನು.

ಅಸ್ಸರ್‌ಹಾಡ್ಡನ್ ದೊರೆಯು ದಾಳಿಯಿಟ್ಟು ಬರುವವರೆಗೂ ಸುಮ್ಮನೆ ಕೂತಿರದೆ ಮುಂದಾಗಿಯೇ ತಾವು ದಂಡೆತ್ತಿ ನುಗ್ಗಿ ಯುದ್ಧಮಾಡುವುದು ನೀತಿಯೆಂದು ಎಲ್ಲರೂ ಏಕಕಂಠದಿಂದ ಅರಿಕೆಮಾಡಿಕೊಂಡರು. ರಾಜನು ಅದಕ್ಕೆ ಒಪ್ಪಿ ಸೈನ್ಯವನ್ನು ಸಜ್ಜುಗೊಳಿಸಿ, ಅದರ ಮುಖ್ಯಾಧಿಪತ್ಯವನ್ನು ತಾನೇ ವಹಿಸಿಕೊಂಡು ದಂಡಯಾತ್ರೆಯನ್ನು ಪ್ರಾರಂಭಿಸಿದನು. ಈ ಯಾತ್ರೆ ಏಳು ದಿನಗಳವರೆಗೆ ಅವಿಚ್ಛಿನ್ನವಾಗಿ ಸಾಗಿತು. ಪ್ರತಿದಿನವೂ ರಾಜನು ಸೈನ್ಯವನ್ನೆಲ್ಲಾ ಚೆನ್ನಾಗಿ ಪರೀಕ್ಷಿಸಿ ದಂಡಾಳುಗಳ ಧೈರ್ಯವನ್ನು ಕುದುರಿಸುತ್ತಿದ್ದನು. ಎಂಟನೆಯದಿನ ಒಂದು ದೊಡ್ಡ ಕಣಿವೆಯಲ್ಲಿ ಒಂದು ನದಿಯ ತೀರದಲ್ಲಿ ಅಸ್ಸರ್‌ಹಾಡ್ಡನ್ ದೊರೆಯ ಸೈನ್ಯಕ್ಕೂ ಈ ಸೈನ್ಯಕ್ಕೂ ಕೈಗೆ ಕೈ

ಹತ್ತಿತು. ಲೈಲಿರಾಜನ ಭಟರು ಧೈರ್ಯದಿಂದ ಹೋರಾಡಿದರು. ಆದರೆ ಶತ್ರುಗಳು ಇರುವೆಗಳಂತೆ ಬೆಟ್ಟಗಳ ಮೇಲಿನಿಂದ ಇಳಿದು ಬಂದು ಕಣಿಯಲ್ಲೆಲ್ಲ ತುಂಬಿಕೊಂಡು ಈ ಸೈನ್ಯವನ್ನು ಸೋಲಿಸುತ್ತಿದ್ದರು. ಇದನ್ನು ಕಂಡು ಲೈಲಿಯು (ಹಿಂದೆ ಅಸ್ಸರ್‌ಹಾಡ್ಡ್ ಆಗಿದ್ದವನು) ತನ್ನ ರಥವನ್ನು ರಣರಂಗದ ನಟ್ಟನಡುವಿಗೆ ನುಗ್ಗಿಸಿಕೊಂಡು ಹೋಗಿ ಶತ್ರುಗಳನ್ನು ಕೊಚ್ಚಿ ಕೆಡಹುತ್ತ ಬಂದನು. ಆದರೇನು, ಲೈಲಿಯ ಸೈನಿಕರು ನೂರುಗಟ್ಟಲೆ; ಅಸ್ಸರ್‌ಹಾಡನ್ನನ ಸೈನಿಕರು ಸಾವಿರಗಟ್ಟಲೆ ಕಡೆಗೆ ತನಗೆ ಪೆಟ್ಟಾದಂತೆಯೂ ತನ್ನನ್ನು ಸೆರೆಹಿಡಿದಂತೆಯೂ ಲೈಲಿಗೆ ಅನುಭವವಾಯಿತು ಅಸ್ಸರ್‌ಹಾಡನ್ನನ ಸೈನಿಕರು ತನ್ನನ್ನು ಸರಪಣಿಗಳಿಂದ ಕಟ್ಟಿಹಾಕಿ, ಉಳಿದ ಬಂದಿಗಳೊಡನೆ ಒಂಬತ್ತು ದಿನಗಳ ವರೆಗೆ ನಡಸಿಕೊಂಡು ಹೋದರು. ಹತ್ತನೆಯ ದಿನ 'ನಿನವೆ' ಪಟ್ಟಣ ಸಿಕ್ಕಿತು ಅಲ್ಲಿ ಅವನನ್ನು ಒಂದು ಪಂಜರದೊಳಗೆ ಕೂಡಿದರು.

ಲೈಲಿಗೆ ಅವಮಾನದಿಂದಲೂ, ಹುರುಳಿಲ್ಲದ ಕ್ರೋಧದಿಂದಲೂ ಬಹಳ ಯಾತನೆಯಾಯಿತು, ಪೆಟ್ಟುಗಳಿಂದಲೂ ಹಸಿವಿನಿಂದಲೂ ಅಷ್ಟು ನೋವಾಗಲಿಲ್ಲ. ಶತ್ರುಗಳು ತನಗೆ ಕೊಡುವ ಕಿರುಕುಳಗಳಲ್ಲಕ್ಕೂ ಪ್ರತೀಕಾರ ಮಾಡಲು ತನಗೆ ಶಕ್ತಿಯಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಾಯಿತು. ಆದ್ದರಿಂದ ಶತ್ರುಗಳಿಗೆ ತನ್ನ ದುಃಖವನ್ನು ನೋಡಿ ಆನಂದಿಸಲು ಅವಕಾಶ ಕೊಡಬಾರದೆಂದು ಸಂಕಲ್ಪಿಸಿದನು. ಇದೊಂದೇ ಅವನ ಕೈಯಲ್ಲಿ ಸಾಗುತ್ತಿದ್ದದ್ದು. ತನಗೆ ಏನೇನು ಸಂಭವಿಸಿದರೂ ಅದೆಲ್ಲವನ್ನೂ ಗೊಣಗದೆ ಧೀರನಂತೆ ಸಹಿಸಬೇಕೆಂದು ನಿರ್ಧರಿಸಿದನು. ಸದಾ ಕೊಲೆಗಡಿಕನ ಕತ್ತಿಯನ್ನೆದುರುನೋಡುತ್ತ ಇಪ್ಪತ್ತು ದಿನಗಳವರೆಗೆ ಆ ಪಂಜರದಲ್ಲಿ ಕುಳಿತಿದ್ದನು ತನ್ನ ಬಂಧುಗಳನ್ನೂ, ಮಿತ್ರರನ್ನೂ ವಧ್ಯಸ್ಥಾನಕ್ಕೆ ಎಳೆದುಕೊಂಡು ಹೋದುದನ್ನು ನೋಡಿದನು. ಕೊಲೆಗೆ ತುತ್ತಾದವರ ಗೋಳು ಅವನ ಕಿವಿಯನ್ನು ಕೀಲಿಸಿತು. ಕೆಲವರ ಕೈಕಾಲುಗಳನ್ನು ಕತ್ತರಿಸಿ ಕೆಡವಿದರು, ಕೆಲವ

ರನ್ನು ಜೀವ ಸಹಿತ ಚರ್ಮ ಸುಲಿಸಿದರು, ಇಷ್ಟಾದರೂ, ದುಃಖವನ್ನಾಗಲಿ, ಕರುಣೆಯನ್ನಾಗಲಿ, ಭಯವನ್ನಾಗಲಿ ತೋರ್ಪಡಿಸದೆ, ಲೈಲಿಯು ಗಂಭೀರವಾಗಿದ್ದನು.

ಕಪ್ಪಗಿರುವ ಪುಂಡರಿಬ್ಬರು ತನ್ನ ಸುಂದರಿಯಾದ ರಾಣಿಯನ್ನು ಹಗ್ಗದಿಂದ ಬಿಗಿದು ಎಳೆದುಕೊಂಡು ಹೋದುದನ್ನು ಕಣ್ಣಾರ ಕಂಡನು. ಅಸ್ಸರ್‌ಹಾಡನ್ನನ ರಂಗಮಹಲಿಗೆ ಗುಲಾಮಗಿರಿಯ ಪಟ್ಟಕ್ಕೆ ಅವಳನ್ನು ಎಳೆದೊಯ್ದರೆಂಬುದು ಅವನಿಗೆ ಗೊತ್ತು. ಇದನ್ನೂ ಕೂಡ ಸ್ವಲ್ಪವೂ ಗೊಣಗದೆ ತಾಳಿಕೊಂಡನು ಆದರೆ ಕಾವಲಿನವನೊಬ್ಬನು ಹತ್ತಿರ ಬಂದು 'ಲೈಲಿ, ನಿನ್ನನ್ನು ನೋಡಿದರೆ ನನಗೆ ತುಂಬ ಮರುಕ, ದೊರೆಯಾಗಿದ್ದವನು ಈಗ ನೀನೇನಾಗಿಬಿಟ್ಟೆ?' ಎಂದನು ಇದನ್ನು ಕೇಳಿ ಲೈಲಿಯು ತಾನು ಕಳೆದುಕೊಂಡದ್ದೇನೆಂಬುದನ್ನೆಲ್ಲಾ ಜ್ಞಾಪಿಸಿಕೊಂಡನು. ಪಂಜರದ ಗಡಾರಿಗಳನ್ನು ಮುಷ್ಟಿಯಲ್ಲಿ ಭದ್ರವಾಗಿ ಹಿಡಿದುಕೊಂಡು ಪ್ರಾಣವನ್ನು ಕಳೆದುಕೊಳ್ಳಬೇಕೆಂಬ ಉದ್ದೇಶದಿಂದ ತಲೆಯನ್ನು ಅದಕ್ಕೆ ಢಿಕ್ಕಿ ಹೊಡೆದನು. ಆದರೆ ಅದಕ್ಕೂ ಅವನಿಗೆ ಶಕ್ತಿಯಿಲ್ಲ, ನಿರಾಶೆಯಿಂದ ನರಳುತ್ತ ಪಂಜರದಲ್ಲಿ ಕುಸಿದು ಬಿದ್ದುಬಿಟ್ಟನು.

ಆಗ ಇಬ್ಬರು ಕಟುಕರು ಪಂಜರದ ಬಾಗಿಲನ್ನು ತೆರೆದರು. ಕೈಗಳೆರಡನ್ನೂ ಬೆನ್ನ ಹಿಂದೆ ಸೇರಿಸಿ ಗಟ್ಟಿಯಾಗಿ ಕಟ್ಟಿ ರಕ್ತ ಕೋಡಿಗಟ್ಟಿ ಹರಿಯುತ್ತಿದ್ದ ವಧ್ಯಸ್ಥಾನಕ್ಕೆ ಅವನನ್ನು ಎಳೆದುಕೊಂಡು ಹೋದರು. ಅಲ್ಲಿ ಒಂದು ಶೂಲದ ಕಂಬ. ರಕ್ತದಿಂದ ಕೆಂಪಾದ ಮೊನಚಾದ ಅದರ ಸಲಾಕಿಯ ಮೇಲಿನಿಂದ ಆಗ ತಾನೆ ಅವನ ಸ್ನೇಹಿತನೊಬ್ಬನ ಶರೀರವನ್ನು ಕಿತ್ತು ತೆಗೆದರು. ಈ ಶೂಲವನ್ನು ತನಗಾಗಿಯೇ ಈ ರೀತಿ ಸಿದ್ಧಗೊಳಿಸಿರುವರೆಂದು ಲೈಲಿಗೆ ಸ್ಪಷ್ಟವಾಗಿ ಹೊಳೆಯಿತು. ಮೈಮೇಲಿನ ಬಟ್ಟೆಯನ್ನೆಲ್ಲ ತೆಗೆದು ಹಾಕಿದರು. ಮೊದಲು ಅಷ್ಟು ಅಂದವಾಗಿಯೂ ಗಟ್ಟಿಮುಟ್ಟಾಗಿಯೂ ಇದ್ದ ತನ್ನ ದೇಹವು ಅಷ್ಟು ಕೃಶವಾಗಿ ಸವೆದು ಹೋದದ್ದನ್ನು

ಕಂಡು ಲೈಲಿಗೆ ಗಾಬರಿಯಾಯಿತು, ಮಿತಿಮೀರಿದ ಭಯವಾಯಿತು. ಕಟುಕರು ಕೃಶವಾದ ಕಾಲುಗಳೆರಡನ್ನೂ ಹಿಡಿದು ಮೇಲಕ್ಕೆತ್ತಿ ಆ ಶರೀರವನ್ನು ಶೂಲದ ಮೊನೆಯ ಮೇಲಕ್ಕೆ ಇಳಿಸುತ್ತಿದ್ದರು.

ಲೈಲಿಯು 'ಇದು ಸಾವು, ಎಂದರೆ ಇಲ್ಲದಂತಾಗುವುದು' ಎಂದು ಯೋಚಿಸಿದನು. ಕೊನೆಯವರೆಗೂ ಬಂದದ್ದೆಲ್ಲ ಬರಲೆಂದು ಧೀರನಾಗಿ ಉದಾಸೀನನಾಗಿದ್ದುಬಿಡಬೇಕೆಂದು ಮಾಡಿಕೊಂಡಿದ್ದ ದೃಢಸಂಕಲ್ಪವು ಮರೆತುಹೋಯಿತು. ಬಿಕ್ಕಿ ಬಿಕ್ಕಿ ಅಳುತ್ತ, ದಯೆ ತೋರಿಸಿರೆಂದು ಬೇಡಿಕೊಂಡನು. ಆದರೇನು, ಆ ಪ್ರಾರ್ಥನೆಯನ್ನು ಯಾರೂ ಕಿವಿಗೆ ಹಾಕಿಕೊಳ್ಳರು.

'ಇದೇನಿದು! ಹೀಗೆಂದಿಗೂ ಇರಲಾರದು. ನಾನೆಲ್ಲಿಯೋ ನಿದ್ದೆ ಮಾಡುತ್ತಿರಬೇಕು. ಇದು ಕನಸು' ಎಂದುಕೊಂಡನು.

ನಿದ್ದೆಯನ್ನು ಬಿಟ್ಟು ಎಚ್ಚರ ಮಾಡಿಕೊಳ್ಳುವುದಕ್ಕೆ ಪ್ರಯತ್ನ ಮಾಡಿದನು! ನಾನು ಲೈಲಿಯಲ್ಲ, ಅಸ್ಸರ್‌ಹಾಡನ್ ಎಂದು ಯೋಚಿಸಿದನು. ಆಗ ಎಚ್ಚರವೇನೋ ಆಯಿತು. ಎಚ್ಚತ್ತು ನೋಡಿಕೊಳ್ಳುತ್ತಾನೆ, ತಾನು ಅಸ್ಸರ್‌ಹಾಡನ್ನನೂ ಅಲ್ಲ, ಲೈಲಿಯೂ ಅಲ್ಲ, ಯಾವುದೋ ಒಂದು ಪಶುವಾಗಿಬಿಟ್ಟಿದ್ದನು

ನಾನು ಪಶುವಾಗಿಬಿಟ್ಟಿರುವೆನಲ್ಲಾ ಎಂದು ಅಸ್ಸರ್‌ಹಾಡನ್ನನಿಗೆ ಪರಮಾಶ್ಚರ್ಯವಾಯಿತು. ಇದಕ್ಕೆ ಮೊದಲು ನನಗೆ ಗೊತ್ತೇ ಇರಲಿಲ್ಲವಲ್ಲಾ ಎಂದು ಇನ್ನು ಮಿಗಿಲಾದ ಆಶ್ಚರ್ಯವಾಯಿತು.

ಒಂದು ಸೊಗಸಾದ ಕಣಿವೆ. ಅದರ ನಡುವೆ ಸೊಂಪಾಗಿ ಬೆಳೆದಿದ್ದ ರಸವತ್ತಾದ ಹುಲ್ಲನ್ನು ಹಲ್ಲಿನಿಂದ ಕತ್ತರಿಸಿ ಮೇಯುತ್ತ ನಿಂತಿದಾನೆ, ಮೈಗೆ ಮುತ್ತಿಕೊಳ್ಳುವ ನೊಣಗಳನ್ನು ತನ್ನ ಉದ್ದವಾದ ಬಾಲದಿಂದ ಓಡಿಸುತ್ತಿದಾನೆ. ಹೀಗೆ ಮೇಯುತ್ತಿರುವಾಗ ಕೆಚ್ಚಲಿನಲ್ಲಿ ಏನೋ ಒಂದು ಬಗೆಯ ಭಾರ ತೋರುತ್ತಿದೆ. ತನ್ನ ಬಳಿಯಲ್ಲಿ ಸ್ವಲ್ಪ ದೂರದಲ್ಲಿಯೇ

ಒಂದು ಕತ್ತೆಯ ಮರಿ ನೆಗೆದು ಹಾರಿ ಆನಂದವಾಗಿ ಆಟವಾಡುತ್ತಿದೆ. ಉದ್ದವಾದ ಕಾಲುಗಳು, ಊದಿ ಬಣ್ಣದ ಮೈ, ಬೆನ್ನ ಮೇಲೆ ಉದ್ದಕ್ಕೂ ಪಟ್ಟೆಯಂತೆ ಒಂದು ಗುರುತು—ಹೀಗೆ ಮರಿ ಮುದ್ದಾಗಿ ಕಾಣುತ್ತಿದೆ ಈ ಮರಿ ಹಿಂದಿನ ಕಾಲುಗಳೆರಡನ್ನೂ ನೀಡಿ ನೀಡಿ ಒದೆಯುತ್ತ, ಬಹು ವೇಗವಾಗಿ ಓಡಿ ಅಸ್ಸರ್‌ಹಾಡನ್ನನ ಬಳಿಗೆ ಬಂದಿತು. ಹತ್ತಿರ ಬಂದು ತನ್ನ ಮೃದುವಾದ ಮೂತಿಯನ್ನು ನೀಡಿ, ಅಸ್ಸರ್‌ಹಾಡನ್ನನ ಹೊಟ್ಟೆಯ ಕೆಳಭಾಗವನ್ನು ಮೆಲ್ಲ ಮೆಲ್ಲನೆ ಸವರುತ್ತ ಮೊಲೆಗಳನ್ನು ಹುಡುಕಾಡಿತು. ಸಿಕ್ಕಿದ ಕೂಡಲೆ ನಲಿದಾಡುತ್ತ ಮೊಲೆಯುಂಡು ಕ್ರಮವಾಗಿ ಹಾಲನ್ನು ನುಂಗುತ್ತ ನಿಂತಿತು. ಆಗ ಅಸ್ಸರ್‌ಹಾಡನ್ನನಿಗೆ ತಾನೊಂದು ಹೆಣ್ಣು ಕತ್ತೆಯೆಂದೂ, ಆ ಮರಿಯ ತಾಯಿಯೆಂದೂ ತಿಳಿಯಿತು. ಇದನ್ನರಿತು ಅವನಿಗೆ ವಿಸ್ಮಯವೂ ಆಗಲಿಲ್ಲ . ದುಃಖವೂ ಆಗಲಿಲ್ಲ. ಇದಕ್ಕೆ ಬದಲಾಗಿ ಬಹು ಸಂತೋಷವಾಯಿತು.

ತನ್ನಲ್ಲಿಯೂ ತನ್ನ ಸಂತತಿಯಲ್ಲಿಯೂ, ಏಕಕಾಲದಲ್ಲಿ ಜೀವನದ ಝರಿ ಹರಿಯುತ್ತಿರಲು ಅನಿರ್ವಚನೀಯವಾದ ಒಂದು ಬಗೆಯ ಅಪಾರ ಸುಖವನ್ನು ಅನುಭವಿಸಿದನು ಹೀಗಿರುವಲ್ಲಿ ಸಿಳ್ಳು ಹಾಕಿದಂತೆ ಶಬ್ದ ಮಾಡುತ್ತ ಏನೋ ಒಂದು ವಸ್ತು ತಟಕ್ಕನೆ ಹತ್ತಿರಕ್ಕೆ ಹಾರಿ ಬಂದು, ಪಕ್ಕವನ್ನು ತಾಗಿ, ಚೂಪಾದ ಮೊನೆಯಿಂದ ಮೈಯ ಚರ್ಮವನ್ನು ಭೇದಿಸಿ, ಮಾಂಸಖಂಡದಲ್ಲಿ ಆಳವಾಗಿ ನಾಟಿಕೊಂಡಿತು ಉರಿಯಂತೆ ಬೇಯುತ್ತಿರುವ ನೋವಿನಿಂದ ಸಂಕಟಪಡುತ್ತ ಕತ್ತೆಯ ರೂಪದ ಅಸ್ಸರ್‌ಹಾಡನ್ನನು ಮರಿಯ ಹಲ್ಲುಗಳ ನಡುವೆ ಸಿಕ್ಕಿಕೊಂಡ ಮೊಲೆಯನ್ನು ರಭಸದಿಂದ ಬಿಡಿಸಿ ಕೊಂಡು, ಕಿವಿಗಳನ್ನು ಹಿಂದಕ್ಕೆ ಒಗ್ಗಿಸಿ, ಕತ್ತೆಗಳ ಹಿಂಡಿನ ಬಳಿಗೆ ನಾಗಾಲೋಟದಿಂದ ಓಡಿದನು. ಮರಿಯೂ ಅವನನ್ನು ಬೆಂಬಿಡದೆ ಹಿಂದೆಯೇ ಓಡುತ್ತ ಅನುಸರಿಸಿ ಹೋಯಿತು. ಹಿಂಡೂ ಮುಂದಕ್ಕೆ ನಡೆಯಲು ಹೊರಟು ನಿಂತಿದ್ದಿತು. ಅಸ್ಸರ್‌ಹಾಡನ್ನನೂ ಮರಿಯೂ ಇನ್ನೇನು

ಹಿಂಡನ್ನು ಸೇರಬೇಕು, ಅಷ್ಟರಲ್ಲಿ ಮತ್ತೊಂದು ಬಾಣ ಪೂರ್ಣ ವೇಗದಿಂದ ತೂರಿ ಒಂದು ಮರಿಯ ಕುತ್ತಿಗೆಗೆ ತಗುಲಿ ಮಾಂಸ ಖಂಡದಲ್ಲಿ ನೆಟ್ಟು ಕೊಂಡಿತು. ಮರಿ ಕಣ್ಣೀರಿಟ್ಟು ಎದೆ ಕರಗುವಂತೆ ಗೋಳಾಡುತ್ತ ಮಂಡಿ ಯೂರಿ ಬಿದ್ದುಬಿಟ್ಟಿತು. ಅಸ್ಸರ್‌ಹಾಡನ್ನನಿಗೆ ಅದನ್ನು ಬಿಟ್ಟುಹೋಗಲು ಮನಸ್ಸು ಒಬ್ಬಲಿಲ್ಲ. ಅದರ ಒಳಿಯಲ್ಲೇ, ಅದರ ರಕ್ಷಣೆಗಾಗಿ ನಿಂತು ಕೊಂಡನು. ಮರಿ ಮೇಲಕ್ಕೆದ್ದು, ಉದ್ದವಾದ ತೆಳ್ಳನೆಯ ಕಾಲುಗಳನ್ನೆಳೆದು ಅತ್ತಿತ್ತ ತೂರಾಡಿ ಮತ್ತೆ ಕೆಳಕ್ಕೆ ಬಿದ್ದುಬಿಟ್ಟಿತು.

ಭಯಂಕರಾಕಾರದ ದ್ವಿಪಾದಿಯಾದ ಒಂದು ಪ್ರಾಣಿ--ಮನುಷ್ಯ-- ಓಡಿ ಬಂದು ಮರಿಯ ಕುತ್ತಿಗೆಯನ್ನು ಕತ್ತರಿಸಿತು.

'ಇದೇನಿದು, ಎಂದಿಗೂ ಹೀಗಿರಲಾರದು! ಇದೂ ಕನಸೇ ಸರಿ!' ಎಂದುಕೊಂಡು ಅಸ್ಸರ್‌ಹಾಡನ್ನನು ಎಚ್ಚರಗೊಳ್ಳುವುದಕ್ಕೆ ಕಡೆಯ ಸಲ ಬಹಳವಾಗಿ ಪ್ರಯತ್ನ ಮಾಡಿದನು

ಮೆಲ್ಲಗೆ ಚೀರಿ ಕೂಡಲೇ ತಲೆಯನ್ನು ನೀರಿನಿಂದ ಮೇಲಕ್ಕೆತ್ತಿದನು. ಮುದುಕನು ಹೂಜಿಯಲ್ಲಿದ್ದ ನೀರನ್ನು ತಲೆಯ ಮೇಲೆ ಸುರಿಯುತ್ತ ಪಕ್ಕ ದಲ್ಲಿಯೇ ನಿಂತಿದ್ದನು.

'ಅಬ್ಬಬ್ಬಾ, ಎಷ್ಟು ಯಾತನೆಯನ್ನನುಭವಿಸಿದೆ! ಎಷ್ಟು ಕಾಲ ಗೋಳಾಡಿದೆ!' ಎಂದನು.

ಮುದುಕನು 'ಅದು ಹೇಗೆ? ಈಗನ್ನೂ ನೀನು ನೀರಿನಲ್ಲಿ ಮುಳುಗಿ ಕೂಡಲೆ ತಲೆಯನ್ನು ಮೇಲಕ್ಕೆತ್ತಿದೆ. ಹೂಜಿಯ ನೀರನ್ನು ಇನ್ನೂ ಪೂರ್ತಿ ಯಾಗಿ ಸುರಿದೇ ಇಲ್ಲ. ಈಗ ತಿಳಿಯಿತೋ ನಿನಗೆ?' ಎಂದನು.

ಅಸ್ಸರ್‌ಹಾಡನ್ನನು ಮರು ಮಾತಾಡಲಿಲ್ಲ. ಗಾಬರಿಯಿಂದಲೂ ಭೀತಿಯಿಂದಲೂ ಮುದುಕನನ್ನು ನೋಡುತ್ತ ನಿಂತನು.

ಮುದುಕನು ಹೇಳತೊಡಗಿದನು. 'ಲೈಲಿಯು ನೀನೇ ಎಂದು ತಿಳಿಯಿತಷ್ಟೆ? ನೀನು ಕೊಲ್ಲಿಸಿದ ಆ ದಂಡಾಳುಗಳು ಕೂಡ ನೀನೇ ಎಂದು

ಈಗ ಗೊತ್ತಾಯಿತಷ್ಟೆ? ಬೇಟೆಯಲ್ಲಿ ಕೊಂದು ತಂದು ಹಬ್ಬದೂಟದಲ್ಲಿ ತಿಂದು ತೇಗಿದ ಆ ಪಶುಗಳೂ ನೀನೇ. ಪ್ರಾಣವು ನಿನ್ನಲ್ಲಿ ಮಾತ್ರ ಇರುವುದೆಂದು ನೀನು ತಿಳಿದುಕೊಂಡಿದ್ದೆ. ಈ ಭ್ರಾಂತಿಯ ಆವರಣವನ್ನು ನಾನು ಕಿತ್ತುಕೊಂಡು, ಇತರರಿಗೆ ಕೇಡು ಮಾಡಿದಾಗಲೆಲ್ಲ ನಿನಗೆ ನೀನೇ ಕೇಡು ಮಾಡಿಕೊಂಡೆ ಎಂಬ ಸತ್ಯವನ್ನು ಪ್ರತ್ಯಕ್ಷವಾಗಿ ತೋರಿಸಿಕೊಟ್ಟೆ.

'ಪ್ರಾಣವು ಒಂದೇ ಒಂದು, ಎಲ್ಲ ಕಡೆಯಲ್ಲಿಯೂ ಹರಡಿಕೊಂಡಿದೆ. ಎಲ್ಲ ಕಡೆಯಲ್ಲಿಯೂ ಹರಡಿ ಅಖಂಡವಾಗಿರುವ ಈ ಪ್ರಾಣದ ಒಂದು ಅಂಶ ಮಾತ್ರ ನಿನ್ನಲ್ಲಿ ಹೊರಹೊಮ್ಮುತ್ತಿದೆ. ನಿನ್ನಲ್ಲಿ ಹೊರಹೊಮ್ಮುತ್ತಿರುವ ಅಖಂಡ ಪ್ರಾಣದ ಈ ಚಿಕ್ಕ ಭಾಗದಲ್ಲಿ ಮಾತ್ರ ನಿನ್ನ ಆಟ, ನೀನು ಪ್ರಾಣವನ್ನು ಉತ್ತಮಗೊಳಿಸುವುದಾಗಲಿ, ನೋಯಿಸುವುದಾಗಲಿ, ಹೆಚ್ಚಿಸುವುದಾಗಲಿ, ಕುಂದಿಸುವುದಾಗಲಿ ಈ ಚಿಕ್ಕ ಆವರಣದಲ್ಲಿ ಮಾತ್ರವೇ.

'ನಿನ್ನಲ್ಲಡಗಿರುವ ಪ್ರಾಣವನ್ನು ಉತ್ತಮಗೊಳಿಸುವುದಕ್ಕೆ, ನಿನ್ನ ಪ್ರಾಣವನ್ನೂ ಇತರ ಜೀವಿಗಳ ಪ್ರಾಣವನ್ನೂ ಬೇರೆ ಬೇರೆ ಎಂದು ವಿಭಾಗಿಸುವ ಆವರಣಗಳನ್ನು ನಾಶಮಾಡುವುದರ ಮೂಲಕ ಇತರ ಪ್ರಾಣಿಗಳೆಲ್ಲ ನಾನೇ ಎಂದು ತಿಳಿದು ಅವೆಲ್ಲವನ್ನೂ ಪ್ರೀತಿಸುವುದೇ ಸರಿಯಾದ ಸಾಧನ. ಹೀಗೆ ಮಾಡಿದರೆ ನಿನ್ನ ಪ್ರಾಣವನ್ನು ಹೆಚ್ಚಿಸಿಕೊಂಡಂತಾಗುವುದು.

'ಪ್ರಾಣವೆಂದರೆ ನಿನ್ನ ಪ್ರಾಣಮಾತ್ರವೆಂದು ತಿಳಿದು, ಈ ನಿನ್ನ ಪ್ರಾಣದ ಸುಖಗಳನ್ನು ಹೆಚ್ಚಿಸಿಕೊಳ್ಳಲು ಹೆಣಗುತ್ತ ಅದಕ್ಕಾಗಿ ಇತರ ಪ್ರಾಣಿಗಳ ಸುಖವನ್ನು ತುಳಿದು ಮಣ್ಣು ಗುಡಿಸತೊಡಗಿದಾಗಲೆಲ್ಲ ನಿನ್ನ ಪ್ರಾಣಕ್ಕೆ ನೀನಾಗಿಯೇ ಯಾತನೆಯನ್ನು ತಂದೊಡ್ಡುತ್ತಿರುವೆ. ಹಾಗೆ ಮಾಡಿದರೆ ನಿನ್ನ ಪ್ರಾಣವನ್ನು ಕುಂದಿಸಿದಂತಾಗುವುದು.

'ಇತರರಲ್ಲಿರುವ ಪ್ರಾಣವನ್ನು ನಾಶಮಾಡುವ ಶಕ್ತಿ ನಿನಗಿಲ್ಲ. ನೀನು ಕೊಲ್ಲಿಸಿದ ಜೀವಿಗಳ ಪ್ರಾಣವು ನಿನ್ನ ಕಣ್ಣಿಗೆ ಕಾಣದೆ ಮರೆ

ಯಾಗಿದೆ, ಆದರೆ ನಾಶವಾಗಿ ಹೋಗಲಿಲ್ಲ. ಇತರರ ಜೀವಮಾನವನ್ನು ಕುಗ್ಗಿಸಿ ನಿನ್ನ ಜೀವಮಾನವನ್ನು ಹೆಚ್ಚಿಸಕೊಳ್ಳಬೇಕೆಂದು ಬಯಸಿದೆ. ಆದರೆ ನೀನು ಹೀಗೆ ಮಾಡಲಾರೆ. ಪ್ರಾಣಕ್ಕೆ ಕಾಲದ ಮತ್ತು ಸ್ಥಳದ ನಿರ್ಬಂಧ ವಿಲ್ಲ. ಒಂದು ಕ್ಷಣದ ಪ್ರಾಣ, ಸಾವಿರ ವರ್ಷದ ಜೀವನ, ನಿನ್ನ ಪ್ರಾಣ, ಕಣ್ಣಿಗೆ ಕಾಣಿಸುವ ಮತ್ತು ಕಾಣಿಸದ ನಾನಾ ರೀತಿಯ ಇತರ ಎಲ್ಲ ಪ್ರಾಣಿಗಳ ಜೀವಮಾನ—ಇವುಗಳೆಲ್ಲ ಒಂದೇ ಸಮ. ಸ್ವಲ್ಪವೂ ಭೇದವಿಲ್ಲ. ಸ್ಥಿರವಾಗಿ, ಸತ್ಯವಾಗಿರುವುದು ಪ್ರಾಣವೊಂದೇ; ಆದ್ದರಿಂದ ಅದನ್ನು ನಾಶಮಾಡುವುದಕ್ಕಾಗಲಿ, ಮಾರ್ಪಡಿಸುವುದಕ್ಕಾಗಲಿ ಯಾರಿಗೂ ಸಾಗದು. ಈ ಪ್ರಾಣಶಕ್ತಿಯೊಂದನ್ನು ಬಿಟ್ಟರೆ ಉಳಿದುದೊಂದೂ ಸತ್ಯ ವಲ್ಲ, ಅವುಗಳಿರುವಂತೆ ಕಾಣುವುದು ಬರಿಯ ತೋರಿಕ.'

ಇಷ್ಟು ಹೇಳಿ ಆ ಮುದುಕನು ಅದೃಶ್ಯನಾದನು.

ಮರುದಿನ ಬೆಳಗ್ಗೆ ಅಸ್ಸರ್‌ಹಾಡ್ಡನ್ ದೊರೆ ಲೈಲಿಯನ್ನೂ ಉಳಿದ ಎಲ್ಲ ಸೆರೆಯಾಳುಗಳನ್ನೂ ಬಿಡುಗಡೆ ಮಾಡಿಸಿದನು.

ಮೂರನೆಯ ದಿನ ತನ್ನ ಮಗ ಅಶರ್‌ಬನಿಪಲನನ್ನು ಕರಸಿ ರಾಜ್ಯಾಧಿ ಕಾರವನ್ನೆಲ್ಲಾ ಅವನ ವಶಕ್ಕ ಕೊಟ್ಟುಬಿಟ್ಟನು. ಆಮೇಲೆ ತಾನು ಹೊಸ ದಾಗಿ ಕಲಿತುಕೊಂಡ ಸಂಗತಿಗಳನ್ನು ಮನಸ್ಸಿನಲ್ಲೇ ಧ್ಯಾನಿಸುತ್ತ ಕಾಡಿಗೆ ಹೊರಟುಹೋದನು. ಕಡೆಕಡೆಗೆ ಅವನು ಯಾತ್ರಿಕನಂತೆ ಊರೂರು ಸುತ್ತುತ್ತ 'ಪ್ರಾಣವು ಒಂದೇ ಒಂದು, ಅಖಂಡವಾದದ್ದು. ಜನರು ಇತರ ಪ್ರಾಣಿ ಗಳನ್ನು ಪೀಡಿಸಲೆಳಸುವುದು ತಮಗೆ ತಾವೇ ಯಾತನೆಯನ್ನು ತಂದು ಕೊಂಡಂತೆ' ಎಂಬ ತತ್ವವನ್ನು ಪಟ್ಟಣಗಳಲ್ಲಿಯೂ ಹಳ್ಳಿಗಳಲ್ಲಿಯೂ ಒಂದೇ ರೀತಿಯಾಗಿ ಉಪದೇಶಿಸುತ್ತ ಜೀವಮಾನವನ್ನು ಕಳೆದನು.

---

# ಮೂರು ಪ್ರಶ್ನೆಗಳು

ಒಬ್ಬ ರಾಜನು ಒಂದು ಸಲ, ಪ್ರತಿಯೊಂದು ಕೆಲಸವನ್ನೂ ಪ್ರಾರಂಭಿಸಲು ಸರಿಯಾದ ಕಾಲ ಯಾವುದೆಂದು ಗೊತ್ತಿದ್ದರೆ, ಯಾರ ಸಂಗಡ ಕೆಲಸಮಾಡಬೇಕು, ಯಾರ ಸಂಗಡ ಮಾಡಬಾರದು ಎಂಬುದು ತಿಳಿದಿದ್ದರೆ, ಮತ್ತು ಕೆಲಸಗಳಲ್ಲೆಲ್ಲ ಅತ್ಯಂತ ಮುಖ್ಯವಾದದ್ದು ಯಾವುದೆಂಬುದು ಸದಾ ತನಗೆ ಗೊತ್ತಾಗುವ ಹಾಗಿದ್ದರೆ, ಆಗ ತನಗೆ ಎಂದಿಗೂ ಸೋಲೆಂಬುದೇ ಇರುತ್ತಿರಲಿಲ್ಲವೆಂದು ಯೋಚಿಸಿದನು. ಹೀಗೆ ಯೋಚಿಸಿ, ಪ್ರತಿಯೊಂದು ಕೆಲಸಕ್ಕೂ ಸರಿಯಾದ ಕಾಲವನ್ನು ಗೊತ್ತುಮಾಡುವುದು ಹೇಗೆ? ಅತ್ಯಂತ ಆವಶ್ಯಕವಾಗಿ ಬೇಕಾದ ಜನರು ಯಾರು? ಕೆಲಸಗಳಲ್ಲೆಲ್ಲ ಇದೇ ಅತ್ಯಂತ ಮುಖ್ಯವಾದದ್ದೆಂದು ತಪ್ಪಿಲ್ಲದಂತೆ ನಿರ್ಧರಿಸುವುದು ಹೇಗೆ?—ಎಂಬುದನ್ನು ಕಲಿಸಿಕೊಡುವವರಿಗೆ ಭಾರಿಯ ಬಹುಮಾನವನ್ನು ಕೊಡುವುದಾಗಿ ತನ್ನ ರಾಜ್ಯದಲ್ಲೆಲ್ಲಾ ಪ್ರಸಿದ್ಧಪಡಿಸಿದನು.

ಮೊದಲನೆಯ ಪ್ರಶ್ನೆಯನ್ನು ಕುರಿತು, ಪ್ರತಿಯೊಂದು ಕೆಲಸಕ್ಕೂ ಸರಿಯಾದ ಕಾಲವನ್ನು ತಿಳಿದಿರುವುದಕ್ಕಾಗಿ ಪ್ರತಿದಿನದಲ್ಲಿಯೂ, ತಿಂಗಳಿನಲ್ಲಿಯೂ, ವರ್ಷದಲ್ಲಿಯೂ ಮಾಡಬೇಕಾದ ಕೆಲಸಗಳನ್ನೆಲ್ಲ ಮೊದಲೇ ಗೊತ್ತುಮಾಡಿ ಪಟ್ಟಿ ಬರೆದಿಟ್ಟುಕೊಂಡು, ಹೀಗೆ ನಿರ್ಧರಿಸಿದ ಏರ್ಪಾಡನ್ನು ತಪ್ಪದೆ ಅನುಸರಿಸುತ್ತ ಬರಬೇಕೆಂದೂ ಆಗ ಮಾತ್ರ ಪ್ರತಿಯೊಂದು ಕೆಲಸವನ್ನೂ ಅದಕ್ಕದಕ್ಕೆ ತಕ್ಕ ತಕ್ಕ ಕಾಲದಲ್ಲಿ ನಡಸಲು ಸಾಧ್ಯವಾಗುವುದೆಂದೂ ಕೆಲವರು ಹೇಳಿದರು. ಪ್ರತಿಯೊಂದು ಕೆಲಸವನ್ನೂ ಯಾವಾಗ ಮಾಡಬೇಕೆಂಬುದನ್ನು ಮೊದಲೇ ನಿರ್ಧರಿಸಲಾಗದೆಂದೂ ಮನಸ್ಸನ್ನು ನಾನಾ ಕಡೆಗೆ ಸೆಳೆಯುವ ಹುರುಳಿಲ್ಲದ ವಿನೋದಗಳಲ್ಲಿ ತೊಡಗದೆ ದೂರವಾಗಿದ್ದು, ಆಗಾಗ ನಡೆಯುತ್ತಿರುವ ಸಂಗತಿಗಳನ್ನೆಲ್ಲ ಚೆನ್ನಾಗಿ

ಗಮನಿಸುತ್ತ ಯಾವುದು ಆಗತ್ಯವೋ ಅದನ್ನು ಮಾತ್ರ ಮಾಡಬೇಕೆಂದೂ ಮತ್ತೆ ಕೆಲವರು ಹೇಳಿದರು. ಉಳಿದ ಕೆಲವರು, ನಡೆಯುತ್ತಿರುವ ಸಂಗತಿಗಳೆಲ್ಲವನ್ನೂ ರಾಜನು ಎಷ್ಟೇ ಗಮನವಿಟ್ಟು ನೋಡಿಕೊಳ್ಳುತ್ತಿದ್ದರೂ ಯಾವಾಗ ಯಾವುದನ್ನು ಮಾಡಬೇಕೆಂಬುದನ್ನು ಎಲ್ಲಾ ಕಾಲದಲ್ಲಿಯೂ ಒಬ್ಬನೇ ಒಬ್ಬನು ಗೊತ್ತುಮಾಡುವುದು ಸಾಧ್ಯವಲ್ಲವೆಂದೂ, ಆದರೆ ವಿವೇಕವಂತರಾದ ಜ್ಞಾನಿಗಳ ಬುದ್ಧಿವಾದವನ್ನು ಕೇಳಿ, ಅವರ ಸಲಹೆಗನುಸಾರವಾಗಿ ಯಾವಾಗ ಮಾಡಬೇಕೆಂಬುದನ್ನು ನಿರ್ಧರಿಸಬೇಕೆಂದೂ ಹೇಳಿದರು.

'ಸಲಹೆ ಕೊಡುವ ಸಚಿವರನ್ನು ವಿಚಾರಿಸುವುದಕ್ಕೆ ಹೊತ್ತೇ ಇಲ್ಲದೆ, ಆಯಾ ಕಲಸವನ್ನು ಪ್ರಾರಂಭಿಸುವುದಕ್ಕೆ ಅದು ಸಕಾಲ ಹೌದೋ ಅಲ್ಲವೋ ಎಂಬುದನ್ನು ಆ ಕ್ಷಣವೇ ನಿರ್ಧರಿಸಬೇಕಾದ ಸಂದರ್ಭಗಳೂ ಇರುವುವು, ಅಂಥ ಸಂದರ್ಭದಲ್ಲಿ ಹೇಗೆ ಮಾಡಬೇಕೆಂದು ತಿಳಿಯಬೇಕಾದರೆ ಮುಂದೇನು ಸಂಭವಿಸುವುದೆಂಬುದನ್ನು ಮೊದಲೇ ಗೊತ್ತು ಮಾಡಿಕೊಂಡಿರುವುದು ಆವಶ್ಯಕ ಅದು ದೈವಜ್ಞರಿಗೆ ಮಾತ್ರ ಗೊತ್ತು. ಆದ್ದರಿಂದ ಪ್ರತಿಯೊಂದು ಕೆಲಸಕ್ಕೂ ಸರಿಯಾದ ಕಾಲ ಯಾವುದೆಂದು ತಿಳಿಯಬೇಕಾದರೆ ಕಾಲಜ್ಞಾನಿಗಳನ್ನು ಕೇಳಬೇಕು' ಎಂದು ಇನ್ನು ಕೆಲವರು ಹೇಳಿದರು.

ಎರಡನೆಯ ಪ್ರಶ್ನೆಗೂ ಬಗೆ ಬಗೆಯ ಉತ್ತರಗಳು ಬಂದವು. ರಾಜನಿಗೆ ಅತ್ಯಂತ ಆವಶ್ಯಕವಾಗಿ ಬೇಕಾದವರು ಸಲಹೆ ಕೊಡುವ ಸಚಿವರೆಂದು ಕೆಲವರೂ, ಪುರೋಹಿತರೆಂದು ಕೆಲವರೂ, ವೈದ್ಯರೆಂದು ಕೆಲವರೂ, ಸೈನಿಕರೇ ರಾಜನಿಗೆ ಎಲ್ಲರಿಗಿಂತ ಹೆಚ್ಚು ಆವಶ್ಯಕವೆಂದು ಮತ್ತೆ ಕೆಲವರೂ ಹೇಳಿದರು.

ಎಲ್ಲಕ್ಕಿಂತ ಮುಖ್ಯವಾದ ಕೆಲಸ ಯಾವುದೆಂಬ ಮೂರನೆಯ ಪ್ರಶ್ನೆಗೆ ಕೆಲವರು । ಪ್ರಪಂಚದಲ್ಲಿ ಅತ್ಯಂತ ಮುಖ್ಯವಾದದ್ದು ಶಾಸ್ತ್ರಗಳೆಂದು ಉತ್ತರ ಕೊಟ್ಟರು. ಯುದ್ಧವಿದ್ಯಾ ನೈಪುಣ್ಯವೇ ಮುಖ್ಯತಮ

ವಾದದ್ದೆಂದು ಮತ್ತೆ ಕೆಲವರು ಹೇಳಿದರು. ಉಳಿದ ಕೆಲವರು ಧರ್ಮಸಮ್ಮತ ವಾದ ಭಗವದಾರಾಧನೆಯೇ ಮುಖ್ಯತಮವಾದ ಕಾರ್ಯವೆಂದರು.

ಹೀಗೆ ಹಲವು ಬಗೆಯ ಉತ್ತರಗಳು ಒರಲು ರಾಜನು ಅವುಗಳಲ್ಲಿ ಒಂದನ್ನೂ ಒಪ್ಪದೆ ಒಬ್ಬರಿಗೂ ಬಹುಮಾನವನ್ನು ಕೊಡಲಿಲ್ಲ. ಆದರೂ ತನ್ನ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯಿಂದ ಜ್ಞಾನಿಯೆಂದು ಪ್ರಸಿದ್ಧನಾದ ಒಬ್ಬ ಸಾಧುವಿನ ಬಳಿಗೆ ಹೋಗಿ ಕೇಳಬೇಕೆಂದು ತೀರ್ಮಾನಿಸಿದನು.

ಸಾಧು ಒಂದು ಕಾಡಿನಲ್ಲಿ ವಾಸವಾಗಿದ್ದನು ಕಾಡನ್ನು ಬಿಟ್ಟು ಅವನೆಂದೂ ಹೊರಹೊರಡುತ್ತಿರಲಿಲ್ಲ, ಸಾಮಾನ್ಯ ಒಡಜನರನ್ನಲ್ಲದೆ ಮತ್ತೆ ಯಾರನ್ನೂ ತನ್ನ ಬಳಿಗೆ ಬರಗೊಳಿಸುತ್ತಲೂ ಇರಲಿಲ್ಲ. ಆದ್ದರಿಂದ ದೊರೆಯು ಸಾಧಾರಣ ರೀತಿಯ ಉಡುಪನ್ನು ತೊಟ್ಟುಕೊಂಡು, ಸಾಧುವಿನ ಗವಿಯನ್ನು ಸೇರುವುದಕ್ಕೆ ಮುಂಚೆಯೇ ಕುದುರೆಯಿಂದಿಳಿದು ಅಂಗರಕ್ಷಕರನ್ನೆಲ್ಲ ಹಿಂದೆ ನಿಲ್ಲಿಸಿ, ತಾನೊಬ್ಬನೇ ಮುಂದಕ್ಕೆ ನಡೆದನು.

ರಾಜನು ಬಂದಾಗ ಸಾಧು ತನ್ನ ಗುಡಿಸಲಿನ ಮುಂದುಗಡೆ ನೆಲವನ್ನು ಅಗೆಯುತ್ತಿದ್ದನು. ರಾಜನನ್ನು ಕಾಣುತ್ತಲೂ ಅವನಿಗೆ ವಂದಿಸಿ ಯಥಾಪ್ರಕಾರ ಅಗೆಯುತ್ತಲೇ ಇದ್ದನು. ಆ ಸಾಧು ಕುಗ್ಗಿ ಬಹು ಅಶಕ್ತನಾಗಿದ್ದನು, ಪ್ರತಿಯೊಂದು ಸಲ ಗುದ್ದಲಿಯನ್ನು ಮಾಟಿ ಸ್ವಲ್ಪ ಮಣ್ಣನ್ನು ಎತ್ತಿ ಹಾಕಿದಾಗಲೂ ನಿಟ್ಟುಸುರು ಬಿಡುತ್ತಿದ್ದನು.

ರಾಜನು ಅವನ ಸಮೀಪಕ್ಕೆ ಹೋಗಿ 'ಅಯ್ಯಾ ಜ್ಞಾನಿಯೇ, ಮೂರು ಪ್ರಶ್ನೆಗಳಿಗೆ ಉತ್ತರಗಳನ್ನು ಕೇಳುವುದಕ್ಕಾಗಿ ನಿನ್ನ ಬಳಿಗೆ ಬಂದಿದೇನೆ, ಸರಿಯಾದ ಕೆಲಸವನ್ನು ಅದಕ್ಕೆ ಸರಿಯಾದ ಕಾಲದಲ್ಲಿ ಮಾಡುವುದನ್ನು ಹೇಗೆ ಕಲಿತುಕೊಳ್ಳಲಿ ? ನನಗೆ ಅತ್ಯಂತ ಅವಶ್ಯಕವಾಗಿರುವ ಜನರು, ಇತರರೆಲ್ಲರಿಗಿಂತಲೂ ಹೆಚ್ಚಾಗಿ ನಾನು ಗಮನವಿಟ್ಟು ನೋಡಿಕೊಳ್ಳಬೇಕಾದಂಥವರು, ಯಾರು ? ಎಲ್ಲಕ್ಕಿಂತ ಹೆಚ್ಚು ಮುಖ್ಯವಾದ ಕಾರ್ಯ

ಗಳು, ನಾನು ಮೊಟ್ಟಮೊದಲು ಮನಸ್ಸು ಕೊಡಬೇಕಾದ ಕಾರ್ಯಗಳು, ಯಾವವು ?' ಎಂದು ಕೇಳಿದನು

ಸಾಧು ರಾಜನ ಮಾತುಗಳನ್ನು ಕಿವಿಗೊಟ್ಟು ಕೇಳಿದನು, ಆದರೆ ಯಾವ ಉತ್ತರವನ್ನೂ ಕೊಡಲಿಲ್ಲ. ತನ್ನ ಕೈಗೆ ಒಂದು ಸಲ ಉಗುಳಿ ಕೊಂಡು ಮತ್ತೆ ಅಗೆಯುವುದಕ್ಕೆ ಪ್ರಾರಂಭಿಸಿದನು.

ದೊರೆ 'ನೀನು ಬಹಳ ದಣಿದಿರುವೆ. ಗುದ್ದಲಿಯನ್ನು ತೆಗೆದು ಕೊಂಡು ನಾನು ಸ್ವಲ್ಪ ಹೊತ್ತು ಅಗೆಯುತ್ತೇನೆ' ಎಂದನು.

'ಒಳ್ಳೆಯದು' ಎಂದು ಹೇಳಿ ದೊರೆಯ ಕೈಗೆ ಗುದ್ದಲಿಯನ್ನು ಕೊಟ್ಟು ಸಾಧು ನೆಲದ ಮೇಲೆ ಕುಳಿತುಕೊಂಡನು.

ಎರಡು ಪಾತಿಗಳನ್ನು ಅಗೆದ ಬಳಿಕ ದೊರೆಯು ಕೈ ನಿಲ್ಲಿಸಿ ಮತ್ತೆ ಮೊದಲಿನಂತೆಯೇ ಪ್ರಶ್ನೆ ಮಾಡಿದನು. ಆಗಲೂ ಸಾಧು ಉತ್ತರ ಕೊಡ ಲಿಲ್ಲ, ಎದ್ದು ನಿಂತು ಗುದ್ದಲಿಗೆ ಕೈನೀಡಿ, 'ನೀನು ಸ್ವಲ್ಪ ಹೊತ್ತು ಕುಳಿತುಕೊ, ನಾನು ಸ್ವಲ್ಪ ಕೆಲಸಮಾಡುತ್ತೇನೆ' ಎಂದನು.

ಆದರೆ ದೊರೆಯು ಸಾಧುವಿಗೆ ಗುದ್ದಲಿಯನ್ನು ಕೊಡದೆ ಅಗೆಯು ತ್ತಲೇ ಒಂದನು. ಒಂದು ಗಂಟೆ ಕಳೆಯಿತು, ಇನ್ನೊಂದು ಕಳೆಯಿತು ಮರಗಳ ಹಿಂದೆ ಸೂರ್ಯನು ಕೆಳಗಿಳಿಯುವುದಕ್ಕ ಮೊದಲು ಮಾಡಿದನು. ಕಟ್ಟಕಡೆಗೆ ದೊರೆಯು ಗುದ್ದಲಿಯನ್ನು ನೆಲಕ್ಕೆ ನಾಟಿ, 'ಅಯ್ಯಾ ಜ್ಞಾನಿಯೇ ನನ್ನ ಪ್ರಶ್ನೆಗಳಿಗೆ ಉತ್ತರವನ್ನು ತಿಳಿದುಕೊಳ್ಳುವುದಕ್ಕಾಗಿ ನಿನ್ನ ಬಳಿಗೆ ಬಂದೆ. ಯಾವ ಉತ್ತರವನ್ನೂ ಕೊಡುವುದಕ್ಕಾಗದಿದ್ದರೆ, ಹಾಗೆ ಹೇಳಿ ಬಿಡು. ನಾನು ಮನೆಗೆ ಹಿಂದಿರುಗುತ್ತೇನೆ.' ಎಂದನು.

'ಇಲ್ಲಿ ಯಾರೋ ಓಡಿಬರುತ್ತಿದ್ದಾರೆ. ಅವರು ಯಾರೋ ನೋಡೋಣ' ಎಂದನು ಆ ಸಾಧು. ದೊರೆ ತಿರುಗಿ ನೋಡಲು ಅಡವಿಯೊಳಗಿ ನಿಂದ ಗಡ್ಡ ಬಿಟ್ಟುಕೊಂಡಿದ್ದ ಒಬ್ಬ ಮನುಷ್ಯನು ಓಡಿ ಬರುತ್ತಿದ್ದದ್ದನ್ನು ಕಂಡನು. ಆ ಮನುಷ್ಯನು ಕೈಗಳಿಂದ ತನ್ನ ಹೊಟ್ಟೆಯನ್ನು ಅದುಮಿ ಹಿಡಿದು ಕೊಂಡಿದ್ದನು, ಕೈಗಳ ಕೆಳಗಿನಿಂದ ರಕ್ತ ಹೊರಕ್ಕೆ ಹರಿಯುತ್ತಿದ್ದಿತು.

ದೊರೆಯಿದ್ದ ಬಳಿಗೆ ಬಂದು ಸೇರಿದ ಕೂಡಲೆ ಅವನು ಎಚ್ಚರ ತಪ್ಪಿ ಕೆಳಗೆ ಬಿದ್ದು ಬಹು ಮೆಲ್ಲನೆ ನರಳತೊಡಗಿದನು. ದೊರೆಯೂ ಸಾಧುವೂ ಇಬ್ಬರೂ ಸೇರಿ ಅವನ ಬಟ್ಟೆಗಳನ್ನು ಬಿಚ್ಚಿದರು. ಅವನ ಹೊಟ್ಟೆಯಲ್ಲಿ ಒಂದು ದೊಡ್ಡ ಗಾಯವಿದ್ದಿತು. ದೊರೆಯು ಅಲ್ಲಿ ತನಗೆ ಸಾಧ್ಯವಾದ ಮಟ್ಟಿಗೆ ಆ ಗಾಯವನ್ನು ತೊಳೆದು ತನ್ನ ಕರವಸ್ತ್ರವನ್ನೂ ಸಾಧುವಿನ ಹತ್ತಿರಿದ್ದ ಒಂದು ಟವಲನ್ನೂ ತೆಗೆದುಕೊಂಡು ಗಾಯಕ್ಕೆ ಕಟ್ಟಿದನು. ಆದರೆ ರಕ್ತ ಹರಿಯುವುದು ಮಾತ್ರ ನಿಲ್ಲಲಿಲ್ಲ, ಬಿಸಿರಕ್ತದಿಂದ ನೆನೆದ ಆ ಬಟ್ಟೆಯನ್ನು ದೊರೆಯು ಬಿಚ್ಚಿ ಬಿಚ್ಚಿ ತೊಳೆದು ಮತ್ತೆ ಮತ್ತೆ ಗಾಯಕ್ಕೆ ಕಟ್ಟುತ್ತ ಬಂದನು. ಕಟ್ಟಕಡೆಗೆ ರಕ್ತ ಹರಿಯುವುದು ನಿಲ್ಲಲು ಆ ಮನುಷ್ಯನು ಚೇತರಿಸಿಕೊಂಡು ಕುಡಿಯುವುದಕ್ಕೆ ಏನಾದರೂ ಬೇಕೆಂದು ಕೇಳಿದನು. ರಾಜನು ಸ್ವಚ್ಛವಾದ ನೀರು ತಂದು ಅವನಿಗೆ ಕೊಟ್ಟನು. ಅಷ್ಟರಲ್ಲಿ ಹೊತ್ತು ಮುಳುಗಿ ತಂಪಾಗಿದ್ದಿತು. ಆಗ ಸಾಧುವಿನ ಸಹಾಯದಿಂದ ದೊರೆಯು ಆ ಗಾಯಪಟ್ಟವನನ್ನು ಗುಡಿಸಲಿನೊಳಕ್ಕೆ ಎತ್ತಿಕೊಂಡು ಹೋಗಿ ಹಾಸಿಗೆಯ ಮೇಲೆ ಮಲಗಿಸಿದನು. ಹಾಸಿಗೆಯ ಮೇಲೆ ಮಲಗಿಸಲು ಅವನು ಕಣ್ಣು ಮುಚ್ಚಿಕೊಂಡು ಸದ್ದುಮಾಡದೆ ಮಲಗಿಕೊಂಡನು. ರಾಜನೂ ಕೂಡ ಅಷ್ಟು ನಡೆದೂ ಹಾಗೆ ಕೆಲಸ ಮಾಡಿಯೂ ಬಹಳ ಬಳಲಿದ್ದದ್ದರಿಂದ ಬಾಗಿಲ ಬಳಿಯಲ್ಲಿ ಸುರುಟಿಕೊಂಡು, ನಿದ್ದೆ ಹತ್ತಲು ಬೆಳಗಿನವರೆಗೂ ಚೆನ್ನಾಗಿ ನಿದ್ದೆ ಮಾಡಿದನು. ಬೆಳಿಗ್ಗೆ ಎದ್ದಾಗ ತಾನೆಲ್ಲಿರುವೆನೆಂಬುದೂ ಹಾಸಿಗೆಯ ಮೇಲೆ ಮಲಗಿ ಹೊಳೆಯುವ ಕಣ್ಣುಗಳಿಂದ ತನ್ನನ್ನೇ ದುರುಗುಟ್ಟಿ ನೋಡುತ್ತಿರುವ ವಿಲಕ್ಷಣವಾದ ಆ ಗಡ್ಡದ ಮನುಷ್ಯನು ಯಾರೆಂಬುದೂ ಸ್ಮರಣೆಗೆ ಬರುವುದಕ್ಕೆ ಬಹಳ ಹೊತ್ತು ಹಿಡಿಯಿತು.

ದೊರೆ ಎಚ್ಚತ್ತು ತನ್ನನ್ನು ನೋಡುತ್ತಿರುವುದನ್ನು ಕಂಡು ಆ ಗಡ್ಡದ ಮನುಷ್ಯನು 'ನನ್ನನ್ನು ಕ್ಷಮಿಸಬೇಕು' ಎಂದು ಕ್ಷೀಣಸ್ವರದಿಂದ ಕೇಳಿಕೊಂಡನು.

'ನೀನು ಯಾರೋ ನನಗೆ ಗೊತ್ತಿಲ್ಲ. ಕ್ಷಮಿಸಬೇಕಾದಂಥದೇನನ್ನೂ ನೀನು ನನಗೆ ಮಾಡಿಲ್ಲ' ಎಂದು ದೊರೆ ಹೇಳಿದನು.

'ನನ್ನನ್ನು ನೀನು ಅರಿಯೆ, ಆದರೆ ನಾನು ನಿನ್ನನ್ನು ಒಲ್ಲೆ. ನಾನು ನಿನ್ನ ಶತ್ರು. ನನ್ನ ತಮ್ಮನನ್ನು ಮರಣದಂಡನೆಗೆ ಗುರಿಪಡಿಸಿ ಆಸ್ತಿಯನ್ನು ವಶಪಡಿಸಿಕೊಂಡದ್ದರಿಂದ ನಿನ್ನ ಮೇಲೆ ಸೇಡು ತೀರಿಸಿ ಕೊಳ್ಳುವೆನೆಂದು ಆಣೆಯಿಟ್ಟುಕೊಂಡಿದ್ದೆ. ಸಾಧುವನ್ನು ನೋಡುವುದಕ್ಕೆ ನೀನೊಬ್ಬನೇ ಬಂದದ್ದು ನನಗೆ ಗೊತ್ತಿತ್ತು. ಹಿಂದಿರುಗಿ ಹೋಗುವಾಗ ದಾರಿಯಲ್ಲಿ ನಿನ್ನನ್ನು ಕೊಲ್ಲಬೇಕೆಂದು ನಿರ್ಧರಿಸಿದೆನು. ಆದ್ದರಿಂದ ನಿನ್ನನ್ನು ಹುಡುಕುವುದಕ್ಕಾಗಿ ಮರೆಯಿಂದ ಹೊರಕ್ಕೆ ಬಂದು ನಿನ್ನ ಅಂಗರಕ್ಷಕ ರನ್ನು ಸಂಧಿಸಿದೆನು. ಅವರು ನನ್ನನ್ನು ಗುರುತಿಸಿ ಗಾಯಪಡಿಸಿದರು. ಅವರನ್ನೇನೋ ತಪ್ಪಿಸಿಕೊಂಡೆ, ಆದರೆ ನೀನು ನನ್ನ ಗಾಯವನ್ನು ಕಟ್ಟದೆ ಹೋಗಿದ್ದರೆ ರಕ್ತ ಸುರಿದು ಸುರಿದು ಸಾಯುತ್ತಿದ್ದೆ. ನಾನು ನಿನ್ನನ್ನು ಕೊಲ್ಲಬಯಸಿದೆ, ನೀನು ನನ್ನ ಪ್ರಾಣವನ್ನುಳಿಸಿದೆ. ಈಗ ನಾನು ಬದುಕಿ ದರೆ, ಮತ್ತು ನೀನು ಇಷ್ಟಪಟ್ಟರೆ, ನಿನಗೆ ನಂಬಿಕೆಯ ಗುಲಾಮನಾಗಿ ಸೇವೆ ಮಾಡುತ್ತೇನೆ; ಅಲ್ಲದೆ ನನ್ನ ಮಕ್ಕಳೂ ಹಾಗೆ ಮಾಡುವಂತೆ ಕಟ್ಟು ಮಾಡುತ್ತೇನೆ. ನನ್ನನ್ನು ಮನ್ನಿಸಬೇಕು.'

ತನ್ನ ಶತ್ರುವಿನೊಡನೆ ಅಷ್ಟು ಸುಲಭವಾಗಿ ಶಾಂತಿಯುಂಟಾಗಿ ಅವನೂ ಒಬ್ಬ ಸ್ನೇಹಿತನಾದದ್ದಕ್ಕಾಗಿ ದೊರೆಗೆ ಬಹಳ ಹರ್ಷವಾಯಿತು. ಅವನನ್ನು ಕ್ಷಮಿಸಿದ್ದೊಂದೇ ಅಲ್ಲದೆ ಅವನ ಉಪಚಾರಕ್ಕಾಗಿ ತನ್ನ ಸೇವಕ ರನ್ನೂ ತನ್ನ ಸ್ವಂತ ವೈದ್ಯನನ್ನೂ ಕಳುಹಿಸುವುದಾಗಿ ಹೇಳಿ ಅವನ ಆಸ್ತಿ ಯನ್ನು ಅವನಿಗೆ ಹಿಂದಕ್ಕೆ ಕೊಡುವುದಾಗಿ ಮಾತು ಕೊಟ್ಟನು.

ದೊರೆ ಗಾಯಪಟ್ಟಾತನನ್ನು ಬೀಳ್ಕೊಂಡು ಹೊರಕ್ಕೆ ಬಂದು ಸಾಧುವಿಗಾಗಿ ಅತ್ತಿತ್ತ ನೋಡ ತೊಡಗಿನು. ಹಿಂದಿರುಗಿ ಹೋಗುವ ಮೊದಲು ತಾನು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡಬೇಕೆಂದು ಮತ್ತೊಂದು

ಸಲ ಪ್ರಾರ್ಥಿಸಬೇಕೆಂದಿದ್ದನು ಸಾಧು ಹೊರಗಡೆ ಮಂಡಿಯೂರಿ ಕುಳಿತು ಕೊಂಡು ಹಿಂದಿನ ದಿನ ಅಗೆದಿದ್ದ ಪಾತಿಗಳಲ್ಲಿ ಬೀಜಗಳನ್ನು ನೆಡುತ್ತಿದ್ದನು.

ದೊರೆ ಅವನ ಸಮೀಪಕ್ಕೆ ಹೋಗಿ, 'ಜ್ಞಾನಿಯೇ, ನನ್ನ ಪ್ರಶ್ನೆಗಳಿಗೆ ಉತ್ತರ ಕೊಡಬೇಕೆಂದು, ಕಡೆಯ ಸಲ ಪ್ರಾರ್ಥಿಸಿಕೊಳ್ಳುತ್ತೇನೆ' ಎಂದನು.

ಸಾಧು ಕೃಶವಾದ ಕಾಲುಗಳನ್ನು ಊರಿ ಕುಳಿತುಕೊಂಡು ಮುಖ ವನ್ನು ಮೇಲೆತ್ತಿ, ತನ್ನೆದುರಿಗೆ ನಿಂತ ದೊರೆಯನ್ನು ನೋಡುತ್ತ 'ನಿನಗಾಗಲೇ ಉತ್ತರ ಬಂದಿದೆಯಲ್ಲಾ !' ಎಂದನು.

'ಉತ್ತರ ಬಂದಿದೆಯೇ ! ಹಾಗೆಂದರೇನು ?'

ಸಾಧು ಹೇಳಿದನು 'ತಿಳಿಯಲಿಲ್ಲವೇ ? ನಿನ್ನೆ ನನ್ನ ನಿಶ್ಶಕ್ತಿಯನ್ನು ನೋಡಿ ನೀನು ಮರುಕಗೊಳ್ಳದಿದ್ದರೆ, ನನಗೋಸ್ಕರ ಈ ಪಾತಿಗಳನ್ನು ಅಗೆಯದಿದ್ದರೆ, ಹಾಗೆ ಮಾಡುವುದಕ್ಕೆ ಬದಲಾಗಿ ನಿನ್ನ ದಾರಿಹಿಡಿದು ನೀನು ಹಿಂದಿರುಗಿದ್ದರೆ ಆ ಮನುಷ್ಯನು ನಿನ್ನ ಮೇಲೆ ಬೀಳುತ್ತಿದ್ದನು, ನನ್ನ ಜೊತೆಯಲ್ಲಿ ನಿಲ್ಲಲಿಲ್ಲವಲ್ಲಾ ಎಂದು ನೀನು ಪೇಚಾಡಬೇಕಾಗು ತ್ತಿದ್ದಿತು. ಆದ್ದರಿಂದ ಅತ್ಯಂತ ಮುಖ್ಯವಾದ ಕಾಲವೆಂದರೆ ನೀನು ಪಾತಿಗಳನ್ನು ಅಗೆಯುತ್ತಿದ್ದದ್ದು, ನಾನೇ ಎಲ್ಲರಿಗಿಂತ ಹೆಚ್ಚು ಮುಖ್ಯ ನಾದ ಮನುಷ್ಯನಾಗಿದ್ದೆನು, ನನಗೆ ಸಹಾಯಮಾಡುವುದೇ ನಿನಗೆ ಮುಖ್ಯ ತಮವಾದ ಕೆಲಸವಾಗಿದ್ದಿತು. ಆಬಳಿಕ ಆ ಮನುಷ್ಯನು ನಮ್ಮ ಬಳಿಗೆ ಓಡಿ ಬಂದಾಗ, ನೀನು ಅವನಿಗೆ ಉಪಚರಿಸುತ್ತಿದ್ದೆಯಲ್ಲಾ ಅದೇ ಮುಖ್ಯ ತಮವಾದ ಕಾಲವಾಗಿದ್ದಿತು, ನೀನು ಅವನ ಗಾಯಗಳನ್ನು ಕಟ್ಟದೆ ಹೋಗಿದ್ದರೆ ನಿನ್ನೊಡನೆ ಸಮಾಧಾನಮಾಡಿಕೊಳ್ಳದೆಯೇ ಅವನು ಸತ್ತು ಹೋಗುತ್ತಿದ್ದನು. ಆದ್ದರಿಂದ ಅವನೇ ಎಲ್ಲರಿಗಿಂತಲೂ ಮುಖ್ಯನಾದ ಮನುಷ್ಯನಾಗಿದ್ದನು, ಅವನಿಗೆ ನೀನೇನು ಮಾಡಿದೆಯೋ ಅದೇ ನಿನಗೆ ಮುಖ್ಯತಮವಾದ ಕಾರ್ಯವಾಗಿದ್ದಿತು. **ಇದರಿಂದ ಇಷ್ಟನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊ: ಮುಖ್ಯ ಮುಖ್ಯವಾದದ್ದು ಎನ್ನಿಸಿಕೊಳ್ಳುವ**

ಕಾಲ ಒಂದೇ ಒಂದು—ಈಗ! ನಮಗೆ ಏನಾದರೂ ಶಕ್ತಿಯಿರುವುದಾದರೆ ಅದು ಇದೊಂದೇ ಕಾಲದಲ್ಲಿ; ಆದ್ದರಿಂದಲೇ ಇದು ಅತ್ಯಂತ ಮುಖ್ಯ ಕಾಲವೆನ್ನಬೇಕು. ನೀನು ಯಾರ ಸಂಗಡ ಇರುತ್ತೀಯೋ ಅವನೇ ಅತ್ಯಂತ ಆವಶ್ಯಕವಾಗಿ ಬೇಕಾಗಿರುವ ಮನುಷ್ಯ; ಅವನು ಇತರ ಯಾರೊಡನೆಯಾದರೂ ವ್ಯವಹರಿಸುವನೋ ಇಲ್ಲವೋ ಯಾರಿಗೂ ತಿಳಿಯದು. ಮುಖ್ಯತಮವಾದ ಕಾರ್ಯ ಯಾವುದೆಂದರೆ ಅವನಿಗೆ ಒಳ್ಳೆಯದು ಮಾಡುವುದು; ಏಕೆಂದರೆ ಮನುಷ್ಯನನ್ನು ಈ ಜನ್ಮಕ್ಕೆ ಕಳುಹಿಸಿರುವುದು ಅದಕ್ಕಾಗಿಯೇ.'

---

ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು ಸಿಟಿ

# ಟಿಪ್ಪಣಿಗಳು

---

ಪುಟ ೧ **ಜೆರುಸಲೇಮ್**—ಪ್ಯಾಲಸ್ಟೀನ್ ದೇಶದಲ್ಲಿರುವ ಒಂದು ಪಟ್ಟಣ ಹಿಂದುಗಳಿಗೆ ಕಾಶಿ ಹೇಗೋ ಹಾಗೆ ಇದು ಕ್ರಿಶ್ಚಿಯನ್ನರಿಗೂ ಯಹೂದ್ಯರಿಗೂ ಪರಮಪವಿತ್ರವಾದ ಪುಣ್ಯಕ್ಷೇತ್ರ.

೩೧. **ವೆಸ್ಪರ್**—ಸಂಧ್ಯಾಕಾಲದ ಪೂಜೆ, ಪ್ರಾರ್ಥನೆ

**ಮ್ಯಾಟಿನ್**—ಪ್ರಾತಃಕಾಲದ ಪೂಜೆ, ಪ್ರಾರ್ಥನೆ

**ಅಬ್ರಹಾಮನು ಮಗನನ್ನು ಬಲಿಯಾಗಿ ಅರ್ಪಿಸಬೇಕೆಂದಿದ್ದದ್ದು**—ಅಬ್ರಹಾಮನೆಂಬುವನೊಬ್ಬ ಪ್ರಾಚೀನಪುರುಷ ಅವನ ಸಂತತಿಯವರೇ ಯಹೂದ್ಯರು ದೇವರು ಅವನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಅವನಿಗಿದ್ದ ಒಬ್ಬನೇ ಒಬ್ಬ ಮಗನನ್ನು ತನಗೆ ಬಲಿಯಾಗಿ ಅರ್ಪಿಸಬೇಕೆಂದು ಕಟ್ಟುಮಾಡಿದ್ದನು. ಅಬ್ರಹಾಮನು ದೇವರಿಗೆ ಎದುರು ಹೇಳದೆ ಮುಪ್ಪಿನ ಕಾಲದಲ್ಲಿ ಹುಟ್ಟಿದ್ದ ಆ ಮಗನನ್ನು ಬಲಿಕೊಡಲು ಸಿದ್ಧನಾಗಿ ಕತ್ತಿಯನ್ನೆತ್ತಿದನು ಅಷ್ಟರಲ್ಲಿ ದೇವರು ಸಂತುಷ್ಟನಾಗಿ ಮಗನನ್ನು ಕೊಲ್ಲದಂತೆ ತಡೆದು ಅವನಿಗೆ ವರಗಳನ್ನು ಕೊಟ್ಟನು

**ಮೇರಿ ಮ್ಯಾಗ್ಡಲೇನಳಿಗೆ ಕ್ರಿಸ್ತನು ಕಾಣಿಸಿಕೊಂಡದ್ದು**—ಜನರು ತನ್ನನ್ನು ಶಿಲುಬೆಗೆ ಹಾಕಿ ಕೊಲ್ಲುವುದಾಗಿಯೂ ಬಳಿಕ ಮೂರನೆಯ ದಿನ ತಾನು ಮತ್ತೆ ಎದ್ದು ಬರುವುದಾಗಿಯೂ ಯೇಸುಕ್ರಿಸ್ತನು ಶಿಷ್ಯರಿಗೆ ಮೊದಲೇ ತಿಳಿಸಿದ್ದನು ಯೇಸುವನ್ನು ಶಿಲುಬೆಗೆ ಹಾಕಿದ ಮೂರನೆಯ ದಿನ ಮೇರಿ ಮ್ಯಾಗ್ಡಲೇನಳೆಂಬ ಯೇಸುಭಕ್ತೆಯೊಬ್ಬಳು ಸಮಾಧಿಯನ್ನು ನೋಡುವುದಕ್ಕೆ ಹೋದಾಗ ಅದು ಬರಿದಾಗಿತ್ತು ಒಬ್ಬ ದೇವದೂತನು ಪ್ರತ್ಯಕ್ಷನಾಗಿ ಯೇಸು ಪುನರುತ್ಥಾನ ಹೊಂದಿರುವುದಾಗಿ ಹೇಳಿದನು. ಈ ಸಂಗತಿಯನ್ನು ಉಳಿದ ಶಿಷ್ಯರಿಗೆಲ್ಲ ತಿಳಿಸುವುದಕ್ಕೆಂದು ಬರುತ್ತಿರುವಾಗ ದಾರಿಯಲ್ಲಿ ಅವಳಿಗೆ ಯೇಸುಕ್ರಿಸ್ತನೇ ಕಾಣಿಸಿಕೊಂಡು ಆಶೀರ್ವಾದಮಾಡಿ ಶಿಷ್ಯರಿಗೆ

೩೨ **ಪುನರುತ್ಥಾನ ಮಹಾಮಠ**—(The great Church of the Resurrection)

ಯೇಸುಕ್ರಿಸ್ತನು ಮರಣಹೊಂದಿ ಮತ್ತೆ ಎದ್ದು ಬಂದ ಸ್ಥಳದಲ್ಲಿ ಕಟ್ಟಿರುವ ಮಠ (ಚರ್ಚ್)

೩೩. **ಯೇಸುಕ್ರಿಸ್ತ**—ಪರಾಧೀನರಾಗಿ ಹೀನದೆಸೆಯಲ್ಲಿ ಪೇಚಾಡುತ್ತಿದ್ದ ಯಹೂದ್ಯರು ತಮ್ಮ ಉದ್ಧಾರಕ್ಕಾಗಿ ಭಗವಂತನ ಪ್ರತಿನಿಧಿಯಾದ ಮಹಾಪುರುಷನೊಬ್ಬ (ಕ್ರಿಸ್ತ)ನು ಅವತರಿಸುವನೆಂದು ನಂಬಿದ್ದರು ಅವರ ಧರ್ಮಗ್ರಂಥಗಳಲ್ಲಿ ಆ ನಂಬಿಕೆಗೆ ಆಧಾರವಿತ್ತು, ಪುರಾತನ ಪ್ರವಾದಿಗಳೂ ಹಾಗೆಂದು ಭವಿಷ್ಯ ನುಡಿದಿದ್ದರು ಹೀಗಿರುವಲ್ಲಿ ಈಗ್ಗೆ ೧೯೩೪ ವರ್ಷಗಳ ಹಿಂದೆ ಒಬ್ಬ ಸಾಮಾನ್ಯ ಬಡಗಿಯ ಮನೆಯಲ್ಲಿ ಹುಟ್ಟಿ ಭಗವಂತನ ವಿಷಯವಾಗಿ ಉಪದೇಶಮಾಡುತ್ತಿದ್ದ ಯೇಸುವೇ ಆ ಕ್ರಿಸ್ತನೆಂದು ಹಲವರು ನಂಬಿದರು ಆತನ ಅದ್ಭುತ ಮಹಿಮೆಗಳನ್ನೂ ವಿಶ್ವಪ್ರೇಮವನ್ನೂ ಪರಮವೈರಾಗ್ಯವನ್ನೂ ಕಂಡು, ಆತನ ದಿವ್ಯೋಪದೇಶಗಳ ಅಮೃತವಾಣಿಯನ್ನು ಕೇಳಿ, ದೇಶದಲ್ಲೆಲ್ಲ ಕ್ರಮಕ್ರಮವಾಗಿ ಈ ನಂಬಿಕೆ ಹರಡತೊಡಗಿತು ಆಗಿನ ಯಹೂದ್ಯರಲ್ಲಿ ಅನೇಕ ಅನಾಚಾರಗಳೂ ಡಂಭಾಚಾರಗಳೂ ನೆಲಸಿದ್ದವು ಉತ್ತಮ ಜಾತಿಯವರೂ ಧರ್ಮಗುರುಗಳೂ ಸ್ವಾರ್ಥಸಾಧನೆಯಲ್ಲಿ ಮುಳುಗಿ, ಶಾಸ್ತ್ರಗಳ ಆಶಯವನ್ನರಿಯದೆ, ಮೇಲುಕೀಳೆಂಬ ಮಡಿ ಮೈಲಿಗೆಯೆಂಬ ಭಾವನೆಯನ್ನು ಅತಿಯಾಗಿ ಬೆಳಸಿ ಆಡಂಬರದಲ್ಲಿ ಮೆರೆಯುತ್ತಿದ್ದರು ಯೇಸು ಈ ಅನಾಚಾರಗಳನ್ನೆಲ್ಲ ನಿರ್ಭಯವಾಗಿ ಖಂಡಿಸಿ ಸರ್ವಸಮತೆಯ ತತ್ವವನ್ನು ಸಾರಿ ಧರ್ಮಜ್ಯೋತಿಯನ್ನು ಬೆಳಗುತ್ತ ಬಂದನು ಧರ್ಮಗುರುಗಳಿಗೂ ಮಠಾಧಿಪತಿಗಳಿಗೂ ಇದು ಸರಿದೋರಲಿಲ್ಲ ಯೇಸು ನಾಸ್ತಿಕನೆಂದೂ ತಾನೇ ಕ್ರಿಸ್ತನೆಂದು ಹೇಳಿಕೊಂಡ ದೈವದ್ರೋಹಿಯೆಂದೂ ನಿರ್ಧರಿಸಿ ಅವನನ್ನು ಶಿಕ್ಷಿಸಬೇಕೆಂದು ಸರ್ಕಾರಕ್ಕೆ ಮೊರೆಯಿಟ್ಟರು ಇದಲ್ಲದೆ, ಯೇಸು ಸ್ವರ್ಗರಾಜ್ಯವನ್ನು ಭೂಮಿಗೆ ತರುವೆನೆಂದು ಸಾರುತ್ತಿದ್ದುದರಿಂದ, 'ಇವನು ವಿದೇಶೀಯ (ರೋಮನ್) ಸರ್ಕಾರವನ್ನು ಕೊನೆಗಾಣಿಸಿ ತಾನೇ ಯಹೂದ್ಯರ ರಾಜನಾಗಬೇಕೆಂದಿರುವನೆ'ಂದೂ ತಪ್ಪು ಹೊರಿಸಿದರು. ಪಾಂಟಿಯಸ್ ಪೈಲೇಟ್ ಎಂಬ ರೋಮನ್ ವೈಸರಾಯಿಯು ವಿಚಾರಣೆಮಾಡಿ ಯೇಸು

ನಿರ್ದೋಷಿಯೆಂದು ತಿಳಿದುಕೊಂಡನು ಆದರೂ ಯಹೂದ್ಯರ ಬಲಾತ್ಕಾರ ದಿಂದ ಅವರನ್ನು ತೃಪ್ತಿಗೊಳಿಸುವುದಕ್ಕಾಗಿ ಯೇಸುವಿಗೆ ಮರಣದಂಡನೆ ಯನ್ನು ವಿಧಿಸಿದನು

**ಶಿಲುಬೆ**—ಆ ದೇಶದಲ್ಲಿ ಮರಣದಂಡನೆಗೆ ಗುರಿಯಾದವರನ್ನು ಶಿಲುಬೆಗೆ († ಈ ಆಕಾರದಲ್ಲಿ ಸೇರಿಸಿದ ಅಡ್ಡಮರಕ್ಕೆ) ಸೇರಿಸಿ ಮೊಳೆ ಹೊಡದು ಸಾಯಿಸುವುದು ಪದ್ಧತಿ ಯೇಸುಕ್ರಿಸ್ತನಿಗೂ ಹಾಗೆಯೇ ಮಾಡಿದರು ಶಿಲುಬೆಯ ಮೇಲೂ ಕ್ರಿಸ್ತನು ಶಾಂತನಾಗಿ, ಕರುಣಾಳುವಾಗಿದ್ದನು 'ಇವರು ತಿಳಿಯದೆ ಪಾಪಮಾಡುತ್ತಾರೆ ಭಗವಂತಾ, ಇವರನ್ನು ಮನ್ನಿಸು' ಎಂದು ಪ್ರಾರ್ಥಿಸಿ ಪ್ರಾಣಬಿಟ್ಟನು ಅಂದಿನಿಂದಲೂ ಶಿಲುಬೆ ಕ್ರಿಸ್ತಮತದ ಚಿಹ್ನೆಯಾಯಿತು

**ಮುಳ್ಳಿನ ಕಿರೀಟ**—ಮರಣದಂಡನೆಗೆ ಗುರಿಯಾದ ಯೇಸುವನ್ನು ಸಿಪಾಯಿಗಳ ವಶಮಾಡಿದಾಗ ಅವರೆಲ್ಲರೂ ಯೇಸುವಿನ ಸುತ್ತ ಗುಂಪು ಕೂಡಿ ಅವನಿಗೆ ಬೆಲೆಯುಳ್ಳ ಬಟ್ಟೆಯನ್ನುಡಿಸಿ, ರಾಜದಂಡವೆಂದು ಒಂದು ಜೊಂಡನ್ನು ಕೈಗೆ ಕೊಟ್ಟು, ಮುಳ್ಳುಕಡ್ಡಿಗಳಿಂದ ಹಣೆದ ಒಂದು ಕಿರೀಟ ವನ್ನು ತಂದು ತಲೆಯಮೇಲಿಟ್ಟು, 'ಜೈ ಯಹೂದ್ಯ ರಾಜ!' ಎಂದು ಜಯ ಘೋಷಮಾಡುತ್ತಾ ಅಡ್ಡಬಿದ್ದು ಅಣಕಿಸಿದರು ಆಮೇಲೆ ಮುಖಕ್ಕೆ ಉಗುಳಿ, ತಲೆಯಮೇಲೆ ಮಟ್ಟಿ, ಆ ಬಟ್ಟೆಯನ್ನು ಬಿಚ್ಚಿ ಮೊದಲಿನ ಬಟ್ಟೆ ಯನ್ನೇ ಉಡಿಸಿ ಶಿಲುಬೆಗೆ ಹಾಕಲು ಕರೆದುಕೊಂಡು ಹೋದರು

**ನೆಲ ಬಾಯಿ ಬಿಟ್ಟದ್ದು**—ಯೇಸುಕ್ರಿಸ್ತನು ಶಿಲುಬೆಯ ಮೇಲೆ ಪ್ರಾಣಬಿಟ್ಟಾಗ ಆದ ಉತ್ಪಾತಗಳಲ್ಲಿ ಇದೂ ಒಂದು

**ಆಡಮನ ಸಮಾಧಿ**—'ದೇವರು ಮೊಟ್ಟಮೊದಲು ಸೃಷ್ಟಿಸಿದ ಆದಿ ಮನುಷ್ಯನೇ ಆಡಂ ಅವನೇ ಮಾನವ ಜಾತಿಗೆಲ್ಲ ಮೂಲಪುರುಷ' ಎಂದು ಕ್ರಿಶ್ಚಿಯನ್ನರ ನಂಬಿಕೆ.

೩೪. **ಮಾಸ್**—ಕ್ರಿಶ್ಚಿಯನ್ನರ ಚರ್ಚುಗಳಲ್ಲಿ ನಡಯುವ ಪೂಜೆ

೩೮. **ಬೆತ್ಲೆಹೆಮ್**—ಯೇಸುಕ್ರಿಸ್ತನು ಹುಟ್ಟಿದ ಊರು

**ಬೆಥನಿ**—ಜೆರುಸಲೇಮಿನ ಹತ್ತಿರ ಇರುವ ಒಂದು ಊರು ಇಲ್ಲಿ ಯೇಸುಕ್ರಿಸ್ತನು ಸತ್ತವನೊಬ್ಬನನ್ನು ಮತ್ತೆ ಬದುಕಿಸಿದನಂತೆ ಇಲ್ಲಿಯೇ ಅವನು ಸ್ವರ್ಗಾರೋಹಣ ಮಾಡಿದನಂತೆ

**ಜೋರ್ಡಾನ್**—ಪ್ಯಾಲಸ್ಟೀನ್ ದೇಶದ ಒಂದು ನದಿ ಯೇಸು ಕ್ರಿಸ್ತನಿಗೆ ದೀಕ್ಷಾಸ್ನಾನವಾದದ್ದು ಈ ನದಿಯಲ್ಲಿ ಆದ್ದರಿಂದ ಇದು ಕ್ರಿಶ್ಚಿಯನ್ನರಿಗೆ ನಮಗೆ ಗಂಗಾನದಿಯಂತೆ ಪವಿತ್ರವಾಗಿದೆ

೪೩ **ಅಸಂಪ್ಷನ್**—ಒಂದು ಹಬ್ಬ

೪೯. **ಈಸ್ಟರ್**—ಒಂದು ಹಬ್ಬ

೮೫. **ಸುವಾರ್ತೆಗಳು**— ಯೇಸುಕ್ರಿಸ್ತನ ಶಿಷ್ಯರಲ್ಲಿ ನಾಲ್ವರು ತಮ್ಮ ಗುರುವಿನ ಚರಿತ್ರೆಯನ್ನೂ ಉಪದೇಶಗಳನ್ನೂ ಬರೆದಿಟ್ಟಿದಾರೆ ಇವುಗಳಿಗೆ ಸುವಾರ್ತೆಗಳು (ಗಾಸ್ಪೆಲ್‌ಗಳು) ಎಂದು ಹೆಸರು

೮೮ **ಸರದಾರನ ಕಥೆ**—ಒಬ್ಬ ಸರದಾರನ ಅಚ್ಚುಮೆಚ್ಚಿನ ಸೇವಕನೊಬ್ಬನು ರೋಗ ಬಂದು ಸಾಯುವಂತಾಗಿದ್ದನು. ಸರದಾರನಲ್ಲಿ ಅಭಿಮಾನವುಳ್ಳ ಊರ ಮುಖಂಡರೆಲ್ಲರೂ ಯೇಸುವಿನ ಬಳಿಗೆ ಹೋಗಿ ದಯಮಾಡಿ ಬಂದು ಆ ಸೇವಕನನ್ನು ವಾಸಿಮಾಡಬೇಕೆಂದು ಪ್ರಾರ್ಥಿಸಿದರು ಯೇಸು ಆಗಲೆಂದು ಹೊರಟನು ದಾರಿಯಲ್ಲಿ ಬರುತ್ತಿರುವಾಗ, ಸರದಾರನು ತನ್ನ ಸ್ನೇಹಿತರ ಸಂಗಡ "ಸ್ವಾಮಿ, ನಾನು ಅಲ್ಪ ತಾವು ನನ್ನ ಮನೆಗೆ ಬರುವಷ್ಟು ಯೋಗ್ಯತೆ ನನಗಿಲ್ಲ ತಮ್ಮನ್ನು ದೃಷ್ಟಿಸುವುದಕ್ಕೂ ನಾನು ಅರ್ಹನಲ್ಲ ತಾವು ಇಲ್ಲಿ ಬಂದು ಆಯಾಸಪಡುವುದೇಕೆ? ಇದ್ದ ಕಡೆಯಿಂದಲೇ ಒಂದು ನುಡಿ ನುಡಿದರೆ ಸಾಕು, ನನ್ನ ಸೇವಕನಿಗೆ ಗುಣವಾಗುತ್ತದೆ ನನ್ನ ಕೈಕೆಳಗೂ ಸಿಪಾಯಿಗಳಿದಾರೆ, 'ಹೋಗು' ಎಂದರೆ ಹೋಗುತ್ತಾರೆ, 'ಬಾ' ಎಂದರೆ ಬರುತ್ತಾರೆ, 'ಮಾಡು' ಎಂದದ್ದನ್ನು ಮಾಡುತ್ತಾರೆ" ಎಂದು ಹೇಳಿಕಳುಹಿಸಿದನು ಈ ಮಾತನ್ನು ಕೇಳಿ ಯೇಸುವಿಗೆ ಪರಮಾಶ್ಚರ್ಯವಾಯಿತು ಇಂಥ ಶ್ರದ್ಧೆಯನ್ನು ಮತ್ತೆಲ್ಲಿಯೂ ಕಂಡರಿಯೆನೆಂದನು

**ವಿಧವೆಯ ಮಗ**—ಒಂದೂರಿನಲ್ಲಿ ಒಬ್ಬ ವಿಧವೆಯಿದ್ದಳು ಅವಳಿಗಿದ್ದ ಒಬ್ಬನೇ ಒಬ್ಬ ಮಗನು ಸತ್ತುಹೋಗಲು ಊರಿನವರೆಲ್ಲರೂ ದುಃಖಪಡುತ್ತ ಹೆಣವನ್ನು ಸ್ಮಶಾನಕ್ಕೆ ಸಾಗಿಸಿಕೊಂಡು ಹೋಗುತ್ತಿದ್ದರು ಇದನ್ನು ಕಂಡು ಯೇಸುವಿಗೆ ಕರುಣ ಹುಟ್ಟಲು ತಾಯಿಗೆ ಅಳಬೇಡವೆಂದು ಹೇಳಿ ಚಟ್ಟವನ್ನು ಮುಟ್ಟಿ, 'ಅಯ್ಯಾ ತರುಣ, ಎದ್ದೇಳು' ಎಂದು ನುಡಿದನು ಆಗ ಸತ್ತವನು ಎದ್ದು ಕುಳಿತು ಮಾತಾಡಿದನು ತಾಯಿ ಮಗನನ್ನು ಕರೆದುಕೊಂಡು ಹೋದಳು

**ಫೆರೈಸಿ**—ಯಹೂದ್ಯರಲ್ಲಿ ಒಂದು ಉತ್ತಮ ಜಾತಿ ನಮ್ಮಲ್ಲಿ ವೈದಿಕರು ಹೇಗೋ ಹಾಗೆ

**ಮುತ್ತೊಂದ ಕೊಡಲಿಲ್ಲ**—ಮುತ್ತು ಕೊಡುವುದು ಒಂದು ಬಗೆಯ ನಮಸ್ಕಾರ ದೊಡ್ಡವರಿಗೂ, ಗುರುಗಳಿಗೂ, ದೇವರಿಗೂ ನಮಸ್ಕಾರ ಮಾಡುವಾಗ ಅವರ ಕೈಗೆ ಮುತ್ತು ಕೊಡುವುದು ಯಹೂದ್ಯರ ವಾಡಿಕೆ ಪಾಶ್ಚಾತ್ಯರಲ್ಲಿ ಈಗಲೂ ಈ ವಾಡಿಕೆಯುಂಟು

**ಜಾನ್**—ಯೇಸುಕ್ರಿಸ್ತನಿಗಿಂತ ಮೊದಲೇ ಹುಟ್ಟಿ ಧರ್ಮೋಪದೇಶ ಮಾಡುತ್ತಿದ್ದ ಒಬ್ಬ ಸಾಧು

೯೧ **ಮಂಜು ಬಾಚುವುದು**—ಉತ್ತರದ ಶೀತಪ್ರದೇಶಗಳಲ್ಲಿ ಚಳಿಗಾಲದಲ್ಲಿ ಅಪಾರ ಮಂಜು ಸುರಿಯುತ್ತದೆ ಕೆರೆ ಬಾವಿಗಳ ನೀರೆಲ್ಲ ಹೆಪ್ಪುಗಟ್ಟುತ್ತದೆ ಆ ಕಾಲದಲ್ಲಿ ದಾರಿ ಮುಂತಾದ ಕಡೆಗಳಲ್ಲಿ ಬಿದ್ದ ಮಂಜನ್ನು ಬಾಚಿ ಹಾಕಬೇಕಾಗುತ್ತದೆ

೧೪೪ **ಪಿಶಾಚಿ**
೨೬೩ **ಮುದಿ ಪಿಶಾಚಿ** } ದೇವರಿಗೆ ಪ್ರತಿಯಾಗಿ ಸ್ಪರ್ಧೆಮಾಡುವ ಒಂದು ಶಕ್ತಿ, ಮನುಷ್ಯನನ್ನು ಯಾವಾಗಲೂ ಅಧೋಗತಿಗೇ ಎಳೆಯುತ್ತಿರುವ ದುಷ್ಟಶಕ್ತಿ 'ಅರಿಷಡ್ವರ್ಗ ಮೂರ್ತಿ' ಎನ್ನಬಹುದು ಈ ಶಕ್ತಿಯನ್ನು ಕ್ರಿಶ್ಚಿಯನ್ನರು 'ಸೇಟನ್' (ಸೈತಾನ) ಎಂದು ಕರೆಯುತ್ತಾರೆ ಕೊಂಬು ಗೊರಸು ಮುಂತಾದುವು ಈ ಮೂರ್ತಿಯ ವಿಕಾರಾಕಾರಕ್ಕೆ, ಭಯಂಕರ ಸ್ವರೂಪಕ್ಕೆ, ಉಪಲಕ್ಷಣ

೨೨೯ **ಬಿಷಪ್**—ಕ್ರಿಶ್ಚಿಯನ್ ಮಠಪತಿ. ನಮ್ಮ 'ಸ್ವಾಮಿ'ಗಳಂತೆ

# ಶುದ್ಧಾಶುದ್ಧ ಪತ್ರಿಕೆ

| ಪುಟ | ಪಂಕ್ತಿ | ತಪ್ಪು | ಸರಿ |
|---|---|---|---|
| ೯ | ೨೪ | ಇಲ್ಲದಿದ್ದ | ಇಲ್ಲದಿದ್ದರೆ |
| ೧೬ | ೯ | ಹತ್ತಿಸಿದನು | ಹೊತ್ತಿಸಿದನು |
| ೧೮ | ೮ | ಬಿದಿದೇವೆ | ಬಿದ್ದಿದೇವೆ |
| ೨೦ | ೨ | ಆ ಹಳ್ಳಿಯಲ್ಲಿದ್ದ | ಆ ಹಳ್ಳಿಯಲ್ಲಿ |
| ೨೨ | ೧ | ಹರಿದಹೋಯಿತು | ಹರಿದುಹೋಯಿತು |
| | ೨೧ | Lublic | Public |
| ೨೫ | ೬ | ನಡೆಯುವುದೂ | ನಡೆಯುವುದು |
| | ೧೮ | ಜೊತಗಾರನಿಗಿಂತ | ಜೊತೆಗಾರನಿಗಿಂತ |
| ೨೮ | ೯ | ಕೊಸಾಕ್ | ನಿಲುವಂಗಿ |
| ೨೮ | ೨೪ | ಹೆರಿಂಗನ್ನೂ | ಒಣಮೀನನ್ನೂ |
| ೩೦ | ೧೮ | ಪ್ಯಾಟ್ರಿಯಾರ್ಕೇಟ್ | ಪಟ್ರಿಯರ್ಕೇಟ್ |
| ೩೧ | ೨ | ವೆಸ್ಟರ್ | ವೆಸ್ಪರ್ |
| ೩೨ | ೧೪ | ಮನಸ್ಸುಟ್ಟಿದ್ದಂತೆ | ಮನಸ್ಸು ನೆಟ್ಟಿದ್ದಂತೆ |
| ೩೪ | ೯ | ಬಂದದು | ಬಂದದ್ದು |
| ೪೫ | ೯ | ಒಂದು | ಬಂದು |
| ೫೬ | ೮ | ಹಿಂತಿರುಗಿ ಒಂದು | ಹಿಂತಿರುಗಿ ಬಂದು |
| ೧೪೦ | ೬ | ಮಾತ್ನು | ಮಾತನ್ನು |
| ೧೪೧ | ೨೧ | ಹಾಗಾ ಆದರೆ | ಹಾಗಾದರೆ |
| ೧೫೮ | ೫ | ಮೊಲಿನಿಂದ | ಮೊದಲಿನಿಂದ |
| ೨೧೩ | ೩ | ಉದ್ದಕ್ಕು | ಉದ್ದಕ್ಕೂ |
| ೨೧೫ | ೨೦ | ನೆಂಟಿತ್ತಿ | ನೆಂಟಿತಿ |
| ೨೪೧ | ೧ | ತ್ತಿದ್ದನು | ತಿದ್ದನು |
| ೨೭೩ | ೯ | ಬೆಪು | ಬೆಪ್ಪು |
| ೩೧೨ | ೧೧ | ಮರೆಯಾಗುತ್ತಿದ್ದನೆ | ಮರೆಯಾಗುತ್ತಿದ್ದನು |
| ೩೨೬ | ೧ | ದೇವಪಿತ | ದೇವಪುತ್ರ |
| ೩೨೭ | ೧೭ | ತಿನ್ನುವುದಕ್ಕೆ | ತಿದ್ದುವುದಕ್ಕೆ |
| ೩೪೦ | ೧೯ | ಹೇಗೆ | ಹೀಗೆ |
| ೩೪೧ | ೬ | ನೆನದಾ | ನೆನಪಾ |
| ೩೬೫ | ೨೦ | ಮಣ್ಣು ಗುಡಿಸ | ಮಣ್ಣುಗೂಡಿಸ |
| ೩೭೩ | ೨೪ | ಮುಖ್ಖ ಮುಖ್ಯವಾದದ್ದು | ಮುಖ್ಯವಾದದ್ದು |